ವಿಷಯಾನುಕ್ರಮಣಿಕೆ

ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ)

## ಭೂಮಿಖಂಡ—ಎರಡನೆಯ ಭಾಗ

(೪೨—೮೪ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಕನ್ನಡಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸು)

ಪರಿಶೋಧಕ:

**ಹಾಸನದ. ಪಂಡಿತ್ ವೆಂಕಟರಾವ್**

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೪

**ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಎರಡನೆಯ ಭಾಗದ**

# ವಿಷಯಾನುಕ್ರಮಣಿಕೆ.

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

---

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ
## ॥ ದ್ವಿಚತ್ವಾರಿಂಶೋಽಧ್ಯಾಯಃ ॥

---

॥ ಸಖ್ಯ ಊಚುಃ ॥

ಯಾ ಸುದೇವಾ ತ್ವಯಾ ಪ್ರೋಕ್ತಾ ಕಿಮಾಚಾರಾವದಸ್ವ ನಃ ।
ತ್ವಯಾ ಪ್ರೋಕ್ತಂ ಮಹಾಭಾಗೇ ವದ ನಃ ಸತ್ಯಮೇವ ಚ ॥ ೧ ॥

॥ ಸುಕಲೋವಾಚ ॥

ಅಯೋಧ್ಯಾಯಾಂ ಮಹಾರಾಜಾ ಸ ಆಸೀದ್ಧರ್ಮಕೋವಿದಃ ।
ಮನುಪುತ್ರೋ ಮಹಾಭಾಗಃ ಸರ್ವಧರ್ಮಾರ್ಥತತ್ಪರಃ ॥ ೨ ॥

ಇಕ್ಷ್ವಾಕುರ್ನಾಮ ಸರ್ವಜ್ಞೋ ದೇವಬ್ರಾಹ್ಮಣಪೂಜಕಃ ।
ತಸ್ಯ ಭಾರ್ಯಾ ಸದಾ ಪುಣ್ಯಾ ಪತಿವ್ರತಪರಾಯಣಾ ॥ ೩ ॥

ತಯಾ ಸಾರ್ಧಂ ಯಜೇದ್ಯಜ್ಞಾಂಸ್ತೀರ್ಥಾನಿ ವಿವಿಧಾನಿ ಚ ।
ದೇವರಾಜಸ್ಯ ವೀರಸ್ಯ ಕಾಶೀಶಸ್ಯ ಮಹಾತ್ಮನಃ ॥ ೪ ॥

---

## ನಲವತ್ತೆರಡನೆಯ ಅಧ್ಯಾಯವು

೧. ಸಖಿಯರು ಹೇಳಿದರು:—ಅಮ್ಮಾ, ನೀನು ಹೇಳಿದ ಸುದೇವೆ ಎಂಬುವಳು ಯಾರು? ಅವಳ ಆಚಾರವೇನು? ಅದನ್ನು ನಮಗೆ ನಿಶ್ಚಯವಾಗಿಯೂ ಹೇಳು.

೨. ಸುಕಲೆಯು ಹೇಳುತ್ತಾಳೆ:—ಅಯೋಧ್ಯೆಯಲ್ಲಿ ಧರ್ಮಜ್ಞನೂ, ದೇವ ಬ್ರಾಹ್ಮಣರಲ್ಲಿ ಭಕ್ತಿಯುತನೂ, ಮನುಪುತ್ರನೂ ಆದ ಇಕ್ಷ್ವಾಕುವೆಂಬ ರಾಜನಿದ್ದನು.

೩–೪. ಆತನ ಹೆಂಡತಿಯು ಪುಣ್ಯವಂತಳು, ಪತಿವ್ರತೆಯು. ಆಕೆಯೊಡನೆ ಅನೇಕ ಯಜ್ಞಗಳನ್ನು ಮಾಡಿದನು; ತೀರ್ಥಗಳನ್ನು ಸೇವಿಸಿದನು. ಆಕೆಯು ಕಾಶೀರಾಜನಾದ ದೇವರಾಜನ ಮಗಳು. ಆಕೆಯ ಹೆಸರು ಸುದೇವಾ ಎಂದು.

ಸುದೇವಾ ನಾಮ ವೈ ಕನ್ಯಾ ಸತ್ಯಾಚಾರಪರಾಯಣಾ ।
ಉಪಯೇಮೇ ಮಹಾರಾಜ ಇಕ್ಷ್ವಾಕುಸ್ತಾಂ ಮಹೀಪತಿಃ ॥ ೫ ॥

ಸುದೇವಾಂ ಚಾರುಸರ್ವಾಂಗೀಂ ಸತ್ಯವ್ರತಪರಾಯಣಾಂ ।
ತಯಾ ಸಾರ್ಧಂ ಯಜೇದ್ಯಜ್ಞಾನ್ ಸುಪುಣ್ಯಾನ್ಪುಣ್ಯನಾಯಕಃ ॥ ೬ ॥

ಸ ರೇಮೇ ನೃಪಶಾರ್ದೂಲೋ ಗೃಹೇ ಚ ಪ್ರಿಯಯಾ ಸದಾ ।
ಏಕದಾ ತು ಮಹಾರಾಜಸ್ತಯಾ ಸಾರ್ಧಂ ವನಂ ಯಯೌ ॥ ೭ ॥

ಗಂಗಾರಣ್ಯಂ ಸಮಾಸಾದ್ಯ ಗಯಾಯಾಂ ಕ್ರೀಡತೇ ಸದಾ ।
ಸಿಂಹಾನ್ ಹತ್ವಾ ವರಾಹಾಂಶ್ಚ ಗಜಾನ್ ಸಮಹಿಷಾಂಸ್ತತಃ ॥ ೮ ॥

ಕ್ರೀಡಮಾನಸ್ಯ ತಸ್ಯಾಪಿ ವರಾಹಶ್ಚ ಸಮಾಗತಃ ।
ಬಹುಶೂಕರಯೂಥೇನ ಪುತ್ರಪೌತ್ರೈರಲಂಕೃತಃ ॥ ೯ ॥

ಏಕಾ ಚ ಶೂಕರೀ ತಸ್ಯ ಪ್ರಿಯಾ ಪಾರ್ಶ್ವೇ ಪ್ರತಿಷ್ಠತಿ ।
ದೃಷ್ಟ್ವಾಥ ಶೂಕರಶ್ಚೈನಂ ರಾಜಾನಂ ಮೃಗಯಾ ಪರಂ ॥ ೧೦ ॥

---

೫–೬. ಹೀಗೆ ಇಕ್ಷ್ವಾಕುರಾಜನು ಸತ್ಯಶೀಲೆಯೂ, ಸರ್ವಾಂಗಸುಂದರಿಯೂ ಆದ ಸುದೇವೆಯನ್ನು ಮದುವೆಯಾಗಿ ಅನೇಕ ಯಜ್ಞಗಳನ್ನು ಮಾಡಿದನು.

೭. ಆಕೆಯೊಡನೆ ಆತನು ತನ್ನ ಅರಮನೆಯಲ್ಲಿ ಸುಖವಾಗಿದ್ದನು. ಒಂದುಸಾರಿ ಆಕೆಯೊಡನೆ ಆ ಇಕ್ಷ್ವಾಕುವು ಕಾಡಿಗೆ ಬೇಟೆಯಾಡಲು ಹೋದನು.

೮. ಆತನು ಗಂಗಾನದಿಯ ದಡದಲ್ಲಿರುವ ಗಯೆಯಲ್ಲಿ ಸಿಂಹ, ಹಂದಿ, ಎಮ್ಮೆ, ಆನೆ ಮುಂತಾದ ಮೃಗಗಳನ್ನು ಬೇಟೆಯಾಡಿ ರಮಿಸುತ್ತಿದ್ದನು.

೯. ಆತನು ಬೇಟೆಯಾಡುತ್ತಿದ್ದಾಗ ಒಂದು ಹಂದಿಯು ತನ್ನ ಮಗ, ಮೊಮ್ಮಗ, ಮರಿಮಗ ಇವರ ಗುಂಪನ್ನು ಕಟ್ಟಿಕೊಂಡು ಅವನ ಬಳಿಗೆ ಬಂದಿತು.

೧೦-೧೨. ಅದರ ಹೆಂಡತಿಯಾದ ಒಂದು ಹೆಣ್ಣುಹಂದಿಯು ಮಾತ್ರ ಅದರ ಪಾರ್ಶ್ವದಲ್ಲಿತ್ತು. ಆ ಹಂದಿಯು ಬೇಟೆಯಾಡುತ್ತಿದ್ದ ರಾಜನನ್ನು ನೋಡಿ ಪರ್ವತದ ಒಂದು ಮರೆಯಾದ ಸ್ಥಳದಲ್ಲಿ ನಿಂತು, ಆತನು ಬಹುಮೃಗಗಳನ್ನು ನಾಶಪಡಿಸುತ್ತಿದು

**ಪರ್ವತಾಧಾರಮಾಶ್ರಿತ್ಯ ಭಾರ್ಯಯಾ ಸಹ ಸೂಕರಃ ।**
**ತಿಷ್ಠತ್ಯೇಕಃ ಸುವೀರ್ಯೇಣ ಪುತ್ರಾನ್ಪೌತ್ರಾನ್ಸ್ವರೂನ್ ಶಿಶೂನ್ ॥ ೧೧ ॥**

**ಜ್ಞಾತ್ವಾ ತೇಷಾಂ ಮಹಾರಾಜ ಮೃಗಾಣಾಂ ಕದನಂ ಮಹತ್ ।**
**ತಾನುವಾಚ ಸುತಾನ್ಪೌತ್ರಾನ್ ಭಾರ್ಯಾಂ ತಾಂ ಚ ಸ ಶೂಕರಃ ॥ ೧೨ ॥**

**ಕೋಶಲಾಧಿಪತಿರ್ವೀರೋ ಮನುಪುತ್ರೋ ಮಹಾಬಲಃ ।**
**ಕ್ರೀಡತೇ ಮೃಗಯಾಂ ಕಾಂತೇ ಮೃಗಾನ್ ಸಂಹರತೇ ಬಹೂನ್ ॥ ೧೩ ॥**

**ಸ ಮಾಂ ದೃಷ್ಟ್ವಾ ಮಹಾರಾಜ ಏಷ್ಯತೇ ನಾತ್ರ ಸಂಶಯಃ ।**
**ಅನ್ಯೇಷಾಂ ಲಘುಕಾನಾಂ ಮೇ ನಾಸ್ತಿ ಪ್ರಾಣಭಯಂ ಧ್ರುವಂ ॥ ೧೪ ॥**

**ಮಮ ರೂಪಂ ನೃಪೋ ದೃಷ್ಟ್ವಾ ಕ್ಷಮಾಂ ನೈವ ಕರಿಷ್ಯತಿ ।**
**ಹರ್ಷೇಣ ಮಹತಾವಿಷ್ಟೋ ಬಾಣಪಾಣಿರ್ಧನುರ್ಧರಃ ॥ ೧೫॥**

**ಶ್ವಭಿರ್ಯುಕ್ತೋ ಮಹಾತೇಜಾ ಲುಬ್ಧಕೈಃ ಪರಿವಾರಿತಃ ।**
**ಪ್ರಿಯೇ ಕರಿಷ್ಯತೇ ಘಾತಂ ಮಮಾಪ್ಯೇವ ನ ಸಂಶಯಃ ॥ ೧೬ ॥**

---

ದನ್ನು ನೋಡಿತು. ತನ್ನ ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಮೊದಲಾದ ಬಳಗಗಳನ್ನು ಕುರಿತು ಆ ಸಲಗ ಹಂದಿಯು ಹೇಳಿತು.

೧೩. ವೀರನೂ, ಕೋಸಲದೇಶದ ರಾಜನೂ, ಮನುಪುತ್ರನೂ, ಮಹಾಬಲನೂ ಆದ ಇಕ್ಷ್ವಾಕುವು ಬೇಟೆಗೆ ಬಂದು ರಮಿಸುತ್ತಿದ್ದಾನೆ. ಬಹುವಾಗಿ ಮೃಗಗಳನ್ನು ಸಂಹರಿಸುತ್ತಿದ್ದಾನೆ.

೧೪. ಆತನು ನನ್ನನ್ನು ನೋಡಿ ಬಂದೇಬರುತ್ತಾನೆ. ಸಂಶಯವಿಲ್ಲ. ಮಿಕ್ಕ ಸಣ್ಣ ಪ್ರಾಣಿಗಳಿಗೆ ಪ್ರಾಣಭಯವು ಖಂಡಿತವಾಗಿಯೂ ಇಲ್ಲ. ನನ್ನ ಆಕಾರವನ್ನು ರಾಜನು ನೋಡಿದರೆ ಕ್ಷಮಿಸುವುದೇ ಇಲ್ಲ.

೧೫-೧೬. ನನ್ನನ್ನು ನೋಡಿ ಸಂತೋಷದಿಂದ ಬಾಣವನ್ನು ಧರಿಸಿ ನಾಯಿಗಳನ್ನು ಕರೆದುಕೊಂಡು, ಬೇಡರಿಂದ ಕೂಡಿಕೊಂಡು ನನ್ನನ್ನು ಖಂಡಿತವಾಗಿಯೂ ಹೊಡೆಯುತ್ತಾನೆ, ಸಂಶಯವಿಲ್ಲ.

॥ ಶೂಕರ್ಯುವಾಚ ॥

ಯದಾ ಯದಾ ಪಶ್ಯಸಿ ಲುಬ್ಧಕಾನ್ಸಹೂ-
ನ್ಮಹಾವನೇ ಕಾಂತ ಸಮಾಯುಧಾನ್ಸಹೂನ್ ।
ಏಭಿಸ್ತು ಪುತ್ರೈರ್ಮಮ ಪೌತ್ರಕೈಸ್ಸಮಂ
ದೂರಂ ಪರಂ ಯಾಹಿ ಪಲಾಯಮಾನಃ ॥ ೧೭ ॥

ತ್ಯಕ್ತ್ವಾ ಸುಧೈರ್ಯಂ ಬಲಪೌರುಷಂ ಮಹಾ-
ನ್ಮಹಾಭಯೇನಾಪಿ ವಿಷಣ್ಣಚೇತನಃ ।
ದೃಷ್ಟ್ವಾ ನೃಪೇಂದ್ರಂ ಪುರುಷಾರ್ಥಮುತ್ತಮಂ
ಕರೋಷಿ ಕಿಂ ಕಾಂತ ವದಸ್ವ ಕಾರಣಂ ॥ ೧೮ ॥

ತಸ್ಯಾಸ್ತು ವಾಕ್ಯಂ ಸ ನಿಶಮ್ಯ ಕೋಲ
ಉವಾಚ ತಾಂ ಶೂಕರರಾಜ ಉತ್ತರಂ ।
ಯದರ್ಥಭೀತೋಽಸ್ಮಿ ಸುಲುಬ್ಧಕಾತ್ಪ್ರಿಯೇ
ದೃಷ್ಟ್ವಾ ಗತೋ ದೂರಂ ನಿಶಮ್ಯ ಶೂಕರಾನ್ ॥ ೧೯ ॥

ಸುಲುಬ್ಧಕಾಃ ಪಾಪಶತಾ ಮಹಾಪ್ರಿಯೇ
ಕುರ್ವಂತಿ ಪಾಪಂ ಪರಿದುರ್ಗಕಂದರೇ ।
ಸದೈವ ದುಷ್ಟಾ ಬಹುಪಾಪಚಿತ್ತಕಾ
ಜಾತಾಶ್ಚ ಸರ್ವೇ ಪರಿಪಾಪಿನಾಂ ಕುಲೇ ॥ ೨೦ ॥

---

೧೭-೧೮. ಹೆಣ್ಣುಹಂದಿಯು ಹೇಳುತ್ತದೆ :— ಈ ಮಹಾರಣ್ಯದಲ್ಲಿ ಆಯುಧಗಳನ್ನು ಧರಿಸಿರುವ ಬೇಡರನ್ನೂ, ಅವರೊಡನಿರುವ ನಾಯಿಗಳನ್ನೂ ಕಂಡಾಗಲೆಲ್ಲ ಈ ಪುತ್ರಪೌತ್ರರಿಂದ ಕೂಡಿಕೊಂಡು ಧೈರ್ಯವನ್ನು ಬಿಟ್ಟು, ಭಯದಿಂದ ಕೂಡಿ, ದೂರದೂರಕ್ಕೆ ಓಡಿಹೋಗುವುದೊಳ್ಳೆಯದು. ರಾಜನನ್ನು ನೋಡಿ ನೀನು ಹೊಂದುವ ಪುರುಷಾರ್ಥವಾದರೂ ಏನು ? ಕಾರಣವನ್ನು ತಿಳಿಸು.

೧೯. ಆ ಹೆಣ್ಣುಹಂದಿಯ ಮಾತನ್ನು ಕೇಳಿ ಹೇಳಿತು :— ನಮ್ಮ ಹಂದಿಗಳೆಲ್ಲವೂ ದೂರವಾಗಿ ಹೋಗಿರುವುದನ್ನು ನೋಡಿಯೂ ಏಕೆ ಹೆದರಿದ್ದೇನೆಂದರೆ, ಹೇಳುವೆನು ಕೇಳು.

೨೦. ಈ ಬೇಡರೆಲ್ಲರೂ ಪಾಪಿಗಳು. ಗಿರಿಯ ತಪ್ಪಲಲ್ಲಿ ಪಾಪಕೆಲಸಗಳನ್ನೇ ಯಾವಾಗಲೂ ಮಾಡುತ್ತಿರುತ್ತಾರೆ. ಇವರು ಮಹಾದುಷ್ಟರು. ಮಹಾಪಾಪಿಗಳ ವಂಶದಲ್ಲಿ ಹುಟ್ಟಿದ್ದಾರೆ.

ತೇಷಾಂ ಹಿ ಹಸ್ತಾನ್ಮರಣಾದ್ವಿಭೇಮಿ
ಮೃತೋಽಪಿ ಯಾಸ್ಯಾಮಿ ಪುನರೇವ ಪಾಪಂ ।
ದೂರಂ ಗಿರಿಂ ಪರ್ವತಕಂದರಂ ಚ
ವ್ರಜಾಮಿ ಕಾಂತೇ ಅಪಮೃತ್ಯುಭೀತಃ ॥ ೨೧ ॥

ಅಯಂ ಹಿ ಪುಣ್ಯೋ ನೃಪನಾಥ ಆಗತೋ
ವಿಶ್ವಾಧಿಪಃ ಕೇಶವರೂಪಭೂಪಃ ।
ಯುದ್ಧಂ ಕರಿಷ್ಯೇ ಸಮರೇ ಮಹಾತ್ಮನಾ
ಸಾರ್ಧಂ ಪ್ರಿಯೇ ಪೌರುಷವಿಕ್ರಮೇಣ ॥ ೨೨ ॥

ಜೇಷ್ಯಾಮಿ ಭೂಪಂ ಯದಿ ಸ್ವೇನ ತೇಜಸಾ
ಭೋಕ್ಷ್ಯಾಮಿ ಕೀರ್ತಿಂ ತ್ವತುಲಾಂ ಪೃಥಿವ್ಯಾಂ ।
ನೋ ವಾ ಹತೋ ವೀರವರೇಣ ಸಂಗರೇ
ಯಾಸ್ಯಾಮಿ ಲೋಕಂ ಮಧುಸೂದನಸ್ಯ ॥ ೨೩ ॥

ಮಮಾಂಗಭೂತೇನ ಪಲೇನ ಮೇದಸಾ
ತೃಪ್ತಿಂ ಪರಾಂ ಯಾಸ್ಯತಿ ಭೂಮಿನಾಥಃ ।
ತೃಪ್ತಾ ಭವಿಷ್ಯಂತಿ ಸುಲೋಕದೇವತಾ
ಯಸ್ಮಾದಯಂ ಚಾಗತೋ ವಜ್ರಪಾಣಿಃ ॥ ೨೪ ॥

---

೨೧. ಅವರ ಕೈಯಿಂದ ಸಾಯಲು ಹೆದರುತ್ತೇನೆ. ಸತ್ತರೆ ತಿರುಗಿ ಪಾಪಿಯಾಗಿಯೇ ಹುಟ್ಟುತ್ತೇನೆ. ಆದುದರಿಂದ ಅಪಮೃತ್ಯುವಿಗೆ ಹೆದರಿ ದೂರವಾದ ಗಿರಿಕಂದರಕ್ಕೆ ಹೋಗುತ್ತೇನೆ.

೨೨. ಇಗೋ ಪುಣ್ಯಸ್ವರೂಪನಾದ ರಾಜನು ಬಂದಿರುವನು. ಕೇಶವ ಸ್ವರೂಪನೂ, ಪೌರುಷವೂ ವಿಕ್ರಮವೂ, ಉಳ್ಳ ಇವನೊಡನೆ ಯುದ್ಧಮಾಡುತ್ತೇನೆ.

೨೩. ನನ್ನ ಬಲದಿಂದ ಒಂದುವೇಳೆ ರಾಜನನ್ನು ಜಯಿಸಿದರೆ ಲೋಕದಲ್ಲಿ ಕೀರ್ತಿಬರುತ್ತದೆ. ಹಾಗಲ್ಲದೆ, ಅವನ ಕೈಯಿಂದ ನಾನೇ ಸತ್ತರೆ ವೈಕುಂಠವನ್ನು ಹೊಂದುತ್ತೇನೆ.

೨೪. ನನ್ನ ದೇಹದ ಮಾಂಸ, ಕೊಬ್ಬು ಇವುಗಳಿಂದ ಆ ರಾಜನು ತೃಪ್ತಿ ಹೊಂದಿದರೆ, ದೇವತೆಗಳೆಲ್ಲರೂ ತೃಪ್ತಿಹೊಂದಿದರೆಂದೇ ತಿಳಿ. ಇವನೂ ಕತ್ತಿಯನ್ನು ಹಿಡಿದು ಯುದ್ಧಸನ್ನದ್ಧನಾಗಿಯೇ ಬಂದಿರುವನು.

ಅಸ್ಯೈವ ಹಸ್ತಾನ್ಮರಣಂ ಯದಾ ಭವೇ-
ಲ್ಲಾಭಶ್ಚ ಮೇ ಸುಂದರಿ ಕೀರ್ತಿರುತ್ತಮಾ।
ತಸ್ಮಾದ್ಯಶೋ ಭೂಮಿತಲೇ ಜಗತ್ತ್ರಯೇ
ವ್ರಜಾಮಿ ಲೋಕಂ ಮಧುಸೂದನಸ್ಯ ॥ ೨೫ ॥

ನೈವಂ ಭೀತೋಽಸ್ಮಿ ಕ್ಷುಬ್ಧೋಽಸ್ಮಿ ಗತೋಽಹಂ ಗಿರಿಸಾನುಷು
ಪಾಪಾದ್ಭೀತೋ ಗತಃ ಕಾಂತೇ ಧರ್ಮಂ ದೃಷ್ಟ್ವಾ ಸ್ಥಿರೋ ಹ್ಯಹಂ ॥ ೨೬ ॥

ನ ಜಾನೇ ಪಾತಕಂ ಪೂರ್ವಮನ್ಯಜನ್ಮನಿ ಚಾರ್ಜಿತಂ।
ಯೇನಾಹಂ ಸೂಕರೀಂ ಯೋನಿಂ ಗತೋಽಹಂ ಪಾಪಸಂಚಯಾತ್॥ ೨೭ ॥

ಕ್ಷಾಳಯಿಷ್ಯಾಮ್ಯಹಂ ಘೋರಂ ಪಾತಕಂ ಪೂರ್ವಸಂಚಯಂ।
ಬಾಣೋದಕೈರ್ಮಹಾಘೋರೈಸ್ತೀಕ್ಷ್ಣೈಶ್ಚ ನಿಶಿತೈಃ ಶತೈಃ ॥ ೨೮ ॥

ಪುತ್ರಾನ್ಪೌತ್ರಾನ್ವರಾಂ ಕನ್ಯಾಂ ಕುಟುಂಬಂ ಬಾಲವೃದ್ಧಕಂ।
ಗಿರಿಂ ಗಚ್ಛ ಗೃಹೀತ್ವಾ ತ್ವಂ ಮನು ಮೋಹಮಿಮಂ ತ್ಯಜ ॥ ೨೯ ॥

---

೨೫. ಈತನ ಕೈಯಿಂದ ಸತ್ತರೆ ನನಗೆ ಲಾಭವೂ, ಉತ್ತಮವಾದ ಕೀರ್ತಿಯೂ ಬರುತ್ತದೆ ಆದುದರಿಂದ ಭೂಮಿಯಲ್ಲಿ ಯಶಸ್ಸೂ, ಪರದಲ್ಲಿ ವೈಕುಂಠಲೋಕ ಪ್ರಾಪ್ತಿಯೂ ಲಭಿಸುವವು.

೨೬. ನಾನು ಪರ್ವತದ ತಪ್ಪಲಲ್ಲಿರುವುದರಿಂದ ಈತನು ಕೋಪಗೊಂಡರೆ ನನಗೇನೂ ಭಯವಿಲ್ಲ. ಪಾಪದ ದೆಸೆಯಿಂದ ಹೆದರಿದ್ದೇನೆ. ಧರ್ಮವನ್ನು ಯೋಚಿಸಿ ಸ್ಥಿರನಾಗಿ ನಿಂತು ಯುದ್ಧಮಾಡುವೆನು.

೨೭. ನಾನು ಹಿಂದಿನ ಜನ್ಮದಲ್ಲಿ ಯಾವ ಪಾಪವನ್ನು ಮಾಡಿ ಈಗ ಹಂದಿ ಯಾಗಿ ಹುಟ್ಟಿದೆನೋ ನನಗೆ ಗೊತ್ತಿಲ್ಲವಾಗಿದೆ.

೨೮–೨೯. ನಾನು ಹರಿತವಾದ ಬಾಣಗಳೆಂಬ ನೀರಿನಿಂದ ಪೂರ್ವಜನ್ಮದ ಘೋರವಾದ ಪಾಪವನ್ನು ತೊಳೆದುಕೊಳ್ಳುತ್ತೇನೆ. ನೀನು ದೊಡ್ಡವರು, ಚಿಕ್ಕವರು ಎಲ್ಲರೂ ಇರುವ ಈ ಕುಟುಂಬವನ್ನು ಕರೆದುಕೊಂಡು ಬೆಟ್ಟದ ಮೇಲಕ್ಕೆ ಹೋಗು. ನನ್ನ ಮೋಹವನ್ನು ಬಿಡು.

**ಮಮ ಸ್ನೇಹಂ ಪರಿತ್ಯಜ್ಯ ಹರಿರೇಷ ಸಮಾಗತಃ ।**
**ಅಸ್ಯ ಹಸ್ತಾತ್ಪ್ರಯಾಸ್ಯಾಮಿ ತದ್ವಿಷ್ಣೋಃ ಪರಮಂ ಪದಂ ॥ ೩೦ ॥**

**ದೇವೇನಾಪಿ ಮಮಾದ್ಯೈವ ಸ್ವರ್ಗದ್ವಾರಮನುತ್ತಮಂ ।**
**ಉದ್ಘಾಟಿತಕಪಾಟಂ ತು ಯಾಸ್ಯಾಮಿ ಸುಮಪದ್ದಿವಂ ॥ ೩೧ ॥**

**॥ ಸುಕಲೋವಾಚ ॥**

**ತಚ್ಛ್ರುತ್ವಾ ವಚನಂ ತಸ್ಯ ಶೂಕರಸ್ಯ ಮಹಾತ್ಮನಃ ।**
**ಉವಾಚ ತತ್ಪ್ರಿಯಾ ಸಖ್ಯಃ ಸೀದಮಾನಾಂತರಾ ತದಾ ॥ ೩೨ ॥**

**॥ ಶೂಕರ್ಯುವಾಚ ॥**

**ಯಸ್ಮಿನ್ಯೂಥೇ ಭವೇತ್ಸ್ವಾಮೀ ಪುತ್ರಪೌತ್ರೈರಲಂಕೃತಃ ।**
**ಮಿತ್ರೈಶ್ಚ ಭ್ರಾತೃಭಿಶ್ಚೈವ ಅನ್ಯೈಃ ಸ್ವಜನಬಾಂಧವೈಃ ॥ ೩೩ ॥**

**ತಥೈವಾಲಂಕೃತೋ ಯೂಥೋ ಭವತಾ ಪರಿಶೋಭಿತೇ ।**
**ತ್ವಾಂ ವಿನಾಯಂ ಮಹಾಭಾಗ ಕೀದೃಗ್ಯೂಥೋ ಭವಿಷ್ಯತಿ ॥ ೩೪ ॥**

---

೩೦. ಸಾಕ್ಷಾತ್ ಹರಿಯೇ ರಾಜನ ರೂಪವನ್ನು ಹೊಂದಿ ನನ್ನಲ್ಲಿ ಸ್ನೇಹವನ್ನು ಬಿಟ್ಟು ಕೊಲ್ಲಲು ಬಂದಿರುವನು. ಈತನ ಕೈಯಿಂದ ಸಾಯುತ್ತೇನೆ. ಅದೇ ನನಗೆ ಮೋಕ್ಷದಾಯಕವು.

೩೧. ದೇವರೂ ಕೂಡ ನನಗೋಸ್ಕರ ಸ್ವರ್ಗದ ಬಾಗಿಲನ್ನು ತೆರೆದಿದ್ದಾನೆ. ನಾನು ಸ್ವರ್ಗಕ್ಕೆ ಹೋಗುತ್ತೇನೆ ಎಂದು ಹೇಳಿತು.

೩೨. ಸುಕಲೆಯು ಹೇಳುತ್ತಾಳೆ:—ಗಂಡುಹಂದಿಯ ಆ ಮಾತನ್ನು ಕೇಳಿ ದುಃಖಗೊಂಡ ಹೆಣ್ಣುಹಂದಿಯು ಹೇಳಿತು.

೩೩.-೩೪. ಹೆಣ್ಣುಹಂದಿಯು ಹೇಳುತ್ತದೆ:—ಯಾವ ಗುಂಪಿನಲ್ಲಿ ಮಕ್ಕಳು, ಮೊಮ್ಮಕ್ಕಳು, ಮಿತ್ರರು, ಸಹೋದರರು ಮತ್ತು ಇತರ ಬಾಂಧವರುಗಳು ಇರುವರೋ ಅಲ್ಲಿ ನೀನಿದ್ದರೆ ಆ ಗುಂಪು ಬಹು ಚೆನ್ನಾಗಿ ಶೋಭಿಸುತ್ತದೆ. ನೀನಿಲ್ಲದಿದ್ದರೆ ಆ ಗುಂಪು ಚೆನ್ನಾಗಿರುವುದಿಲ್ಲ.

ತಸ್ಯೈವ ಸುಬಲೇನಾಪಿ ಗರ್ಜಮಾನಾಶ್ಚ ಶೂಕರಾಃ ।
ವಿಚರಂತಿ ಗಿರೌ ಕಾಂತ ತನಯಾ ಮಮ ಬಾಲಕಾಃ ॥ ೩೫ ॥

ಮೃದೂನ್ಮೂಲಾಂಸ್ತು ಭಕ್ಷಂತಿ ನಿರ್ಭಯಾಸ್ತವ ತೇಜಸಾ ।
ದುರ್ಗೇಷು ವನಕುಂಜೇಷು ಪರ್ವತಾಂತರ್ದರೀಷು ಚ ॥ ೩೬ ॥

ನ ಕುರ್ವಂತಿ ಭಯಂ ತೀವ್ರಂ ಸಿಂಹಾನಾಮಿಹ ಪರ್ವತೇ ।
ಮಾನವಾನಾಂ ಮಹಾಭಾಗ ಪಾಲಿತಾಸ್ತವ ತೇಜಸಾ ॥ ೩೭ ॥

ತ್ವಯಾ ತ್ಯಕ್ತಾ ಅಮೀ ಸರ್ವೇ ಬಾಲಕಾ ಮಮ ದಾರಕಾಃ ।
ದೀನಾಶ್ಚೈವ ವರಾಕಾಶ್ಚ ಭವಿಷ್ಯಂತಿ ವಿಚೇತನಾಃ ॥ ೩೮ ॥

ನಿತ್ಯಂ ಚೈವ ಸುಖಂ ಕರ್ಮ ಗತ್ವಾ ಪಶ್ಯಂತಿ ಬಾಲಕಾಃ ।
ಪತಿಹೀನಾ ಯಥಾ ನಾರೀ ಶೋಭತೇ ನೈವ ಶೋಭನಾ ॥ ೩೯ ॥

---

೩೫. ಬಲಿಷ್ಠನಾದ ನೀನು ಮಕ್ಕ ಹಂದಿಗಳನ್ನು ಹೆದರಿಸಿ, ಹತೋಟಿಯಲ್ಲಿಟ್ಟು ಕೊಂಡಿದ್ದರೆ ಅವೆಲ್ಲವೂ ಬೆಟ್ಟದಲ್ಲಿ ನಿರ್ಬಾಧಿತವಾಗಿ ಸಂಚರಿಸಿಕೊಂಡಿರುತ್ತವೆ

೩೬. ಅವು ನಿನ್ನ ಬಲದಿಂದ ನಿರ್ಭಯವಾಗಿ ಗೆಡ್ಡೆಗೆಣಸುಗಳನ್ನು ತಿನ್ನುತಾ ದುರ್ಗಗಳಲ್ಲೂ, ಕಾಡಿನಲ್ಲೂ, ತಪ್ಪಲಿನಲ್ಲೂ, ಪೊದರುಗಳಲ್ಲಿಯೂ ಸಂಚರಿಸಿಕೊಂಡಿರುತ್ತವೆ.

೩೭. ನಿನ್ನ ಶಕ್ತಿಯಿಂದ, ನಿರ್ಭಯವಾಗಿ, ಸಿಂಹಗಳಿಗೂ, ಕೊನೆಗೆ ಮನುಷ್ಯರಿಗೂ ಹೆದರದೆ ಸಂಚರಿಸುವವು.

೩೮. ನನ್ನ ಮಕ್ಕಳು ಇನ್ನೂ ಚಿಕ್ಕವು. ನೀನು ಅವನ್ನು ಬಿಟ್ಟು ಹೊರಟು ಹೋದರೆ ಅವುಗಳಿಗೆ ದಿಕ್ಕಿಲ್ಲದೆ, ದೀನವಾಗಿಯೂ, ಅನಾಥರಾಗಿಯೂ ಆಗಿ ಜ್ಞಾನ ಶೂನ್ಯರಾಗುತ್ತಾರೆ.

೩೯. ಮಕ್ಕಳು ನಿತ್ಯವೂ ತಮಗೆ ಸುಖವಾದ ಕೆಲಸಗಳಲ್ಲಿ ತೊಡಗಿದರೂ, ಗಂಡನಿಲ್ಲದ ಹೆಂಡತಿಯು ಸುಖದಂತೆ, ಅದು ಶೋಭಿಸುವುದಿಲ್ಲ.

ಅಲಂಕೃತಾ ಚಾಪಿ ದಿವ್ಯೈರಲಂಕಾರೈಃ ಸುಕಾಂಚನೈಃ ।
ರತ್ನೈಃ ಪರಿಚ್ಛದೈರ್ವಸ್ತ್ರೈಃ ಪಿತೃಮಾತೃಸಹೋದರೈಃ ॥ ೪೦ ॥

ಶ್ವಶ್ರೂಶ್ವಶುರಕೈಶ್ಚಾನ್ಯೈಃ ಪತಿಹೀನಾ ನ ಭಾತಿ ಸಾ ।
ಚಂದ್ರಹೀನಾ ಯಥಾ ರಾತ್ರಿಃ ಪುತ್ರಹೀನಂ ಯಥಾ ಕುಲಂ ॥ ೪೧ ॥

ದೀಪಹೀನಂ ಯಥಾ ಗೇಹಂ ನೈವ ಭಾತಿ ಕದಾ ಕಿಲ ।
ತ್ವಾಂ ವಿನಾಯಂ ತಥಾ ಯೂಥೋ ನೈವ ಶೋಭತಿ ಮಾನದ ॥ ೪೨ ॥

ಆಚಾರೇಣ ಯಥಾ ಮರ್ತ್ಯೋ ಜ್ಞಾನಹೀನೋ ಯತಿಃ ಕಿಲ ।
ಮಂತ್ರಹೀನಂ ಯಥಾ ರಾಜ್ಯಂ ತಥಾಯಂ ನೈವ ಶೋಭತೇ ॥ ೪೩ ॥

ಕೈವರ್ತೇನ ವಿನಾ ನಾವಃ ಸಂಪೂರ್ಣಾಃ ಪರಿಸಾಗರೇ ।
ನ ಭಾಂತ್ಯೇವ ಯಥಾ ಸಾರ್ಥಃ ಸಾರ್ಥವಾಹೇನ ವೈ ತಥಾ ॥ ೪೪ ॥

ಸೇನಾಧ್ಯಕ್ಷೇಣ ಚ ವಿನಾ ಯಥಾ ಸೈನ್ಯಂ ನ ಭಾತಿ ಚ ।
ತ್ವಾಂ ವಿನಾ ವೈ ತಥಾ ಸೈನ್ಯಂ ಶೂಕರಾಣಾಂ ಮಹಾಮತೇ ॥ ೪೫ ॥

---

೪೦-೪೨. ಸುವರ್ಣಮಯವಾದ ಉತ್ತಮಾಲಂಕಾರಗಳಿಂದಲೂ, ರತ್ನಗಳಿಂದಲೂ, ಒಳ್ಳೆಯ ಬಟ್ಟೆಗಳಿಂದಲೂ, ತಾಯಿ ತಂದೆ ಸಹೋದರರು ಅತ್ತೆಮಾವಂದಿರುಗಳಿಂದಲೂ ಕೂಡಿದ್ದರೂ ಗಂಡನೊಬ್ಬನಿಲ್ಲದಿದ್ದರೆ ಆ ನಾರಿಯು ಚಂದ್ರನಿಲ್ಲದ ರಾತ್ರಿಯಂತೆಯೂ ಮಗನಿಲ್ಲದ ವಂಶದಂತೆಯೂ ದೀಪವಿಲ್ಲದ ಮನೆಯಂತೆಯೂ ಪ್ರಕಾಶಿಸುವುದೇ ಇಲ್ಲ. ಅದೇರೀತಿಯಾಗಿ ಯಜಮಾನನಾದ ನೀನಿಲ್ಲದಿದ್ದರೆ ಈ ಹಿಂಡು ಶೋಭಿಸುವುದಿಲ್ಲ.

೪೩. ಆಚಾರವಿಲ್ಲದ ಮನುಜನಂತೆಯೂ, ಜ್ಞಾನಿಯಲ್ಲದ ಯತಿಯಂತೆಯೂ, ಮಂತ್ರಾಲೋಚನೆಯಿಲ್ಲದ ರಾಜ್ಯದಂತೆಯೂ ಈ ಹಿಂಡು ಶೋಭಿಸುವುದಿಲ್ಲ.

೪೪-೪೫. ನಾವಿಕನಿಲ್ಲದ ನಾವೆಯಂತೆಯೂ, ನಾಯಕನಿಲ್ಲದ ವರ್ತಕರ ಗುಂಪಿನಂತೆಯೂ, ಸೇನಾಪತಿಯಿಲ್ಲದ ಸೇನೆಯಂತೆಯೂ, ನೀನಿಲ್ಲದಿದ್ದರೆ ಹಂದಿಗಳ ಈ ಗುಂಪು ಶೋಭಿಸುವುದಿಲ್ಲ.

ದೀನೋ ಭವಿಷ್ಯತಿ ಯಥಾ ವೇದಹೀನೋ ಯಥಾ ದ್ವಿಜಃ ।
ಮಯಿ ಭಾರಂ ಕುಟುಂಬಸ್ಯ ವಿನಿವೇಶ್ಯ ಪ್ರಗಚ್ಛಸಿ ॥ ೪೬ ॥

ಮರಣಂ ಸುಲಭಂ ಜ್ಞಾತ್ವಾ ಕಾ ಪ್ರತಿಜ್ಞಾ ತವೇದೃಶೀ ।
ತ್ವಾಂ ವಿನಾಹಂ ನ ಶಕ್ನೋಮಿ ಧರ್ತುಂ ಪ್ರಾಣಾನ್ಪ್ರಿಯೇಶ್ವರ ॥ ೪೭ ॥

ತ್ವಯೈವ ಸಹಿತಾ ಸ್ವರ್ಗಂ ಭೂಮಿಂ ವಾಪಿ ಮಹಾಮತೇ ।
ನರಕಂ ವಾ ಪ್ರಭೋಕ್ಷ್ಯಾಮಿ ಸತ್ಯಂ ಸತ್ಯಂ ವದಾಮ್ಯಹಂ ॥ ೪೮ ॥

ಅಥ ಪುತ್ರಾನ್ಸಪುತ್ರಾಂಶ್ಚ ಗೃಹೀತ್ವಾ ಯೂಥಮುತ್ತಮಂ ।
ಆವಾಂ ವ್ರಜಾವ ಯೂಥೇಶ ದುರ್ಗಮೇವಂ ಸುಕಂದರಂ ॥ ೪೯ ॥

ಜೀವಿತವ್ಯಂ ಪರಿತ್ಯಜ್ಯ ಮರಣಾಯಾಭಿಗಮ್ಯತೇ ।
ತತ್ರ ಕಿಂ ದೃಶ್ಯತೇ ಲಾಭೋ ಮರಣೇ ವದ ಸಾಂಪ್ರತಂ ॥ ೫೦ ॥

---

೪೬. ಆ ಗುಂಪು ವೇದವನ್ನು ಓದದ ಬ್ರಾಹ್ಮಣನಂತೆ ದೀನವಾಗಿ ಕಾಣುತ್ತದೆ. ನನ್ನಲ್ಲಿ ಈ ಕುಟುಂಬರಕ್ಷಣೆಯ ಭಾರವನ್ನು ಇಟ್ಟುಹೋಗುವುದುಚಿತವೇ ?

೪೭. ಸಾವು ಸುಲಭವೆಂದು ತಿಳಿದು ಈರೀತಿ ನೀನು ಮಾಡಿರುವ ಪ್ರತಿಜ್ಞೆಯು ಯೋಗ್ಯವೇ ? ನಿನ್ನನ್ನು ಬಿಟ್ಟು ನಾನು ಪ್ರಾಣಗಳನ್ನು ಧರಿಸಿರಲಾರೆ.

೪೮. ನಾನು ನಿನ್ನೊಡನೆಯೇ ಸ್ವರ್ಗ, ಭೂಮಿ, ನರಕ ಇವುಗಳಲ್ಲಿ ಸುಖದುಃಖಗಳನ್ನು ಅನುಭವಿಸುತ್ತೇನೆ, ಇದು ಸತ್ಯವು.

೪೯. ಮಕ್ಕಳು, ಮೊಮ್ಮಕ್ಕಳು ಮೊದಲಾದ ಬಳಗಗಳಿಂದ ಕೂಡಿರುವ ಈ ಯೂಥವನ್ನು ಕರೆದುಕೊಂಡು ನಾವಿಬ್ಬರೂ ದುರ್ಗವನ್ನಾಗಲೀ, ಗುಹೆಯನ್ನಾಗಲೀ ಆಶ್ರಯಿಸೋಣ.

೫೦. ಬದುಕಿರಬೇಕೆಂಬ ಆಸೆಯನ್ನು ಬಿಟ್ಟು ಸಾಯುವುದಕ್ಕೆ ಸಿದ್ಧನಾಗಿ ಹೋಗುವಿಯಲ್ಲಾ ? ಆ ಮರಣದಲ್ಲಿ ಲಾಭವೇನಿದೆ ಹೇಳು.

॥ ವರಾಹ ಉವಾಚ ॥

**ವೀರಾಣಾಂ ತ್ವಂ ನ ಜಾನಾಸಿ ಸುಧರ್ಮಂ ಶೃಣು ಸಾಂಪ್ರತಂ।**
**ಯುದ್ಧಾರ್ಥಿನಾ ಹಿ ವೀರೇಣ ವೀರಂ ಗತ್ವಾ ಪ್ರಯಾಚಿತಂ ॥ ೫೧ ॥**

**ದೇಹಿ ಮೇ ಯೋಧನಂ ಸಂಖ್ಯೇ ಯುದ್ಧಾರ್ಥೀ ತ್ವಹಮಾಗತಃ।**
**ಪರೇಣ ಯಾಚಿತಂ ಯುದ್ಧಂ ನ ದದಾತಿ ಯದಾ ಭಟಃ ॥ ೫೨ ॥**

**ಕಾಮಾಲ್ಲೋಭಾದ್ಭಯಾದ್ವಾಪಿ ಮೋಹಾದ್ವಾ ಶೃಣು ವಲ್ಲಭೇ।**
**ಕುಂಭೀಪಾಕೇ ಸ ನರಕೇ ವಸೇದ್ಯುಗಸಹಸ್ರಕಂ ॥ ೫೩ ॥**

**ಕ್ಷತ್ರಿಯಾಣಾಂ ಪರೋ ಧರ್ಮೋ ಯುದ್ಧಂ ದೇಯಂ ನ ಸಂಶಯಃ।**
**ತದ್ಯುದ್ಧಂ ದೀಯಮಾನೇನ ರಂಗಭೂಮಿಂ ಗತೇನ ವೈ ॥ ೫೪ ॥**

**ಜಿತ್ವಾ ಶತ್ರುಂ ಪುನಸ್ತತ್ರ ಯಶಃ ಕೀರ್ತಿಂ ಪ್ರಭುಂಜತೇ।**
**ನೋ ವಾ ಹತೋಽಪಿ ಯುದ್ಧೇಽಸ್ಮಿನ್ಯುಧ್ಯಮಾನಃ ಸುನಿರ್ಭಯಃ ॥ ೫೫ ॥**

**ವೀರಲೋಕಮವಾಪ್ನೋತಿ ದಿವ್ಯಾಂಲ್ಲೋಕಾನ್ಪ್ರಭುಂಜತೇ।**
**ಯಾವದ್ವರ್ಷಸಹಸ್ರಾಣಾಂ ವಿಂಶತ್ಯೇಕಾ ಪ್ರಿಯೇ ಶೃಣು ॥ ೫೬ ॥**

---

೫೧. ಸಲಗನು ಹೇಳಿತು :—ವೀರರ ಧರ್ಮವು ನಿನಗೆ ಗೊತ್ತಿಲ್ಲ. ಅದನ್ನು ಹೇಳುತ್ತೇನೆ ಕೇಳು. ಯುದ್ಧವನ್ನು ಅಪೇಕ್ಷಿಸುವ ವೀರನು ಮತ್ತೊಬ್ಬ ವೀರನನ್ನು ಯುದ್ಧಕೊಡೆಂದು ಯಾಚಿಸುವನು. ಇದು ವೀರರ ಲಕ್ಷಣವು.

೫೨-೫೩. ನನಗೆ ಯುದ್ಧವನ್ನು ಕೊಡು, ನಾನು ಯುದ್ಧಾರ್ಥಿಯಯಾಗಿ ಬಂದಿದ್ದೇನೆ ಎಂದು ಮತ್ತೊಬ್ಬನು ಕೇಳಿದರೆ, ಆಗ ಅವನು, ಕಾಮ, ಆಸೆ, ಮೋಹ ಮೊದಲಾದವುಗಳಿಂದ ಯುದ್ಧಮಾಡಲು ನಿರಾಕರಿಸಿದರೆ, ಅವನು ಕುಂಭೀಪಾಕವೆಂಬ ನರಕದಲ್ಲಿ ಸಾವಿರ ಯುಗಗಳವರಿಗೂ ಬಿದ್ದಿರುತ್ತಾನೆ.

೫೪-೫೬. ಕ್ಷತ್ರಿಯರು ಯುದ್ಧವನ್ನು ಕೊಡಲೇಬೇಕು. ಅದು ಅವರ ಉತ್ತಮಧರ್ಮವು. ರಂಗಭೂಮಿಯಲ್ಲಿ ಯುದ್ಧವನ್ನು ಕೊಟ್ಟು ಶತ್ರುವನ್ನು ಜಯಿಸಿದರೆ ಯಶಸ್ಸನ್ನು ಅನುಭವಿಸುತ್ತಾನೆ. ಹಾಗಲ್ಲದೆ, ತಾನೇ ಸತ್ತರೆ ದಿವ್ಯವಾದ ವೀರಲೋಕವನ್ನು ಹೊಂದಿ ಅಲ್ಲಿ ಇಪ್ಪತ್ತೊಂದುಸಾವಿರವರ್ಷಗಳವರೆಗೂ ಸುಖವಾಗಿರುತ್ತಾನೆ. ಅಲ್ಲದೆ ಆ ವೀರಸ್ವರ್ಗದಲ್ಲಿ ದೇವವೀರರೊಡನೆ ಸರಿಸಮನಾಗಿ ಗೌರವಿಸಲ್ಪಡುವನು.

ವೀರಲೋಕೇ ವಸೇತ್ತಾವದ್ದೇವವೀರ್ಗೈರ್ಮಹೀಯತೇ ।
ಮನುಪುತ್ರಃ ಸಮಾಯಾತಃ ಸ್ವಯಂ ವೀರೋ ನ ಸಂಶಯಃ ॥ ೫೭ ॥

ಸಂಗ್ರಾಮಂ ಯಾಚಮಾನಸ್ತು ಯುದ್ಧಂ ದೇಯಂ ಮಯಾ ಧ್ರುವಂ ।
ಯುದ್ಧಾತಿಥಿಃ ಸಮಾಯಾತೋ ವಿಷ್ಣುರೂಪಃ ಸನಾತನಃ ।
ಸತ್ಕಾರೋ ಯುದ್ಧರೂಪೇಣ ಕರ್ತವ್ಯಶ್ಚ ಮಯಾ ಶುಭೇ ॥ ೫೮ ॥

॥ ಶೂಕರ್ಯುವಾಚ ॥

ಯದಾ ಯುದ್ಧಂ ತ್ವಯಾ ದೇಹಂ ರಾಜ್ಞೇ ಚೈವ ಮಹಾತ್ಮನೇ ।
ತತೋಽಹಂ ಪೌರುಷಂ ಕಾಂತ ಪಶ್ಯೇ ವೈ ತವ ಕೀದೃಶಂ ॥ ೫೯ ॥

ಏವಮುಕ್ತ್ವಾ ಪ್ರಿಯಾನ್ಪುತ್ರಾನ್ಸಮಾಹೂಯ ತ್ವರಾನ್ವಿತಾ ।
ಉವಾಚ ಪುತ್ರಕಾ ಯೂಯಂ ಶೃಣುಧ್ವಂ ವಚನಂ ಮಮ ॥ ೬೦ ॥

ಯುದ್ಧಾತಿಥಿಸ್ಸಮಾಯಾತೋ ವಿಷ್ಣುರೂಪಃ ಸನಾತನಃ ।
ಮಯಾ ತತ್ರ ಪ್ರಗಂತವ್ಯಂ ಯತ್ರಾಯಂ ಹಿ ಗಮಿಷ್ಯತಿ ॥ ೬೧ ॥

ಯಾವತ್ತಿಷ್ಠತಿ ವೈ ನಾಥೋ ಭವತಾಂ ಪ್ರತಿಪಾಲಕಃ ।
ಯೂಯಂ ಗಚ್ಛಂತು ವೈ ದೂರಂ ದುರ್ಗಂ ಗಿರಿಗುಹಾಮುಖಂ ॥ ೬೨ ॥

---

೫೭-೫೮. ಮನುಪುತ್ರನಾದ ಇಕ್ಷ್ವಾಕುರಾಜನು ಬಂದಿರುವನು. ಅವನು ಸ್ವತಃ ವೀರನು. ಅದರಲ್ಲಿ ಅನುಮಾನವಿಲ್ಲ. ಅವನು ಯುದ್ಧಾರ್ಥಿಯಾಗಿ ಬಂದಿರುವುದರಿಂದ ನಾನು ಯುದ್ಧವನ್ನು ಕೊಡಬೇಕು. ರಾಜನಾದ ಅವನು ವಿಷ್ಣುರೂಪನಷ್ಟೆ ? ಅಂತಹ ವಿಷ್ಣುವಿಗೆ ನಾನು ಯುದ್ಧರೂಪದಿಂದ ಸತ್ಕಾರಮಾಡಬೇಕು. ಇದು ನನ್ನ ಕರ್ತವ್ಯವು.

೫೯. ಹೆಣ್ಣುಹಂದಿಯು ಹೇಳುತ್ತದೆ :—ಮಹಾತ್ಮನಾದ ಆ ರಾಜನಿಗೆ ನೀನು ಯುದ್ಧವನ್ನು ಕೊಡುವುದಾದರೆ ನೀನು ಮಹಾವೀರನೇ ಸರಿ. ಇಂತಹ ನಿನ್ನ ಪೌರುಷವನ್ನು ನೋಡಬಯಸುತ್ತೇನೆ.

೬೦-೬೪. ಹೀಗೆ ಹೇಳಿ ಆ ಹೆಣ್ಣುಹಂದಿಯು ತನ್ನ ಮಕ್ಕಳನ್ನು ಕರೆದು, ಎಲೈ ಮಕ್ಕಳಿರಾ, ನನ್ನ ಮಾತನ್ನು ಕೇಳಿ. ಸನಾತನನಾದ ವಿಷ್ಣುವೇ ಯುದ್ಧಾತಿಥಿ

ಸುಖಂ ಜೀವಿತ ಮೋ ವತ್ಸಾ ವರ್ಜಯಿತ್ವಾ ಸುಲುಬ್ಧಕಾನ್ ।
ಮಯಾ ತತ್ರ ಪ್ರಗಂತವ್ಯಂ ಯತ್ರೈಷ ಹಿ ಗಮಿಷ್ಯತಿ ॥ ೬೩ ॥
ಭವತಾಂ ಶ್ರೇಷ್ಠೋಽಯಂ ಭ್ರಾತಾ ಯೂಥರಕ್ಷಾಂ ಕರಿಷ್ಯತಿ ।

ಏತೇ ಪಿತೃವ್ಯಕಾಃ ಸರ್ವೇ ಭವತಾಂ ತ್ರಾಣಕಾರಕಾಃ ।
ದೂರಂ ಪ್ರಯಾಂತು ವೈ ಸರ್ವೇ ಮಾಂ ವಿಹಾಯ ಸುಪುತ್ರಕಾಃ ॥ ೬೪ ॥

ಪುತ್ರಾ ಊಚುಃ ॥

ಅಯಂ ಹಿ ಪರ್ವತಃ ಶ್ರೇಷ್ಠೋ ಬಹುಮೂಲಫಲೋದಕಃ ।
ಭಯಂ ತು ಕಸ್ಯ ವೈ ನಾಸ್ತಿ ಸುಖಂ ಜೀವನಮಸ್ತಿ ವೈ ॥ ೬೫ ॥

ಯುವಾಭ್ಯಾಂ ಹಿ ಅಕಸ್ಮಾದ್ಧಿ ಯುದ್ಧಮುಕ್ತಂ ಭಯಂಕರಂ ।
ತನ್ನೋ ಹಿ ಕಾರಣಂ ಮಾತರ್ವದ ಸತ್ಯಮಿಹೈವ ಹಿ ॥ ೬೬ ॥

---

ಯಾಗಿ ಈ ರಾಜನ ರೂಪದಿಂದ ಇಲ್ಲಿಗೆ ಬಂದಿದ್ದಾನೆ. ನನ್ನ ಪತಿಯು ಹೋಗುವ ಜಾಗಕ್ಕೆ ನಾನು ಹೋಗಬೇಕಾದುದು ಧರ್ಮತಾನೇ ? ನಿಮ್ಮ ರಕ್ಷಕನಾದ ಈ ನನ್ನ ಪತಿಯು ಇಲ್ಲಿರುವುದರೊಳಗಾಗಿಯೇ ನೀವೆಲ್ಲರೂ ದೂರವಾಗಿರುವ ದುರ್ಗವನ್ನಾಗಲಿ, ಗಿರಿಯ ಗುಹೆಯನ್ನಾಗಲಿ ಸೇರಿಕೊಳ್ಳಿರಿ. ಬೇಟೆಗಾರರಿಂದ ದೂರ ಹೊರಟುಹೋಗಿ ಸುಖವಾಗಿ ಬದುಕಿರಿ. ನನ್ನ ಯಜಮಾನನ ಸ್ಥಳಕ್ಕೆ ನಾನು ಹೋಗುತ್ತೇನೆ. ನಿಮ್ಮೆಲ್ಲರಿಗೂ ಗಟ್ಟಿಗನಾದ ಈ ಸಹೋದರನು ನಿಮ್ಮ ಗುಂಪನ್ನು ಯಜಮಾನನಾಗಿ ರಕ್ಷಿಸುತ್ತಾನೆ. ಈ ನಿಮ್ಮ ಚಿಕ್ಕಪ್ಪಂದಿರೂ ನಿಮ್ಮನ್ನು ಕಾಪಾಡುತ್ತಾರೆ. ಆದುದರಿಂದ, ಎಲೈ ಮಕ್ಕಳಿರಾ, ನನ್ನುದ್ದು ಬಿಟ್ಟು ನೀವೆಲ್ಲರೂ ದೂರಕ್ಕೆ ಸರಿದುಹೋಗಿರಿ ಎಂದು ಹೇಳಿತು.

೬೫. ಮರಿಗಳು ಹೇಳಿದವು :—ಈ ಪರ್ವತದಲ್ಲಿ ಯಥೇಚ್ಛವಾಗಿ ಗೆಡ್ಡೆಗೆಣಸುಗಳೂ, ನೀರೂ ಇವೆ. ಇಲ್ಲಿ ಸುಖವಾಗಿ ಜೀವನಮಾಡಬಹುದು. ಭಯವು ಯಾರಿಗೆತಾನೇ ಇರುವುದಿಲ್ಲ ?

೬೬. ನೀವಿಬ್ಬರು ಅಕಸ್ಮಾತ್ತಾಗಿ ಒದಗಿರುವ ಯುದ್ಧಭಯವನ್ನು ಹೇಳುತ್ತೀರಿ. ಅದರ ಕಾರಣವನ್ನು ನಮಗೆ ಹೇಳಿ.

॥ ಸೂಕರ್ಯುವಾಚ ॥

ಅಯಂ ರಾಜಾ ಮಹಾರೌದ್ರಃ ಕಾಲರೂಪಃ ಸಮಾಗತಃ ।
ಕ್ರೀಡತೇ ಮೃಗಯಾ ಲುಬ್ಧೋ ಮೃಗಾನ್ ಹತ್ವಾ ಬಹೂನ್ವನೇ ॥ ೬೭ ॥

ಇಕ್ಷ್ವಾಕುರ್ನಾಮ ದುರ್ಧರ್ಷೋ ಮನುಪುತ್ರೋ ಮಹಾಬಲಃ ।
ಸಂಹರಿಷ್ಯತಿ ಕಾಲೋಽಯಂ ದೂರಂ ಯಾಂತು ಸುಪುತ್ರಕಾಃ ॥ ೬೮ ॥

॥ ಪುತ್ರಾ ಊಚುಃ ॥

ಮಾತರಂ ಪಿತರಂ ತ್ಯಕ್ತ್ವಾ ಯಃ ಪ್ರಯಾತಿ ಸ ಪಾಪಧೀಃ ।
ಮಹಾರೌದ್ರಂ ಸುಘೋರಂ ತು ನರಕಂ ಯಾತಿ ನಾನ್ಯಥಾ ॥ ೬೯ ॥

ಮಾತುಃ ಪುಣ್ಯಂ ಪಯಃ ಪೀತ್ವಾ ಪುಷ್ಟೋ ಭವತಿ ನಿರ್ಘೃಣಃ ।
ಮಾತರಂ ಪಿತರಂ ತ್ಯಜ್ಯ ಯಃ ಪ್ರಯಾತಿ ಸುದುರ್ಬಲಃ ॥ ೭೦ ॥

ಪೂಯಂ ನರಕಂ ಪಿಬೇನ್ನಿತ್ಯಂ ಕೃಮಿದುರ್ಗಂಧಸಂಕುಲಂ ।
ಮಾತಸ್ತಸ್ಮಾನ್ನ ಯಾಸ್ಯಾಮೋ ಗುರುಂ ತ್ಯಕ್ತ್ವಾ ಇಹೈವ ಚ ॥ ೭೧ ॥

---

೬೭-೬೮. ಹೆಣ್ಣುಹಂದಿಯು ಹೇಳಿತು :—ಯಮರೂಪಿಯಾದ ಇಕ್ಷ್ವಾಕುವೆಂಬ ರಾಜನು ಈ ಕಾಡಿಗೆ ಬೇಟೆಗೋಸ್ಕರ ಬಂದು ಕ್ರೂರನಾಗಿ ಎಲ್ಲ ಕಡೆಯಲ್ಲಿಯೂ ಸಂಚರಿಸುತ್ತಿದ್ದಾನೆ. ನಿಮ್ಮನ್ನು ಕಂಡರೆ ಕೊಲ್ಲುವನು. ಆದುದರಿಂದ ನೀವು ದೂರ ಹೋಗಿರಿ.

೬೯. ಮರಿಗಳು ಹೇಳಿದವು :-ತಾಯಿತಂದೆಗಳನ್ನು ಬಿಟ್ಟು ಯಾವ ಪಾಪಿಯು ಹೊರಟುಹೋಗುತ್ತಾನೆ ? ಅವನು ಘೋರವಾದ ನರಕವನ್ನು ಹೊಂದುತ್ತಾನೆಯೇ ಹೊರತು ಬೇರೆಯಲ್ಲ.

೭೦. ತಾಯಿಯ ಪುಣ್ಯವಾದ ಸ್ತನ್ಯಪಾನಮಾಡಿ ಪುಷ್ಟನಾಗಿ ಬೆಳೆದು. ಬಳಿಕ ದಯೆಯಿಲ್ಲದೆ ಅವಳನ್ನು ಕಷ್ಟಕಾಲದಲ್ಲಿ ಬಿಟ್ಟುಹೋಗುವವನು ಕೃತಘ್ನನೂ, ಹೇಡಿಯೂ ಆಗಿರುವನು.

೭೧. ಹಾಗೆ ಹೋದವನು, ಕೀವಿನ ನರಕವನ್ನು ಹೊಂದಿ, ಅಲ್ಲಿ ಕ್ರಿಮಿಕೀಟಾದಿಗಳ ದುರ್ಗಂಧದಿಂದ ಕೂಡಿ, ಅದನ್ನೇ ತಿಂದು, ಕುಡಿದು ದುಃಖವನ್ನನುಭವಿಸಬೇಕಾಗುತ್ತದೆ. ಆದುದರಿಂದ ಅಮ್ಮಾ, ನಾವು ನಿಮ್ಮನ್ನು ಬಿಟ್ಟುಹೋಗುವುದಿಲ್ಲ. ಇಲ್ಲಿಯೇ ಇರುತ್ತೇವೆ.

**ಏವಂ ವೇದಾದಸಂಜಾತಂ ತೇಷಾಂ ಧರ್ಮಾರ್ಥಸಂಯುತಂ ।**
**ವ್ಯೂಹಂ ಕೃತ್ವಾ ಸ್ಥಿತಾಃ ಸರ್ವೇ ಬಲತೇಜಃಸಮಾಕುಲಾಃ ॥ ೭೨ ॥**

**ಸಾಹಸೋತ್ಸಾಹಸಂಹೃಷ್ಟಾಃ ಪಶ್ಯಂತಿ ನೃಪನಂದನಂ ।**
**ನದಂತಃ ಪೌರುಷೈರ್ಯುಕ್ತಾಃ ಕ್ರೀಡಮಾನಾ ವನೇ ತದಾ ॥ ೭೩ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋ-**
**ಪಾಖ್ಯಾನೇ ಸುಕಲಾಚರಿತೇ ದ್ವಿಚತ್ವಾರಿಂಶತ್ತಮೋಽಧ್ಯಾಯಃ**

---

೭೨. ಈರೀತಿ ವೇದವಿರುದ್ಧವಲ್ಲದ, ಧರ್ಮಾರ್ಥಗಳಿಂದ ಕೂಡಿದ ನಿರ್ಣಯವನ್ನು ಮಾಡಿ, ಆ ಮರಿಗಳು ವ್ಯೂಹರಚನೆಮಾಡಿಕೊಂಡು, ಬಲದಿಂದಲೂ, ದರ್ಪದಿಂದಲೂ ಯುದ್ಧಸನ್ನದ್ಧವಾಗಿ ನಿಂತವು.

೭೩. ಅಲ್ಲದೆ ಶಕ್ತಿಯಿಂದಲೂ, ಉತ್ಸಾಹದಿಂದಲೂ, ಸಂತೋಷದಿಂದಲೂ ಆ ರಾಜನನ್ನು ನೋಡುತ್ತ, ಪೌರುಷಪ್ರದರ್ಶನಮಾಡುವಂತೆ ಸಂತೋಷದಿಂದ ಕೂಗುತ್ತಾ ಅಲ್ಲಿದ್ದವು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದ ವೇನೋಪಾಖ್ಯಾನದಲ್ಲಿ, ಸುಕಲಾಚರಿತ್ರೆಯಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ॥ ತ್ರಿಚತ್ವಾರಿಂಶೋಽಧ್ಯಾಯಃ ॥

॥ ಸುಕಲೋವಾಚ ॥

ಏವಂ ತೇ ಶೂಕರಾಃ ಸರ್ವೇ ಯುದ್ಧಾಯ ಸಮುಪಸ್ಥಿತಾಃ ।
ಪುರಃ ಸ್ಥಿತಸ್ಯ ತೇ ರಾಜ್ಞೋ ಹ್ಯವತಸ್ಥುಶ್ಚ ಲುಬ್ಧಕಾಃ ॥ ೧ ॥

ಮಹಾವರಾಹೋ ರಾಜೇಂದ್ರ ಗಿರಿಸಾನುಂ ಸಮಾಶ್ರಿತಃ ।
ಮಹತಾ ಯೂಥಭಾವೇನ ವ್ಯೂಹಂ ಕೃತ್ವಾ ಪ್ರತಿಷ್ಠತಿ ॥ ೨ ॥

ಕಪಿಲಃ ಸ್ಥೂಲಪೀನಾಂಗೋ ಮಹಾದಂಷ್ಟ್ರೋ ಮಹಾಮುಖಃ ।
ದುಃಸಹಃ ಶೂಕರೋ ರಾಜನ್ಗರ್ಜತೇ ಚಾತಿಭೈರವಂ ॥ ೩ ॥

ಸ ತಂ ಪಶ್ಯ ಮಹಾರಾಜ ಶಾಲತಾಲವನಾಶ್ರಯಂ ।
ತೇಷಾಂ ತದ್ವಚನಂ ಶ್ರುತ್ವಾ ಮನುಪುತ್ರಃ ಪ್ರತಾಪವಾನ್ ॥ ೪ ॥

---

## ನಲವತ್ತಮೂರನೆಯ ಅಧ್ಯಾಯವು

೧. ಸುಕಲೆಯು ಹೇಳಿದಳು—ಹೀಗೆ ಆ ಹಂದಿಗಳೆಲ್ಲ ಯುದ್ಧಕ್ಕೆ ಸಿದ್ಧವಾದುವು. ಆ ಬೇಡರೂ ಕೂಡ ರಾಜನ ಎದುರಿನಲ್ಲಿ ಬೇಟೆಗೆ ಸಿದ್ಧರಾದರು.

೨. ಅತ್ತ ಆ ದೊಡ್ಡ ಹಂದಿಯೂ ಬೆಟ್ಟದ ತಪ್ಪಲನ್ನು ಆಶ್ರಯಿಸಿಕೊಂಡು, ಗುಂಪಿನಿಂದ ಕೂಡಿ, ವ್ಯೂಹವನ್ನು ರಚಿಸಿಕೊಂಡು ನಿಂತಿತ್ತು.

೩. ಕೆಂಚಗೆ ದಪ್ಪವಾದ, ಗಟ್ಟಿಯಾದ, ದೊಡ್ಡಕೋರೆಹಲ್ಲುಳ್ಳ, ಅಗಲವಾದ ಬಾಯುಳ್ಳ, ಸಹಿಸಲಸಾಧ್ಯವಾದ ಆ ಹಂದಿಯು ಗಟ್ಟಿಯಾಗಿ ಕೂಗುತ್ತಿತ್ತು.

೪-೫. ಆ ಇಕ್ಷ್ವಾಕುಮಹಾರಾಜನು, ಆ ಹಂದಿಯು ಸಾಲತಾಲವನಗಳಲ್ಲಿ

**ಗೃಹ್ಯತಾಂ ಶೂರವಾರಾಹಂ ವಿಧ್ಯತಾಂ ಬಲದರ್ಪಿತಂ ।**
**ಏವಮಾಭಾಷ್ಯ ತಾನ್ವೀರೋ ಮನುಪುತ್ರಃ ಪ್ರತಾಪವಾನ್ ॥ ೫ ॥**

**ಅಥ ತೇ ಲುಬ್ಧಕಾಃ ಸರ್ವೇ ಮೃಗಯಾಮದಮೋಹಿತಾಃ ।**
**ಸಂನದ್ಧಾ ದಂಶಿತಾಃ ಸರ್ವೇ ಶ್ವಾನೈಃ ಸಾರ್ಧಂ ಪ್ರಜಗ್ಮಿರೇ ॥ ೬ ॥**

**ಹರ್ಷೇಣ ಮಹತಾವಿಷ್ಟೋ ರಾಜರಾಜೋ ಮಹಾಬಲಃ ।**
**ಅಶ್ವಾರೂಢಃ ಸ್ವಸೈನ್ಯೇನ ಚಾತುರಂಗೇಣ ಸಂಯುತಃ ॥ ೭ ॥**

**ಗಂಗಾತೀರಂ ಸಮಾಸಾದ್ಯ ಮೇರುಂ ಗಿರಿವರೋತ್ತಮಂ ।**
**ರತ್ನಧಾತುಸಮಾಕೀರ್ಣಂ ನಾನಾವೃಕ್ಷೈರಲಂಕೃತಂ ॥ ೮ ॥**

**॥ ಸುಕಲೋವಾಚ ॥**

**ಯೋ ಬಲಧಾಮಮರೀಚಿಚಯಕರನಿಕರಮಯಪ್ರೋತ್ತುಂ-**
**ಗೋತ್ಸ್ಯಚ್ಚಂ ಗಗನಮೇವ ಸಂಪ್ರಾಪ್ತೋ ನಾನಾನಗಾಚ-**
**ರಿತಶೋಭೋ ಗಿರಿರಾಜೋ ಭಾತಿ ॥ ೯ ॥**

---

ಅವಿತುಕೊಂಡಿರುವುದೆಂದು ತಿಳಿದು, ಆ ಬಲವಾದ ಸಲಗನನ್ನು ಹಿಡಿಯಿರಿ. ಬಲದಿಂದ ಗರ್ವಿತವಾದ ಅದನ್ನು ಹೊಡೆಯಿರಿ ಎಂದೆನ್ನುತ್ತಿದ್ದನು.

೬. ಆಮೇಲೆ ಬೇಟೆಯ ಮದದಲ್ಲಿ ಮಗ್ನರಾಗಿದ್ದ ಆ ಬೇಡರು ಕವಚಗಳನ್ನು ಹಾಕಿಕೊಂಡು ಸಿದ್ಧರಾಗಿ ನಾಯಿಗಳೊಡನೆ ಹೊರಟರು.

೭-೮. ಮಹಾಬಲಿಷ್ಠನಾದ ಆ ಚಕ್ರವರ್ತಿಯು, ಹರ್ಷದಿಂದ ಕೂಡಿಕೊಂಡು ಚತುರಂಗಸೇನೆಯಿಂದ ಸಹಿತನಾಗಿ, ಕುದುರೆಯನ್ನು ಹತ್ತಿ ರತ್ನಗಳಿಂದಲೂ, ಧಾತುಗಳಿಂದಲೂ, ಅನೇಕ ವೃಕ್ಷಗಳಿಂದಲೂ ಅಲಂಕೃತವಾದ ಗಂಗಾತೀರದಲ್ಲಿರುವ ಮೇರು ಪರ್ವತವನ್ನು ಹೊಂದಿದನು.

೯. ಸುಕಲೆಯು ಹೇಳಿದಳು :—ಆ ಪರ್ವತವು ಸೂರ್ಯನ ಕಿರಣಗಳಿಂದ ಪ್ರಕಾಶಿತವಾಗಿ ತನ್ನ ಔನ್ನತ್ಯದಿಂದ ಗಗನವನ್ನೇ ಚುಂಬಿಸುತ್ತಿದೆ. ಬಗೆಬಗೆಯ ಪರ್ವತಗಳ ಸಾಲಿನಿಂದ ನಿಬಿಡವಾಗಿ ಕಂಗೊಳಿಸುತ್ತಿದೆ.

ಯೋಜನಬಹಲೋಪಮುಲಗಂಗಾಪ್ರವಾಹಸಮುಚ್ಚರತ್ತೀರ-
ವೀಚೀತರಂಗಭಂಗೈರ್ಮುಕ್ತಾಫಲಸದೃಶೈರ್ನಿರ್ಮಲಾಂಬು-
ಕಣೈಃ ಸರ್ವತ್ರ ಪ್ರಕ್ಷಾಲಿತಶಿಲಾತಲೋ ಗಿರೀಂದ್ರಃ ಸುಶ್ರಿ
ಯಃ ಶ್ರೀಕಃ ॥ ೧೦ ॥

ದೇವೈಶ್ಚಾರಣಕಿನ್ನರೈಃ ಪರಿವೃತೋ ಗಂಧರ್ವವಿದ್ಯಾಧರೈಃ
ಸಿದ್ಧೈರಪ್ಸರಸಾಂ ಗಣೈರ್ಮುನಿಜನೈರ್ನಾಗೇಂದ್ರವಿದ್ಯಾಧರೈಃ ।
ಶ್ರೀಖಂಡೈರ್ಬಹುಚಂಪಕೈಸ್ತು ಸರಲೈಃ ಶಾಲೈಸ್ತವಯಲೈರ್ಗಿರಿಃ
ಪುನ್ನಾಗೈರ್ಬಹುಸಿದ್ಧಿದಾಯಕವನೈಃ ಕಲ್ಪದ್ರುಮೈಃ ಶೋಭತೇ ॥ ೧೧ ॥

ನಾನಾಧಾತುವಿಚಿತ್ರೋ ವೈ ನಾನಾರತ್ನವಿಚಿತ್ರತೈಃ ।
ವಿಮಾನೈಃ ಕಾಂಚನೈರ್ದಂಡೈಃ ಕಲತ್ರೈರುಪಶೋಭತೇ ॥ ೧೨ ॥
ನಾಲೀಕೇರವನೈರ್ದಿವ್ಯೈಃ ಪೂಗವೃಕ್ಷೈರ್ವಿರಾಜತೇ ।
ದಿವ್ಯಪುನ್ನಾಗಬಕುಲೈಃ ಕವಲೀಖಂಡಮಂಡಿತೈಃ ॥ ೧೩ ॥

---

೧೦. ಆ ಪರ್ವತವಾದರೋ ಅನೇಕ ಯೋಜನಗಳವರಿಗೆ ವ್ಯಾಪಿಸಿರುವುದು. ಅಲ್ಲಿ ಹರಿಯುತ್ತಿರುವ ಗಂಗಾನದಿಯಲ್ಲಿ ಗಾಳಿಯ ಹೊಡೆತದಿಂದ ಏಳುತ್ತಿರುವ ದೊಡ್ಡದೊಡ್ಡ ಅಲೆಗಳು ತೀರದಲ್ಲಿರುವ ಕಲ್ಲುಬಂಡೆಗೆ ಅಪ್ಪಳಿಸುತ್ತಿರುವಾಗ, ನೀರಿನ ತುಂತುರುಗಳು ಮೇಲಕ್ಕೆದ್ದು ಮುತ್ತಿನಂತೆ ಕಂಗೊಳಿಸುತ್ತಿರುವವು. ಇಂತಹ ಸೌಂದರ್ಯವುಳ್ಳ ಆ ಬೆಟ್ಟವು ನೋಡಲು ಬಹು ಚೆನ್ನಾಗಿರುವುದು.

೧೧. ದೇವತೆಗಳು, ಚಾರಣರು, ಕಿನ್ನರರು, ಗಂಧರ್ವರು, ವಿದ್ಯಾಧರರು, ಸಿದ್ಧರು, ಅಪ್ಸರಸ್ತ್ರೀಯರುಗಳು, ಮುನಿಗಳು, ನಾಗರು, ಇವರುಗಳಿಂದಲೂ, ಗಂಧ, ಶ್ರೀಖಂಡ, ಸರಳ, ಸಾಲ, ಹೊಂಗೆ, ಪುನ್ನಾಗ, ಕಲ್ಪವೃಕ್ಷ ಮೊದಲಾದ ಅನೇಕ ಬಗೆಯ ವೃಕ್ಷಗಳಿಂದಲೂ ಈ ಬೆಟ್ಟವು ಪ್ರಕಾಶಿಸುತ್ತಿರುವುದು.

೧೨. ಬಗೆಬಗೆಯ ಧಾತುಗಳಿಂದ ವಿಚಿತ್ರವಾಗಿಯೂ, ನಾನಾವಿಧ ರತ್ನಗಳಿಂದ ಭೂಷಿತವಾಗಿಯೂ, ಸುವರ್ಣಸ್ತಂಭಗಳುಳ್ಳ ವಿಮಾನಗಳಿಂದಲೂ, ಕಲಶಗಳಿಂದಲೂ ಆ ಪರ್ವತವು ಕಂಗೊಳಿಸುತ್ತಿರುವುದು.

೧೩-೧೫. ತೆಂಗು, ಅಡಕೆ, ಪುನ್ನಾಗ, ವಕುಲ, ಬಾಳೆ, ಸಂಪಿಗೆ, ಪಾದರಿ, ಕೇದಗೆ ಮೊದಲಾದ ವೃಕ್ಷಗಳಿಂದಲೂ, ಅನೇಕಬಗೆಯ ಬಳ್ಳಿಗಳಿಂದಲೂ, ಪದ್ಮ

**ಸುಪುಷ್ಪೈಶ್ಚಂಪಕೈರದ್ರಿಃ ಪಾಟಲೈಃ ಕೇತಕೈಸ್ತಥಾ ।**
**ನಾನಾವಲ್ಲೀವಿತಾನೈಶ್ಚ ಪುಷ್ಪಿತೈಃ ಪದ್ಮಕೈಸ್ತಥಾ ॥ ೧೪ ॥**

**ನಾನಾವರ್ಣೈಃ ಸುಪುಣ್ಯೈಶ್ಚ ನಾನಾವೃಕ್ಷೈರಲಂಕೃತಃ ।**
**ದಿವ್ಯವೃಕ್ಷೈಃ ಸಮಾಕೀರ್ಣಃ ಸ್ಫಾಟಿಕೈಶ್ಚ ಶಿಲಾತಲೈಃ ॥ ೧೫ ॥**

**ಯೋಗಿಯೋಗೀಂದ್ರಸಂಸಿದ್ಧೈಃ ಕಂದರಾಂತರ್ನಿವಾಸಿಭಿಃ ।**
**ನಿರ್ಝರೈಶ್ಚೈವ ರಮ್ಯೈಶ್ಚ ಬಹುಪ್ರಸ್ರವಣೈರ್ಗಿರಿಃ ॥ ೧೬ ॥**

**ನದೀಪ್ರವಾಹಸಂಹೃಷ್ಟೈಃ ಸಂಗಮೈರುಪಶೋಭತೇ ।**
**ಹ್ರದೈಶ್ಚ ಪಲ್ವಲೈಃ ಕುಂಡೈರ್ನಿರ್ಮಲೋದಕಧಾರಿಭಿಃ ॥ ೧೭ ॥**

**ಗಿರಿರಾಜೋ ವಿಭಾತ್ಯೇಕಃ ಸಾನುಭಿಃ ಸಹ ಸಂಸ್ಥಿತೈಃ ।**
**ಶರಭೈಶ್ಚೈವ ಶಾರ್ದೂಲೈರ್ಮೃಗಯೂಥೈರಲಂಕೃತಃ ॥ ೧೮ ॥**

**ಮಹಾಮತ್ತೈಶ್ಚ ಮಾತಂಗೈರ್ಮಹಿಷೈ ರುರುಭಿಃ ಸದಾ ।**
**ಅನೇಕೈರ್ದಿವ್ಯಭಾವೈಶ್ಚ ಗಿರಿರಾಜೋ ವಿಭಾತಿ ಸಃ ॥ ೧೯ ॥**

---

ಗಳಿಂದಲೂ, ಇನ್ನೂ ಎಷ್ಟೋವಿಧವಾದ ಮರಗಳಿಂದಲೂ, ಅಲ್ಲಲ್ಲಿ ಥಳಥಳಿಸುತ್ತಿರುವ ಸ್ಫಟಿಕಶಿಲೆಗಳ ಚಪ್ಪಡಿಗಳಿಂದಲೂ ಆ ಪರ್ವತವು ಶೋಭಿಸುತ್ತಿರುವುದು.

೧೬. ಅಲ್ಲಿನ ಗಿರಿಗುಹೆಗಳಲ್ಲಿ ಯೋಗಿಗಳು, ಯೋಗೀಂದ್ರರು, ಸಿದ್ಧರು ಮೊದಲಾದ ತಪಸ್ವಿಗಳು ವಾಸಮಾಡುತ್ತಿರುವರು. ಅಲ್ಲದೆ ರಮ್ಯವಾದ ಝರಿಗಳು. ಜಿನುಗುತ್ತಿರುವ ಜಲಪ್ರವಾಹಗಳು, ನದೀಪ್ರವಾಹಗಳು, ಇವುಗಳು ಅಲ್ಲಲ್ಲಿ ಸಂಗಮವಾಗಿ ಆ ಪರ್ವತದ ಸೊಬಸನ್ನು ಹೆಚ್ಚಿಸುತ್ತಿರುವವು.

೧೭-೧೯. ಆ ಪರ್ವತದ ತಪ್ಪಲುಗಳಲ್ಲಿ ಮಡುಗಳು, ಕುಂಟೆಗಳು, ಕೊಳಗಳು ಮೊದಲಾದ ಜಲಾಶ್ರಯಗಳು ಅಲ್ಲಲ್ಲಿ ನಿಬಿಡವಾಗಿರುವವು. ಮತ್ತು ಶರಭಗಳು, ಹುಲಿಗಳು, ಮದ್ದಾನೆಗಳು, ಕಾಡೆಮ್ಮೆಗಳು, ಜಿಂಕೆಗಳು, ಇನ್ನೂ ಇತರವಿಧವಾದ ಅನೇಕ ಮೃಗಗಳು ಅಲ್ಲಿ ಸಂಚರಿಸುತ್ತಿರುವವು. ಇವುಗಳಿಂದ ಆ ಪರ್ವತವು ಶೋಭಿಸುತ್ತಿರುವುದು.

**ಅಯೋಧ್ಯಾಧಿಪತಿರ್ವೀರ ಇಕ್ಷ್ವಾಕುರ್ಮನುನಂದನಃ ।**
**ತಯಾ ಸುಭಾರ್ಯಯಾ ಯುಕ್ತಶ್ಚತುರಂಗಬಲೇನ ವೈ ॥ ೨೦ ॥**

**ಪುರತೋ ಲುಬ್ಧಕಾ ಯಾಂತಿ ಶ್ವಾನಃ ಶೂರಾಶ್ಚ ಶೀಘ್ರಗಾಃ ।**
**ಯತ್ರಾಽಽಸ್ತೇ ಶೂಕರಃ ಶೂರೋ ಭಾರ್ಯಯಾ ಸಹಿತೋ ಬಲೀ ॥ ೨೧ ॥**

**ಬಹುಭಿಃ ಶೂಕರೈರ್ಗುಪ್ತೋ ಗುರುಭಿಃ ಶಿಶುಭಿಸ್ತಥಾ ।**
**ಮೇರುಭೂಮಿಂ ಸಮಾಶ್ರಿತ್ಯ ಗಂಗಾತೀರಾಶ್ರಮಂ ತತಃ ॥ ೨೨ ॥**

**॥ ಸುಕಲೋವಾಚ ॥**

**ತಾಮುವಾಚ ವರಾಹಸ್ತು ಸುಪ್ರಿಯಾಂ ಹರ್ಷಸಂಯುತಃ ।**
**ಪ್ರಿಯೇ ಪಶ್ಯ ಸಮಾಯಾತಃ ಕೋಶಲಾಧಿಪತಿರ್ಬಲೀ ॥ ೨೩ ॥**

**ಮಾಮುದ್ದಿಶ್ಯ ಮಹಾಪ್ರಾಜ್ಞೋ ಮೃಗಯಾಂ ಕ್ರೀಡತೇ ನೃಪಃ ।**
**ಯುದ್ಧಮೇಕಃ ಕರಿಷ್ಯಾಮಿ ಸುರಾಸುರಪ್ರಹರ್ಷಣಂ ॥ ೨೪ ॥**

---

೨೦-೨೧. ಅಯೋಧ್ಯಾಧಿಪತಿಯೂ, ವೀರನೂ, ಮನುವಿನ ಪುತ್ರನೂ ಆದ ಇಕ್ಷ್ವಾಕುರಾಜನು ತನ್ನ ಪತ್ನಿಯಿಂದಲೂ, ಚತುರಂಗಸೇನೆಯಿಂದಲೂ ಕೂಡಿ ಮುಂದೆ ಹೊರಟನು. ಅವನ ಮುಂದೆ ಬೇಡರೂ, ನಾಯಿಗಳೂ, ಶೂರರೂ ಹೋಗುತ್ತಿದ್ದರು. ಹೀಗೆ ಹೊರಟು ಆ ರಾಜನು ಹಂದಿಗಳಿರುವಲ್ಲಿಗೆ ಹೊರಟನು.

೨೨. ಆ ದೊಡ್ಡಹಂದಿಯು ತನ್ನ ಪರಿವಾರಗಳಾದ ಅನೇಕ ಹಂದಿಗಳೊಡನೆ ಕೂಡಿಕೊಂಡು ಗಂಗಾತೀರದಲ್ಲಿರುವ ಮೇರುಪರ್ವತದ ತಪ್ಪಲುಪ್ರದೇಶದಲ್ಲಿ ನಿಂತಿತ್ತು. ಅಲ್ಲಿಗೆ ಆ ಇಕ್ಷ್ವಾಕುರಾಜನು ಬಂದನು.

೨೩. ಸುಕಲೆಯು ಹೇಳಿದಳು :—ಆ ಸಲಗಹಂದಿಯು ಹೆಂಡತಿಯನ್ನು ಕುರಿತು, ಎಲೈ ಪ್ರಿಯಳೇ, ಕೋಸಲಾಧಿಪತಿಯಾದ, ಬಲಿಷ್ಠನಾದ ಇಕ್ಷ್ವಾಕುರಾಜನು ಇಲ್ಲಿ ಬಂದಿರುವನು, ನೋಡು.

೨೪. ನನ್ನನ್ನುದ್ದೇಶಿಸಿ ಆ ರಾಜನು ಬೇಟೆಯನ್ನಾಡುತ್ತಿದ್ದಾನೆ. ದೇವಾಸುರರು ನೋಡಿ ಸಂತೋಷಪಡುವಂತಹ ಯುದ್ಧವನ್ನು ಅವನೊಡನೆ ನಾನೊಬ್ಬನೇ ಮಾಡುತ್ತೇನೆ ಎಂದು ಹೇಳಿತು.

**ಅಥ ಭೂಪೋ ಮಹಾತೇಜಾ ಬಾಣಪಾಣಿರ್ಧನುರ್ಧರಃ ।**
**ಸುದೇವಾಂ ಸತ್ಯಧರ್ಮಾಂಗೀಂ ತಾಮುವಾಚ ಪ್ರಹರ್ಷಿತಃ ॥ ೨೫ ॥**

**ಪಶ್ಯ ಕಾಂತೇ ಮಹಾಕಾಲಂ ಗರ್ಜಮಾನಂ ಯಥಾ ಘನಂ ।**
**ಪರಿವಾರಸಮಾಯುಕ್ತಂ ದುಃಸಹಂ ಮೃಗಘಾತಿಭಿಃ ॥ ೨೬ ॥**

**ಅದ್ಯೈವಾಹಂ ಹನಿಷ್ಯಾಮಿ ಸುಬಾಣೈರ್ನಿಶಿತೈಃ ಪ್ರಿಯೇ ।**
**ಮಾಮೇವ ಹಿ ಮಹಾಶೂರೋ ಯುದ್ಧಾಯ ಸಮುಪಾಶ್ರಯೇತ್ ॥ ೨೭ ॥**

**ಏವಮುಕ್ತ್ವಾ ಪ್ರಿಯೋ ಭಾರ್ಯಾಂ ಲುಬ್ಧಕಾನ್ವಾಕ್ಯಮಬ್ರವೀತ್ ।**
**ಯಥಾ ಶೂರೋ ಮಹಾಶೂರಾಃ ಪ್ರೇಷಯಧ್ವಂ ಹಿ ಶೂಕರಂ ॥ ೨೮ ॥**

**ಅಥ ತೇ ಪ್ರೇಷಿತಾಃ ಶೂರಾ ಬಲತೇಜಃಪರಾಕ್ರಮಾಃ ।**
**ಗರ್ಜಮಾನಾಃ ಪ್ರಧಾವಂತಿ ಬಲತೇಜಃಪರಾಕ್ರಮಾಃ ॥ ೨೯ ॥**

---

೨೫. ಬಳಿಕ ತೇಜಸ್ವಿಯೂ, ಬಲಶಾಲಿಯೂ ಆದ ರಾಜನು ಕೈಯಲ್ಲಿ ಬಾಣವನ್ನು ಹಿಡಿದು, ಸಂತೋಷದಿಂದ ತನ್ನ ಪತ್ನಿಯನ್ನು ಕುರಿತು ಇಂತೆಂದನು.

೨೬. ಎಲೈ ಕಾಂತೇ, ಯಮನಂತೆ ಭಯಂಕರವಾಗಿ ಕಾಣುತ್ತಿರುವ ಈ ಸಲಗಹಂದಿಯನ್ನು ನೋಡು. ಇದು ತನ್ನ ಪರಿವಾರಗಳೊಡನೆ ಕೂಡಿ, ಮೇಘದಂತೆ ಭಯಂಕರ ಗರ್ಜನೆಯನ್ನು ಮಾಡುತ್ತಿರುವುದು. ಇದನ್ನು ಎದುರಿಸಲು ಬೇಡರಿಗೆ ಅಸಾಧ್ಯವು.

೨೭. ಈ ಹಂದಿಯು ನನ್ನೊಡನೆ ಯುದ್ಧಮಾಡಬೇಕೆಂದೇ ಇಲ್ಲಿಗೆ ಬಂದು ನನ್ನೆದುರಿನಲ್ಲಿ ನಿಂತಿರುವುದು. ಇದನ್ನು ನನ್ನ ಕೈಯಲ್ಲಿರುವ ಹರಿತವಾದ ಬಾಣದಿಂದ ಈಗಲೇ ಕೊಲ್ಲುವೆನು.

೨೮. ಹೆಂಡತಿಯೊಡನೆ ಹೀಗೆಂದು ಹೇಳಿ ತನ್ನ ಸಮೀಪದಲ್ಲಿ ನಿಂತಿರುವ ಬೇಡರನ್ನು ಕುರಿತು, ಎಲೈ ಮಹಾಶೂರರಾದ ಬೇಡರೇ, ಆ ಸಲಗಹಂದಿಯನ್ನು ನನ್ನಕಡೆಗೆ ಅಟ್ಟಿರಿ ಎಂದನು.

೨೯. ಆ ಶೂರರಾದ ಬೇಡರಿಗೆ ರಾಜನು ಹೀಗೆ ಹೇಳಲು, ಅವರು ಧೈರ್ಯದಿಂದ ಮುಂದೆ ನುಗ್ಗಿ ಗದ್ದಲಮಾಡುತ್ತಾ ಆ ಹಂದಿಯಿರುವಲ್ಲಿಗೆ ಓಡಿದರು.

ಕೋಲಂ ಪ್ರತಿ ಗತಾಃ ಸರ್ವೇ ವಾಯುವೇಗೇನ ಸಾಂಪ್ರತಂ ।
ವಿಧ್ಯಂತಿ ಬಾಣಜಾಲೈಸ್ತೇ ನಿಶಿತೈರ್ವನಚಾರಕಾಃ ।
ನಾನಾಶಸ್ತ್ರೈಶ್ಚ ಶುಭ್ರೈಸ್ತು ವರಾಹಂ ವೀರರೂಪಿಣಂ ॥ ೩೦ ॥

॥ ಸುಕಲೋವಾಚ ॥

ಪತಂತಿ ಬಾಣತೋಮರಾ ವಿಮುಕ್ತಾ ಲುಬ್ಧಕೈಃ ಶರಾ
ಘನಾ ಗಿರಿಂ ಪ್ರವರ್ಷಿಣೋ ಯಥಾ ತಥಾ ಧರಾಂತರೇ ।
ಹತೋ ವೃಥಪ್ರಹಾರಿಭಿಃ ಸ ನಿರ್ಜಿತಸ್ತತಸ್ತಥಾ
ಶತೈಸ್ತು ಯೂಥಪಾಲಕಃ ಸ ಕೋಲಃ ಸಂಗರಂ ಗತಃ ॥ ೩೧ ॥

ಸ್ವಪುತ್ರಪೌತ್ರಬಾಂಧವೈಃ ಪರಾಂಶ್ಚ ಸಂಹರೇತ್ಸ ವೈ
ಪತಂತಿ ತೇ ಸ್ವದಂಷ್ಟ್ರಯಾ ಹತಾಹವೇಽವಲುಬ್ಧಕಾಃ ।
ಪತಂತಿ ಪಾದಹಸ್ತಕಾಃ ಸ್ಥಿತಸ್ಯ ವೇಗಭ್ರಾಮಣೈಃ
ಸ ಲುಬ್ಧಗರ್ಜಮೇವಂ ತಂ ವರಾಹೋಽಪಶ್ಯವಾಗತಂ ॥ ೩೨ ॥

---

೩೦. ಆ ಹಂದಿಯು ಬಳಿಗೆ ವಾಯುವೇಗದಿಂದ ಓಡಿಹೋಗಿ ತಮ್ಮ ಕೈಯಲ್ಲಿದ್ದ ಹರಿತವಾದ ನಾನಾಬಗೆಯ ಆಯುಧಗಳಿಂದ, ಆ ವೀರರೂಪಿಯಾದ ಹಂದಿಯನ್ನು ಹೊಡೆದವಟ್ಟಿದರು.

೩೧. ಸುಕಲೆಯು ಹೇಳಿದಳು :—ಆ ಬೇಡರು, ಬೆಟ್ಟದಮೇಲೆ ಮಳೆಯು ಎಡಬಿಡದೆ ಸುರಿಯುವಂತೆ, ಬಾಣ, ತೋಮರ, ಹಲ್ಲೆ ಮೊದಲಾದ ಆಯುಧಗಳನ್ನು ಆ ಹಂದಿಗಳಮೇಲೆ ವರ್ಷಿಸಿದರು. ಹೀಗೆ ಅನೇಕ ಬಾಣಗಳಿಂದ ಹಂದಿಗಳನ್ನು ಗಾಯಗೊಳಿಸಲು, ಆಗ ಸಲಗನು ಯುದ್ಧಕ್ಕೆ ಬಂದಿತು.

೩೨. ಈ ಹಂದಿಯು ತನ್ನ ಸಮೂಹದಿಂದ ಶತ್ರುಗಳನ್ನು ಎದುರಿಸುತ್ತಿದೆ. ಅವುಗಳ ಕೋರೆದಾಡೆಯಿಂದ ಕೊಲ್ಲಲ್ಪಟ್ಟು ಬೇಡರು ಬೀಳುತ್ತಿದಾರೆ. ಕೆಲವರ ಕೈಕಾಲುಗಳು ಮುರಿದುಹೋಗಿ ಅವರೂ ಭೂಮಿಯಮೇಲೆ ದೊಪ್ಪನೆ ಬೀಳುತ್ತಿದಾರೆ. ಶಬ್ದವನ್ನು ಸಹ ಮಾಡದೆ ಸಾಯುತ್ತಿರುವ ಬೇಡರನ್ನು ಆ ಸಲಗನು ಕಂಡಿತು.

ಸ್ವತೇಜಸಾ ವಿನಾಶಿತಂ ಮುಖಾಗ್ರದಂಷ್ಟ್ರಯಾ ಹತಂ
ಗತಃ ಸ ಯತ್ರ ಭೂಪತಿಃ ಸ್ವತೇಜಸಾ ಮಹಾಮತಿಃ ।
ವಿವಕ್ಷಯೇ ಸ್ವಪುತ್ರಕಾನ್ಪ್ರಿಯಾಂಶ್ಚ ಪುತ್ರಬಾಂಧವಾನ್
................................................ ................................. ॥ ೩೩ ॥

ಇಕ್ಷ್ವಾಕುನಾಥಂ ಸುಮಹತ್ಪ್ರಹಸ್ಯ
ಸಂತ್ರಾಸ್ಯ ಕ್ರುದ್ಧಃ ಸ ಹಿ ಶೂಕರೇಶಃ ।
ಯುದ್ಧಂ ವನೇ ವಾಂಛತಿ ತೇನ ಸಾರ್ಧ-
ಮಿಕ್ಷ್ವಾಕುಣಾ ಸಂಗರಹರ್ಷಯುಕ್ತಃ ॥ ೩೪ ॥

ವಾರಾಹಃ ಪುನರೇವ ಯುದ್ಧಕುಶಲಃ ಸಂವಾಂಛತೇ ಸಂಗರಂ
ತುಂಡಾಗ್ರೇಣ ಸುತೀಕ್ಷ್ಣದಂತನಖರೈಃ ಕ್ರುದ್ಧೋ ಧರಾಂ
ಕ್ಷೋಭಯನ್ ।
ಹುಂಕಾರೋಚ್ಚಾರಗರ್ವಾತ್ಪ್ರಹತಿ ವಿಮಲಂ ಭೂಪತಿಂ ತಂ ಚ
ರಾಜನ್
ಜ್ಞಾತ್ವಾ ವಿಷ್ಣುಪರಾಕ್ರಮಂ ಮನುಸುತಸ್ತ್ವಾನಂದ
ರೋಮಾಂಚಿತಃ ॥ ೩೫ ॥

---

೩೩. ತನ್ನ ಶಕ್ತಿಯಿಂದಲೂ, ಕೋರದಾಡೆಯಿಂದಲೂ ಎಲ್ಲರೂ ಕೊಲ್ಲಲ್ಪಟ್ಟರು. ಗಟ್ಟಿಗನಾದ ಆ ರಾಜನು ಇರುವಲ್ಲಿಗೆ ಮಿಕ್ಕವರೆಲ್ಲರನ್ನೂ ಜೀವದಿಂದುಳಿಸಿ, ತಾನು ಸಾಯುವ ಉದ್ದೇಶದಿಂದ ಹೋಯಿತು.

೩೪. ಆ ಸಲಗನು ಆ ಇಕ್ಷ್ವಾಕುವಿನ ಮೇಲೆಬಲಾತ್ಕಾರದಿಂದ ಬೀಳುತ್ತಾ ಸಂತೋಷದಿಂದ ಅವನೊಡನೆ ಯುದ್ಧವನ್ನು ಅಪೇಕ್ಷಿಸುತ್ತದೆ.

೩೫. ಈ ಹಂದಿಯು ಕೋಪಗೊಂಡು ಭೂಮಿಯನ್ನು ನಡುಗಿಸುತ್ತಾ ತನ್ನ ದಂಷ್ಟ್ರದಿಂದ ಯುದ್ಧವನ್ನು ಹುಡುಕುತ್ತದೆ ಮತ್ತು ಹುಂಕಾರಮಾಡುತ್ತಾ ರಾಜನನ್ನು ಗರ್ವದಿಂದ ಹೊಡೆಯಲು ಹೋಗುತ್ತಿದೆ. ಇದನ್ನು ನೋಡಿ ರಾಜನು ವಿಷ್ಣುಪರಾಕ್ರಮಿಯೆಂದು ತಿಳಿದು ಸಂತೋಷಗೊಳ್ಳುತ್ತಾನೆ.

**ದೃಷ್ಟ್ವಾ ಶೂಕರಪೌರುಷಂ ಯಮಕುಲಂ ಮೇನೇ ಪತಿರ್ದೇವರಾಟ್
ದೇವಾರಿಂ ಮನಸಾ ವಿಚಿಂತ್ಯ ಸಹಸಾ ವಾರಾಹರೂಪೇಣ ವೈ ।
ಸಂಪ್ರೇಕ್ಷ್ಯೈವ ಮಹಾಬಲಂ ಬಹುತರಂ ಯುಕ್ತಂ ತ್ವರೇರ್ವಾರಣಂ
ಸೈನ್ಯಂ ಕೋಲವಿನಾಶನಾಯ ಸಹಸಾ ಸಂಗೃಹ್ಯ ಸಂಗೃಹ್ಯತಾಂ ॥ ೩೬ ॥**

**ಪ್ರೇಷಿತಾಶ್ಚ ವಾರಣಾ ರಥಾಶ್ಚ ವೇಗವತ್ತರಾಃ
ಸುಬಾಣಖಡ್ಗಧಾರಿಣೋ ಭೃಶುಂಡಿಭಿಶ್ಚ ಮುದ್ಗರೈಃ ।
ಸಪಾಶಪಾಣಿಲುಬ್ಧಕಾ ನದಂತಿ ತತ್ರ ತತ್ಪರಾ
ನಿವಾರಿತೋ ನ ತಿಷ್ಠತೇ ಹಯಾ ಗಜಾಶ್ಚ ಯದ್ಗತಾಃ ॥ ೩೭ ॥**

**ಕ್ವಚಿತ್ಕ್ವಚಿನ್ನ ದೃಶ್ಯತೇ ಕ್ವಚಿತ್ಕ್ವಚಿತ್ಪ್ರದೃಶ್ಯತೇ ।
ಕ್ವಚಿದ್ಭಯಂ ಪ್ರದರ್ಶಯೇತ್ಕ್ವಚಿದ್ಧಯಾನ್ಪ್ರಮರ್ದಯೇತ್ ॥ ೩೮ ॥**

**ಮರ್ದಯಿತ್ವಾ ಭಟಾಂಛೂರಾನ್ವಾರಾಹೋ ರಣದುರ್ಜಯಃ ।
ಶಬ್ದಂ ಚಕಾರ ದುರ್ಧರ್ಷಃ ಕ್ರೋಧಾರುಣಿತಲೋಚನಃ ॥ ೩೯ ॥**

---

೩೬. ಆ ರಾಜನು ಆ ಹಂದಿಯ ಪೌರುಷವನ್ನು ನೋಡಿ ಅದನ್ನು ಯಮನಿಗೆ ಸಮಾನನೆಂದು ತಿಳಿದನು. ಹಾಗೆಯೇ ಇದು ದೇವಾರಿಯಾದ ವರಾಹರೂಪಿಯಾಗ ರಾಕ್ಷಸನೆಂದೂ ತಿಳಿದನು. ಮಹಾಬಲಿಷ್ಠವಾದ ಈ ಹಂದಿಯನ್ನು ನೋಡಿ ಇದನ್ನು ಎದುರಿಸುವುದು ಯುಕ್ತವೆಂದು ತಿಳಿದು ಆ ಹಂದಿಯ ನಾಶಕ್ಕೋಸ್ಕರ ಸಿದ್ಧನಾದನು.

೩೭. ಅನಂತರ ವೇಗವುಳ್ಳ ಆನೆಗಳನ್ನೂ, ರಥಗಳನ್ನೂ, ಸೈನ್ಯವನ್ನೂ ಕಳು ಹಿಸಿದನು ಅವರು ಬಾಣ ಖಡ್ಗಗಳನ್ನು ಧರಿಸಿ, ಭುಸುಂಡಿಮುದ್ಗರಗಳಿಂದ ಹೆದರಿ ಸುತ್ತಾ, ಬಲೆಯನ್ನೊಡ್ಡಿಕೊಂಡು ಕೂಗುತ್ತಿರುತ್ತಾರೆ. ಆ ಹಂದಿಯಬಳಿಗೆ ಹೋಗಿ ಅದರ ಗರ್ಜನೆಯನ್ನು ಕೇಳದ ಆನೆಕುದುರೆಗಳು. ಎಷ್ಟು ತಡೆದು ಸಿಲ್ಲಿಸಿದರೂ ನಿಲ್ಲುವುದೇ ಇಲ್ಲ.

೩೮. ಒಂದುಸಾರಿ ಕಾಣಿಸಿಕೊಳ್ಳುತ್ತದೆ. ಮತ್ತೊಂದಾವರ್ತಿ ಮರೆಯಾಗು ತ್ತದೆ. ಒಂದುಸಾರಿ ಹೆದರಿಸುತ್ತದೆ. ಮತ್ತೊಂದುಸಾರಿ ಕುದುರೆಗಳನ್ನು ನಾಶ ಮಾಡುತ್ತದೆ.

೩೯. ರಣದಲ್ಲಿ ದುರ್ಜಯವಾದ ಆ ಹಂದಿಯು ಶೂರರಾದ ಭಟರನ್ನು ಮರ್ದಿಸಿ ಕೋಪದಿಂದ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಘರ್ಜಿಸಿತು.

**ಕೋಶಲಾಧಿಪತಿರ್ವೀರಸ್ತಂ ದೃಷ್ಟ್ವಾರಣ ದುರ್ಜಯಂ ।**
**ಯುಧ್ಯಮಾನಂ ಮಹಾಕಾಯಂ ಮುಂಚಂತಂ ಮೇಘವತ್ಸ್ವನಂ ॥ ೪೦ ॥**

**ಗರ್ಜತಿ ಸಮರಂ ವಿಚರತಿ ವಿಲಸತಿ ವೀರಾನ್ಸ್ವತೇಜಸಾ ವೀರಃ ।**
**ತಡಿದಿವ ಮುಖೇ ಸುದಂಷ್ಟ್ರಾ ತಸ್ಯ ವಿಭಾತ್ಯುಲ್ಲಸತ್ಯೇವ ॥ ೪೧ ॥**

**ಮನುಪುತ್ರಸ್ತಥಾ ದೃಷ್ಟ್ವಾ ಕೋಲಂಚನಿಶಿತೈಃ ಶರೈಃ ।**
**ಪ್ರತಿಭಿನ್ನಮೇಕೈಕಂ ಶಸ್ತ್ರಾಹತಂ ಚ ಬಂಧುಭಿಃ ॥ ೪೨ ॥**

**ಪುನರಪಿ ಯುದ್ಧಂ ಪ್ರವಾಂಛತಿ.......................... ।**
**ನರಪತಿರುವಾಚ ಸೈನ್ಯಾಃ ಕಿಮಿಹ ನ ಗೃಹ್ಯಂತು ಓಜಸಾ ಶೂರಾಃ ।**
**ಯುಧ್ಯಧ್ವಂ ತತ್ರ ನಿಶಿತೈರ್ಬಾಣೈಸ್ತೀಕ್ಷ್ಣೈರನೇನಾಪಿ ॥ ೪೩ ॥**

**ಸಮಾಕರ್ಣ್ಯ ತತೋ ವಾಕ್ಯಂ ಕ್ರುದ್ಧಸ್ಯಾಪಿ ಮಹಾತ್ಮನಃ ।**
**ತತಸ್ತೇ ಸೈನಿಕಾಃ ಸರ್ವೇ ಯುದ್ಧಾಯ ಸಮುಪಸ್ಥಿತಾಃ ॥ ೪೪ ॥**

---

೪೦. ಕೋಶಲಾಧಿಪತಿಯಾದ ಇಕ್ಷ್ವಾಕುರಾಜನು, ರಣದುರ್ಜಯವಾದ, ಮೇಘದಂತೆ ಧ್ವನಿಮಾಡುವ, ಮಹಾಕಾಯವುಳ್ಳ, ಯುದ್ಧಮಾಡುತ್ತಿರುವ ಹಂದಿಯನ್ನು ನೋಡಿದನು.

೪೧. ಆ ಹಂದಿಯು ಗರ್ಜನೆಮಾಡುತ್ತದೆ, ಯುದ್ಧವನ್ನು ಮಾಡುತ್ತದೆ, ತನ್ನ ಶಕ್ತಿಯಿಂದ ವೀರರಮೇಲೆ ಬೀಳುತ್ತದೆ. ಅದರ ಮುಖದಲ್ಲಿರುವ ಆ ಕೋರೆ ಹಲ್ಲು, ಮೋಡದ ಮಧ್ಯದಲ್ಲಿ ಕಾಣುವ ಮಿಂಚಿನಂತೆ ಪ್ರಕಾಶಿಸುತ್ತದೆ.

೪೨. ತನ್ನವರು ಹರಿತವಾದ ಬಾಣಗಳಿಂದ ಆ ಹಂದಿಯನ್ನೂ ಅದರ ಗುಂಪನ್ನೂ ಹೊಡೆಯುತ್ತಿರುವುದನ್ನು ಆ ಇಕ್ಷ್ವಾಕುವು ನೋಡಿದನು.

೪೩. ಆ ಹಂದಿಯು ಮತ್ತೆಮತ್ತೆ ಯುದ್ಧವನ್ನು ಮಾಡುತ್ತಿರುತ್ತದೆ. ಇದನ್ನು ನೋಡಿ, ರಾಜನು ತನ್ನ ಸೈನಿಕರನ್ನು ಕರೆದು, ಎಲೈ ಶೂರರೇ, ನೀವೇಕೆ ನಿಮ್ಮ ಬಲದಿಂದ ಅದನ್ನು ಹಿಡಿಯಬಾರದು ? ಹರಿತವಾದ ಬಾಣವನ್ನು ಅದರಮೇಲೆ ಬಿಡಿ ಎಂದನು.

೪೪-೪೫. ಕೋಪಗೊಂಡ ಆ ರಾಜನ ಮಾತನ್ನು ಕೇಳಿ ಸೈನಿಕರೆಲ್ಲರೂ ಯುದ್ಧಕ್ಕೆ ಸಿದ್ಧರಾದರು. ಕಾಡಿನ ಮಧ್ಯದಲ್ಲಿ ಯುದ್ಧಕೊಡುತ್ತಿರುವ ಆ ಹಂದಿ

ಅನ್ಯೈಕ್ಸೈರ್ಭಟಸಾಹಸ್ರೈರ್ವನೇ ತಂ ಸಮರೇ ಸ್ಥಿತಂ ।
ದಿಕ್ಷು ಸರ್ವಾಸು ಸಂಪತ್ಯ ಬಿಭಿದುಃ ಶೂಕರಂ ರಣೇ ॥ ೪೫ ॥

ವಿದ್ಧಶ್ಚ ಕೈಶ್ಚಿತ್ತದಾ ಬಾಣಜಾಲೈಃ
ಸುಯೋಧೈಶ್ಚ ಸಂಗ್ರಾಮಭೂಮೌ ವಿಶಾಲೈಃ ।
ಕ್ವಚಿಚ್ಚಕ್ರಘಾತೈಃ ಕ್ವಚಿದ್ವಜ್ರವಾತೈ-
ರ್ಹತಂ ದುರ್ಜಯಂ ಸಂಗರೇ ತಂ ಮಹಾಂತೈಃ ॥ ೪೬ ॥

ತತಃ ಪೌರುಷ್ಯೈಃ ಕ್ರೋಧಯುಕ್ತಃ ಸ ಕೋಲಃ
ಸುವಿಚ್ಛಿದ್ಯ ಪಾಶಾನ್ ರಣೇ ಪ್ರಸ್ಥಿತಃ ಸಃ ।
ಮಹಾಶೂಕರೈಃ ಸಾರ್ಧಮೇವ ಪ್ರಯಾತ
ಸ್ತತಃ ಶೋಣಿತಸ್ಯಾಪಿ ಧಾರಾಭಿಷಿಕ್ತಃ ॥ ೪೭ ॥

ಕರೋತಿ ಪ್ರಹಾರಂ ಚ ತುಂಡೇನ ವೀರೋ
ಹಯಾನಾಂ ದ್ವಿಪಾನಾಂ ಚ ಚಿಚ್ಛೇದ ವೀರಃ ।
ಸ್ವದಂಷ್ಟ್ರಾಗ್ರಭಾಗೇನ ತೀಕ್ಷ್ಣೇನ ವೀರಾನ್
ಪದಾತೀನ್ ಹಿ ಸಂಪಾತಯೇದ್ರೋಷಭಾವೈಃ ।
ಜಘಾನಾಸ್ಯ ಶುಂಡಂ ಗಜಸ್ಯಾಪಿ ರುಷ್ಟೋ
ಭಟಾನ್ ಹತಾನ್ಪಾದನಚ್ಚೈಸ್ತು ಹೃಷ್ಟಃ ॥ ೪೮ ॥

---

ಯನ್ನು ಅನೇಕಸಹಸ್ರಭಟರು ಎಲ್ಲಾ ದಿಕ್ಕಿನಲ್ಲೂ ನಿಂತುಕೊಂಡು ಹೊಡೆಯಲು ಮೊದಲಿಟ್ಟರು.

೪೬. ಆ ರಣಭೂಮಿಯಲ್ಲಿ ಬಾಣದೇಟು, ಚಕ್ರದೇಟು, ಇವೇ ಮೊದಲಾದ ಹೊಡೆತಗಳು ಆ ಹಂದಿಯಮೇಲೆ ಬೀಳಲಾರಂಭಿಸಿದವು.

೪೭. ಕೋಪಗೊಂಡ ಆ ಹಂದಿಯು ಹೊರಗೆ ಹೊರಟುಹೋಗದಂತೆ ಕಟ್ಟಿದ ಬಲೆಯಲ್ಲಿ ಬಿದ್ದು ಅದನ್ನು ಕಿತ್ತುಹಾಕಿಕೊಂಡು ರಕ್ತವನ್ನು ಸುರಿಸುತ್ತಾ ಹೊರಟಿತು.

೪೮. ಆ ಸಲಗನು ಆನೆಯನ್ನೂ, ಕುದುರೆಯನ್ನೂ ಕೋರೆಯಿಂದ ಸೀಳುತ್ತಿತ್ತು. ವೀರರಾದ ಕಾಲಾಳುಗಳನ್ನು ಕೋರೆಯಿಂದ ಸೀಳುಹಾಕಿತು. ಆನೆಗಳ ಸೊಂಡಿಲು ಕತ್ತರಿಸಿ ಬಿದ್ದಿರುವುದನ್ನೂ, ಏಟುತಿಂದ ಭಟರು ಕೆಳಗುರುಳಿರುವುದನ್ನೂ ನೋಡಿ ಸಂತೋಷಗೊಂಡಿತು.

**ತತಸ್ತೇ ಶೂಕರಾಃ ಸರ್ವೇ ಲುಬ್ಧಕಾಶ್ಚ ಪರಸ್ಪರಂ ।**
**ಯುಯುಧುಃ ಸಂಗರಂ ಕೃತ್ವಾ ರೋಷಾರುಣವಿಲೋಚನಾಃ ॥ ೪೯ ॥**

**ಲುಬ್ಧಕೈಶ್ಚ ಹತಾಃ ಕೋಲಾಃ ಕೋಲೈಶ್ಚಾಪಿ ಸುಲುಬ್ಧಕಾಃ ।**
**ನಿಹತಾಃ ಪಾತಿತಾ ಭೂಮೌ ಕ್ಷತಜೇನಾಪಿ ಸಾರುಣಾಃ ॥ ೫೦ ॥**

**ಜೀವಂ ತ್ಯಕ್ತ್ವಾ ಹತಾಃ ಕೋಲೈರ್ಲುಬ್ಧಕಾಃ ಪತಿತಾ ರಣೇ ।**
**ಮೃತಾಶ್ಚ ಶೂಕರಾಸ್ತತ್ರ ಶೂರಾಃ ಪ್ರಾಣಾಂಶ್ಚ ತತ್ಯಜುಃ ॥ ೫೧ ॥**

**ಯತ್ರ ಯತ್ರ ಮೃತಾ ಭೂಮೌ ಪಾತಿತಾ ಮೃಗಘಾತಕಾಃ ।**
**ಬಹವಃ ಶೂಕರಾ ರಾಜನ್ಸ್ವವ್ಯಾಪಾರೈರ್ನಿಪಾತಿತಾಃ ॥ ೫೨ ॥**

**ಕತಿ ನಷ್ಟಾ ಹತಾಃ ಕೋಲಾ ನೀತಾ ದುರ್ಗೇಷು ಸಂಶ್ರಿತಾಃ ।**
**ಕುಂಜೇಷು ಕಂದರಾಂತೇಷು ಗೃಹಾಂತೇಷು ನೃಪೋತ್ತಮ ॥ ೫೩ ॥**

**ಲುಬ್ಧಕಾಶ್ಚ ಮೃತಾಃ ಕೇಚಿಚ್ಛಿನ್ನಾ ದಂಷ್ಟ್ರಾಗ್ರಶೂಕರೈಃ ।**
**ಪ್ರಾಣಾಂಸ್ತ್ಯಕ್ತ್ವಾ ಗತಾಃ ಸ್ವರ್ಗಂ ಖಂಡಶೋ ವಿದಲೀಕೃತಾಃ ॥ ೫೪ ॥**

---

೪೯. ಆ ಹಂದಿಗಳೂ, ಭಟರೂ, ಕೋಪಗೊಂಡು ಪರಸ್ಪರ ಯುದ್ಧ ಮಾಡಿದರು.

೫೦. ಆ ಬೇಡರು ಹಂದಿಗಳನ್ನೂ, ಹಂದಿಗಳು ಬೇಡರನ್ನೂ ಪರಸ್ಪರ ಕೊಂದರು. ಹೀಗೆ ಕೊಲ್ಲಲ್ಪಟ್ಟವರು ರಕ್ತದಿಂದ ತೋಯಿದು ಕೆಂಪಾಗಿ ಭೂಮಿಯಲ್ಲಿ ಬಿದ್ದರು.

೫೧. ಹಂದಿಗಳಿಂದ ಕೊಲ್ಲಲ್ಪಟ್ಟ ಬೇಡರು ಯುದ್ಧಭೂಮಿಯಲ್ಲಿ ಸತ್ತು ಬಿದ್ದರು. ಬೇಡರಿಂದ ಕೊಲ್ಲಲ್ಪಟ್ಟ ಹಂದಿಗಳೂ ಕೂಡ ಅಲ್ಲಿ ಸತ್ತುಬಿದ್ದವು.

೫೨. ಆ ರಣಭೂಮಿಯಲ್ಲಿ ಎಲ್ಲಿ ನೋಡಿದರೂ ಶೂರರಾದ ಬೇಡರೂ, ಹಂದಿಗಳೂ ಸತ್ತುಬಿದ್ದಿದ್ದರು.

೫೩. ದುರ್ಗ, ಪೊದರು, ಗುಹೆ, ಮನೆಗಳು ಇವುಗಳಲ್ಲಿ ಅಡಗಿಕೊಂಡಿದ್ದ ಎಷ್ಟೋ ಹಂದಿಗಳನ್ನು ಆ ಬೇಡರು ಕೊಂದರು.

೫೪. ಅದರಂತೆಯೇ ಹಂದಿಗಳ ಕೋರೆಹಲ್ಲುಗಳಿಂದ ಸೀಳಲ್ಪಟ್ಟು ಮೃತರಾದ ಬೇಡರನೇಕರು ವೀರಸ್ವರ್ಗವನ್ನು ಹೊಂದಿದರು.

ನಾಗುರಾಪಾಶಜಾಲಾಶ್ಚ ಕೃತಕಾಪಂಜರಾಸ್ತತಃ ।
ನಾಡೀಶ್ಚ ಪಾತಿತಾ ಭೂಮೌ ಯತ್ರ ತತ್ರ ಸಮುತತಃ ॥ ೫೫ ॥

ಏಕೋಽಪಿ ದಯಿತಾಸಾರ್ಧಂ ವಾರಾಹಃ ಪರಿತಿಷ್ಠತಿ ।
ಪೌತ್ರಕೈಃ ಸಪ್ತಪಂಚೈಶ್ಚ ಯುದ್ಧಾರ್ಥೀ ಬಲದರ್ಪಿತಃ ॥ ೫೬ ॥

ತಮುವಾಚ ತದಾ ಕಾಂತಂ ಸೂಕರಂ ಶೂಕರೀ ಪುನಃ ।
ಗಚ್ಛ ಕಾಂತ ಮಯಾ ಸಾರ್ಧಮೇಭಿಸ್ತು ಬಾಲಕೈಃ ಸಹ ॥ ೫೭ ॥

ಪ್ರಾಹ ಪ್ರೀತಸ್ತು ತಾಂ ತತ್ರ ಸ್ವಪ್ರಿಯಾಂ ತು ಕಿರಿಃಕಿಟಿಃ ।
ಕ್ವ ಗಚ್ಛಾಮಿ ಪ್ರಭಗ್ನೋಽಹಂ ಸ್ಥಾನಂ ನಾಸ್ತಿ ಮಹೀತಲೇ ।
ಮಯಿ ನಷ್ಟೇ ಮಹಾಭಾಗೇ ಕೋಲಯೂಥಂ ವಿನಶ್ಯತಿ ॥ ೫೮ ॥

ದ್ವಯೋಶ್ಚ ಸಿಂಹಯೋರ್ಮಧ್ಯೇ ಶೂಕರಃ ಪಿಬತೇ ಜಲಂ ।
ದ್ವಯೋಃ ಶೂಕರಯೋರ್ಮಧ್ಯೇ ಸಿಂಹೋ ನೈವ ಪಿಬೇತ್ಪಯಃ ॥ ೫೯ ॥

---

೫೫. ಆ ಹಂದಿಗಳಿಗೋಸ್ಕರ ಒಡ್ಡಿದ್ದ ದೊಡ್ಡಬಲೆ, ಚಿಕ್ಕಬಲೆ ಸಿಲುಕಿನ ಕಣ್ಣಿ, ಭೂಮಿಯಲ್ಲಿ ಹೂತುಮುಚ್ಚುವ ಬಲೆ, ಅವುಗಳಿಗೆ ನಿಲ್ಲುಹಾಕುವ ದಪ್ಪಪೊಣ್ಣೆಗಳು ಇವೆಲ್ಲವೂ ಭೂಮಿಯಲ್ಲಿ ಬಿದ್ದು ವ್ಯರ್ಥವಾದವು.

೫೬. ಈ ಸಲಗನು ನಾಲ್ಕೈದು ಮುಮ್ಮಕ್ಕಳೊಡನೆಯೂ, ತನ್ನ ಹೆಂಡತಿಯೊಡನೆಯೂ ಉಳಿದಿದ್ದರೂ ಕೂಡ ಯುದ್ಧವನ್ನೇ ಅಪೇಕ್ಷಿಸುತ್ತದೆ.

೫೭. ಹೆಣ್ಣು ಹಂದಿಯು· ಸಲಗನನ್ನು ಕುರಿತು ಈ ಮರಿಗಳೂ ನಾನೂ ಜೊತೆಯಲ್ಲಿ ಬರುತ್ತೇನೆ. ಎಲ್ಲಿಗಾದರೂ ಹೋಗೋಣ ನಡೆ ಎಂದಿತು.

೫೮. ಆಗ ಆ ಸಲಗ ಹಂದಿಯು—ಎಲ್ಲಿ ಹೋಗಲಿ? ಯುದ್ಧಮಾಡಿ ಘಾಯಗೊಂಡು ದಣಿದಿರುವೆನು. ಭೂಮಿಯಲ್ಲಿರಲು ನನಗೆ ಜಾಗವೇ ಇಲ್ಲ. ನಾನು ಯುದ್ಧದಲ್ಲಿ ಪರಾಜಿತನಾಗಿ ಮಡಿದರೆ ಈ ಹಂದಿಗಳ ಹಿಂಡು ರಕ್ಷಕರಿಲ್ಲದೆ ನಾಶ ಹೊಂದುತ್ತದೆ.

೫೯. ಎರಡು ಸಿಂಹಗಳ ಮಧ್ಯದಲ್ಲಿ ಹಂದಿಯು ನಿರ್ಭಯವಾಗಿ ನೀರನ್ನು ಕುಡಿಯುವುದು. ಆದರೆ ಎರಡು ಹಂದಿಗಳ ಮಧ್ಯದಲ್ಲಿ ಸಿಂಹವು ನೀರು ಕುಡಿಯಲು ಹಿಂಜರಿಯುವುದು.

**ಏವಂ ಶೂಕರಜಾತೀಷು ದೃಶ್ಯತೇ ಬಲಮುತ್ತಮಂ ।**
**ತದಹಂ ನಾಶಯಾಮ್ಯೇವ ಯದಾ ಭಗ್ನೋ ವ್ರಜಾಮ್ಯಹಂ ॥ ೬೦ ॥**

**ಜಾನೇ ಧರ್ಮಂ ಮಹಾಭಾಗೇ ಬಹುಶ್ರೇಯೋವಿದಾಯಕಂ ।**
**ಕಾಮಾಲ್ಲೋಭಾದ್ಭಯಾದ್ವಾಪಿ ಯುಧ್ಯಮಾನಃ ಪ್ರಣಶ್ಯತಿ ॥ ೬೧ ॥**

**ರಣತೀರ್ಥಂ ಪರಿತ್ಯಜ್ಯ ಸ ಸ್ಯಾತ್ಪಾಪೀ ನ ಸಂಶಯಃ ।**
**ನಿಶಿತಂ ಶಸ್ತ್ರಸಂವ್ಯೂಹಂ ದೃಷ್ಟ್ವಾ ಹರ್ಷಂ ಪ್ರಗಚ್ಛತಿ ॥ ೬೨ ॥**

**ಅವಗಾಹ್ಯಾಶು ಸಿಂಧುಂ ಸ ತೀರ್ಥಪಾರಂ ಪ್ರಗಚ್ಛತಿ ।**
**ಸ ಯಾತಿ ವೈಷ್ಣವಂ ಲೋಕಂ ಪಿತೄಣಾಂ ಶತಮುದ್ಧರೇತ್ ॥ ೬೩ ॥**

**ಸಮಾಯಾಂತಂ ಚ ತದಹಂ ಕಥಂ ಭಗ್ನೋ ವ್ರಜಾಮ್ಯಹಂ ।**
**ಯೋಧಸಂ ಶಸ್ತ್ರಸಂಕೀರ್ಣಂ ಪ್ರವೀರಾನಂದದಾಯಕಂ ॥ ೬೪ ॥**

---

೬೦. ಹಂದಿಯ ಜಾತಿಯಲ್ಲಿ ಈ ರೀತಿಯಾದ ಬಲವಿದೆ. ಆದುದರಿಂದ ನಾನು ಸೋತು ಓಡಿ ಹೋದರೆ, ಕುಲದ ಅಂತಹ ಪವಿತ್ರವಾದ ಕೀರ್ತಿಯನ್ನು ನಾಶ ಮಾಡಿದಂತಾಗುತ್ತದೆ.

೬೧. ಶ್ರೇಯಸ್ಸನ್ನು ಕೊಡತಕ್ಕ ಧರ್ಮಸೂಕ್ಷ್ಮವನ್ನು ತಿಳಿದಿದ್ದೇನೆ. ಕಾಮ, ಲೋಭ, ಭಯ ಇವುಗಳಿಂದ ಪ್ರೇರಿತನಾಗಿ, ಯುದ್ಧರಂಗವೆಂಬ ರಣತೀರ್ಥವನ್ನು ಬಿಟ್ಟು ಸೋತು ಓಡಿಹೋದರೆ ಅವನು ಪಾಪಿಯಾಗುತ್ತಾನೆ. ಸಂಶಯವಿಲ್ಲ.

೬೨-೬೩. ಶೂರನಾದವನು ಹರಿತವಾದ ಶಸ್ತ್ರಗಳನ್ನು ನೋಡಿ ಸಂತೋಷ ಗೊಳ್ಳುತ್ತಾನೆ. ರಣವೆಂಬ ನದಿಯಲ್ಲಿ ಮುಳಗಿ ಮೃತನಾದರೆ, ವೈಷ್ಣವಲೋಕವನ್ನು ಹೊಂದಿ ತನ್ನ ವಂಶದ ಅನೇಕ ಪಿತೃಗಳನ್ನು ಉದ್ಧಾರ ಮಾಡುತ್ತಾನೆ.

೬೪. ಅಂತಹ ತೀರ್ಥವು ತಾನಾಗಿಯೇ ಪ್ರಾಪ್ತವಾಗಿರುವಾಗ, ಸೋತು ಹೇಗೆ ತಾನೆ ಓಡಿಹೋಗಲಿ? ಶಸ್ತ್ರಗಳಿಂದ ಮಾಡುವ ಯುದ್ಧವು ವೀರರಿಗೆ ಆನಂದ ವನ್ನುಂಟುಮಾಡುತ್ತದೆ.

ದೃಷ್ಟ್ವಾ ಪ್ರಯಾತಿ ಸಂಹೃಷ್ಟಸ್ತಸ್ಯ ಪುಣ್ಯಫಲಂ ಶೃಣು ।
ಪದೇ ಪದೇ ಸಹಸ್ರಸ್ನಾನಂ ಭಾಗೀರಥ್ಯಾಃ ಪ್ರಜಾಯತೇ ॥ ೬೫ ॥

ರಣಾದ್ಭಗ್ನೋ ಗೃಹಂ ಯಾತಿ ಕಾಮಾಲ್ಲೋಭಾತ್ಪ್ರಿಯೇ ಶೃಣು ।
ಮಾತೃದೋಷಂ ಪ್ರಕಾಶೇತ್ಸ ಕ್ರಿಯಾಜಾತಶ್ಚ ಕಥ್ಯತೇ ॥ ೬೬ ॥

ಅತ್ರ ಯಜ್ಞಾಶ್ಚ ತೀರ್ಥಾಶ್ಚ ಅತ್ರ ದೇವಾ ಮಹೌಜಸಃ ।
ಪಶ್ಯಂತಿ ಕಾತುಕಂ ಕಾಂತೇ ಮುನಯಃ ಸಿದ್ಧಚಾರಣಾಃ ॥ ೬೭ ॥

ತ್ರೈಲೋಕ್ಯಂ ವರ್ತತೇ ತತ್ರ ಯತ್ರ ವೀರಪ್ರಕಾಶನಂ ।
ಸಮರಾದ್ಭಗ್ನಂ ಪ್ರಪಶ್ಯಂತಿ ಸರ್ವೇ ತ್ರೈಲೋಕ್ಯವಾಸಿನಃ ॥ ೬೮ ॥

ಶಪಂತಿ ನಿರ್ಘೃಣಂ ಪಾಪಂ ಪ್ರಹಸಂತಿ ಪುನಃ ಪುನಃ ।
ದುರ್ಗತಿಂ ದರ್ಶಯೇತ್ತಸ್ಯ ಧರ್ಮರಾಜೋ ನ ಸಂಶಯಃ ॥ ೬೯ ॥

---

೬೫. ಹಾಗೆ ಯುದ್ಧ ಸಮಾಪಿಸಿ ಬರುತ್ತಿರುವುದನ್ನು ಕಂಡು ಯಾವನು ಧೈರ್ಯದಿಂದ ನುಗ್ಗುತ್ತಾನೆಯೋ ಅವನಿಗೆ ಹೆಜ್ಜೆಹೆಜ್ಜೆಗೂ ಗಂಗಾನದಿಯ ಸ್ನಾನದ ಪುಣ್ಯವು ಲಭಿಸುತ್ತದೆ.

೬೬. ಯುದ್ಧಕ್ಕೆ ಹೆದರಿ ಕಾಮಲೋಭಗಳಿಂದ ಹಿಂತೆಗೆದರೆ ಅವನನ್ನು ಹೆತ್ತ ತಾಯಿಯು ವೀರಳಲ್ಲವೆಂಬುದನ್ನು ಪ್ರಕಾಶಪಡಿಸಿ ಅಂತಹಸ್ತ್ರೀಯ ಸಂಗದ ಪರಿಣಾಮ ವಾಗಿ ಹುಟ್ಟಿದವನು ಕೆಲಸಕ್ಕೆ ಬಂದವನೇ ಅಲ್ಲ ಎನಿಸಿಕೊಳ್ಳುತ್ತಾನೆ.

೬೭. ಆ ರಣರಂಗವೇ ಯಾಗವು, ಅದೇ ತೀರ್ಥವು. ಅಲ್ಲಿಯೇ ಎಲ್ಲ ದೇವತೆಗಳೂ ಬಂದು ಈ ಆಶ್ಚರ್ಯವನ್ನು ನೋಡುತ್ತಾರೆ.

೬೮. ಎಲ್ಲಿ ಪರಾಕ್ರಮವು ಪ್ರಕಾಶಮಾನವಾಗುತ್ತದೆಯೋ ಅಲ್ಲಿ ಮೂರು ಲೋಕದವರೂ ಇರುತ್ತಾರೆ. ಯುದ್ಧದಲ್ಲಿ ಸೋತವನನ್ನೂ ಅವರೆಲ್ಲರೂ ನೋಡುತ್ತಾರೆ.

೬೯. ಸೋತುಹೋದ ಆ ಅಯೋಗ್ಯನನ್ನು ಅವರೆಲ್ಲರೂ ಬಾರಿಬಾಗೂ ಹಾಸ್ಯಮಾಡುತ್ತಾರೆ. ನೋಡಿ ನಗುತ್ತಾರೆ. ಯಮಧರ್ಮನು ಅವನಿಗೆ ನರಕವನ್ನು ತೋರಿಸುತ್ತಾನೆ. ಸಂಶಯವಿಲ್ಲ.

ಸಂಮುಖಃ ಸಮರೇ ಯುದ್ಧೇ ಸ್ವಶಿರಾಚ್ಛೋಣಿತಂ ಪಿಬೇತ್ ।
ಅಶ್ವಮೇಧಫಲಂ ಭುಂಕ್ತೇ ಇಂದ್ರಲೋಕಂ ಪ್ರಗಚ್ಛತಿ ॥ ೨೦ ॥

ಯದಾ ಜಯತಿ ಸಂಗ್ರಾಮೇ ಶತ್ರೂಞ್ಶೂರೋ ವರಾನನೇ ।
ತದಾ ಪ್ರಭುಂಜತೇ ಲಕ್ಷ್ಮೀಂ ನಾನಾಭೋಗಾನ್ನ ಸಂಶಯಃ ॥ ೨೧ ॥

ಯದಾ ತತ್ರ ತ್ಯಜೇತ್ಪ್ರಾಣಾನ್ಸಂಮುಖಶ್ಚ ನಿರಾಶ್ರಯಃ ।
ಸ ಗಚ್ಛೇತ್ಪರಮಂ ಲೋಕಂ ದೇವಕನ್ಯಾಃ ಪ್ರಭುಂಜತೇ ॥ ೨೨ ॥

ಏವಂ ಧರ್ಮಂ ವಿಜಾನಾಮಿ ಕಥಂ ಭಗ್ನೋ ವ್ರಜಾಮ್ಯಹಂ ।
ಅನೇನ ಸಮರೇ ಯುದ್ಧಂ ಕರಿಷ್ಯೇ ನಾತ್ರ ಸಂಶಯಃ ॥ ೨೩ ॥

ಮನೋಃ ಪುತ್ರೇಣ ಧೀರೇಣ ರಾಜ್ಞಾ ಇಕ್ಷ್ವಾಕುಣಾ ಸಹ ।
ಡಿಂಭಾನ್ಗೃಹ್ಯ ಪ್ರಯಾಹಿ ತ್ವಂ ಸುಖಂ ಜೀವ ವರಾನನೇ ॥ ೨೪ ॥

---

೨೦. ಯುದ್ಧದಲ್ಲಿ ಶತ್ರುವನ್ನು ಎದುರಿಸುತ್ತಾ ತನ್ನ ತಲೆಯ ಗಾಯದಿಂದ ಹರಿದು ಬರುತ್ತಿರುವ ರಕ್ತವನ್ನು ಕುಡಿದರೆ ಅಶ್ವಮೇಧಯಾಗದ ಫಲವನ್ನು ಹೊಂದಿ ಇಂದ್ರಲೋಕವನ್ನು ಪಡೆಯುತ್ತಾನೆ.

೨೧. ಶತ್ರುವನ್ನು ಯುದ್ಧದಲ್ಲಿ ಜಯಿಸಿದರೆ ಐಶ್ವರ್ಯವನ್ನನುಭವಿಸಿ ನಾನಾ ಭೋಗಗಳನ್ನು ಅನುಭವಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.

೨೨. ರಣರಂಗದಲ್ಲಿ ಶತ್ರುವನ್ನು ಎದುರಿಸುತ್ತಾ ಅಸಹಾಯನಾಗಿ ಪ್ರಾಣ ಬಿಟ್ಟರೆ ಸ್ವರ್ಗವನ್ನು ಹೊಂದಿ ಅಪ್ಸರಸ್ತ್ರೀಯರನ್ನು ಪಡೆದು ಸುಖಿಸುತ್ತಾನೆ.

೨೩. ಈ ರೀತಿಯಾದ ಧರ್ಮವನ್ನು ತಿಳಿದಿದ್ದೇನೆ. ಸೋತು ಹೇಗೆ ಹೋಗಲಿ? ಆದುದರಿಂದ ಇವದೊಡನೆ ಯುದ್ಧವನ್ನು ಮಾಡಿಯೇ ಮಾಡುತ್ತೇನೆ. ಸಂಶಯವಿಲ್ಲ.

೨೪. ಮನುವಿನ ಮಗನಾದ ಈ ಇಕ್ಷ್ವಾಕುರಾಜನು ಪರಾಕ್ರಮಶಾಲಿಯು. ಇವನೊಡನೆ ಯುದ್ಧವನ್ನು ಮಾಡಿಯೇ ಮಾಡುತ್ತೇನೆ. ನೀನು ಮಕ್ಕಳನ್ನು ಕರೆದುಕೊಂಡು ಹೋಗಿ ಸುಖವಾಗಿ ಬದುಕು.

ತಸ್ಯ ಶ್ರುತ್ವಾ ವಚಃ ಪ್ರಾಹ ಬದ್ಧಾಹಂ ತವ ಬಂಧನೈಃ ।
ಸ್ನೇಹಮಾನಪ್ರಹಾಸ್ಯೈವ ರತಿಕ್ರೀಡನಕೈಃ ಪ್ರಿಯ ॥ ೭೫ ॥

ಪುರತಸ್ತೇ ಸುತೈಃ ಸಾರ್ಧಂ ಪ್ರಾಣಾಂಸ್ತ್ಯಕ್ಷ್ಯಾಮಿ ಮಾನದ ।
ಏವಮೇವ ಸುಸಂಭಾಷ್ಯ ಪರಸ್ಪರಹಿತೈಷಿಣೌ ॥ ೭೬ ॥

ಯುದ್ಧಾಯ ನಿಶ್ಚಿತೌ ಭೂತ್ವಾ ಸಮಾಲೋಕಯತೋ ರಿಪೂನ್ ।
ಕೋಶಲಾಧಿಪತಿರ್ವೀರಂ ತಮಿಕ್ಷ್ವಾಕುರ್ಮಹಾಮತಿಂ ॥ ೭೭ ॥

ಯಥೈವ ಮೇಘಃ ಪರಿಗರ್ಜತೇ ದಿವಿ
ಪ್ರಾವೃಟ್ಸುಕಾಲೇ ಸುತಡಿತ್ಪ್ರಕಾಶೈಃ ।
ತಥೈವ ಸಂಗರ್ಜತಿ ಕಾಂತಯಾ ಸಮಂ
ಸಮಾಹ್ವಯೇದ್ರಾಜವರಂ ಖುರಾಗ್ರೈಃ ॥ ೭೮ ॥

---

೭೫. ಹೀಗೆ ಹೇಳಿದ ಗಂಡುಹಂದಿಯ ಮಾತನ್ನು ಕೇಳಿ ಹೆಣ್ಣುಹಂದಿಯು ಹೇಳುತ್ತದೆ— ನಮ್ಮಿಬ್ಬರಿಗೂ ಸ್ನೇಹ, ಗೌರವ, ಹಾಸ್ಯ, ರತಿಕ್ರೀಡೆ ಇವುಗಳ ಸಂಬಂಧವಿರುವುದು. ಆದುದರಿಂದ ನಿನ್ನನ್ನು ಬಿಟ್ಟು ನಾನು ಎಲ್ಲಿಗೂ ಹೋಗುವುದಿಲ್ಲ. ನನ್ನ ಮಕ್ಕಳೊಡನೆ ನಿನ್ನೆದುರಿಗೆ ಪ್ರಾಣವನ್ನು ಬಿಡುತ್ತೇನೆ.

೭೬-೭೭. ಈ ರೀತಿ ಅವು ಪರಸ್ಪರ ಹಿತಕಾಂಕ್ಷೆಯಿಂದ ಮಾತನಾಡಿಕೊಂಡು ಯುದ್ಧಕ್ಕೆ ನಿಶ್ಚಿತರಾಗಿ, ಕೋಸಲಾಧಿಪತಿಯೂ, ವೀರನೂ ಆದ ಆ ಇಕ್ಷ್ವಾಕುವನ್ನು ಎದುರುನೋಡುತ್ತಿದ್ದವು.

೭೮. ಮುಂಗಾರುಮಳೆಯ ಮೋಡಗಳು ಆಕಾಶದಲ್ಲಿ ಮಿಂಚುಗಳಿಂದ ಪ್ರಕಾಶಿಸುತ್ತಾ ಹೇಗೆ ಗರ್ಜಿಸುತ್ತವೆಯೋ ಹಾಗೆ, ಆ ಹಂದಿಯು ತನ್ನ ಹೆಂಡತಿಯೊಡನೆ ಕೂಡಿಕೊಂಡು ಗರ್ಜಿಸುತ್ತ, ಗೊರಸುಗಳಿಂದ ನೆಲವನ್ನು ಕೆರೆಯುತ್ತ, ರಾಜನನ್ನು ಯುದ್ಧಕ್ಕೆ ಕರೆಯುತ್ತಿತ್ತು.

**ತಂ ಗರ್ಜಮಾನಂ ದದೃಶೇ ಮಹಾತ್ಮಾ ।**
**ವರಾಹಮೇಕಂ ಪುರುಷಾರ್ಥಯುಕ್ತಂ ।**
**ಸಸಾರ ಸ್ವೇನೈವ ಜವೇನ ಯುಕ್ತಃ ।**
**ಸುಸಂಮುಖಸ್ತಸ್ಯ ನೃವೀರಧೀರಃ** ॥ ೭೯ ॥

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ತ್ರಿಚತ್ವಾರಿಂಶತ್ತಮೋಽಧ್ಯಾಯಃ**

---

೭೯. ಮಹಾತ್ಮನಾದ ಈ ಇಕ್ಷ್ವಾಕುರಾಜನು, ಗರ್ಜಿಸುತ್ತಿರುವ ಈ ಸಲಗನನ್ನು ನೋಡಿ, ತಾನು ಮಹಾಬಲ ಪರಾಕ್ರಮಿಯಾದುದರಿಂದ ಧರ್ಮದಿಂದ ಯುದ್ಧ ಮಾಡಬೇಕೆಂದು ಚಿಂತಿಸಿ, ಆ ಹಂದಿಯ ಅಭಿಮುಖವಾಗಿ ಯುದ್ಧಸನ್ನದ್ಧನಾದನು.

ಇಂತು ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದ ಸುಕಲಾಚರಿತ್ರೆಯಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೆ ಭೂಮಿಖಂಡೇ ಚತುಶ್ಚತ್ವಾರಿಂಶೋऽಧ್ಯಾಯಃ

---

॥ ಸುಕಲೋವಾಚ ॥

ಸ್ವಸೈನ್ಯಂ ದುರ್ಧರಂ ದೃಷ್ಟ್ವಾ ನಿರ್ಜಿತಂ ದುರ್ಧರೇಣ ತಂ ।
ಚುಕೋಪ ಭೂಪತಿಃ ಕ್ರೂರಂ ದುಸ್ಸಹಂ ಸೂಕರಂ ಪ್ರತಿ ॥ ೧ ॥

ಧನುರಾದಾಯ ವೇಗೇನ ಬಾಣಂ ಕಾಲೋಪಮಂ ತದಾ ।
ತಸ್ಯಾಭಿಮುಖಮೇವಾಸೌ ಹಯೇನಾಭಿಸಸಾರ ಸಃ ॥ ೨ ॥

ಸ ಯದಾ ನೃಪತಿಂ ಹಯಪೃಷ್ಠಗತಂ ।
ವರಪೌರುಷಯುಕ್ತಮಮಿತ್ರಹಣಂ ।
ಪರಿಪಶ್ಯತಿ ಶೂಕರಯೂಥಪತಿಃ ।
ಪ್ರಗತೋऽಭಿಮುಖಂ ರಣಭೂಮಿತಲೇ ॥ ೩ ॥

---

## ನಲವತ್ತನಾಲ್ಕನೆಯ ಅಧ್ಯಾಯವು.

೧. ಸುಕಲೆಯು ಹೇಳಿದಳು—ಬಲಿಷ್ಠವಾದ ತನ್ನ ಸೈನ್ಯವು, ಬಲಿಷ್ಠವಾದ ಈ ಸಲಗನಿಂದ ಜಯಿಸಲ್ಪಟ್ಟುದನ್ನು ನೋಡಿ ದುಸ್ಸಹವಾದ ಆ ಹಂದಿಯ ಮೇಲೆ ರಾಜನು ಕೋಪಗೊಂಡನು.

೨. ಆ ರಾಜನು ಯಮನಿಗೆ ಸಮಾನವಾದ ಬಿಲ್ಲನ್ನು ತೆಗೆದುಕೊಂಡು, ಕುದುರೆಯ ಮೇಲೆ ಕುಳಿತು ಜಾಗ್ರತೆಯಾಗಿ ಆ ಹಂದಿಗೆದುರಾಗಿಯೇ ಹೊರಟನು.

೩. ಶೂರನಾದ, ಶತ್ರುಸಂಹಾರಕನಾದ, ಕುದುರೆಯ ಮೇಲೆ ಬರುತ್ತಿರುವ ಆ ರಾಜನನ್ನು ಈ ಸಲಗನು ನೋಡಿದೊಡನೆಯೇ ಯುದ್ಧಭೂಮಿಯಲ್ಲಿ ಎದುರಿಗೆ ಹೋಯಿತು.

ನಿಶಿತೇನ ಶರೇಣ ಹತೋ ಹಿ ಯದಾ
ನೃಪತೇರ್ಹಯಪಾದತಲೇ ಪ್ರಗತಃ ।
ತಮಿಹೈವ ವಿಲಂಘ್ಯ ಚ ವೇಗಮನಾಃ
ಪ್ರಖರೇಣ ಜವೇನ ಚ ಕೋಲವರಃ ॥ ೪ ॥

ವ್ಯಥಿತಸ್ತುರಗಃ ಸ ಕಿರಿಃಕಿಟಿನಾ
ನ ಹಿ ಯಾತಿ ಕ್ಷಿತೌ ಸ ಹಿ ವಿದ್ಧಗತಿಃ ।
ತುರಗಃ ಪತಿತೋ ಭುವಿ ತುಂಡಹತೋ
ಲಘುಸ್ಯಂದನಮೇವ ಗತೋ ನೃಪತಿಃ ॥ ೫ ॥

ಸ ಹಿ ಗರ್ಜತಿ ಶೂಕರಜಾತಿರವೈರಥ
ಸಂಸ್ಥಿತಕೋಲಶಲಯೇನ ಜವೈಃ ।
ಗದಯಾ ನಿಹತಃ ಕಿಲ ಭೂಪತಿನಾ
ರಣಮಧ್ಯಗತಃ ಸಹಿ ಯೂಥಪತಿಃ ॥ ೬ ॥

ಪರಿತ್ಯಜ್ಯ ತನುಂ ಚ ಸ್ವಕಾಂ ಹಿ ತದಾ
ಗತ ಏವ ಹರೇರ್ಗೃಹಮೇವ ವರಂ ॥ ೭ ॥

---

೪. ಹರಿತವಾದ ಬಾಣದಿಂದ ಹೊಡೆಯಲ್ಪಟ್ಟ ಆ ಹಂದಿಯು, ರಾಜನ ಕುದುರೆಯ ಕಾಲ ಕೆಳಗೆ ವೇಗವಾಗಿ ನುಗ್ಗಿತು,

೫. ಆ ಹಂದಿಯ ಕೋರೆಯ ಏಟಿನಿಂದ ಕುದುರೆಯ ಕಾಲಿಗೆ ಏಟು ಬೀಳಲು ಅದು ನಡೆಯಲಾರದೆ ಕೆಳಗೆ ಬಿದ್ದಿತು, ಒಡನೆಯೇ ರಾಜನು ಹತ್ತಿರ ಇದ್ದ ಒಂದು ರಥಕ್ಕೆ ಜಾಗ್ರತೆಯಾಗಿ ಹತ್ತಿದನು.

೬. ಆ ಹಂದಿಯು ತನ್ನ ಜಾತಿಗೆ ಯೋಗ್ಯವಾದ ಗರ್ಜನೆಯಿಂದ ಗರ್ಜಿಸುತ್ತಿರಲು, ಒಡನೆಯೇ ಆ ರಾಜನು ಗದೆಯಿಂದ ಜೋರಾಗಿ ಹೊಡೆದನು. ರಣಮಧ್ಯದಲ್ಲಿ ಆ ಏಟನ್ನು ಅದು ತಿಂದಿತು.

೭-೮. ಆ ಸಲಗ ಹಂದಿಯು ರಾಜನೊಡನೆ ಯುದ್ಧಮಾಡಿ ಅವನ ಗದೆಯು ಏಟಿನಿಂದ ಘಾಯವಡೆದು, ಗಾಳಿಯಿಂದ ಮರವು ಬೀಳುವಂತೆ ಭೂಮಿಯಲ್ಲಿ ಬಿದು

ಕೃತ್ವಾ ಹಿ ಯುದ್ಧಂ ಸಮರೇ ಹಿ ತೇನ
ರಾಜ್ಞಾ ಸಮಂ ಶೂಕರರಾಜರಾಜಃ ।
ಪಪಾತ ಭೂಮೌ ಮರುತಾ ನಗೋ ಯಥಾ
ವವರ್ಷಿರೇ ದೇವವರಾಃ ಸುಪುಷ್ಪೈಃ ॥ ೮ ॥
ತಸ್ಯೋಪರಿ ಪುಷ್ಪಚಯಃ ಸುಜಾತಃ
ಸಂತಾನಕಾನಾಮಪಿ ಸೌರಭೈಶ್ಚ ।
ಸ ಕುಂಕುಮೈಶ್ಚಂದನವೃಷ್ಟಿಮೇವ
ಕುರ್ವಂತಿ ದೇವಾಃ ಪರಿತುಷ್ಟಮಾನಾಃ ॥ ೯ ॥
ವಿಪಶ್ಯಮಾನಃ ಸ ಹಿ ತೇನ ರಾಜ್ಞಾ
ಚತುರ್ಭುಜಃ ಸೋऽಪಿ ಬಭೂವ ರಾಜನ್ ।
ದಿವ್ಯಾಂಬರೋ ಭೂಷಣದಿವ್ಯರೂಪಃ
ಸ್ವತೇಜಸಾ ಭಾತಿ ದಿವಾಕರೋ ಯಥಾ ॥ ೧೦ ॥
ದಿವ್ಯೇನ ಯಾನೇನ ಗತೋ ದಿವಂ ತದಾ
ಸುಪೂಜ್ಯಮಾನಃ ಸುರರಾಜದೇವೈಃ ।
ಗಂಧರ್ವರಾಜಃ ಸ ಬಭೂವ ಭೂಯಃ
ಪೂರ್ವಂ ಸ್ವಕಂ ಕಾಯಮಿಹೈವ ತ್ಯಕ್ತ್ವಾ ॥ ೧೧ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ
ವೇನೋಪಾಖ್ಯಾನೇ ಸುಕಲಾಚರಿತೇ ಚತುಶ್ಚತ್ವಾರಿಂಶೋऽಧ್ಯಾಯಃ

---

ಪ್ರಾಣವನ್ನು ಬಿಟ್ಟಿತು ಮತ್ತು ಉತ್ತಮವಾದ ವೈಕುಂಠಲೋಕವನ್ನು ಹೊಂದಿತು. ದೇವತೆಗಳು ಅದರ ಮೇಲೆ ಹೂಮಳೆಗರೆದರು.

೯. ಅಲ್ಲದೆ, ಆ ದೇವತೆಗಳು, ಕಲ್ಪವೃಕ್ಷಗಳ ಸುವಾಸನೆಯುಳ್ಳ ಹೂಗಳನ್ನೂ, ಕುಂಕುಮಗಳನ್ನೂ ಗಂಧಗಳನ್ನೂ ಕೂಡ ಅದರ ಮೇಲೆ ಚೆಲ್ಲಿದರು.

೧೦. ರಾಜನು ನೋಡುತ್ತಿರುವಂತೆಯೇ ಆ ಹಂದಿಯ ದೇಹದಿಂದ ಹೊರಟ ಆತ್ಮನು ವಿಷ್ಣುವಿನಂತೆ ನಾಲ್ಕು ಕೈಗಳನ್ನು ಹೊಂದಿದವನಾಗಿ ಉತ್ತಮವಾದ ವಸ್ತ್ರಾಭರಣಗಳನ್ನು ಧರಿಸಿ ತನ್ನ ತೇಜಸ್ಸಿನಿಂದ ಸೂರ್ಯನಂತೆ ಪ್ರಕಾಶಿಸುತ್ತಿದ್ದನು.

೧೧. ಈ ಹಂದಿಯು ದೇಹವನ್ನು ಬಿಟ್ಟೊಡನೆಯೇ ಉತ್ತಮವಾದ ವಿಮಾನದಲ್ಲಿ ಕುಳಿತು ದೇವತೆಗಳಿಂದ ಪೂಜಿಸಲ್ಪಡುತ್ತಾ ಮೊದಲಿನ ಗಂಧರ್ವರಾಜನೇ ಆದನು.

ಇಂತು ಪದ್ಮಮಹಾಪುರಾಣದ ಭೂಮಿ ಖಂಡದಲ್ಲಿ ವೇನೋಪಾಖ್ಯಾನದ
ಸುಕಲಾಚರಿತ್ರೆಯಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಚತ್ವಾರಿಂಶೋಽಧ್ಯಾಯಃ

---

॥ ಸುಕಲೋವಾಚ ॥

ಅಥ ತೇ ಲುಬ್ಧಕಾಸ್ಸರ್ವೇ ಶೂಕರೀಂ ಪ್ರತಿಜಗ್ಮಿರೇ ।
ಶೂರಾಶ್ಚ ದಾರುಣಾಃ ಪ್ರಾಪ್ತಾಃ ಪಾಶಹಸ್ತಾಶ್ಚ ಭೀಷಣಾಃ ॥ ೧ ॥

ಚತುರಶ್ಚ ತತೋ ಡಿಂಭಾನ್ಸ್ವೃತ್ವಾ ಸ್ಥಿತಾ ಚ ಶೂಕರೀ ।
ಕುಟುಂಬೇನ ಸಮಂ ಕಾಂತಂ ಹತಂ ದೃಷ್ಟ್ವಾ ಮಹಾಹವೇ ॥ ೨ ॥

ಭರ್ತುರ್ಮೇ ಚಿಂತಿತಂ ಪ್ರಾಪ್ತಮೃಷಿದೇವೈಶ್ಚ ಪೂಜಿತಃ ।
ಗತಃ ಸ್ವರ್ಗಂ ಮಹಾತ್ಮಾಸೌ ವೀರೇಣಾನೇನ ಕರ್ಮಣಾ ॥ ೩ ॥

---

## ನಲವತ್ತೈದನೆಯ ಅಧ್ಯಾಯವು

೧. ಸುಕಲೆಯು ಹೇಳಿದಳು :—ಅನಂತರ ಶೂರರೂ ಕ್ರೂರರೂ, ಭಯಂಕರರೂ ಆದ ಬೇಡರೆಲ್ಲಾ ಕೈಯಲ್ಲಿ ಬಲೆಯನ್ನು ಹಿಡಿದುಕೊಂಡು ಉಳಿದಿರುವ ಹೆಣ್ಣು ಹಂದಿಯನ್ನು ಹಿಡಿಯಲು ಹೊರಟರು.

೨. ತನ್ನ ಗಂಡನು, ಮಕ್ಕಳು, ಮೊಮ್ಮಕ್ಕಳು ಮೊದಲಾದವರೊಡನೆ ಯುದ್ಧ ಮಾಡಿ ಮಡಿದುದನ್ನು ನೋಡಿ ಹೆಣ್ಣುಹಂದಿಯು ತಾನೂ ಕೂಡ ನಾಲ್ಕು ಮಕ್ಕಳೊಡನೆ ಕೂಡಿ ಯುದ್ಧಕ್ಕೆ ನಿಂತಿತು.

೩. ನನ್ನ ಗಂಡನು ಯೋಚಿಸಿದಂತೆಯೇ ಆಯಿತು. ಆ ಮಹಾತ್ಮನು ವೀರನಂತೆ ಯುದ್ಧಮಾಡಿ ದೇವರ್ಷಿಗಳಿಂದ ಗೌರವಿಸಲ್ಪಟ್ಟು, ಸ್ವರ್ಗವನ್ನು ಹೊಂದಿದನು.

**ಅನೇನಾಪಿ ಯಥಾ ಯಾಸ್ಯೇ ಸ್ವರ್ಗಂ ಭರ್ತಾ ಸ ತಿಷ್ಠತಿ ।**
**ತಥಾ ಸುನಿಶ್ಚಿತಂ ಕೃತ್ವಾ ಪುತ್ರಾನ್ಪ್ರತಿ ವಿಚಿಂತಿತಂ ॥ ೪ ॥**

**ಯದಾ ಜೀವಂತಿ ಮೇ ಬಾಲಾಶ್ಚತ್ವಾರೋ ವಂಶಧಾರಕಾಃ ।**
**ಭವತ್ಯಸ್ಯ ಸುವೀರಸ್ಯ ಕೋಲಸ್ಯಾಪಿ ಮಹಾತ್ಮನಃ ॥ ೫ ॥**

**ಕೇನೋಪಾಯೇನ ಪುತ್ರಾನ್ವೈ ರಕ್ಷಾಯುಕ್ತಾನ್ಕರೋಮ್ಯಹಂ ।**
**ಇತಿ ಚಿಂತಾಪರಾ ಭೂತ್ವಾ ದೃಷ್ಟ್ವಾ ಪರ್ವತಸಂಕಟಂ ॥ ೬ ॥**

**ತತ್ರ ಮಾರ್ಗಂ ಸುವಿಸ್ತೀರ್ಣಂ ನಿಷ್ಕಾಶಾಯ ಪ್ರಯಾಸ್ಯತೇ ।**
**ತಾನುವಾಚ ಮಹಾರಾಜ ಪುತ್ರಾನ್ಪ್ರತಿ ವಿಮೋಹಿತಾ ॥ ೭ ॥**

**ಯಾವತ್ತಿಷ್ಠಾಮ್ಯಹಂ ಪುತ್ರಾಸ್ತಾವದ್ಗಚ್ಛಂತು ಶೀಘ್ರಗಾಃ ।**
**ತೇಷಾಂ ಮಧ್ಯೇ ಸುತೋ ಜ್ಯೇಷ್ಠಃ ಕಥಂ ಯಾಸ್ಯಾಮಿ ಮಾತರಂ ॥ ೮ ॥**

---

೪. ನಾನೂ ಕೂಡ ಅಂತಹ ವೀರಯುದ್ಧವನ್ನೇ ಮಾಡಿ ಸ್ವರ್ಗಕ್ಕೆ ಹೋಗುತ್ತೇನೆ. ಅಲ್ಲಿ ನನ್ನ ಗಂಡನು ನನಗಾಗಿ ಕಾದಿರುವನು, ಎಂದು ನಿಶ್ಚಯಿಸಿ ತನ್ನ ಮಕ್ಕಳ ಪಾಡೇನೆಂದು ಯೋಚಿಸಿತು.

೫. ಇನ್ನೂ ಮರಿಗಳಾದ ಈ ನನ್ನ ನಾಲ್ಕು ಮಕ್ಕಳು ಬದುಕಿದರೆ, ಈ ವೀರನ ವಂಶವು ಉಳಿದಂತಾಗುತ್ತದೆ. ಇವರು ಬದುಕುವಂತೆ ಏನು ಉಪಾಯ ಮಾಡಲಿ ?

೬. ಈ ರೀತಿಯಾಗಿ ಯೋಚಿಸಿ, ಆ ಪರ್ವತಪ್ರದೇಶದಲ್ಲಿ ಇದುಕುದಿದುಕು ಪ್ರದೇಶವನ್ನು ನೋಡಿತು. ಅಲ್ಲಿ ದಾರಿಯು ದೊಡ್ಡದಾಗಿದ್ದು ತಪ್ಪಿಸಿಕೊಂಡು ಹೋಗುವುದಕ್ಕೆ ಸಾಧ್ಯವಾಗಿ ಕಂಡಿತು.

೭. ಪುತ್ರವ್ಯಾಮೋಹದಿಂದ ಆ ಹಂದಿಯು–ಎಲೈ ಮಕ್ಕಳಿರಾ, ನಾನು ಇಲ್ಲಿ ನಿಂತಿರುವುದರೊಳಗೆ ನೀವು ಹೊರಟುಹೋಗಿರಿ ಎಂದು ಹೇಳಿತು.

೮-೯. ಆ ಮರಿಗಳಲ್ಲಿ ಹಿರಿಯ ಮರಿಯು ತನ್ನ ತಾಯಿಯನ್ನೂ ಕುರಿತು, ಅಮ್ಮಾ, ನನ್ನ ಜೀವದ ಮೇಲಿನ ಆಸೆಯಿಂದ ನಿಮ್ಮೆಲ್ಲರನ್ನೂ ಬಿಟ್ಟು ಹೋಗಲೇ ? ಅಂತಹ ನನ್ನ ಬದುಕನ್ನು ಸುಡು. ತಂದೆಯನ್ನು ಕೊಂದ ವೈರವನ್ನು ತೀರಿಸಿ

ತ್ಯಕ್ತ್ವಾ ಸ್ವಜೀವಲೋಭಾಚ್ಚ ಧಿಙ್ಮಾಂ ಮಾತಃ ಸ್ವಜೀವಿತಂ ।
ಪಿತೃವೈರಂ ಕರಿಷ್ಯಾಮಿ ಸಾಧಯಿಷ್ಯೇ ರಣೇ ರಿಪುಂ ॥ ೯ ॥

ಗೃಹೀತ್ವಾ ತ್ವಂ ಕನೀಯಸೋ ಭ್ರಾತೄಂಸ್ತ್ರೀನ್ದುರ್ಗಕಂದರಂ ॥
ಮಾತರಂ ಪಿತರಂ ತ್ಯಕ್ತ್ವಾ ಯೋ ಯಾತಿ ಸ ಹಿ ಪಾಪಧೀಃ ।
ನರಕಂ ಚ ಪ್ರಯಾತ್ಯೇವ ಕೃಮಿಕೋಟಿಸಮಾಕುಲಂ ॥ ೧೦ ॥

ತಮುವಾಚ ಸುದುಃಖಾರ್ತಾ ತ್ವಾಂ ತ್ಯಕ್ತ್ವಾಹಂ ಕಥಂ ಸುತ ।
ಪ್ರಯಾಸ್ಯಾಮಿ ಮಹಾಪಾಪಾ ತ್ರಯೋ ಗಚ್ಛಂತು ಮೇ ಸುತಾಃ ॥ ೧೧ ॥

ತ್ರಯಸ್ತು ಪುರತಃ ಕೃತ್ವಾ ದ್ವಾಭ್ಯಾಮಪಿ ಚ ಭೂಪತೇ ।
ಜಗ್ಮತುರ್ದುರ್ಗಮಾರ್ಗೇಣ ತೇಷಾಮೇವ ಸುಪಶ್ಯತಾಂ ।
ತೇಜಸಾ ಸುಬಲೇನಾಪಿ ಗರ್ಜಂಶ್ಚ ಪುನಃ ಪುನಃ ॥ ೧೨ ॥

ಅಥ ತೇ ಲುಬ್ಧಕಾಶ್ಶೂರಾಃ ಸಂಪ್ರಾಪ್ತಾಶ್ಚ ಸ್ವರಂಹಸಾ ।
ಯಥಾ ತೇನಾಪಿ ಮಾರ್ಗೇಣ ತ್ರಯಸ್ತೇ ಪ್ರೇಷಿತಾ ನೃಪಂ ॥ ೧೩ ॥

---

ಕೊಳ್ಳುತ್ತೇನೆ. ಯುದ್ಧರಂಗದಲ್ಲಿ ಶತ್ರುವನ್ನು ಕೊಲ್ಲುತ್ತೇನೆ. ನೀನು ಈ ಚಿಕ್ಕ ಮರಿಗಳನ್ನು ಕರೆದುಕೊಂಡು ಈ ಬೆಟ್ಟದ ಗುಹಾಪ್ರದೇಶಕ್ಕೆ ಹೋಗು.

೧೦. ತಾಯಿತಂದೆಗಳನ್ನು ಅವರ ಕಷ್ಟಕಾಲದಲ್ಲಿ ತ್ಯಜಿಸಿ ಹೋಗತಕ್ಕ ಪಾಪಿಯು ಕ್ರಿಮಿಕೀಟಗಳಿಂದ ಕೂಡಿ ಘೋರವಾಗಿರುವ ನರಕವನ್ನು ಹೊಂದುತ್ತಾನೆ. ಎಂದು ಹೇಳಿತು.

೧೧. ಅಪ್ಪಾ, ಮಗನೇ, ನಿನ್ನನ್ನು ಬಿಟ್ಟು ಪಾಪಿಯಾದ ನಾನು ಹೇಗೆ ಹೋಗಲಿ? ಈ ಉಳಿದ ಮೂವರು ಚಿಕ್ಕವರೂ ಹೊರಟುಹೋಗಿ ಬದುಕಿಕೊಳ್ಳಲಿ ಎಂದು ಅದರ ತಾಯಿಯು ಹೇಳಿತು.

೧೨. ಈ ಎರಡು ದೊಡ್ಡ ಹಂದಿಗಳೂ ಹಿಂದೆ ನಿಂತುಕೊಂಡು ಆ ಮೂರು ಮರಿಗಳನ್ನೂ ದುರ್ಗದ ಮಾರ್ಗದಿಂದ ಆ ಬೇಡರು ನೋಡುತ್ತಿರುವಂತೆಯೇ ಕಳುಹಿಸಿದವು. ಆಗ ಶಕ್ತಿಯಿಂದಲೂ, ಧೈರ್ಯದಿಂದಲೂ ಪದೇಪದೇ ಗರ್ಜಿಸುತ್ತಿದ್ದವು.

೧೩. ಇದನ್ನು ನೋಡಿ ಶೂರರಾದ ಆ ಬೇಡರು ಮೂರು ಚಿಕ್ಕ ಹಂದಿಗಳು ಹೋದ ದಾರಿಯನ್ನೂ ಅಡ್ಡಗಟ್ಟಿ ತಮ್ಮ ಪರಾಕ್ರಮದಿಂದ ಎದುರಿಸಿ ನಿಂತರು.

**ತಿಷ್ಠೇತೇ ತತ್ಪಥಂ ರುದ್ಧ್ವಾ ದ್ವಾವೇತೌ ಜನನೀಸುತೌ ।**
**ಲುಬ್ಧಕಾಶ್ಚ ತತಃ ಪ್ರಾಪ್ತಾಃ ಖಡ್ಗಬಾಣಾಧನುರ್ಧರಾಃ ॥ ೧೪ ॥**

**ಪ್ರಹನ್ಯುಸ್ತೋಮರೈಸ್ತೀಕ್ಷ್ಣೈಶ್ಚಕ್ರೈಶ್ಚ ಮುಸಲೈಸ್ತತಃ ।**
**ಮಾತರಂ ಪೃಷ್ಠತಃ ಕೃತ್ವಾ ತನಯೋ ಯುಯುಧೇ ಸ ತೈಃ ॥ ೧೫ ॥**

**ದಂಷ್ಟ್ರಯಾ ನಿಹತಾಃ ಕೇಚಿತ್ಕೇಚಿತ್ತುಂಡೇನ ಪಾತಿತಾಃ ।**
**ಸಂಜಘಾನ ಖುರಾಗ್ರೈಶ್ಚ ಶೂರಾಶ್ಚ ಪತಿತಾ ರಣೇ ॥ ೧೬ ॥**

**ಯುಯುಧೇ ಶೂಕರಃ ಸಂಖ್ಯೇ ದೃಷ್ಟೋ ರಾಜ್ಞಾ ಮಹಾತ್ಮನಾ ।**
**ಪಿತುಸ್ಸಕಾಶಾಚ್ಛೂರೋಽಯಮಿತಿ ಜ್ಞಾತ್ವಾ ಸ ಸಂಮುಖಃ ॥ ೧೭ ॥**

---

೧೪. ತಾಯಿಮಕ್ಕಳಾದ ಆ ಎರಡು ಹಂದಿಗಳೂ ಆ ದಾರಿಯನ್ನು ಕಟ್ಟಿ ಅಡ್ಡಲಾಗಿ ನಿಂತವು. ಬೇಡರೂ ಸಹ ತಮ್ಮ ಕತ್ತಿ, ಬಿಲ್ಲು ಮೊದಲಾದ ಆಯುಧ ಗಳನ್ನು ಹಿಡಿದು ಅವುಗಳ ಬಳಿಗೆ ಹೋದರು.

೧೫. ಆ ಮೇಲೆ ಅವರು ತೋಮರ, ಚಕ್ರ, ಮುಸಲ ಮೊದಲಾದ ಹರಿತ ವಾದ ಆಯುಧಗಳಿಂದ ಆ ಹಂದಿಗಳನ್ನು ಹೊಡೆಯುತ್ತಿದ್ದರು. ಆ ಗಂಡು ಹಂದಿಯು ತನ್ನ ತಾಯಿಯನ್ನು ಹಿಂದೆ ನಿಲ್ಲಿಸಿ ತಾನು ಆ ಬೇಡರೊಡನೆ ಯುದ್ಧ ಮಾಡಿತು.

೧೬. ಕೆಲವರನ್ನು ಕೋರೆದಾಡೆಯಿಂದ ತಿವಿದು ಕೊಂದಿತು. ಕೆಲವರನ್ನು ಮುಸುಡಿಯಿಂದ ಕೊಂದಿತು. ಮತ್ತೆ ಕೆಲವರನ್ನು ಕಾಲಿನ ಗೊರಸುಗಳಿಂದ ತುಳಿದು ಕೊಂದಿತು. ಈ ರೀತಿ ಅನೇಕ ಶೂರರು ಆ ಯುದ್ಧದಲ್ಲಿ ಮಡಿದರು.

೧೭. ಈ ರೀತಿ ಹಂದಿಯು ಯುದ್ಧಮಾಡುತ್ತಿದ್ದುದನ್ನು ರಾಜನು ನೋಡಿ ದನು. ಇದು ತನ್ನ ತಂದೆಯಿಂದ ಯುದ್ಧಶಿಕ್ಷಣವನ್ನು ಪಡೆದು ಪರಾಕ್ರಮದಿಂದ ಯುದ್ಧಮಾಡುತ್ತಿದೆ ಎಂದು ತಿಳಿದು ಅದರೊಡನೆ ಯುದ್ಧಮಾಡಲು ಎದುರಿಗೆ ಹೋದನು.

**ಬಾಣಪಾಣಿರ್ಮಹಾತೇಜಾ ಮನುಸೂನುಃ ಪ್ರತಾಪವಾನ್ ।**
**ನಿಶಿತೇನಾಪಿ ಬಾಣೇನ ಅರ್ಧಚಂದ್ರಾನುಕಾರಿಣಾ ॥ ೧೮ ॥**

**ರಾಜ್ಞಾ ಹತಃ ಪಪಾತೋರ್ವ್ಯಾಂ ವಿದ್ಧೋರಸ್ಕೋ ಮಹಾತ್ಮನಾ ।**
**ಮಮಾರ ಸಹಸಾ ಭೂಮೌ ಪಪಾತ ಸ ಹಿ ಶೂಕರಃ ॥ ೧೯ ॥**

**ಪುತ್ರಮೋಹಾತ್ಪರಂ ವಿಗ್ನಾ ತಸ್ಯೋಪರಿ ಗತಾ ಸ್ವಯಂ ।**
**ತಯಾ ಚ ನಿಹತಾಃ ಶೂರಾಸ್ತುಂಡಘಾತೈರ್ಮಹೀತಲೇ ॥ ೨೦ ॥**

**ನಿಪೇತುರ್ಲುಬ್ಧಕಾಃ ಶೂರಾಃ ಕತಿ ನಷ್ಟಾ ಮೃತಾ ನೃಪ ।**
**ದ್ರಾವಯಂತೀ ಮಹತ್ಸೈನ್ಯಂ ದಂಷ್ಟ್ರಯಾ ಶೂಕರೀ ತತಃ ॥ ೨೧ ॥**

**ಯಥಾ ಕೃತ್ಯಾ ಸಮುದ್ಭೂತಾ ಮಹಾಭಯವಿದಾಯಿಕಾ ।**
**ತಮುವಾಚ ತತೋ ರಾಜ್ಞೀ ದೇವರಾಜಸುತಾ ಪ್ರಿಯಾ ॥ ೨೨ ॥**

---

೧೮-೧೯. ಪ್ರತಾಪಶಾಲಿಯಾದ ರಾಜನು ಬಾಣಪಾಣಿಯಾಗಿ, ಅರ್ಧಚಂದ್ರಾಕಾರವಾದ ಹರಿತವಾದ ಬಾಣದಿಂದ ಆ ಹಂದಿಯನ್ನು ಎದೆಯಲ್ಲಿ ಹೊಡೆಯಲು, ಆ ಏಟಿನಿಂದ ಅದು ಭೂಮಿಯಲ್ಲಿ ಬಿದ್ದು ಸತ್ತಿತು.

೨೦. ಪುತ್ರನ ಮೇಲಿನ ಪ್ರೀತಿಯಿಂದ ದುಃಖಗೊಂಡು ಆ ಹೆಣ್ಣುಹಂದಿಯು ಅವರ ಮೇಲೆ ನುಗ್ಗಿ ಮುಸುಡಿಯಿಂದ ಅನೇಕರನ್ನು ಕೊಂದಿತು.

೨೧. ಆ ಹಂದಿಯು ಆ ಸೈನ್ಯವನ್ನು ಓಡಿಸಿಕೊಂಡು ಹೋಗಿ ತನ್ನ ಕೋರೆ ದಾಡೆಯಿಂದ ಅನೇಕ ಬೇಡರನ್ನು ಸಿಗಿಯಿತು. ಕೆಲವರು ಗಾಯಗೊಂಡರು, ಕೆಲವರು ಸತ್ತರು. ಮತ್ತೆ ಕೆಲವರು ಹೆದರಿ ಓಡಿಹೋದರು.

೨೨. ಮಹಾ ಭಯಂಕರವಾದ ಮಾಟದಿಂದ ಬೊಂಬೆಯು ಉತ್ಪನ್ನವಾಗಿ ಎಲ್ಲರನ್ನೂ ಹೇಗೆ ನಾಶಮಾಡುವುದೋ ಹಾಗೆ ಆ ಹಂದಿಯು ಆ ಸೈನ್ಯವನ್ನು ಧ್ವಂಸಮಾಡಿತು. ಅದನ್ನು ನೋಡಿ ರಾಜನ ಪತ್ನಿಯು ರಾಜನನ್ನು ಕುರಿತು-

**ಅನಯಾ ನಿಹತಂ ರಾಜನ್ಮಹತ್ಸೈನ್ಯಂ ತವೈವ ಹಿ ।**
**ಕಸ್ಮಾದುಪೇಕ್ಷಸೇ ಕಾಂತ ತನ್ಮೇ ತ್ವಂ ಕಾರಣಂ ವದ ॥ ೨೩ ॥**

**ತಾಮುವಾಚ ಮಹಾರಾಜೋ ನಾಹಂ ಹನ್ಮಿ ಇಮಾಂ ಸ್ತ್ರಿಯಂ ।**
**ಮಹಾದೋಷಃ ಪ್ರಿಯೇ ದೃಷ್ಟಃ ಸ್ತ್ರೀವಧೇ ದೈವತೈಃ ಕಿಲ ॥ ೨೪ ॥**

**ತಸ್ಮಾನ್ನ ಘಾತಯೇ ನಾರೀಂ ಪ್ರೇಷಯೇಽಹಂ ನ ಕಂಚನ ।**
**ಅಸ್ಯಾ ವಧನಿಮಿತ್ತಾರ್ಥೇ ಪಾಪಾದ್ಬಿಭೇಮಿ ಸುಂದರಿ ॥ ೨೫ ॥**

**ಏವಮುಕ್ತ್ವಾ ತದಾ ರಾಜಾ ವಿರರಾಮ ಮಹಾಮತಿಃ ।**
**ಲುಬ್ಧಕೋ ಭಾರ್ಗವೋ ನಾಮ ದದೃಶೇ ಸ ತು ಶೂಕರೀಂ ॥ ೨೬ ॥**

**ಕುರ್ವತೀಂ ಕದನಂ ತೇಷಾಂ ದುಃಸಹಾಂ ಸುಭಟೈರಪಿ ।**
**ಪ್ರವಿವ್ಯಾಧ ಸುವೇಗೇನ ಬಾಣೇನ ನಿಶಿತೇನ ಹಿ ॥ ೨೭ ॥**

**ಸಂಲಗ್ನೇನ ಸುಬಾಣೇನ ಶೋಣಿತೇನ ಪರಿಪ್ಲುತಾ ।**
**ಶೋಭಮಾನಾ ತ್ವರಂ ಪ್ರಾಪ್ತಾ ವೀರಶ್ರಿಯಾ ಸಮಾಕುಲಾ ॥ ೨೮ ॥**

---

೨೩. ಈ ಹಂದಿಯು ಈ ದೊಡ್ಡ ಸೈನ್ಯವನ್ನು ನಾಶಮಾಡುತ್ತಿರುವುದನ್ನು ನೋಡಿಯೂ ನೀನು ಏತಕೋಸ್ಕರ ಉಪೇಕ್ಷೆಯಿಂದಿರುವೆ? ಅದರ ಕಾರಣವೇನು? ಎಂದು ಕೇಳಿದಳು.

೨೪. ಈ ಹೆಣ್ಣುಹಂದಿಯನ್ನು ನಾನು ಕೊಲ್ಲುವುದಿಲ್ಲ. ಸ್ತ್ರೀವಧೆಯನ್ನು ಮಾಡಿದರೆ ಮಹಾ ದೋಷವೆಂದು ದೇವತೆಗಳು ಹೇಳಿದ್ದಾರೆ.

೨೫. ಆದುದರಿಂದ ಪಾಪಕ್ಕೆ ಹೆದರುತ್ತೇನೆ. ಹೆಂಗಸನ್ನು ನಾನು ಕೊಲ್ಲುವುದಿಲ್ಲ. ಅದರ ವಧೆಗೋಸ್ಕರ ಯಾರನ್ನೂ ಕಳುಹಿಸುವುದಿಲ್ಲ ಎಂದು ಹೇಳಿ ರಾಜನು ಸುಮ್ಮನಾದನು.

೨೬-೨೭. ಭಾರ್ಗವನೆಂಬ ಬೇಡನು, ಈ ಹಂದಿಯು ಭಟರೊಡನೆ ಕ್ರೂರವಾದ ಯುದ್ಧಮಾಡುತ್ತಿರುವುದನ್ನು ನೋಡಿ ಹರಿತವಾದ ಬಾಣದಿಂದ ಅದನ್ನು ಹೊಡೆದನು.

೨೮. ಆ ಬಾಣವು ಅದರ ಶರೀರದಲ್ಲಿ ನಾಟಿ ರಕ್ತಸುರಿಯುತ್ತಿರಲು, ಆ ಹಂದಿಯು ಕೋಪಗೊಂಡು ಇನ್ನೂ ಹೆಚ್ಚಿನ ಪರಾಕ್ರಮದಿಂದ ಯುದ್ಧಮಾಡಲು ಮೊದಲುಮಾಡಿತು.

**ತುಂಡೇನ ನಿಹತಂ ಸಂಖ್ಯೇ ಝುರ್ಝುರಂ ತು ತಯಾ ಪುನಃ ।**
**ಪತಮಾನೇನ ತೇನಾಪಿ ಝುಣಂಝುಣಹತಾ ತದಾ ॥ ೨೯ ॥**

**ಖಡ್ಗೇನ ನಿಶಿತೇನಾಪಿ ಪಪಾತ ವಿದಲೀಕೃತಾ ।**
**ಶ್ವಸಮಾನಾ ರಣೇ ರಾಜನ್ಮೂರ್ಛಾಂ ಯಾತಿ ಪರಿಪ್ಲುತಾ ॥ ೩೦ ॥**

**ದುಃಖೇನ ಮಹತಾವಿಷ್ಟಾ ಜೀವಮಾನಾ ಮಹೀತಲೇ ॥ ೩೧ ॥**

**ಇತಿ ಶ್ರೀಮಹಾಪುರಾಣೆ ಪಾದ್ಮೇ ಭೂಮಿಖಂಡೆ**
**ಸುಕಲಾಚರಿತೇ ಪಂಚಚತ್ವಾರಿಂಶೋಽಧ್ಯಾಯಃ ॥**

---

೨೯-೩೦. ಆ ಹಂದಿಯು ತನ್ನ ಮುಸುಡಿಯಿಂದಲೇ ಅನೇಕರನ್ನು ಆ ಯುದ್ಧರಂಗದಲ್ಲಿ ಕೊಂದು ಕೆಡವಿತು. ರಕ್ತಸ್ರಾವದಿಂದ ದುರ್ಬಲವಾಗಿದ್ದರೂ ಪರಾಕ್ರಮದಿಂದ ಯುದ್ಧಮಾಡುತ್ತಿರುವ ಆ ಹಂದಿಯು ಝಣತ್ಕಾರದಿಂದ ಶಬ್ದ ಮಾಡುತ್ತಿರುವ ಕತ್ತಿಯ ಏಟಿನಿಂದ ಹೊಡೆಯಲ್ಪಟ್ಟು ಶರೀರವು ಸೀಳಿಹೋಗಲು ಭೂಮಿಯ ಮೇಲೆ ಬಿದ್ದಿತು.

೩೧. ದುಃಖದಿಂದಲೂ, ಯಾತನೆಯಿಂದಲೂ, ನಿಟ್ಟುಸಿರುಬಿಡುತ್ತಾ ಮೂರ್ಛೆಗೊಂಡು ನೆಲದ ಮೇಲೆ ಬಿದ್ದಿತು. ಆದರೂ ಜೀವದಿಂದಿತ್ತು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ ಷಟ್ಚತ್ವಾರಿಂಶೋಽಧ್ಯಾಯಃ

॥ ಸುಕಲೋವಾಚ ॥

ಶ್ವಸತೀಂ ಶೂಕರೀಂ ದೃಷ್ಟ್ವಾ ಪತಿತಾಂ ಪುತ್ರವತ್ಸಲಾಂ ।
ಸುದೇವಾ ಕೃಪಯಾವಿಷ್ಟಾ ಗತಾ ತಾಂ ದುಃಖಿತಾಂ ಪ್ರತಿ ॥ ೧ ॥

ಅಭಿಷಿಚ್ಯ ಮುಖಂ ತಸ್ಯಾಃ ಶೀತಲೇನೋದಕೇನ ವಾ ।
ಪುನಃ ಸರ್ವಾಂಗಮೇವಾಪಿ ದುಃಖಿತಾಂ ರಣಶಾಲಿನೀಂ ॥ ೨ ॥

ಪುಣ್ಯತೋಯೇನ ಶೀತೇನ ಸಾ ಉವಾಚಾಭಿಷಿಂಚತೀಂ ।
ಉವಾಚ ಮಾನುಷೀಂ ವಾಚಂ ಸುಸ್ವರಂ ನೃಪತೇಃ ಪ್ರಿಯಾಂ ॥ ೩ ॥

---

## ನಲವತ್ತಾರನೆಯ ಅಧ್ಯಾಯವು.

೧. ಸುಕಲೆಯು ಹೇಳಿದಳು:—ಮಕ್ಕಳ ಮೇಲಿನ ಪ್ರೀತಿಯಿಂದ ಯುದ್ಧ ಮಾಡಿ ಗಾಯಗೊಂಡು ಭೂಮಿಯಲ್ಲಿ ಬಿದ್ದು ನಿಟ್ಟುಸಿರು ಬಿಡುತ್ತಿರುವ ಆ ಹಂದಿಯನ್ನು ನೋಡಿ, ಆ ರಾಜನ ಹೆಂಡತಿಯಾದ ಸುದೇವೆಯು ಖೇದಗೊಂಡು ಅದರ ಬಳಿಗೆ ಹೋದಳು.

೨-೩. ತಣ್ಣಗಿರುವ, ಗಂಗಾನದಿಯ ಪವಿತ್ರೋದಕದಿಂದ ಅದರ ಶರೀರವನ್ನು ತಣ್ಣಗಾಗುವಂತೆ ಚಿಮುಕಿಸಿ, ಬಾಯಿಗೂ ನೀರುಬಿಟ್ಟು ಅದನ್ನು ಉಪಚರಿಸಿದಳು. ಆ ಹಂದಿಯೂ ಆಗ ಸುಸ್ವರವಾದ ಮನುಷ್ಯಮಾತಿನಿಂದ ರಾಣಿಯನ್ನು ಕುರಿತಿಂತೆಂದಿತು.

ಭದ್ರಂ ಭವತು ತೇ ದೇವಿ ತ್ವಭಿಷಿಕ್ತಾ ತ್ವಯಾ ಯದಿ ।
ಸಂಸ್ಪರ್ಶಾದ್ದರ್ಶನಾತ್ತೇಽದ್ಯ ಗತೋ ಮೇ ಪಾಪಸಂಚಯಃ ॥ ೪ ॥

ತದಾಕರ್ಣ್ಯ ಮಹದ್ವಾಕ್ಯಮದ್ಭುತಾಕಾರಸಂಯುತಂ ।
ಚಿತ್ರಮೇತನ್ಮಯಾ ದೃಷ್ಟಂ ಕೃತಂ ತ್ರೇತಾನಯಂ ಕದಾ ॥ ೫ ॥

ಪಶುಜಾತಿಮತೀ ಚೇಯಂ ಸೌಷ್ಠವಂ ಭಾಷತೇ ಸ್ಫುಟಂ ।
ಸ್ವರವ್ಯಂಜನಸಂಪನ್ನಂ ಸಂಸ್ಕೃತಮುತ್ತಮಂ ಮಮ ॥ ೬ ॥

ಹರ್ಷೇಣ ವಿಸ್ಮಯೇನಾಪಿ ಕೃತ್ವಾ ಸಾಹಸಮುತ್ತಮಂ ।
ತತ್ರಸ್ಥಾ ಸಾ ಮಹಾಭಾಗಾ ತಂ ಪತಿಂ ವಾಕ್ಯಮಬ್ರವೀತ್ ॥ ೭ ॥

ಪಶ್ಯ ರಾಜನ್ನಪೂರ್ವೇಯಂ ಸಂಸ್ಕೃತಂ ಭಾಷತೇ ಮಹತ್ ।
ಪಶುಯೋನಿಗತಾ ಚೇಯಂ ಯಥಾ ವೈ ಮಾನುಷೀ ವದೇತ್ ॥ ೮ ॥

ತದಾಕರ್ಣ್ಯ ತತೋ ರಾಜಾ ಸರ್ವಜ್ಞಾನವತಾಂ ವರಃ ।
ಅದ್ಭುತಮದ್ಭುತಾಕಾರಂ ಯನ್ನ ದೃಷ್ಟಂ ಶ್ರುತಂ ಮಯಾ ॥ ೯ ॥

---

೪. ಅಮ್ಮಾ, ನಿನಗೆ ಮಂಗಳವಾಗಲಿ, ನೀನು ನನ್ನ ಮೇಲೆ ನೀರು ಚಿಮುಕಿಸಿ ಬಾಯಿಗೆ ನೀರು ಬಿಟ್ಟಿದ್ದರಿಂದಲೂ, ನಿನ್ನ ಹಸ್ತಸ್ಪರ್ಶದಿಂದಲೂ ನನ್ನ ಪಾಪಗಳೆಲ್ಲವೂ ಈಗ ನಾಶವಾದವು ಎಂದು ಹೇಳಿತು.

೫. ಮನುಷ್ಯಭಾಷೆಯಲ್ಲಿ ಸ್ಫುಟವಾಗಿ ಆ ಹಂದಿಯು ಮಾತನಾಡಿದುದನ್ನು ಕಂಡು ಆ ರಾಜಪತ್ನಿಯು ಅಚ್ಚರಿಗೊಂಡು—ಇದೇನು? ಆಶ್ಚರ್ಯವಾಗಿದೆಯಲ್ಲ? ತ್ರೇತಾಯುಗವಂತೆ ಪಶುಜಾತಿಯು ಮನುಷ್ಯಭಾಷೆಯನ್ನಾಡುತ್ತಿರುವುದಲ್ಲಾ !

೬-೭. ಈ ಹಂದಿಯು ಪಶುಜಾತಿಗೆ ಸೇರಿದ್ದಾದರೂ, ಸ್ವರವ್ಯಂಜನಗಳನ್ನು ಸ್ಫುಟವಾಗಿ ಉಚ್ಚರಿಸುತ್ತಾ ಉತ್ತಮವಾದ ಸಂಸ್ಕೃತಭಾಷೆಯನ್ನಾಡುತ್ತಿರುವುದು ಎಂದು ಸಂತೋಷಾಶ್ಚರ್ಯಗಳಿಂದ ಕೂಡಿ ತನ್ನ ಪತಿಯನ್ನು ಕುರಿತು-

೮. ಎಲೈ ರಾಜನೇ ಈ ಅಪೂರ್ವವಿಷಯವನ್ನು ನೋಡು. ಈ ಹಂದಿಯು ಪಶುಜಾತಿಯಲ್ಲಿ ಹುಟ್ಟಿದರೂ ಮನುಷ್ಯರು ಮಾತನಾಡುವಂತೆ ಮಾತನಾಡುತ್ತಿದೆ ಎಂದು ಹೇಳಲು,

೯. ಜ್ಞಾನಿಯಾದ ಆ ರಾಜನು ಅದನ್ನು ಕೇಳಿ, ಇದು ಆಶ್ಚರ್ಯವು. ಇಂತಹ ಅದ್ಭುತವಿಷಯವನ್ನು ನಾನು ಎಂದೂ ಕಂಡುಕೇಳಿ ಇಲ್ಲ.

ತಾಮುವಾಚ ತತೋ ರಾಜಾ ಸುಪ್ರಿಯಾಂ ಸುಶ್ರವಾಂ ತದಾ ।
ಪೃಚ್ಛ ಚೈನಾಂ ಶುಭಾಂ ಕಾಂತೇ ಕಾ ಚೇಯಂ ತು ಭವಿಷ್ಯತಿ ॥ ೧೦ ॥

ಶ್ರುತ್ವಾ ತು ನೃಪತೇರ್ವಾಕ್ಯಂ ಸಾ ಪಪ್ರಚ್ಛ ಚ ಶೂಕರೀಂ ।
ಕಾ ಭವಿಷ್ಯಸಿ ತ್ವಂ ಭದ್ರೇ ಚಿತ್ರಂ ತೇ ದೃಶ್ಯತೇ ಬಹು ॥ ೧೧ ॥

ಪಶುಯೋನಿಗತಾ ತ್ವಂ ವೈ ಭಾಷಸೇ ಮಾನುಷಂ ವಚಃ ।
ಸೌಷ್ಠವಂ ಜ್ಞಾನಸಂಪನ್ನಂ ವದ ಮೇ ಪೂರ್ವಚೇಷ್ಟಿತಂ ॥ ೧೨ ॥

ಭರ್ತುರ್ಶ್ಚಾಪಿ ಮಹಾಭಾಗೇ ಭಟಸ್ಯಾಪಿ ಮಹಾತ್ಮನಃ ।
ಕೋsಯಂ ಪೂರ್ವಂ ಮಹಾವೀರ್ಯೋ ಗತಃ ಸ್ವರ್ಗಂ ಪರಾಕ್ರಮ್ಯೈಃ
॥ ೧೩ ॥

ಆತ್ಮನಶ್ಚ ಸುಭರ್ತುಶ್ಚ ಸರ್ವಂ ಪೂರ್ವಾನುಗಂ ವದ ।
ಏವಮುಕ್ತ್ವಾ ಮಹಾಭಾಗಾ ವಿರರಾಮ ನೃಪೋತ್ತಮ ॥ ೧೪ ॥

॥ ಶೂಕರ್ಯುವಾಚ ॥

ಯದಿ ಪೃಚ್ಛಸಿ ಮಾಂ ಭದ್ರೇ ಮಮಾಸ್ಯ ಚ ಮಹಾತ್ಮನಃ ।
ತತ್ಸರ್ವಂ ತೇ ಪ್ರವಕ್ಷ್ಯಾಮಿ ಚರಿತಂ ಪೂರ್ವಚೇಷ್ಟಿತಂ ॥ ೧೫ ॥

---

೧೦. ಆದುದರಿಂದ, ನೀನು ಯಾರು? ನಿನ್ನ ವೃತ್ತಾಂತವೇನು? ಎಂಬುದನ್ನು ಕೇಳು ಎಂದು ತನ್ನ ಪತ್ನಿಗೆ ಹೇಳಿದನು.

೧೧. ರಾಜನ ಮಾತನ್ನು ಕೇಳಿ ಆಕೆಯು ಅದನ್ನು ಕುರಿತು, ಅಮ್ಮ, ನೀನಾರು? ಮನುಷ್ಯಭಾಷೆಯಲ್ಲಿ ಮಾತನಾಡುತ್ತಿರುವೆ. ಇದು ಬಹು ಆಶ್ಚರ್ಯವಾಗಿದೆಯಲ್ಲ?

೧೨. ನೀನು ಪಶುಜಾತಿಯಲ್ಲಿ ಹುಟ್ಟಿದ್ದರೂ, ಜ್ಞಾನದಿಂದಲೂ, ಬುದ್ಧಿಯಿಂದಲೂ ಕೂಡಿ ಮನುಷ್ಯರಂತೆ ಮಾತನಾಡುತ್ತಿರುವೆ.

೧೩. ನಿನ್ನ ಪತಿಯು ಮಹಾಭಟನಂತೆ ಪರಾಕ್ರಮದಿಂದ ಯುದ್ಧದಲ್ಲಿ ಕಾದಿ ನಮ್ಮೆದುರಿಗೆ ವೀರಸ್ವರ್ಗವನ್ನು ಪಡೆದನಷ್ಟೆ? ಆ ಮಹಾ ವೀರನಾರು?

೧೪. ಆದುದರಿಂದ ನಿನ್ನ ಮತ್ತು ನಿನ್ನ ಗಂಡನ ಪೂರ್ವ ವೃತ್ತಾಂತವನ್ನು ತಿಳಿಸು ಎಂದು ಹೇಳಿ ಸುಮ್ಮನಾದನು.

೧೫. ಆ ಹಂದಿಯು ಹೇಳಿತು:—ಅಮ್ಮ ನನ್ನ ಮತ್ತು ಮಹಾತ್ಮನಾದ ನನ್ನ ಪತಿಯ ಪೂರ್ವವೃತ್ತಾಂತವನ್ನೆಲ್ಲ ಹೇಳುತ್ತೇನೆ, ಕೇಳು.

**ಅಯಂ ಪೂರ್ವಂ ಮಹಾಪ್ರಾಜ್ಞೋ ಗಂಧರ್ವೋ ಗೀತಪಂಡಿತಃ ।**
**ರಂಗವಿದ್ಯಾಧರೋ ನಾಮ ಸರ್ವಶಾಸ್ತ್ರಾರ್ಥಕೋವಿದಃ ॥ ೧೬ ॥**

**ಮೇರುಂ ಗಿರಿವರಶ್ರೇಷ್ಠಂ ಚಾರುಕಂದರನಿರ್ಝರಂ ।**
**ತಮಾಶ್ರಿತ್ಯ ಮಹಾತೇಜಾಃ ಪುಲಸ್ತ್ಯೋ ಮುನಿಸತ್ತಮಃ ॥ ೧೭ ॥**

**ತಪಶ್ಚಕಾರ ತೇಜಸ್ವೀ ನಿರ್ವ್ಯಲೀಕೇನ ಚೇತಸಾ ।**
**ರಂಗವಿದ್ಯಾಧರಸ್ತತ್ರ ಸಂಗತಃ ಸ್ವೇಚ್ಛಯಾ ಶುಭೇ ॥ ೧೮ ॥**

**ವೃಕ್ಷಚ್ಛಾಯಾಂ ಸಮಾಶ್ರಿತ್ಯ ಗೀತಮಭ್ಯಸತೇ ತದಾ ।**
**ಸ್ವರತಾಲಸಮೋಪೇತಂ ಲಯಮಾನಸಮನ್ವಿತಂ ॥ ೧೯ ॥**

**ತತ್ತು ಶ್ರುತ್ವಾ ಮುನಿಸ್ತಸ್ಯ ಧ್ಯಾನಾಚ್ಚಲಿತಮಾನಸಃ ।**
**ಗಾಯಂತಂ ತಮುವಾಚೇದಂ ಗೀತವಿದ್ಯಾಧರಂ ಪ್ರತಿ ॥ ೨೦ ॥**

**ಭವದ್ಗೀತೇನ ದಿವ್ಯೇನ ದೇವಾ ಮುಹ್ಯಂತಿ ನಾನ್ಯಥಾ ।**
**ಸುಸ್ವರೇಣ ಸುಪುಣ್ಯೇನ ತಾಲಮಾನೇನ ಪಂಡಿತ ॥ ೨೧ ॥**

---

೧೬. ಈ ನನ್ನ ಪತಿಯು ಪೂರ್ವಜನ್ಮದಲ್ಲಿ ರಂಗವಿದ್ಯಾಧರನೆಂಬ ಗಂಧರ್ವನು. ಅವನು ಮಹಾಜ್ಞಾನಿಯಾಗಿಯೂ, ಸಂಗೀತವೇ ಮೊದಲಾದ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತನಾಗಿಯೂ ಇದ್ದನು.

೧೭-೧೮. ಒಂದಾನೊಂದು ಕಾಲದಲ್ಲಿ ಈ ರಂಗವಿದ್ಯಾಧರನೆಂಬುವನು ಮನೋಹರವಾದ ಮೇರುಪರ್ವತಕ್ಕೆ ಹೋದನು. ಅಲ್ಲಿ ಮಹಾತೇಜಸ್ವಿಯಾದ ಪುಲಸ್ತ್ಯನು ನಿರ್ಮಲವಾದ ಮನಸ್ಸಿನಿಂದ ತಪಸ್ಸುಮಾಡುತ್ತಿದ್ದನು.

೧೯. ತಪಸ್ಸು ಮಾಡುತ್ತಿದ್ದ ಪ್ರದೇಶಕ್ಕೆ ಸಮೀಪದಲ್ಲೇ ಒಂದು ಮರದ ನೆರಳಿನಲ್ಲಿ ಕುಳಿತು ಈ ರಂಗವಿದ್ಯಾಧರನು ಸ್ವರತಾಳದಿಂದಲೂ, ಲಯದಿಂದಲೂ ಕೂಡಿ ಉಚ್ಚಸ್ವರದಿಂದ ಸಂಗೀತವನ್ನು ಅಭ್ಯಾಸಮಾಡುತ್ತಿದ್ದನು.

೨೦. ಆ ಪುಲಸ್ತ್ಯಋಷಿಯು ಆ ಸಂಗೀತವನ್ನು ಕೇಳಿ, ಧ್ಯಾನದಲ್ಲಿ ಮನಸ್ಸು ಚಂಚಲವಾಗಲು, ಹಾಡುತ್ತಿರುವ ಆ ಗಂಧರ್ವನ್ನು ಕುರಿತು-

೨೧. ನೀನು ಹಾಡುವ ಹಾಡಿನ ಸ್ವರಕ್ಕೂ ತಾಳಲಯಗಳಿಗೂ ದೇವತೆಗಳೂ ಕೂಡ ಮೋಹಗೊಳ್ಳುತ್ತಾರೆ.

ಲಯಯುಕ್ತೇನ ಭಾವೇನ ಮೂರ್ಚ್ಛನಾಸಹಿತೇನ ಚ ।
ಮೇ ಮನಃ ಸ್ಖಲಿತಂ ಧ್ಯಾನಾದ್ಗೀತೇನಾನೇನ ಸುವ್ರತ ॥ ೨೨ ॥

ಇದಂ ಸ್ಥಾನಂ ಪರಿತ್ಯಜ್ಯ ಅನ್ಯತ್ಸ್ಥಾನಂ ವ್ರಜಸ್ವ ಹ ॥ ೨೩ ॥

॥ ಗೀತವಿದ್ಯಾಧರ ಉವಾಚ ॥

ಆತ್ಮಜ್ಞಾನಸಮಾಂ ವಿದ್ಯಾಮುಹಮತ್ರ ಪ್ರಸಾಧಯೇ ।
ದುಃಖಂ ನ ದದ್ಮಿ ಕಸ್ಯಾಪಿ ಸುಖಂ ಲೋಕೇಷು ಸರ್ವದಾ ॥ ೨೪ ॥

ಗೀತೇನಾನೇನ ದಿವ್ಯೇನ ಸರ್ವಾಸ್ತುಷ್ಯಂತಿ ದೇವತಾಃ ।
ಶಂಭುಶ್ಚಾಪಿ ಸಮಾನೀತೋ ಗೀತಧ್ವನಿರತೋ ದ್ವಿಜ ॥ ೨೫ ॥

ಗೀತಂ ಸರ್ವರಸಂ ಪ್ರೋಕ್ತಂ ಗೀತಮಾನಂದದಾಯಕಂ ।
ಶೃಂಗಾರಾದ್ಯಾ ರಸಾಃ ಸರ್ವೇ ಗೀತೇನಾಪಿ ಪ್ರತಿಷ್ಠಿತಾಃ ॥ ೨೬ ॥

---

೨೨-೨೩ ಲಯಭಾವ, ಮೂರ್ಚ್ಛನೆ ಇವುಗಳಿಂದ ಕೂಡಿ ನಿನ್ನ ಹಾಡಿನಿಂದ ನನ್ನ ಮನಸ್ಸೂ, ಧ್ಯಾನದಿಂದ ಹಿಂತಿರುಗಿತು. ಹಾಡು ಅಷ್ಟು ಚೆನ್ನಾಗಿದೆ. ನನ್ನ ಧ್ಯಾನಕ್ಕೆ ತೊಂದರೆಯಾಗುವುದರಿಂದ ಈ ಜಾಗವನ್ನು ಬಿಟ್ಟು ಬೇರೆ ಜಾಗಕ್ಕೆ ಹೋಗಿ ಹಾಡಬಾರದೇ ಎಂದು ಹೇಳಿದನು.

೨೪. ಗೀತವಿದ್ಯಾಧರನಿಂತೆಂದನು :—ಈ ಸಂಗೀತವಿದ್ಯೆಯು ಆತ್ಮಜ್ಞಾನ ವಿದ್ಯೆಗೆ ಸಮಾನವಾದುದು. ಈ ವಿದ್ಯೆಯು ಯಾರಿಗೂ ದುಃಖವನ್ನುಂಟು ಮಾಡುವುದಿಲ್ಲ. ಲೋಕದಲ್ಲಿ ಇದು ಎಲ್ಲರಿಗೂ ಯಾವಾಗಲೂ ಸುಖವನ್ನೇ ಉಂಟು ಮಾಡುವುದು.

೨೫. ಈ ಗೀತಧ್ವನಿಯಿಂದ ಎಲ್ಲ ದೇವತೆಗಳೂ ಸಂತೋಷಪಡುತ್ತಾರೆ. ಈಶ್ವರನು ಕೂಡ ಈ ಸಂಗೀತದಿಂದ ಸಂತುಷ್ಟನಾಗಿ ಹಾಡುವವನ ಸಮೀಪಕ್ಕೆ ಬರುತ್ತಾನೆ.

೨೬. ಹಾಡಿನಲ್ಲಿ ಎಲ್ಲ ರಸಗಳೂ ಇರುತ್ತವೆ. ಗೀತವು ಆನಂದವನ್ನೂ ಕೊಡುತ್ತದೆ. ಶೃಂಗಾರಾದಿರಸಗಳು ಗೀತವನ್ನೂ ಆಶ್ರಯಿಸಿಕೊಂಡೇ ಇರುತ್ತವೆ.

ಶೋಭೆಮಾಯಾಂತಿ ಗೀತೇನ ವೇದಾಶ್ಚತ್ವಾರ ಉತ್ತಮ ।
ಗೀತೇನ ದೇವತಾಃ ಸರ್ವಾಸ್ತೋಷಮಾಯಾಂತಿ ನಾನ್ಯಥಾ　　॥ ೨೭ ॥

ತದೇವಂ ನಿಂದಸೇ ಗೀತಮಾಮೇವಂ ಪರಿವಾದಯೇಃ ।
ನ ನ್ಯಾಯೋಽಯಂ ಮಹಾಭಾಗ ತನ್ವೈವ ಇಹ ದೃಶ್ಯತೇ　　॥ ೨೮ ॥

॥ ಪುಲಸ್ತ್ಯ ಉವಾಚ ॥

ಸತ್ಯಮುಕ್ತಂ ತ್ವಯಾಪ್ಯೇವ ಗೀತಾರ್ಥೇ ಬಹುಪುಣ್ಯದಂ ।
ಶೃಣು ತ್ವಂ ಮಾಮಕಂ ವಾಕ್ಯಂ ಮಾನಂ ತ್ಯಜ ಮಹಾಮತೇ　　॥ ೨೯ ॥

ನಾಹಂ ಗೀತಂ ಪ್ರಕುತ್ಸಾಮಿ ಗೀತಂ ವಂದಾಮಿ ನಾನ್ಯಥಾ ।
ವಿದ್ಯಾಶ್ಚತುರ್ದಶ ಸರ್ವಾ ಏಕಭಾವೇನ ಭಾವಿತಾಃ　　॥ ೩೦ ॥

ಪ್ರಾಣಿನಾಂ ಸಿದ್ಧಿಮಾಯಾಂತಿ ಮನಸಾ ನಿಶ್ಚಲೇನ ಚ ।
ತಪಶ್ಚ ತದ್ವನ್ಮಂತ್ರಾಶ್ಚ ಸಿಧ್ಯಂತ ಏಕಚಿಂತಯಾ　　॥ ೩೧ ॥

---

೨೭. ವೇದಗಳೂ ಕೂಡ ಈ ಗೀತದಿಂದ ಹಾಡಿದರೆ ಕಾಂತಿಗೊಳ್ಳುತ್ತವೆ. ಗೀತವಿಂದಲೇ ಎಲ್ಲ ದೇವತೆಗಳೂ ಸಂತೋಷವನ್ನು ಹೊಂದುತ್ತಾರೆ.

೨೮. ಇಂತಹ ಈ ಗೀತವನ್ನು ನಿಂದಿಸುತ್ತೀಯೆ. ನನ್ನನ್ನು ಬಯ್ಯುತ್ತೀಯೆ. ನೀನು ಈ ರೀತಿ ಮಾಡುವುದು ನ್ಯಾಯವೆಂಬದಾಗಿ ನನಗೆ ಕಾಣುವುದಿಲ್ಲ. ಎಂದು ನುಡಿದನು.

೨೯. ಪುಲಸ್ತ್ಯನು ಹೇಳಿದನು:—ನೀನು ಗೀತದ ವಿಷಯದಲ್ಲಿ ಹೇಳಿರು ಪ್ರದೆಲ್ಲಾ ಸರಿ. ಸತ್ಯವೆಂದು ಒಪ್ಪಲೇ ಬೇಕು ಆದರೆ ಕೋಪವನ್ನು ಬಿಟ್ಟು ನಾನು ಹೇಳುವ ಮಾತನ್ನು ಕೇಳು.

೩೦. ನಾನು ಸಂಗೀತವನ್ನು ಹಾಸ್ಯಮಾಡುತ್ತಿಲ್ಲ. ಅದನ್ನು ಪುರಸ್ಕರಿಸಿ ವಂದಿಸುತ್ತೇನೆ. ಹದಿನಾಲ್ಕು ವಿದ್ಯೆಗಳಲ್ಲಿ ಸೇರಿದ ಸಂಗೀತವಿದ್ಯೆಯು ಇತರ ವಿದ್ಯೆಗೆ ಸಮನಾದುದೆಂದು ತಿಳಿದಿದ್ದೇನೆ.

೩೧. ಆದರೆ ತಪಸ್ಸನ್ನು ಮಾಡುವಾಗ ಪ್ರಾಣಿಗಳ ಮನಸ್ಸು ನಿಶ್ಚಲವಾಗಿ ಧ್ಯಾನದಲ್ಲೇ ನಿರತವಾಗಿರುವುದರಿಂದ ಮಂತ್ರವಾಗಲೀ ತಪಸ್ಸಾಗಲಿ ಸಿದ್ಧಿಸುತ್ತದೆ. ಮನಸ್ಸು ಚಂಚಲವಾದರೆ ಸಿದ್ಧಿಸುವುದಿಲ್ಲ.

ಹೃಷೀಕಾಣಾಂ ಮಹಾವರ್ಗಶ್ಚಪಲೋಽಯಮಸಂಮತಃ ।
ವಿಷಯೇಷ್ವೇವ ಸರ್ವೇಷು ನಯತ್ಯಾತ್ಮಾನಂ ಸರ್ವದಾ ॥ ೩೨ ॥

ಚಾಲಯಿತ್ವಾ ಮನಸ್ತಸ್ಮಾದ್ಧ್ಯಾನಾದೇವ ನ ಸಂಶಯಃ ।
ಯತ್ರ ಶಬ್ದಂ ನ ರೂಪಂ ಚ ಯುವತೀ ನೈವ ತಿಷ್ಠತಿ ॥ ೩೩ ॥

ಮುನಯಸ್ತತ್ರ ಗಚ್ಛಂತಿ ತಪಃಸಿದ್ಧ್ಯರ್ಥಹೇತವೇ ।
ಅಯಂ ಗೀತಃ ಪುನೀತಸ್ತೇ ಬಹುಸೌಖ್ಯಪ್ರದಾಯಕಃ ॥ ೩೪ ॥

ತಪಸೇ ಸರ್ವದಾ ವೀರ ತಿಷ್ಠಾಮೋ ವನಸಂಸ್ಥಿತಾಃ ।
ಅನ್ಯಸ್ಥಾನಂ ಪ್ರಯಾಹಿ ತ್ವಂ ನೋ ವಾ ವಯಂ ವ್ರಜಾಮಹೇ ॥ ೩೫ ॥

॥ ಗೀತವಿದ್ಯಾಧರ ಉವಾಚ ॥

ಇಂದ್ರಿಯಾಣಾಂ ಬಲಂ ವರ್ಗಂ ಜಿತಂ ಯೇನ ಮಹಾತ್ಮನಾ ।
ಸತಪಾಃ ಕಥ್ಯತೇ ಯೋಗೀ ಸ ಚ ಧೀರಃ ಸ ಸಾಧಕಃ ॥ ೩೬ ॥

---

೩೨. ಇಂದ್ರಿಯಗಳು ಬಹು ಚಂಚಲಸ್ವಭಾವವುಳ್ಳವುಗಳು. ಇವು ಮನುಷ್ಯನನ್ನು ಯಾವಾಗಲೂ ವಿಷಯಸುಖಗಳ ಕಡೆಗೇ ಒಯ್ಯುತ್ತವೆ.

೩೩. ಆ ಸಂಗೀತಶ್ರವಣದಿಂದ ಮನಸ್ಸು ಚಂಚಲವಾಗಿ ಧ್ಯಾನಮಾಡಲು ಅಡ್ಡಿಯಾಗುವುದು. ಆದುದರಿಂದ ಶಬ್ದ, ರೂಪ (ಸೌಂದರ್ಯ) ಯುವತಿ ಇವರುಗಳಿಲ್ಲದ ಸ್ಥಳಕ್ಕೆ ಋಷಿಗಳು ಹೋಗಿ ತಪಸ್ಸು ಮಾಡುತ್ತಾರೆ.

೩೪. ತಪಸ್ಸಿದ್ಧಿಗೋಸ್ಕರ ಋಷಿಗಳು ಅಂತಹ ನಿರ್ಜನಪ್ರದೇಶಕ್ಕೆ ಹೋಗುತ್ತಾರೆ. ನಿನ್ನ ಸಂಗೀತವು ಶ್ರವಣೇಂದ್ರಿಯಕ್ಕೆ ಬಹುಸೌಖ್ಯವನ್ನು ಕೊಡುತ್ತದೆ.

೩೫. ಅದರಿಂದ ಮನಸ್ಸು ಚಂಚಲವಾಗಿ ತಪಸ್ಸಿಗೆ ವಿಘ್ನವುಂಟಾಗುವುದು. ಆದುದರಿಂದ ನಮ್ಮಂಥವರು ಯಾವಾಗಲೂ ಯಾವ ತೊಂದರೆಯೂ ಇಲ್ಲದ ವನವನ್ನೇ ಆಶ್ರಯಿಸುತ್ತೇವೆ. ಈ ಕಾರಣಕ್ಕೋಸ್ಕರ ನೀನು ಬೇರೆ ಜಾಗಕ್ಕೆ ಹೋಗು ಇಲ್ಲದಿದ್ದರೆ ನಾನೇ ಬೇರೆ ಸ್ಥಳಕ್ಕೆ ಹೋಗುತ್ತೇನೆ ಎಂದನು.

೩೬. ಗೀತವಿದ್ಯಾಧರನು ಹೇಳಿದನು—ಇಂದ್ರಿಯಗಳ ಸಮೂಹವನ್ನು ಯಾವ ಪುರುಷನು ಜಯಿಸಿರುವನೋ ಆ ಮಹಾತ್ಮನೇ ತಪಸ್ವಿ, ಯೋಗಿ, ಧೀರ, ಸಾಧಕನೆಂಬದಾಗಿ ಹೇಳಿಸಿಕೊಳ್ಳುತ್ತಾನೆ.

**ಶಬ್ದಂ ಶ್ರುತ್ವಾಥ ವಾ ದೃಷ್ಟ್ವಾ ರೂಪಮೇವಂ ಮಹಾಮತೇ ।**
**ಚಲತೇ ನೈವ ಯೋ ಧ್ಯಾನಾತ್ಸ ಧೀರಸ್ತಪಸಾಧಕಃ ॥ ೩೭ ॥**

**ಭವಂತಸ್ತೇಜಸಾ ಹೀನಾ ಜಿತೇಂದ್ರಿಯಾಸ್ತು ನಾನ್ಯಥಾ ।**
**ಸ್ವರ್ಗೇಽಪಿ ನಾಸ್ತಿ ಸಾಮರ್ಥ್ಯಂ ಮಮ ಗೀತಸ್ಯ ದೂಷಣೇ ॥ ೩೮ ॥**

**ವರ್ಜಯಂತಿ ವನಂ ಸರ್ವಂ ಹೀನವೀರ್ಯಾ ನ ಸಂಶಯಃ ।**
**ಇದಂ ಸಾಧಾರಣಂ ವಿಪ್ರ ವನಮೇವ ನ ಸಂಶಯಃ ॥ ೩೯ ॥**

**ದೇವಾನಾಂ ಸರ್ವಜೀವಾನಾಂ ಯಥಾ ಮಮ ತಥಾ ತವ ।**
**ಕಥಂ ಗಚ್ಛಾಮ್ಯಹಂ ತ್ಯಕ್ತ್ವಾ ವನಮೇವಮನುತ್ತಮಂ ॥ ೪೦ ॥**

**ಯೂಯಂ ಗಚ್ಛಂತು ತಿಷ್ಠಂತು ಯದ್ಭವ್ಯಂ ತತ್ತು ನಾನ್ಯಥಾ ।**
**ಏವಮಾಭಾಷ್ಯ ತಂ ವಿಪ್ರಂ ಗೀತವಿದ್ಯಾಧರಸ್ತದಾ ॥ ೪೧ ॥**

---

೩೭. ಸಂಗೀತಾದಿ ಶಬ್ದವನ್ನು ಕೇಳಿಯಾಗಲಿ, ಸೌಂದರ್ಯಾದಿ ರೂಪವನ್ನು ನೋಡಿಯಾಗಲಿ ಯಾವನ ಮನಸ್ಸು ಧ್ಯಾನದಿಂದ ಚಲಿಸುವುದಿಲ್ಲವೋ ಅವನೇ ಧೀರನು, ತಪಸ್ಸಾಧಕನು.

೩೮. ನಿಮಗೆ ಆ ಶಕ್ತಿಯೇ ಇಲ್ಲ. ಜಿತೇಂದ್ರಿಯರಂತೂ ಅಲ್ಲವೇ ಅಲ್ಲ. ನನ್ನ ಗೀತವನ್ನು ದೂಷಿಸುವುದಕ್ಕೆ ದೇವತೆಗಳಿಗೂ ಸಾಮರ್ಥ್ಯವಿಲ್ಲ.

೩೯. ಇಂದ್ರಿಯಗಳನ್ನು ಜಯಿಸಲು ಕೈಲಾಗದವರು ಒಂದು ವನವನ್ನು ಬಿಟ್ಟು ಮತ್ತೊಂದು ವನಕ್ಕೆ ಹೋದಮಾತ್ರಕ್ಕೆ ಆಗುವುದೇನು ? ಈ ವನದಲ್ಲಿಯೇ ತಪಸ್ಸನ್ನು ಮಾಡಲು ಅನುಕೂಲವಾಗಿರುವುದು, ಸಂಶಯವಿಲ್ಲ.

೪೦. ದೇವತೆಗಳಿಗೂ, ಇತರ ಪ್ರಾಣಿಗಳಿಗೂ, ನಿನಗೂ ಈ ವನದಲ್ಲಿ ವಾಸಿಸಲು ಎಷ್ಟರಮಟ್ಟಿಗೆ ಬಾಧ್ಯತೆಯಿರುವುದೋ ನನಗೂ ಅಷ್ಟೇ ಇರುವುದು. ಆದುದರಿಂದ ಇಂತಹ ವನವನ್ನು ಬಿಟ್ಟು ಹೇಗೆ ಹೋಗಲಿ ?

೪೧. ನಿನಗೆ ತಪ್ಪೋವಿಘ್ನವಾಗುವುದೆಂಬ ಭಯವಿದ್ದರೆ, ನೀನೇ ಹೋಗು. ಇಲ್ಲದಿದ್ದರೆ ಇರು. ನನಗೇನೂ ಭಯವಿಲ್ಲ ಎಂಬುದಾಗಿ ಆ ಗೀತವಿದ್ಯಾಧರನು ಹೇಳಿದನು.

**ಸಮಾಕರ್ಣ್ಯ ತತಸ್ತೇನ ಮುನಿನಾ ತಸ್ಯ ಉತ್ತರಂ ।**
**ಚಿಂತಯಾಮಾಸ ಮೇಧಾವೀ ಕಿಂ ಕೃತ್ವಾ ಸುಕೃತಂ ಭವೇತ್ ॥ ೪೨ ॥**

**ಕ್ಷಮಾಂ ಕೃತ್ವಾ ಜಗಾಮಾಥ ಅನ್ಯತ್ಸ್ಥಾನಂ ದ್ವಿಜೋತ್ತಮಃ ।**
**ತಪಶ್ಚಚಾರ ಧರ್ಮಾತ್ಮಾ ಯೋಗಾಸನಗತಃ ಸದಾ ॥ ೪೩ ॥**

**ಕಾಮಂ ಕ್ರೋಧಂ ಪರಿತ್ಯಜ್ಯ ಮೋಹಂ ತಥೈವ ಚ ।**
**ಸರ್ವೇಂದ್ರಿಯಾಣಿ ಸಂಯಮ್ಯ ಮನಸಾ ಸಮಮೇವ ಚ ।**
**ಏವಂ ಸ್ಥಿತಸ್ತದಾ ಯೋಗೀ ಪುಲಸ್ತ್ಯೋ ಮುನಿಸತ್ತಮಃ ॥ ೪೪ ॥**

**॥ ಸುಕಲೋವಾಚ ॥**

**ಗತೇ ತಸ್ಮಿನ್ಮಹಾಭಾಗೇ ಪುಲಸ್ತ್ಯೇ ಮುನಿಪುಂಗವೇ ।**
**ಕಾಲಾದಿಷ್ಟೇನ ತೇನಾಪಿ ಗೀತವಿದ್ಯಾಧರೇಣ ಚ ॥ ೪೫ ॥**

**ಚಿಂತಿತಂ ಸುಚಿರಂ ಕಾಲಂ ನಷ್ಟೋsಯಂ ಹಿ ಭಯಾನ್ಮಮ ।**
**ಕ್ವ ಗತಸ್ತಿಷ್ಠತೇ ಕ್ವಾಪಿ ಕಿಂ ಕರೋತಿ ಕಥಂ ಚ ಸಃ ॥ ೪೬ ॥**

---

೪೧-೪೩. ಅನಂತರ ಆ ಪುಲಸ್ತ್ಯಋಷಿಯು ಆತನ ಉತ್ತರವನ್ನು ಕೇಳಿ ಏನು ಮಾಡಿದರೆ ಒಳ್ಳೆಯದಾಗುತ್ತದೆಂದು ಯೋಚಿಸಿ ಆ ವಿದ್ಯಾಧರನನ್ನು ಕ್ಷಮಿಸಿ ತಾನೇ ಆ ಜಾಗವನ್ನು ಬಿಟ್ಟು ಬೇರೆ ಪ್ರದೇಶಕ್ಕೆ ಹೋಗಿ ಅಲ್ಲಿ ಯೋಗಾಸನವನ್ನು ಹಾಕಿ ಕುಳಿತು ತಪಸ್ಸನ್ನು ಮಾಡಲು ಆರಂಭಿಸಿದನು

೪೪. ಅಲ್ಲದೆ ಕಾಮಕ್ರೋಧಲೋಭ ಮೋಹಗಳನ್ನು ಬಿಟ್ಟು, ಇಂದ್ರಿಯಗಳನ್ನು ಸ್ವಾಧೀನಪಡಿಸಿಟ್ಟುಕೊಂಡು, ಮನಸ್ಸನ್ನು ಬಿಗಿಹಿಡಿದು ತಪಸ್ಸನ್ನು ಮಾಡುತ್ತಿದ್ದನು.

೪೫. ಸುಕಲೆಯು ಹೇಳಿದಳು:—ಆ ಋಷಿಯು ಹೊರಟುಹೋಗಲು, ಕಾಲಗತಿಯೊದಗಿದ ಆ ಗೀತವಿದ್ಯಾಧರನು—ಈ ಋಷಿಯು ನನ್ನ ಹೆದರಿಕೆಯಿಂದ ಹೊರಟುಹೋದನು. ಎಂದು ತಿಳಿದನು.

೪೬-೪೭. ಮತ್ತು ಈ ಪುಲಸ್ತ್ಯನು ಎಲ್ಲಿ ಹೋದನು? ಎಲ್ಲಿರುವನು? ಏನು ಮಾಡುತ್ತಾನೆ? ಅವನು ಮಾಡುವ ಕಾರ್ಯವೇನು? ಎಂಬುದಾಗಿ ವ್ರತ

ಜ್ಞಾತ್ವಾಯಮಾತ್ಮಜಂ ತೇನ ಏಕಾಂತವ್ರತಶಾಲಿನಂ ।
ಗತೋ ವರಾಹರೂಪೇಣ ತಸ್ಯಾಶ್ರಮಮನುತ್ತಮಂ ॥ ೪೭ ॥

ಆಸನಸ್ಥಂ ಮಹಾತ್ಮಾನಂ ತೇಜೋಜ್ವಾಲಾಸಮಾವಿಲಂ ।
ದೃಷ್ಟ್ವಾ ಚಕಾರ ವೈ ಕ್ಷೋಭಂ ವಿಪ್ರಸ್ಯ ತಸ್ಯ ಭಾಮಿನಿ ॥ ೪೮ ॥

ಧರ್ಷಯನ್ನಿಯತಂ ವಿಪ್ರಂ ತುಂಡಾಗ್ರೇಣ ಕುಚೇಷ್ಟಯಾ ।
ಪಶುಂ ಜ್ಞಾತ್ವಾ ಮಹಾರಾಜ ಕ್ಷಮತೇ ತಸ್ಯ ದುಷ್ಕೃತಂ ॥ ೪೯ ॥

ಮೂತ್ರತೇ ಪುರತೋ ಗತ್ವಾ ವಿಷ್ಠಾಂ ಚ ಕುರುತೇ ತತಃ ।
ನೃತ್ಯತೇ ಕ್ರೀಡತೇ ತತ್ರ ಪತತೇ ಪ್ರಾಂಗಣೇ ಪುನಃ ॥ ೫೦ ॥

ಪಶುಂ ಜ್ಞಾತ್ವಾ ಪರಿತ್ಯಕ್ತೋ ಮುನಿನಾ ತೇನ ಭೂಪತೇ ।
ಏಕದಾ ತು ತದಾಯಾತಸ್ತೇನ ರೂಪೇಣ ವೈ ಪುನಃ ॥ ೫೧ ॥

ಅಟ್ಟಾಟ್ಟಹಾಸೇನ ಪುನರ್ಹಾಸ್ಯಮೇವಂ ಕೃತಂ ತದಾ ।
ರೋದನಂ ಚ ಕೃತಂ ತತ್ರ ಗೀತಂ ಗಾಯತಿ ಸುಸ್ವರಂ ॥ ೫೨ ॥

---

ಶಾಲಿಯಾದ ಆ ಪುಲಸ್ತ್ಯಮುನಿಯ ವಿಷಯವನ್ನು ತಿಳಿಯಬೇಕೆಂಬ ಕುತೂಹಲದಿಂದ ಅವನ ಆಶ್ರಮಕ್ಕೆ ಹಂದಿಯ ಆಕಾರವನ್ನು ಹೊಂದಿ ಹೋದನು.

೪೮-೪೯. ಆಗ ಪುಲಸ್ತ್ಯನು ಆಸನದಲ್ಲಿ ಕುಳಿತು ತಪಸ್ಸನ್ನಾಚರಿಸುತ್ತಿದ್ದನು. ಅಗ್ನಿಯಂತೆ ತೇಜಸ್ವಿಯಾದ ಆ ಮಹಾತ್ಮನನ್ನು ನೋಡಿ ಈ ಹಂದಿಯು ಅವನ ಬಳಿ ಗಟ್ಟಿಯಾಗಿ ಕೂಗುತ್ತಾ ಅವನ ತಪಸ್ಸಿಗೆ ವಿಘ್ನವನ್ನು ಮಾಡಲು ಮೊದಲುಬಿಟ್ಟಿತು. ತನ್ನ ಮೂತಿಯಿಂದ ಆ ಋಷಿಯನ್ನ ತಿವಿದು ಹೆದರಿಸುತ್ತಿತ್ತು. ಪಶುವೆಂಬುದಾಗಿ, ಆ ಮುನಿಯು ಅದರ ಕಾರ್ಯವನ್ನು ಕ್ಷಮಿಸುತ್ತಿದ್ದನು.

೫೦-೫೧. ಇಷ್ಟೇ ಅಲ್ಲದೆ ಆ ತಪಸ್ವಿಯ ಮುಂದೆ ಹೋಗಿ ಕುಣಿದಾಡುತ್ತಾ ಜಲಮಲವಿಸರ್ಜನೆಮಾಡಿ ಅಶುಚಿಯನ್ನುಂಟುಮಾಡುತ್ತಲೂ ಇದ್ದಿತು. ಇದೆಲ್ಲ ಪಶುಪ್ರಾಣಿಯ ಸ್ವಭಾವವೆಂದು ಆ ಮುನಿಯು ಸುಮ್ಮನಿರುತ್ತಿದ್ದನು.

೫೨-೫೩. ಮತ್ತೊಂದು ಸಾರಿ ಅದೇ ಹಂದಿಯು ರೂಪದಿಂದ ಬಂದು ಆ ಮುನಿಯ ಎದುರಿಗೆ ಕೂಗಾಡುವುದು, ಹಾಸ್ಯಮಾಡುವುದು, ಅಳುವುದು, ಒಳ್ಳೆಯ

**ಚಾಲಯೇತ್ತಂ ತಥಾ ವಿಪ್ರಂ ಗೀತವಿದ್ಯಾಧರೋ ನೃಪ ।**
**ಚೇಷ್ಟಿತಂ ತಸ್ಯ ವೈ ದೃಷ್ಟ್ವಾ ಘೋಣೀ ಏಷ ಭವೇನ್ನ ಹಿ ॥ ೫೩ ॥**

**ಜ್ಞಾತ್ವಾ ತಸ್ಯ ತು ವೃತ್ತಾಂತಮಾಮೇವಂ ಪರಿಚಾಲಯೇತ್ ।**
**ಪಶುಂ ಜ್ಞಾತ್ವಾ ಮಯಾ ತ್ಯಕ್ತೋ ದುಷ್ಟ ಏಷ ಸುನಿರ್ಘೃಣಃ ॥ ೫೪ ॥**

**ಏವಂ ಜ್ಞಾತ್ವಾ ಮಹಾತ್ಮಾನಂ ಗಂಧರ್ವಾಧಮಮೇವ ಹಿ ।**
**ಚುಕೋಪ ಮುನಿಶಾರ್ದೂಲಸ್ತಂ ಶಶಾಪ ಮಹಾಮತಿಃ ॥ ೫೫ ॥**

**ಯಸ್ಮಾಚ್ಛೂಕರರೂಪೇಣ ಮಾಮೇವಂ ಪರಿಚಾಲಯೇಃ ।**
**ತಸ್ಮಾದ್ವ್ರಜ ಮಹಾಪಾಪ ಯೋನಿಂ ಚೈವ ಚ ಶೌಕರೀಂ ॥ ೫೬ ॥**

**ಶಪ್ತಸ್ತೇನಾಪಿ ವಿಪ್ರೇಣ ಗತೋ ದೇವಂ ಪುರಂದರಂ ।**
**ತಮುವಾಚ ಮಹಾತ್ಮಾನಂ ಕಂಪಮಾನೋ ವರಾನನೇ ॥ ೫೭ ॥**

**ಶೃಣು ವಾಕ್ಯಂ ಸಹಸ್ರಾಕ್ಷ ತವ ವಾಕ್ಯಂ ಕೃತಂ ಮಯಾ ।**
**ತಪ ಏವ ಹಿ ಕುರ್ವಂತಂ ದಾರುಣಂ ಮುನಿಪುಂಗವಂ ॥ ೫೮ ॥**

---

ಸ್ವರದಿಂದ ಹಾಡುವುದು ಮೊದಲಾದ ಚೇಷ್ಟೆಗಳಿಂದ ಆ ಮುನಿಯ ಮನಸ್ಸನ್ನು ಧ್ಯಾನದಿಂದ ಕದಲುವಂತೆ ಮಾಡಿತು.

೫೪-೫೬. ಅದರ ಆ ಚೇಷ್ಟೆಯನ್ನು ನೋಡಿ ಇದು ಹಂದಿಯಲ್ಲ ಎಂದು ಅದರ ವೃತ್ತಾಂತವನ್ನು ತಿಳಿದು, ಹುಂ, ಇರಲಿ, ಪಶುವೆಂದು ತಿಳಿದು ಸುಮ್ಮನೆ ಬಿಟ್ಟೆ. ಇದು ದುಷ್ಟನಾದ ದಯಾವರ್ಜಿತ ಗೀತವಿದ್ಯಾಧರನ ವ್ಯಾಪಾರವು. ಎಂದು ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿದು, ಕೋಪಗೊಂಡು ನೀನು ಹಂದಿಯ ರೂಪದಿಂದ ನನ್ನನ್ನು ಪೀಡಿಸುತ್ತಿರುವೆಯಾದುದರಿಂದ, ಪಾಪಕರವಾದ ಹಂದಿಯ ಜನ್ಮವನ್ನೇ ಹೊಂದು ಎಂದು ಶಪಿಸಿದನು.

೫೭-೬೧. ಈ ರೀತಿ ಮುನಿಯು ಶಪಿಸಲು, ಗಂಧರ್ವನು ಭಯದಿಂದ ನಡುಗುತ್ತ ದೇವೇಂದ್ರನ ಬಳಿಗೆ ಹೋಗಿ, ಎಲೈ ಇಂದ್ರನೇ ನೀನು ಹೇಳಿದಂತೆ ಮಾಡಿದೆನು. ಉಗ್ರವಾದ ತಪಸ್ಸನ್ನು ಮಾಡುತ್ತಲಿರುವ ಆ ಮುನಿಪುಂಗವನ ತಪೋವಿಘ್ನವನ್ನು ಮಾಡಿದುದರಿಂದ ಅವನು ಕೋಪಗೊಂಡು ನನ್ನನ್ನು ಶಪಿಸಿದನು. ಅದರಿಂದ ನನ್ನ

**ತಸ್ಮಾತ್ತಪಃಪ್ರಭಾವಂ ತಂ ಚಾಲಿತಂ ಕ್ಷೋಭಿತಂ ಮಯಾ ।**
**ಶಪ್ತಸ್ತೇನಾಸ್ಮಿ ವಿಪ್ರೇಣ ದೇವರೂಪಂ ಪ್ರಣಾಶಿತಂ ॥ ೫೯ ॥**

**ಪಶುಯೋನಿಂ ಗತಂ ಚೇಂದ್ರ ಮಾಮೇವಂ ಪರಿರಕ್ಷಯ ।**
**ಜ್ಞಾತ್ವಾ ತಸ್ಯ ಸ ವೃತ್ತಾಂತಂ ಗೀತವಿದ್ಯಾಧರಸ್ಯ ಚ ॥ ೬೦ ॥**

**ತೇನ ಸಾರ್ಧಂ ಗತಶ್ಚೇಂದ್ರಸ್ತಂ ಮುನಿಂ ಪ್ರತ್ಯಭಾಷತ ।**
**ದೀಯತಾಮನುಗ್ರಹೋ ನಾಥ ಸುಸಿದ್ಧೋಽಸಿ ದ್ವಿಜೋತ್ತಮ ।**
**ಕ್ಷಮ್ಯತಾಮಸ್ಯ ವೈ ಪಾಪಂ ಯದನೇನ ಹಿ ತೇ ಕೃತಂ ॥ ೬೧ ॥**

**॥ ಪುಲಸ್ತ್ಯ ಉವಾಚ ॥**

**ವಚನಾತ್ತವ ದೇವೇಶ ಕ್ಷಂತವ್ಯಂ ಚ ಮಯಾಪಿ ಹಿ ।**
**ಭವಿಷ್ಯತಿ ಮಹಾರಾಜ ಮನುಪುತ್ರೋ ಮಹಾಬಲಃ ॥ ೬೨ ॥**

**ಇಕ್ಷ್ವಾಕುರ್ನಾಮ ಧರ್ಮಾತ್ಮಾ ಸರ್ವಧರ್ಮಾನುಪಾಲಕಃ**
**ತಸ್ಯ ಹಸ್ತಾದ್ಯದಾ ಮೃತ್ಯುರಸ್ಯೈವ ಚ ಭವಿಷ್ಯತಿ ॥ ೬೩ ॥**

---

ದೇವರೂಪವು ನಾಶವಾಯಿತು. ಪಶುಯೋನಿಯನ್ನು ಹೊಂದಿದ ನನ್ನನ್ನು ನೀನೇ ಕಾಪಾಡಬೇಕು ಎಂದು ಬಿನ್ನವಿಸಿದನು.

೬೦-೬೧. ಇಂದ್ರನು ಗೀತವಿದ್ಯಾಧರನ ವೃತ್ತಾಂತವನ್ನು ತಿಳಿದು ಅವನೊಡನೆ ಆ ಋಷಿಯಿದ್ದಲ್ಲಿಗೆ ಹೋಗಿ ಆ ಋಷಿಯನ್ನು ಕುರಿತು, ಎಲೈ ಋಷಿಶ್ರೇಷ್ಠನೇ ನೀನು ತಪಸ್ಸಿದ್ಧಿಯನ್ನು ಪಡೆದ ಮಹಾತ್ಮನಾಗಿರುವೆ. ಈ ಗಂಧರ್ವನೂ ನಿನ್ನ ವಿಷಯದಲ್ಲಿ ಅಪರಾಧವನ್ನು ಮಾಡಿರುವನು, ಇವನ ತಪ್ಪನ್ನು ಕ್ಷಮಿಸಿ ಅನುಗ್ರಹಮಾಡು ಎಂದನು.

೬೨. ಪುಲಸ್ತ್ಯಮುನಿಯು ಹೇಳಿದನು :—ಎಲೈ ದೇವೇಂದ್ರನೇ, ಋಷಿಗಳಿಗೆ ಕ್ಷಮಾಗುಣವೇ ಮುಖ್ಯವಾಗಿರಬೇಕಾದುದರಿಂದಲೂ, ನಿನ್ನ ಮಾತಿನ ಮೇಲಿನ ಗೌರವಕ್ಕಾಗಿಯೂ ನಾನು ಇವನನ್ನು ಕ್ಷಮಿಸುವೆನು. ಮುಂದೆ ಬಲಿಷ್ಠನೂ, ಮನುಪುತ್ರನೂ ಆದ ಇಕ್ಷ್ವಾಕುವೆಂಬ ರಾಜನು ಹುಟ್ಟಿ ಧರ್ಮದಿಂದ ರಾಜ್ಯಭಾರ ಮಾಡುವನು.

೬೩. ಅವನ ಕೈಯಿಂದ ಈ ಹಂದಿಗೆ ಮರಣವು ಸಂಭವಿಸುವುದು. ಆಗ ಇವನು ಹಂದಿಯ ದೇಹವನ್ನು ಬಿಟ್ಟು ಸ್ವಂತವಾದ ದೇವರೂಪವನ್ನು ಪುನಃ ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ ಎಂದು ನುಡಿದನು.

**ತದ್ವೈಷ ವೈ ಸ್ವಕಂ ದೇಹಂ ಪ್ರಾಪ್ಸ್ಯತೇ ನಾತ್ರ ಸಂಶಯಃ ।**
**ಏತತ್ತೇ ಸರ್ವವೃತ್ತಾಂತಂ ತವ ಚೈವ ನಿವೇದಿತಂ ॥ ೬೪ ॥**

**ಆತ್ಮನಶ್ಚ ಪ್ರವಕ್ಷ್ಯಾಮಿ ಪತ್ಯಾ ಸಾರ್ಧಂ ಶೃಣುಷ್ವ ಹಿ ।**
**ಮಯಾ ಚ ಪಾತಕಂ ಘೋರಂ ಯತ್ಕೃತಂ ಪಾಪಯಾ ಪುರಾ ॥ ೬೫ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ**
**ವೇನೋಪಾಖ್ಯಾನೇ ಷಟ್ಚತ್ವಾರಿಂಶೋಽಧ್ಯಾಯಃ**

---

೬೪-೬೫. ಈ ರೀತಿ ನನ್ನ ಪತಿಯಾದ ಆ ಹಂದಿಯ ವೃತ್ತಾಂತವೆಲ್ಲವನ್ನೂ ಹೇಳಿದ್ದೇನೆ- ಇನ್ನು ನನ್ನ ಚರಿತ್ರೆಯನ್ನು ಹೇಳುತ್ತೇನೆ. ನಾನು ಕೂಡ ಅನೇಕ ಘೋರವಾದ ಪಾಪವನ್ನು ಮಾಡಿದ್ದೇನೆ. ನಾನು ಹೇಳುವುದನ್ನು ನಿನ್ನ ಗಂಡನೂ, ನೀನೂ ಕೇಳಿ ಎಂದಿತು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ವೇನೋಪಾಖ್ಯಾನದಲ್ಲಿ
ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತಚತ್ವಾರಿಂಶೋಽಧ್ಯಾಯಃ

॥ ಸುಕಲೋವಾಚ ॥

ಸುಶ್ರವಾ ಚಾರುಸರ್ವಾಂಗೀ ತಾಮುವಾಚಾಥ ಶೂಕರೀಂ ।
ಪಶುಯೋನಿಂ ಗತಾ ಹಿ ತ್ವಂ ಕಥಂ ವದಸಿ ಸಂಸ್ಕೃತಂ ॥ ೧ ॥

ಏವಂ ವಿಧಂ ಮಹಾಜ್ಞಾನಂ ಕಸ್ಮಾದ್ಭೂತಂ ವದಸ್ವ ಮೇ ।
ಕಥಂ ಜಾನಾಸಿ ವೈ ಭರ್ತುಶ್ಚರಿತಮಾತ್ಮನಶ್ಶುಭೇ ॥ ೨ ॥

॥ ಶೂಕರ್ಯುವಾಚ ॥

ಪಶೋರ್ಭಾವೇನ ಮೋಹೇನ ಮುಷ್ಟಾಹಂ ವರವರ್ಣಿನೀ ।
ನಿಹತಾ ಖಡ್ಗಬಾಣೈಶ್ಚ ಪತಿತಾ ರಣಮೂರ್ಧನಿ ॥ ೩ ॥

ಮೂರ್ಛಯಾಭಿಪರಿಕ್ಲಿನ್ನಾ ಜ್ಞಾನಹೀನಾ ವರಾನನೇ ।
ತ್ವಯಾಭಿಷಿಕ್ತಾ ತೋಯೇನ ಪುಣ್ಯಹಸ್ತೇನ ಸುಂದರಿ ॥ ೪ ॥

---

## ನಲವತ್ತೇಳನೆಯ ಅಧ್ಯಾಯವು.

೧-೨. ಸುಕಲೆಯು ಹೇಳಿದಳು:—ಸುಶ್ರವಳು ಅದನ್ನು ಕುರಿತು ನೀನು ಹಂದಿಯಾದರೂ ಸಂಸ್ಕೃತ ಮಾತನ್ನು ಹೇಗೆ ಆಡುತ್ತಿ ? ನಿನಗೆ ಈ ರೀತಿಯಾದ ಮಹಾಜ್ಞಾನವು ಯಾರಿಂದುಂಟಾಯಿತು ? ನಿನ್ನ ಗಂಡನ ಮತ್ತು ನಿನ್ನ ಚರಿತ್ರೆಯನ್ನು ಹೇಗೆ ತಿಳಿದುಕೊಂಡಿರುವೆ ? ಎಂದಳು.

೩-೪. ಹಂದಿಯು ಹೇಳಿತು :—ನನಗೆ ಪಶುಜಾತಿಯಲ್ಲಿದ್ದಾಗ ಜ್ಞಾನವಿರಲಿಲ್ಲ ನಾನು ಖಡ್ಗದಿಂದಲೂ ಬಾಣದಿಂದಲೂ ಹೊಡೆಯಲ್ಪಟ್ಟು ಬಿದ್ದನಂತರ ಮೂರ್ಛಿತಳಾದೆ. ಜ್ಞಾನತಪ್ಪಿತು. ಆಗ ನಿನ್ನ ಪವಿತ್ರಹಸ್ತದಿಂದ ಗಂಗೆಯ ಪವಿತ್ರೋದಕವು ನನ್ನ ಮೈಮೇಲೂ, ಬಾಯಿಯಲ್ಲಿಯೂ ಬಿದ್ದಿತು.

**ಪುಣ್ಯೋದಕೇನ ಶೀತೇನ ತವ ಹಸ್ತಗತೇನ ವೈ ।**
**ಅಭಿಷಿಕ್ತೇ ಹಿ ಮೇ ಕಾಯೇ ಮೋಹೋ ನಷ್ಟೋ ವಿಹಾಯ ಮಾಂ ॥ ೫ ॥**

**ಯಥಾ ಭಾನೋಸ್ಸುತೇಜೋಭಿರಂಧಕಾರಃ ಪ್ರಯಾತಿ ಸಃ ।**
**ತಥಾ ತವಾಭಿಷೇಕೇಣ ಮಮ ಪಾಪಂ ಗತಂ ಶುಭೇ ॥ ೬ ॥**

**ಪ್ರಸಾದಾತ್ತವ ಚಾರ್ವಂಗಿ ಲಬ್ಧಂ ಜ್ಞಾನಂ ಪುರಾತನಂ ।**
**ಪುಣ್ಯಾಂ ಗತಿಂ ಪ್ರಯಾಸ್ಯಾಮಿ ಇತಿ ಜ್ಞಾತಂ ಮಯಾ ಶುಭೇ ॥ ೭ ॥**

**ಶ್ರೂಯತಾಮಭಿಧಾಸ್ಯಾಮಿ ಪೂರ್ವವೃತ್ತಾಂತಮಾತ್ಮನಃ ।**
**ಯತ್ಕೃತಂ ತು ಮಯಾ ಭದ್ರೇ ಪಾಪಯಾ ದುಷ್ಕೃತಂ ಬಹು ॥ ೮ ॥**

**ಕಳಿಂಗಾಖ್ಯೇ ಶುಭೇ ದೇಶೇ ಶ್ರೀಪುರಂ ನಾಮ ಪತ್ತನಂ ।**
**ಸರ್ವಸಿದ್ಧಿಸಮಾಕೀರ್ಣಂ ಚತುರ್ವರ್ಣನಿಷೇವಿತಂ ॥ ೯ ॥**

**ವಸತಿ ಸ್ಮ ದ್ವಿಜಃ ಕಶ್ಚಿತ್ ವಸುದತ್ತೇತಿ ನಾಮತಃ ।**
**ಬ್ರಹ್ಮಾಚಾರಪರೋ ನಿತ್ಯಂ ಸತ್ಯಧರ್ಮಪರಾಯಣಃ ॥ ೧೦ ॥**

---

೫. ಶೀತಳವಾದ ಆ ಪುಣ್ಯೋದಕವು ಪವಿತ್ರವಾದ ನಿನ್ನ ಕೈಯಿಂದ ಚುಮುಕಿಸಲ್ಪಡುತ್ತಲೂ ನನ್ನ ದೇಹದಲ್ಲಿ ಆ ಮೂರ್ಛೆಯೂ ಪಶುಜಾತಿಯ ಮೋಹವೂ ಹೋದವು.

೬. ಸೂರ್ಯನ ತೇಜಸ್ಸಿನಿಂದ ಕತ್ತಲೆಯು ಹೋಗುವಂತೆ ನೀನು ನೀರು ಚುಮುಕಿಸಿದುದರಿಂದ ನನ್ನ ಪಾಪವು ಹೋಯಿತು.

೭. ನಿನ್ನ ಪ್ರಸಾದದಿಂದ ನನಗೆ ಜ್ಞಾನವು ಉಂಟಾಯಿತು. ಉತ್ತಮವಾದ ಗತಿ ಬರುವುದೆಂದು ನನಗೆ ಗೊತ್ತಾಯಿತು.

೮. ನಾನು ಪೂರ್ವಜನ್ಮದಲ್ಲಿ ಬಹಳ ಪಾಪಗಳನ್ನು ಮಾಡಿದ್ದೇನೆ. ಆ ಪೂರ್ವ ಚರಿತ್ರೆಯನ್ನು ಹೇಳುತ್ತೇನೆ ಕೇಳು.

೯. ಕಳಿಂಗದೇಶದಲ್ಲಿ ಸರ್ವಸಮೃದ್ಧಿಗಳಿಂದಲೂ, ಚತುರ್ವರ್ಣಾಶ್ರಮಜನರಿಂದಲೂ ಕಂಗೊಳಿಸುತ್ತಿರುವ ಶ್ರೀಪುರವೆಂಬ ಪಟ್ಟಣವಿರುವುದು.

೧೦-೧೧. ಆ ಪಟ್ಟಣದಲ್ಲಿ ಬ್ರಾಹ್ಮಣಾಚಾರನಿರತನೂ, ಸತ್ಯಧರ್ಮಪರಾಯಣನೂ ವೇದವೇದಾಂಗಪಾರಂಗತನೂ ಆದ ವಸುದತ್ತನೆಂಬ ಬ್ರಾಹ್ಮಣನಿರುವನು.

**ವೇದವೇತ್ತಾ ಜ್ಞಾನವೇತ್ತಾ ಶುಚಿಷ್ಮಾನ್ಸುಗುಣವಾನ್ಧನೀ ।**
**ಧನಧಾನ್ಯಸಮಾಕೀರ್ಣಃ ಪುತ್ರಪೌತ್ರೈರಲಂಕೃತಃ ॥ ೧೧ ॥**

**ತಸ್ಯಾಹಂ ತು ಸುತಾ ಭದ್ರೇ ಸೋದರ್ಯೈಸ್ಸ್ವಜನಬಾಂಧವೈಃ ।**
**ಅಲಂಕಾರೈಸ್ಸುಶೃಂಗಾರೈಃ ಭೂಷಿತಾಸ್ಮಿ ವರಾನನೇ ॥ ೧೨ ॥**

**ಸುದೇವಾ ನಾಮ ಮೇ ತಾತಶ್ಚಕಾರ ಸ ಮಹಾಮತಿಃ ।**
**ತಸ್ಯಾಹಂ ದಯಿತಾ ನಿತ್ಯಂ ಪಿತುಶ್ಚಾಪಿ ಮಹಾತ್ಮನಃ ॥ ೧೩ ॥**

**ರೂಪೇಣಾಪ್ರತಿಮಾ ಜಾತಾ ಸಂಸಾರೇ ನಾಸ್ತಿ ತಾದೃಶೀ ।**
**ರೂಪಯೌವನಗರ್ವೇಣ ಮತ್ತಾಹಂ ಚಾರುಹಾಸಿನೀ ॥ ೧೪ ॥**

**ಅಹಂ ಕನ್ಯಾ ಸುರೂಪಾ ವೈ ಸರ್ವಾಲಂಕಾರಶೋಭಿತಾ ।**
**ಮಾಂ ದೃಷ್ಟ್ವಾ ತು ತತೋ ಲೋಕಾಃ ಸರ್ವೇ ಸ್ವಜನವರ್ಗಕಾಃ ॥ ೧೫ ॥**

---

ಅವನು ಬ್ರಹ್ಮಜ್ಞಾನಿಯಾಗಿಯೂ, ಸದಾಚಾರನಿರತನಾಗಿಯೂ, ಗುಣವಂತನಾಗಿಯೂ ಇದ್ದನು. ಅವನಿಗೆ ಧನಧಾನ್ಯಸಮೃದ್ಧಿಯೂ, ಪುತ್ರಪೌತ್ರಾದಿ ಸಂತಾನವೂ ವಿಶೇಷವಾಗಿದ್ದಿತು.

೧೨. ನಾನು ಆ ಬ್ರಾಹ್ಮಣನ ಪುತ್ರಿಯು, ನನಗೆ ಸಹೋದರರೂ ಬಂಧುಬಳಗಗಳೂ ಇದ್ದರು. ವಸ್ತ್ರಾಲಂಕಾರಗಳಿಗೂ, ವಡವೆ ವಸ್ತುಗಳಿಗೂ ನನಗೆ ಕೊರತೆಯಿರಲಿಲ್ಲ.

೧೩. ನನ್ನ ತಂದೆಯು ನನಗೆ ಸುದೇವೆ ಎಂದು ಹೆಸರಿಟ್ಟನು. ನಾನೂಕೂಡ ಆತನಿಗೆ ಬಹು ಪ್ರೀತಿಪಾತ್ರಳಾಗಿದ್ದೆನು.

೧೪. ರೂಪದಲ್ಲಿ ನನ್ನಂತೆ ಮತ್ತೊಬ್ಬರಿರಲಿಲ್ಲ. ಸಂಸಾರದಲ್ಲಿ ಮಾತ್ರ ನಾನು ಹೀಗಿರಲಿಲ್ಲ. ರೂಪಯೌವನದ ಗರ್ವದಿಂದ ಮದಿಸಿಹೋಗಿದ್ದೆನು.

೧೫. ನಾನು ಮೊದಲೇ ಒಳ್ಳೆಯ ರೂಪವತಿಯು. ಇದರ ಜೊತೆಗೆ ವಸ್ತ್ರಾದಿ ಭೂಷಣಗಳಿಂದ ಅಲಂಕರಿಸಿಕೊಳ್ಳುತ್ತಿದ್ದೆನು.

ಮಾಮೇವಂ ಯಾಚಮಾನಾಸ್ತೇ ವಿವಾಹಾರ್ಥಂ ವರಾನನೇ ।
ಯಾಚಿತಾಹಂ ದ್ವಿಜೈಸ್ಸರ್ವೈರ್ನ ದದಾತಿ ಪಿತಾ ಮಮ ॥ ೧೬ ॥

ಸ್ನೇಹಾಚ್ಚೈವ ಮಹಾಭಾಗೇ ಸುಮೋಹಾಚ್ಚ ಮಹಾಮತಿಃ ।
ನ ದತ್ತಾಹಂ ತದಾ ತೇನ ಪಿತ್ರಾ ಚೈವ ಮಹಾತ್ಮನಾ ॥ ೧೭ ॥

ಸಂಪ್ರಾಪ್ತಂ ಯೌವನಂ ಬಾಲ್ಯೇ ಮಯಿ ಭಾವಸಮನ್ವಿತಂ ।
ರೂಪಂ ಮೇ ತಾದೃಶಂ ದೃಷ್ಟ್ವಾ ಮಮ ಮಾತಾ ಸುದುಃಖಿತಾ ॥ ೧೮ ॥

ಪಿತರಂ ಮೇ ಹ್ಯುವಾಚಾಥ ಕಸ್ಮಾತ್ಕನ್ಯಾ ನ ದೀಯತೇ ।
ತ್ವಂ ಕಸ್ಮೈ ಸುದ್ವಿಜಾಯೈವ ಬ್ರಾಹ್ಮಣಾಯ ಮಹಾತ್ಮನೇ ॥ ೧೯ ॥

ದೇಹಿ ಕನ್ಯಾಂ ಮಹಾಭಾಗ ಸಂಪ್ರಾಪ್ತಾ ಯೌವನಂ ತ್ವಿಯಂ ।
ವಸುದತ್ತೋ ದ್ವಿಜಶ್ರೇಷ್ಠಃ ಪ್ರತ್ಯುವಾಚ ದ್ವಿಜೋತ್ತಮಃ ॥ ೨೦ ॥

---

೧೬-೧೭. ಈ ರೀತಿ ಇರುವ ನನ್ನನ್ನು ನೋಡಿ ನಮ್ಮ ಸ್ವಜನಗಳು, ಬಂಧುಗಳು, ಇನ್ನೂ ಇತರ ಬ್ರಾಹ್ಮಣರೂ ಮದುವೆಗೋಸ್ಕರ ನನ್ನ ತಂದೆಯನ್ನು ಯಾಚಿಸುತ್ತಿದ್ದರು. ಆದರೂ ನಮ್ಮ ತಂದೆಯು ನನ್ನ ಮೇಲಿನ ಪ್ರೀತಿಯಿಂದಲೂ ಮೋಹದಿಂದಲೂ, ಆಗ ಯಾರಿಗೂ ನನ್ನನ್ನು ಮದುವೆಮಾಡಿಕೊಡಲಿಲ್ಲ.

೧೮-೧೯. ನನ್ನಲ್ಲಿ ಶೃಂಗಾರಾದಿ ಯೌವನವು ತಲೆದೋರಿತು. ಈ ಭಾವನನ್ನೂ ಯೌವನವನ್ನೂ, ರೂಪವನ್ನೂ, ನೋಡಿ ನನ್ನ ತಾಯಿಗೆ ಬಹು ವ್ಯಥೆಯಾಯಿತು. ನನ್ನ ತಂದೆಯನ್ನು ಕುರಿತು, ಈಕೆಗೆ ಏತಕ್ಕೋಸ್ಕರ ವಿವಾಹಮಾಡುವುದಿಲ್ಲ? ಇವಳಿಗೆ ಈಗ ಯೌವನವು ಪ್ರಾಪ್ತವಾಗಿದೆ. ಆದುದರಿಂದ ಯಾವನಾದರೊಬ್ಬ ಮಹಾತ್ಮನಾದ ಬ್ರಾಹ್ಮಣನಿಗೆ ಮದುವೆಮಾಡಿಕೊಡು, ಎಂದು ಹೇಳಿದಳು.

೨೦-೨೩. ಆಗ ನನ್ನ ತಂದೆಯು ತಾಯಿಯನ್ನು ಕುರಿತು ಈ ಮಗಳಲ್ಲಿ ನನಗೆ ಪ್ರೇಮವು ಅಧಿಕವಾಗಿರುವುದು. ಈ ಸುದೇವೆಯು ನನ್ನ ಪ್ರಾಣಕ್ಕಿಂತಲೂ ನನಗೆ ಪ್ರೀತಿಪಾತ್ರಳು. ಇವಳನ್ನು ಅಗಲಿ ಇರಲಾರೆನು. ಆದುದರಿಂದ ಯಾವ ಬ್ರಾಹ್ಮಣನು ಈ ಕನ್ಯೆಯನ್ನು ಮದುವೆಮಾಡಿಕೊಂಡು ನನ್ನ ಮನೆಯಲ್ಲಿಯೇ ಈಕೆಯೊಡನೆ

ಮಾತರಂ ಮೇ ಮಹಾಭಾಗಾಂ ಶುಶ್ರೂಯತಾಂ ವಚನಂ ಮಮ ।
ಮಹಾಮೋಹೇನ ಮುಗ್ಧೋಽಸ್ಮಿ ಸುತಾಯಾ ವರವರ್ಣಿನಿ ॥ ೨೧ ॥

ಯೋ ಮೇ ಗೃಹಸ್ಥೋ ವಿಪ್ರೋ ವೈ ಭವಿಷ್ಯತಿ ಶುಭೇ ಶೃಣು ।
ತಸ್ಮೈ ಕನ್ಯಾಂ ಪ್ರದಾಸ್ಯಾಮಿ ಜಾಮಾತ್ರೇ ಚ ನ ಸಂಶಯಃ ॥ ೨೨ ॥

ಮಮ ಪ್ರಾಣಾತ್ಪ್ರಿಯಾ ಚೇಯಂ ಸುದೇವಾ ನಾತ್ರ ಸಂಶಯಃ ।
ಏವಮುಕ್ತ್ವಾ ಮದರ್ಥಂ ಸ ವಿರರಾಮ ಪಿತಾ ಮಮ ॥ ೨೩ ॥

ಕೌಶಿಕಸ್ಯ ಕುಲೇ ಜಾತಃ ಸರ್ವವಿದ್ಯಾವಿಶಾರದಃ ।
ಬ್ರಾಹ್ಮಣಾನಾಂ ಗುಣೈರ್ಯುಕ್ತಃ ಶೀಲವಾನ್ಗುಣವಾನ್ ಶುಚಿಃ ॥ ೨೪ ॥

ವೇದಾಧ್ಯಯನಸಂಪನ್ನಂ ಪಠಮಾನಂ ಹಿ ಸುಸ್ವರಂ ।
ಭಿಕ್ಷಾರ್ಥಂ ದ್ವಾರಮಾಯಾಂತಂ ಪಿತೃಮಾತೃವಿವರ್ಜಿತಂ ॥ ೨೫ ॥

ತಂ ದೃಷ್ಟ್ವಾ ಸಮುಪ್ರಾಪ್ತಂ ರೂಪವಂತಂ ಮಹಾಮತಿಂ ।
ತಂ ಪಪ್ರಚ್ಛ ಪಿತಾ ಚೈವಂ ಕೋ ಭವಾನ್ವೈ ಭವಿಷ್ಯತಿ ॥ ೨೬ ॥

ಕಿಂ ತೇ ನಾಮ ಕುಲಂ ಗೋತ್ರಮಾಚಾರಂ ವದ ಸಾಂಪ್ರತಂ ।
ಸಮಾಕರ್ಣ್ಯ ಪಿತುರ್ವಾಕ್ಯಂ ವಸುದತ್ತಮುವಾಚ ಸಃ ॥ ೨೭ ॥

---

ಇರುತ್ತಾನೆಯೋ ಅಂಥವನಿಗೆ ನನ್ನ ಪುತ್ರಿಯನ್ನು ಮದುವೆಮಾಡಿಕೊಡುತ್ತೇನೆ. ಇದರಲ್ಲಿ ಸಂಶಯವಿಲ್ಲ ಎಂದು ಹೇಳಿ ಸುಮ್ಮನಾದನು.

೨೪-೨೭. ಹೀಗಿರಲು ಒಂದು ದಿನ ಕೌಶಿಕನಗೋತ್ರದವನೂ, ಸರ್ವವಿದ್ಯಾವಿಶಾರದನೂ, ಬ್ರಾಹ್ಮಣನಿಗೆ ಬೇಕಾದ ಗುಣಗಳಿಂದ ಕೂಡಿ ಶೀಲವಂತನೂ, ಗುಣವಂತನೂ ಶುಚಿಯಾಗಿಯೂ ಇದ್ದ ಒಬ್ಬ ಬ್ರಾಹ್ಮಣನು ವೇದಾಧ್ಯಯನಸಂಪನ್ನನಾಗಿ ವೇದವನ್ನು ಸುಸ್ವರವಾಗಿ ಹೇಳುತ್ತಾ, ಭಿಕ್ಷೆಗೋಸ್ಕರ ನಮ್ಮಮನೆಗೆ ಬಂದನು. ಅವನಿಗೆ ತಾಯಿತಂದೆಗಳಾರೂ ಇರಲಿಲ್ಲ. ಅವನನ್ನು ನೋಡಿ ನಮ್ಮ ತಂದೆಯು ಎಲೈ ವಿಪ್ರನೇ ! ನೀನು ಯಾರು ? ನಿನ್ನ ಹೆಸರೇನು ? ಕುಲಗೋತ್ರಗಳಾವುವು ? ಆಚಾರವೇನು ? ಇವೆಲ್ಲವನ್ನೂ ಹೇಳೆಂದು ಕೇಳಲು ಆ ಬ್ರಾಹ್ಮಣನಿಂತೆಂದನು.

**ಕೌಶಿಕಸ್ಯಾನ್ವಯೇ ಜಾತೋ ವೇದವೇದಾಂಗಪಾರಗಃ ।**
**ಶಿವಶರ್ಮೇತಿ ಮೇ ನಾಮ ಪಿತೃಮಾತೃವಿವರ್ಜಿತಃ ॥ ೨೮ ॥**

**ಸಂತಿ ಮೇ ಭ್ರಾತರಶ್ಚಾನ್ಯೇ ಚತ್ವಾರೋ ವೇದಪಾರಗಾಃ ।**
**ಏವಂ ಕುಲಂ ಸಮಾಖ್ಯಾತಮಾಚಾರಂ ಕುಲಸಂಭವಂ ॥ ೨೯ ॥**

**ಏವಂ ಸರ್ವಂ ಸಮಾಖ್ಯಾತಂ ಪಿತರಂ ಶಿವಶರ್ಮಣಾ ।**
**ಶುಭಲಗ್ನೇ ತಿಥೌ ಪ್ರಾಪ್ತೇ ನಕ್ಷತ್ರೇ ಭಗದೈವತೇ ॥ ೩೦ ॥**

**ಪಿತ್ರಾ ದತ್ತಾಸ್ಮಿ ಸುಭಗೇ ತಸ್ಮೈ ವಿಪ್ರಾಯ ವೈ ತದಾ ।**
**ಪಿತೃಗೇಹಂ ವಸಾಮ್ಯೇಕಾ ತೇನ ಸಾರ್ಧಂ ಮಹಾತ್ಮನಾ ॥ ೩೧ ॥**

**ನೈವ ಶುಶ್ರೂಷಿತೋ ಭರ್ತಾ ಮಯಾ ಸ ಪಾಪಯಾ ತದಾ ।**
**ಪಿತೃಮಾತೃಸುದ್ರವ್ಯೇಣ ಗರ್ವೇಣಾಪಿ ಪ್ರಮೋಹಿತಾ ॥ ೩೨ ॥**

**ಅಂಗಸಂವಾಹನಂ ತಸ್ಯ ನ ಕೃತಂ ಹಿ ಮಯಾ ಕದಾ ।**
**ರತಿಭಾವೇನ ಸ್ನೇಹೇನ ವಚನೇನ ಮಯಾ ಶುಭೇ ॥ ೩೩ ॥**

---

೨೮-೨೯. ನಾನು ಕೌಶಿಕಗೋತ್ರದವನು. ವೇದವೇದಾಂಗಗಳನ್ನು ಓದಿದ್ದೇನೆ. ನನ್ನ ಹೆಸರು ಶಿವಶರ್ಮನೆಂದು. ನನಗೆ ತಂದೆತಾಯಿಗಳಿಲ್ಲ. ವೇದಪಾರಗರಾದ ನಾಲ್ವರು ತಮ್ಮಂದಿರಿದ್ದಾರೆ ಎಂದು ತನ್ನ ಕುಲವನ್ನೂ, ಆಚಾರವನ್ನೂ ಹೇಳಿದನು.

೩೦. ಇದನ್ನು ಕೇಳಿ ಶುಭಲಗ್ನ, ಶುಭನಕ್ಷತ್ರ, ಶುಭತಿಥಿಗಳನ್ನು ನೋಡಿ ನಮ್ಮ ತಂದೆಯು ಆತನಿಗೆ ನನ್ನನ್ನು ಮದುವೆಮಾಡಿಕೊಟ್ಟನು.

೩೧-೩೩. ಗಂಡನೊಡನೆ ನಾನೊಬ್ಬಳೇ ತಂದೆಯ ಮನೆಯಲ್ಲಿನ ಸರ್ವಾಧಿಕಾರವನ್ನು ಮಾಡುತ್ತಿದ್ದೆನು. ತಾಯಿತಂದೆಗಳ ಬೆಂಬಲದಿಂದಲೂ, ಅವರ ದ್ರವ್ಯದಿಂದಲೂ, ಹೆಮ್ಮೆಯಿಂದಲೂ ಪಾಪಿಯಾದ ನಾನು ಅವನ ಕೈಕಾಲು ಅಮುಕುವುದು, ರತಿಭಾವದಿಂದ ಸಂತೋಷಪಡಿಸುವುದು ಮೊದಲಾದ ಪತಿಶುಶ್ರೂಷೆಯನ್ನು ಮಾಡಲಿಲ್ಲ. ಕಡೆಗೆ ಒಂದು ಒಳ್ಳೆಯ ಮಾತನ್ನೂ ಕೂಡ ಆಡುತ್ತಿರಲಿಲ್ಲ.

ಕ್ರೂರಬುದ್ಧ್ಯಾ ಹಿ ದೃಷ್ಟೋಽಸೌ ಸರ್ವದಾ ಪಾಪಯಾ ಮಯಾ ।
ಪುಂಶ್ಚಲೀನಾಂ ಪ್ರಸಂಗೇನ ತದ್ಭಾವಂ ಹಿ ಗತಾ ಶುಭೇ ॥ ೩೪ ॥

ಮಾತಾಪಿತ್ರೋಶ್ಚ ಭರ್ತುಶ್ಚ ಭ್ರಾತೃಣಾಂ ಹಿತಮೇವ ಚ ।
ನ ಕರೋಮ್ಯಹಮೇವಾಪಿ ಯತ್ರ ತತ್ರ ವ್ರಜಾಮ್ಯಹಂ ॥ ೩೫ ॥

ಏವಂ ಮೇ ದುಷ್ಕೃತಂ ದೃಷ್ಟ್ವಾ ಶಿವಶರ್ಮಾ ಪತಿರ್ಮಮ ।
ಸ್ನೇಹಾಚ್ಛ್ವಶುರವರ್ಗಸ್ಯ ಮಮ ಭರ್ತಾ ಮಹಾಮತಿಃ ॥ ೩೬ ॥

ನ ಕಿಂಚಿದ್ವದತೇ ಸೋಽಪಿ ಕ್ಷಮತೇ ದುಷ್ಕೃತಂ ಮಮ ।
ತಸ್ಯ ಶೀಲಂ ವಿದಿತ್ವಾ ತೇ ಸಾಧುತ್ವಂ ಶಿವಶರ್ಮಣಃ ।
ಪಿತಾ ಮಾತಾ ತ್ವಿಮೇ ಸರ್ವೇ ಮಮ ಪಾಪೇನ ದುಃಖಿತಾಃ ॥ ೩೮ ॥

ಭರ್ತಾ ಮೇ ದುಷ್ಕೃತಂ ದೃಷ್ಟ್ವಾ ತಸ್ಯ ಗೃಹಾದ್ವಿನಿರ್ಗತಃ ।
ತಂ ದೇಶಂ ಗ್ರಾಮಮೇವಂ ಹಿ ಪಂತ್ಯಜ್ಯ ಗತಸ್ತತಃ ॥ ೩೯ ॥

---

೩೪. ಪಾಪಿಷ್ಠಳಾದ ನಾನು ಆತನನ್ನು ಕೆಟ್ಟಬುದ್ಧಿಯಿಂದಲೇ ಕಾಣುತ್ತಿದ್ದೆ. ಗಂಡುಬೀರಿಗಳ ಸಹವಾಸದಿಂದ ನಾನೂ ಅವರಂತೆಯೇ ಆದೆನು.

೩೫. ತಾಯಿತಂದೆಗಳ ಸೇವೆಯನ್ನಾಗಲೀ, ಗಂಡನ ಸೇವೆಯನ್ನಾಗಲೀ, ಸೋದರರ ಹಿತವನ್ನಾಗಲೀ ಮಾಡದೆ ಸಿಕ್ಕಿದಕಡೆಗೆ ಸ್ವೇಚ್ಛೆಯಾಗಿ ಹೋಗುತ್ತಿದ್ದೆನು.

೩೬-೩೭. ಈರೀತಿಯಾದ ನನ್ನ ಕೆಟ್ಟಕೆಲಸಗಳನ್ನು ನೋಡಿ ನನ್ನ ಗಂಡನು ಅತ್ತೆಮಾವಂದಿರ ದಾಕ್ಷಿಣ್ಯದಿಂದ ಒಂದು ಮಾತನ್ನೂ ಆಡುತ್ತಿರಲಿಲ್ಲ. ನನ್ನ ಕೆಟ್ಟ ನಡತೆಯನ್ನೂ ಸಹನೆಯಿಂದ ಕ್ಷಮಿಸುತ್ತಿದ್ದನು. ಅವರೆಲ್ಲರೂ ಪಾಪಿಯಾದ ನನ್ನನ್ನು ಆಗಾಗ್ಗೆ ಕೆಟ್ಟಕೆಲಸಮಾಡಬೇಡವೆಂದು ತಡೆಯುತ್ತಿದ್ದರು.

೩೮. ಆ ಶಿವಶರ್ಮನ ಶೀಲವನ್ನೂ, ಸಾಧುತನವನ್ನೂ, ನನ್ನ ತಾಯಿತಂದೆಗಳೂ, ಮತ್ತೆಲ್ಲರೂ ತಿಳಿದು, ನಾನು ಮಾಡುವ ಅನ್ಯಾಯದ ಕೆಲಸಕ್ಕೆ ದುಃಖಿಸುತ್ತಿದ್ದರು.

೩೯. ಹೀಗಿರಲು ನನ್ನ ಗಂಡನು ನನ್ನ ಕೆಟ್ಟಕೆಲಸವನ್ನು ಸಹಿಸಲಾರದೆ ನನ್ನ ಮನೆಯಿಂದ ಹೊರಟುಹೋದದ್ದಲ್ಲದೆ, ಆ ಗ್ರಾಮವನ್ನೂ ಕೊನೆಗೆ ಆ ದೇಶವನ್ನೂ ಸಹ ತ್ಯಜಿಸಿ ಎಲ್ಲಿಗೋ ಹೊರಟುಹೋದನು.

ಗತೇ ಭರ್ತರಿ ಮೇ ತಾತಃ ಸಂಜಾತಶ್ಚಿಂತಯಾನ್ವಿತಃ ।
ಮಮ ದುಃಖೇನ ದುಃಖಾತ್ಮಾ ಯಥಾ ರೋಗೇಣ ಪೀಡಿತಃ ॥ ೪೦ ॥

ಮಮ ಮಾತಾ ಉವಾಚೈವ ಭರ್ತಾರಂ ದುಃಖಪೀಡಿತಂ ।
ಕಸ್ಮಾಚ್ಚಿಂತಯಸೇ ಕಾಂತ ವದ ದುಃಖಂ ಮಮಾಗ್ರತಃ ॥ ೪೧ ॥

ವಸುದತ್ತ ಉವಾಚೈನಾಂ ಮಾತರಂ ಮಮ ಸಮ್ಮುಖಃ ।
ಸುತಾಂ ತ್ಯಕ್ತ್ವಾ ಗತೋ ವಿಪ್ರೋ ಜಾಮಾತಾ ಶೃಣು ವಲ್ಲಭೇ ॥ ೪೨ ॥

ಇಯಂ ಪಾಪಸಮಾಚಾರಾ ನಿರ್ಘೃಣಾ ಪಾಪಚಾರಿಣೀ ।
ಅನಯಾ ಹಿ ಪರಿತ್ಯಕ್ತಃ ಶಿವಶರ್ಮಾ ಮಹಾಮತಿಃ ॥ ೪೩ ॥

ಸಮಸ್ತಸ್ಯ ಕುಟುಂಬಸ್ಯ ದಾಕ್ಷಿಣ್ಯೇನ ಮಹಾಮತಿಃ ।
ಮಮಾಯಂ ಸ ದ್ವಿಜಃ ಕಾಂತೇ ಸುದೇವಾಂ ನೈವ ಭಾಷತೇ ॥ ೪೪ ॥

---

೪೦. ನನ್ನ ಗಂಡನು ಹೊರಟುಹೋಗುತ್ತಲೂ ನನ್ನ ತಂದೆಯು ಯೋಚನೆಯಲ್ಲಿ ಮಗ್ನನಾದನು. ನನ್ನ ವಿಷಯವಾದ ದುಃಖದಿಂದ ವ್ಯಥೆಪಡುತ್ತಾ ಕೊನೆಗೆ ಅದರಿಂದಲೇ ರೋಗದಲ್ಲಿ ಮಲಗಿದನು.

೪೧. ನನ್ನ ತಾಯಿಯು ನನ್ನ ತಂದೆಯನ್ನು ಕುರಿತು ಏಲೈ ಕಾಂತನೇ, ಏತಕ್ಕೋಸ್ಕರ ಯೋಚಿಸುತ್ತೀಯೆ? ನಿನ್ನ ದುಃಖಕಾರಣವನ್ನು ನನಗೆ ಹೇಳು ಎಂದು ಕೇಳಿದಳು.

೪೨. ಆಗ ನನ್ನ ತಾಯಿಗೆ ನನ್ನ ತಂದೆಯು ಹೇಳಿದನು :-ನನ್ನ ಮಗಳನ್ನು ಬಿಟ್ಟು ಅಳಿಯನು ಹೊರಟುಹೋದನು.

೪೩. ಇವಳು ಕೆಟ್ಟಕೆಲಸದಲ್ಲಿ ನಿರತಳಾಗಿದ್ದಾಳೆ. ದಯಾಶೂನ್ಯಳು. ಪಾಪಿ. ಇವಳೇ ಗಂಡನನ್ನು ಬಿಟ್ಟುಬಿಟ್ಟಳು.

೪೪. ನಾನು ನನ್ನ ಕುಟುಂಬದವರೆಲ್ಲರನ್ನೂ ಹೇಗೆ ನೋಡುತ್ತೇನೋ ಹಾಗೆಯೇ ಅವನನ್ನೂ ಕಾಣುತ್ತೇನೆ. ಆದರೂ ಸುದೇವೆಯನ್ನು ಮಾತನಾಡಿಸುವುದೇ ಇಲ್ಲ.

**ವಸತೇ ಸೌಮ್ಯಭಾವೇನ ನೈವ ನಿಂದತಿ ಕುತ್ಸತಿ ।**
**ಸುದೇವಾಂ ಪಾಪಸಂಚಾರಾಂ ಸ ವೈ ಪಂಡಿತಬುದ್ಧಿವಾನ್ ॥ ೪೫ ॥**

**ಭವಿಷ್ಯತಿ ತ್ವಿಯಂ ದುಷ್ಟಾ ಸುದೇವಾ ಕುಲನಾಶಿನೀ ।**
**ಅಹಮೇನಾಂ ಪರಿತ್ಯಕ್ಷೇ ಬ್ರಹ್ಮಾಚಾರವಿನಾಶಿನೀಂ ॥ ೪೬ ॥**

**॥ ಬ್ರಾಹ್ಮಣ್ಯುವಾಚ ॥**

**ಅದ್ಯ ಜ್ಞಾತಂ ತ್ವಯಾ ಕಾಂತ ಸುತಾಯಾ ಗುಣದೂಷಣಂ ।**
**ತವ ಮೋಹೇನ ಸ್ನೇಹೇನ ನಷ್ಟೇಯಂ ಶೃಣು ಸಾಂಪ್ರತಂ ॥ ೪೭ ॥**

**ಅಪತ್ಯಂ ಲಾಲಯೇತ್ತಾವದ್ಯಾವತ್ಪಂಚಮವಾರ್ಷಿಕಂ ।**
**ಶಿಕ್ಷಾಬುದ್ಧ್ಯಾ ಸದಾ ಕಾಂತ ಪುನರ್ಮೋಹೇನ ಪೋಷಯೇತ್ ॥ ೪೮ ॥**

**ಸ್ನಾನಾಚ್ಛಾದನಭಕ್ಷ್ಯೈಶ್ಚ ಭೋಜ್ಯೈಃ ಪೇಯೈರ್ನಸಂಶಯಃ ।**
**ಗುಣೇಷು ಯೋಜಯೇತ್ಕಾಂತ ಸದ್ವಿದ್ಯಾಸು ಚ ತಾನ್ಸುತಾನ್ ॥ ೪೯ ॥**

---

೪೫. ಪಂಡಿತನಾದ ಆ ಬುದ್ಧಿವಂತನು ಸುದೇವಳನ್ನು ಬೈಯುವುದೂ ಇಲ್ಲ, ತಿರಸ್ಕರಿಸುವುದೂ ಇಲ್ಲ. ಸೌಮ್ಯಭಾವದಿಂದ ನಮ್ಮ ಮನೆಯಲ್ಲಿ ವಾಸಿಸುತ್ತಾನೆ.

೪೬. ಈ ಸುದೇವಳು ದುಷ್ಟಳಾಗಿರುತ್ತಾಳೆ. ಕುಲನಾಶಿನಿಯೂ ಆಗಿರುತ್ತಾಳೆ. ಬ್ರಾಹ್ಮಣಾಚಾರಕ್ಕೆ ವಿರುದ್ಧಳಾದ ಈಕೆಯನ್ನು ನಾನು ಬಿಟ್ಟುಬಿಡುತ್ತೇನೆ. ಈಕೆಯು ಮಹಾಪಾಪಿಯು ಎಂದು ವ್ಯಸನಪಟ್ಟನು.

೪೭. ಎಲೈ ಕಾಂತನೇ, ನಿನ್ನ ಮಗಳು ಗುಣರಹಿತಳೆಂಬುದು ಈಗ ನಿನಗೆ ಗೊತ್ತಾಯಿತೇ ? ನೀನು ಅವಳಮೇಲೆ ಇಟ್ಟಿರುವ ಮೋಹದಿಂದಲೂ, ಸ್ನೇಹದಿಂದಲೂ ಈಕೆಯು ಹಾಳಾಗಿ ಹೋದಳು. ಈಗ ನಾನು ಹೇಳುವುದನ್ನು ಕೇಳು.

೪೮. ಐದುವರ್ಷದವರೆಗೂ ಮಕ್ಕಳನ್ನು ಲಾಲಿಸಬೇಕು. ಅನಂತರ ಶಿಕ್ಷೆಯಿಂದಲೂ, ಬುದ್ಧಿಕಲಿಸುವುದರಿಂದಲೂ, ಮೋಹದಿಂದಲೂ ಪೋಷಿಸಬೇಕು.

೪೯. ಸ್ನಾನ, ಬಟ್ಟೆ, ತಿಂಡಿ, ಊಟ, ತೀರ್ಥ, ಇವುಗಳನ್ನು ಕೊಟ್ಟು ರಕ್ಷಿಸಬೇಕು. ಅವರು ಗುಣವಂತರೂ, ವಿದ್ಯಾವಂತರೂ ಆಗುವಂತೆ ಪ್ರಯತ್ನಿಸಬೇಕು.

**ಗುಣಶಿಕ್ಷಾರ್ಥನಿರ್ಮೋಹಃ ಪಿತಾ ಭವತಿ ಸರ್ವದಾ ।**
**ಪಾಲನೇ ಪೋಷಣೇ ಕಾಂತ ಸಂಮೋಹಃ ಪರಿಜಾಯತೇ ॥ ೫೦ ॥**

**ಗುಣಂ ನ ವರ್ಣಯೇತ್ಪುತ್ರಂ ಕುತ್ಸಯೇಚ್ಚ ದಿನೇ ದಿನೇ ।**
**ಕಠಿಣಂ ಚ ವದೇನ್ನಿತ್ಯಂ ವಚನೈಃ ಪರಿಪೀಡಯೇತ್ ॥ ೫೧ ॥**

**ಯಥಾ ಹಿ ಸಾಧಯೇನ್ನಿತ್ಯಂ ಸುವಿದ್ಯಾಂ ಜ್ಞಾನತತ್ಪರಃ ।**
**ಅಭಿಮಾನೇ ಛಲೇನಾಪಿ ಪಾಪಂ ತ್ಯಜ್ಯ ಪ್ರದೂರತಃ ।**
**ನಿಪುಣೋ ಜಾಯತೇ ನಿತ್ಯಂ ವಿದ್ಯಾಸು ಚ ಗುಣೇಷು ಚ ॥ ೫೨ ॥**

**ಮಾತಾ ಚ ತಾಡಯೇತ್ಕನ್ಯಾಂ ಸ್ನುಷಾಂ ಶ್ವಶ್ರೂಶ್ಚ ತಾಡಯೇತ್ ।**
**ಗುರುಶ್ಚ ತಾಡಯೇಚ್ಛಿಷ್ಯಂ ತತಃ ಸಿದ್ಧ್ಯತಿ ನಾನ್ಯಥಾ ॥ ೫೩ ॥**

---

೫೦. ಪಾಲನದಲ್ಲಿಯೂ, ಪೋಷಣೆಯಲ್ಲೂ ಮೋಹಪಡಬಹುದು. ಆದರೆ ಗುಣಕಲಿಸುವುದು, ಶಿಕ್ಷೆಮಾಡುವುದರಲ್ಲಿ ತಂದೆಯು ಮೋಹಹೊಂದಬಾರದು.

೫೧. ಮಗನ ಗುಣಗಳನ್ನು ಅವನೆದುರಿಗೆ ವರ್ಣಿಸಬಾರದು. ಪ್ರತಿದಿನವೂ ತಿರಸ್ಕರಿಸುತ್ತಿರಬೇಕು. ಕಠಿಣವಾದ ಮಾತುಗಳನ್ನಾಡುತ್ತಿರಬೇಕು. ಮಾತುಗಳಿಂದ ತೊಂದರೆಪಡುಸುತ್ತಿರಬೇಕು.

೫೨. ಜ್ಞಾನದಿಂದ ಒಳ್ಳೆಯ ವಿದ್ಯೆಯನ್ನು ಗಳಿಸುವಂತೆ ನಿತ್ಯವೂ ಮಾಡುತ್ತಿರಬೇಕು. ಅಭಿಮಾನದಿಂದಾಗಲಿ, ಕಪಟದಿಂದಾಗಲಿ, ಹಠದಿಂದಾಗಲಿ, ಪಾಪಕಾರ್ಯವನ್ನು ಮಾಡಬಾರದು. ಹೀಗೆ ಮಾಡಿದರೆ ಮಗನು ವಿದ್ಯೆಯಲ್ಲಿಯೂ ಗುಣದಲ್ಲಿಯೂ ನಿಪುಣನಾಗುವನು.

೫೩. ಅದರಂತೆಯೇ ತಾಯಿಯು ಮಗಳನ್ನೂ, ಅತ್ತೆಯು ಸೊಸೆಯನ್ನೂ, ಗುರುವು ಶಿಷ್ಯನನ್ನೂ, ದಂಡಿಸುತ್ತಿರಬೇಕು. ಹಾಗಾದರೆ ಮಾತ್ರ ವಿದ್ಯೆಗಳು ಒದುತ್ತವೆ, ಇಲ್ಲದಿದ್ದರೆ ಇಲ್ಲ.

ಭಾರ್ಯಾಂ ಚ ತಾಡಯೇತ್ಕಾಂತೋ ಹ್ಯಮಾತ್ಯಂ ನೃಪತಿಸ್ತಥಾ ।
ಹಯಂ ಚ ವಾಹಯೇದ್ವೀರೋ ಗಜಂ ಮಾತ್ರೋ ದಿನೇ ದಿನೇ ॥ ೫೪ ॥

ಶಿಕ್ಷಾಬುದ್ಧ್ಯಾ ಪ್ರಸಿದ್ಧ್ಯಂತಿ ತಾಡನಾತ್ಪಾಲನಾದ್ವಿಭೋ ।
ತ್ವಯೇಯಂ ನಾಶಿತಾ ನಾಥ ಸರ್ವದೈವ ನ ಸಂಶಯಃ ॥ ೫೫ ॥

ಸಾರ್ಧಂ ಸುಬ್ರಾಹ್ಮಣೇನಾಪಿ ಭವತಾ ಶಿವಶರ್ಮಣಾ ।
ನಿರಂಕುಶಾ ಕೃತಾ ಗೇಹೇ ತೇನ ನಷ್ಟಾ ಮಹಾಮತೇ ॥ ೫೬ ॥

ತಾವದ್ಧಿ ಧಾರಯೇತ್ಕನ್ಯಾಂ ಗೃಹೇ ಕಾಂತ ವಚಶ್ಶೃಣು ।
ಅಷ್ಟವರ್ಷಾನ್ವಿತಾ ಯಾವತ್ ಪ್ರಬಲಾಂ ನೈವ ಧಾರಯೇತ್ ॥ ೫೭ ॥

ಪಿತುರ್ಗೇಹೇ ಸ್ಥಿತಾ ಪುತ್ರೀ ಯತ್ಪಾಪಂ ಹಿ ಪ್ರಕುರ್ವತೇ ।
ಉಭಾಭ್ಯಾಮಪಿ ತದ್ಯಾತಿ ಶ್ವೇನಸ್ತಾಭ್ಯಾಮಪಿ ಧ್ರುವಂ ॥ ೫೮ ॥

ತಸ್ಮಾನ್ನ ಧಾರಯೇತ್ಪುತ್ರೀಂ ಸಮರ್ಥಾಂ ನಿಜಮಂದಿರೇ ।
ಯಸ್ಯ ದತ್ತಾ ಭವೇತ್ಸಾ ವೈ ತಸ್ಯ ಗೇಹೇ ಪ್ರಪೋಷಯೇತ್ ॥ ೫೯ ॥

---

೫೪. ಹೆಂಡತಿಯನ್ನು ಗಂಡನೂ, ಮಂತ್ರಿಯನ್ನು ರಾಜನೂ, ಕುದುರೆಯನ್ನು ವೀರನೂ, ಆನೆಯನ್ನು ಮಾವಟಿಗನೂ, ದಿನೇದಿನೇ ಶಿಕ್ಷಿಸುತ್ತಿರಬೇಕು,

೫೫. ಹಾಗೆ ಶಿಕ್ಷಿಸಿದರೆ ಅವರೆಲ್ಲರೂ ಯೋಗ್ಯರಾಗುತ್ತಾರೆ. ನೀನು ಹಾಗೆ ಮಾಡದೆ ಆಕೆಯನ್ನು ಮುದ್ದಿಸಿ ಹಾಳುಮಾಡಿದೆ. ಇದರಲ್ಲಿ ಸಂಶಯವಿಲ್ಲ.

೫೬. ಒಳ್ಳೇ ಯೋಗ್ಯನಾದ ಬ್ರಾಹ್ಮಣನಾದ ಶಿವಶರ್ಮನೂ ಕೂಡ ಆಕೆಯನ್ನು ಮನೆಯಲ್ಲಿ ಬಿಗಿಯಿಲ್ಲದೆ ಬಿಟ್ಟು ಬೆಳೆಸಿದ. ಆದ್ದರಿಂದ ಆಕೆಯು ಕೆಟ್ಟು ಹೋದಳು,

೫೭. ಎಂಟು ವರ್ಷವಾಗುವವರೆಗೂ ಮನೆಯಲ್ಲಿ ಮಗಳನ್ನು ಇಟ್ಟುಕೊಂಡಿರಬೇಕು. ದೊಡ್ಡವಳಾದ ಮೇಲೆ ಖಂಡಿತ ಇಟ್ಟುಕೊಳ್ಳಬಾರದು.

೫೮. ತಂದೆಯ ಮನೆಯಲ್ಲಿ ಮಗಳಿರುವವರೆಗೂ ಆಕೆ ಮಾಡಿದ ಪಾಪವು ಗಂಡನ ಮನೆಯವರಿಗೂ, ತಂದೆಯ ಮನೆಯವರಿಗೂ ಇಬ್ಬರಿಗೂ ಬರುತ್ತದೆ.

೫೯. ಆದ್ದರಿಂದ ಸಮರ್ಥಳಾದ ಮೇಲೆ ಮಗಳನ್ನು ತನ್ನ ಮನೆಯಲ್ಲಿಟ್ಟು ಕೊಳ್ಳಬಾರದು. ಯಾವನಿಗೆ ಕೊಟ್ಟಿದ್ದೇವೋ, ಅವನ ಮನೆಯಲ್ಲೇ ಇರಬೇಕು.

ತತ್ರ ಯತ್ಸಾಧಯೇತ್ಕಾಂತ ಸುಗುಣಂ ಭಕ್ತಿಪೂರ್ವಕಂ ।
ಕುಲಸ್ಯ ಜಾಯತೇ ಕೀರ್ತಿಃ ಪಿತಾ ಸುಖೇನ ಜೀವತಿ ॥ ೬೦ ॥

ತತ್ರಸ್ಥಾ ಕುರುತೇ ಪಾಪಂ ತತ್ಪಾಪಂ ಭುಂಜತೇ ಪತಿಃ ।
ತತ್ರಸ್ಥಾ ವರ್ಧತೇ ನಿತ್ಯಂ ಪುತ್ರೈಃ ಪೌತ್ರೈಃ ಸದೈವ ಸಾ ॥ ೬೧ ॥

ಪಿತಾ ಕೀರ್ತಿಮವಾಪ್ನೋತಿ ಸುತಾಯಾಃ ಸುಗುಣೈಃ ಪ್ರಿಯ ।
ತಸ್ಮಾನ್ನ ಧಾರಯೇತ್ಕಾಂತ ಗೇಹೇ ಪುತ್ರೀಂ ಸಭರ್ತೃಕಾಂ ॥ ೬೨ ॥

ಇತ್ಯರ್ಥೇ ಶ್ರೂಯತೇ ಕಾಂತ ಇತಿಹಾಸಂ ಭವಿಷ್ಯತಿ ।
ಅಷ್ಟಾವಿಂಶತಿಕೇ ಪ್ರಾಪ್ತೇ ಯುಗೇ ದ್ವಾಪರಕೇ ಮಹತ್ ॥ ೬೩ ॥

ಉಗ್ರಸೇನಸ್ಯ ವೀರಸ್ಯ ಯದುಜ್ಯೇಷ್ಠಸ್ಯ ಯತ್ಪ್ರಭೋ ।
ಚರಿತ್ರಂ ತೇ ಪ್ರವಕ್ಷ್ಯಾಮಿ ಶೃಣುಷ್ವೈಕಮನಾ ದ್ವಿಜ ॥ ೬೪ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ಸಪ್ತಚತ್ವಾರಿಂಶೋಽಧ್ಯಾಯಃ

---

೬೦. ಅಲ್ಲಿ ಆಕೆಯು ಭಕ್ತಿಯಿಂದ ಯಾವ ಕೆಲಸವನ್ನು ಮಾಡುತ್ತಾಳೋ ಅದರಿಂದ ಕುಲಕ್ಕೆ ಕೀರ್ತಿ ಬರುತ್ತದೆ. ತಂದೆಯೂ ಅದರಿಂದ ಸುಖವಾಗಿರುತ್ತಾನೆ.

೬೧. ಆ ಗಂಡನ ಮನೆಯಲ್ಲಿದ್ದಾಗ ಪಾಪಮಾಡಿದರೆ, ಆ ಪಾಪವನ್ನು ಗಂಡನೇ ಅನುಭವಿಸುತ್ತಾನೆ, ಆ ಗಂಡನ ಮನೆಯಲ್ಲಿದ್ದುಕೊಂಡು ಮಕ್ಕಳು ಮೊಮ್ಮಕ್ಕಳುಗಳಿಂದ ವೃದ್ಧಿಹೊಂದಿದರೆ ಮಗಳ ಒಳ್ಳೆಯ ಗುಣಗಳಿಂದ ತಂದೆಗೆ ಕೀರ್ತಿ ಬರುತ್ತದೆ.

೬೨-೬೪. ಆದ್ದರಿಂದ ಗಂಡನೊಡನೆ ಮಗಳನ್ನು ಮನೆಯಲ್ಲಿಟ್ಟುಕೊಳ್ಳಬಾರದು. ಈ ವಿಷಯದಲ್ಲಿ ಒಂದು ಇತಿಹಾಸವು ಪ್ರಸಿದ್ಧವಾಗಿರುವುದು. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಯಾದವಶ್ರೇಷ್ಠನಾದ ಉಗ್ರಸೇನನನೆಂಬವನಿದ್ದನು. ಅವನ ಚರಿತ್ರೆಯನ್ನು ಹೇಳುತ್ತೇನೆ ಸಾವಧಾನವಾಗಿ ಕೇಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾ ಚರಿತೆಯಲ್ಲಿ ನಲವತ್ತೇಳನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಚತ್ವಾರಿಂಶೋಽಧ್ಯಾಯಃ

॥ ಬ್ರಾಹ್ಮಣ್ಯುವಾಚ ॥

**ಮಧುರೇ ವಿಷಯೇ ರಮ್ಯೇ ಮಧುರಾಯಾಂ ನೃಪೋತ್ತಮಃ ।**
**ಉಗ್ರಸೇನೇತಿ ವಿಖ್ಯಾತೋ ಯಾದವಃ ಪರವೀರಹಾ ॥ ೧ ॥**

**ಸರ್ವಧರ್ಮಾರ್ಥತತ್ತ್ವಜ್ಞೋ ವೇದಜ್ಞಃ ಶ್ರುತವಾನ್ ಬಲೀ ।**
**ದಾತಾ ಭೋಕ್ತಾ ಗುಣಗ್ರಾಹೀ ಸದ್ಗುಣಾನ್ವೇತ್ತಿ ಭೂಪತಿಃ ॥ ೨ ॥**

**ರಾಜ್ಯಂ ಚಕಾರ ಮೇಧಾವೀ ಪ್ರಜಾಧರ್ಮೇಣ ಪಾಲಯೇತ್ ।**
**ಏವಮೇವ ಮಹಾತೇಜಾ ಉಗ್ರಸೇನಃ ಪ್రತಾಪವಾನ್ ॥ ೩ ॥**

---

## ನಲವತ್ತೆಂಟನೆಯ ಅಧ್ಯಾಯವು

೧. ಬ್ರಾಹ್ಮಣನ ಹೆಂಡತಿಯು ಹೇಳುತ್ತಾಳೆ—ಮಧುರ ದೇಶದ ರಾಜಧಾನಿಯಾದ ಮಧುರೆಯಲ್ಲಿ ಉಗ್ರಸೇನನೆಂಬ ಪರಾಕ್ರಮಶಾಲಿಯಾದ ರಾಜನೊಬ್ಬನಿದ್ದನು.

೨. ಅವನು, ವೇದಾಧ್ಯಯನಸಂಪನ್ನನಾಗಿ, ಸತ್ಯಧರ್ಮಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ಮಹಾಜ್ಞಾನಿಯಾಗಿದ್ದನು. ತಾನು ಸ್ವತಃ ಐಶ್ವರ್ಯವನ್ನನುಭವಿಸುವುದೇ ಅಲ್ಲದೆ ಸತ್ಪಾತ್ರರಿಗೆ ಉದಾರವಾಗಿ ದಾನಮಾಡುವುದರಲ್ಲಿಯೂ, ಇತರರ ಗುಣಗ್ರಹಣಮಾಡುವುದರಲ್ಲಿಯೂ ಚತುರನಾಗಿದ್ದನು.

೩. ವಿವೇಕಿಯಾದ ಆ ರಾಜನು ರಾಜ್ಯವನ್ನು ಆಳುತ್ತಾ ಪ್ರಜೆಗಳನ್ನು ಧರ್ಮದಿಂದ ಕಾಪಾಡುತ್ತಿದ್ದನು. ಇದೇ ರೀತಿಯಲ್ಲೇ ಉಗ್ರಸೇನನೆಂಬುವನು ರಾಜ್ಯವಾಳುತ್ತಾ ಪ್ರತಾಪಿಯಾಗಿದ್ದನು.

ವೈದರ್ಭವಿಷಯೇ ಪುಣ್ಯೇ ಸತ್ಯಕೇತುಃ ಪ್ರತಾಪವಾನ್ ।
ತಸ್ಯ ಕನ್ಯಾ ಮಹಾಭಾಗಾ ಪದ್ಮಾಕ್ಷೀ ಕಮಲಾನನಾ ॥ ೪ ॥

ನಾಮ್ನಾ ಪದ್ಮಾವತೀ ನಾಮ ಸತ್ಯಧರ್ಮಪರಾಯಣಾ ।
ಸಾ ಸ್ತ್ರೀಣಾಂ ಚ ಗುಣೈರ್ಯುಕ್ತಾ ದ್ವಿತೀಯೇವ ಸಮುದ್ರಜಾ ॥ ೫ ॥

ವೈದರ್ಭೀ ಶುಶುಭೇ ರಾಜನ್ ಸ್ವಗುಣೈಸ್ಸತ್ಯಕಾರಣೈಃ ।
ಮಾಥುರಸ್ತೂಗ್ರಸೇನಸ್ತು ಹ್ಯುಪಯೇಮೇ ಪ್ರತಾಪವಾನ್ ॥ ೬ ॥

ತಯಾ ಸಹ ಮಹಾಭಾಗಃ ಸುಖಂ ರೇಮೇ ಪ್ರತಾಪವಾನ್ ।
ಅತಿಪ್ರೀತೋ ಗುಣೈಸ್ತಸ್ಯಾಸ್ತಯಾ ಸಹ ಸುಖೀ ಭವೇತ್ ॥ ೭ ॥

ತಸ್ಯಾ ಸ್ನೇಹೇನ ಪ್ರೀತ್ಯಾ ವೈ ಸ ಮುಗ್ಧೋ ಮಧುರೇಶ್ವರಃ ।
ಪದ್ಮಾವತೀ ಮಹಾಭಾಗಾ ತಸ್ಯ ಪ್ರಾಣಪ್ರಿಯಾಽಭವತ್ ॥ ೮ ॥

ತಯಾ ವಿನಾ ನ ಬುಭುಜೇ ತಯಾ ಸಹ ಪ್ರಕ್ರೀಡಯೇತ್ ।
ತಯಾ ವಿನಾ ನ ವೈ ಲೇಭೇ ಪರಮಂ ಸುಖಮೇವ ಸಃ ॥ ೯ ॥

---

೪. ಹೀಗಿರಲು ವಿದರ್ಭದೇಶದಲ್ಲಿ ಸತ್ಯಕೇತುವೆಂಬುವನೊಬ್ಬನಿದ್ದನು. ಅವನಿಗೆ ಪದ್ಮದಂತಿರುವ ಮುಖವುಳ್ಳ, ಸತ್ಯ ಧರ್ಮಗಳಿಂದ ಕೂಡಿದ ಪದ್ಮಾವತಿ ಎಂಬ ಮಗಳಿದ್ದಳು.

೫. ಸ್ತ್ರೀ ಸಹಜವಾದ ಸಮಸ್ತ ಸುಗುಣಗಳಿಂದಲೂ ಕೂಡಿ ಆಕೆಯು ಎರಡನೆಯ ಲಕ್ಷ್ಮಿಯಂತೆ ಬೆಳಗುತ್ತಿದ್ದಳು.

೬. ಸತ್ಯವೇ ಮೊದಲಾದ ತನ್ನ ಗುಣಗಳಿಂದ ಆ ಪದ್ಮಾವತಿಯು ಪ್ರಕಾಶಿಸುತ್ತಿದ್ದಳು. ಮಥುರೆಯ ಉಗ್ರಸೇನನು ಆಕೆಯನ್ನು ಮದುವೆಮಾಡಿಕೊಂಡನು.

೭. ಅವಳೊಡನೆ ಆತನು ಸುಖದಿಂದಿದ್ದನು. ಅವಳ ಗುಣಗಳಿಂದ ಸಂತೋಷಗೊಂಡು ಸುಖಿಸುತ್ತಿದ್ದನು.

೮. ಆಕೆಯ ಸ್ನೇಹದಿಂದಲೂ, ಪ್ರೀತಿಯಿಂದಲೂ, ಅವನು ಮಗ್ನನಾಗಿರಲು ಆ ಪದ್ಮಾವತಿಯು ಅವನಿಗೆ ಪ್ರಾಣಪ್ರಿಯಳಾಗಿದ್ದಳು.

೯. ಅವಳಿಲ್ಲದೇ ಊಟಮಾಡುತ್ತಿರಲಿಲ್ಲ. ಅವಳೊಡನೆಯೇ ಆಟವಾಡುವನು. ಅವಳಿಲ್ಲದೆ ಉತ್ತಮಸುಖವೆಂಬುದನ್ನೇ ಅರಿಯನು.

ಏವಂ ಪ್ರೀತಿಕರೌ ಜಾತೌ ಪರಸ್ಪರಮನುತ್ತಮೌ ।
ಸ್ನೇಹವಂತೌ ದ್ವಿಜಶ್ರೇಷ್ಠ ಸುಖಸಂಪ್ರೀತಿದಾಯಕೌ ॥ ೧೦ ॥

ಸತ್ಯಕೇತುಶ್ಚ ರಾಜೇಂದ್ರಃ ಸಸ್ಮಾರ ಸ ಪದ್ಮಾವತೀಂ ।
ಸ್ವಸುತಾಂ ತಾಂ ಮಹಾಭಾಗಾಂ ಮಾತಾ ತಸ್ಯಾಸ್ಸುದುಃಖಿತಾ ॥ ೧೧ ॥

ಸಾ ದೂತಾನ್ ಪ್ರೇಷಯಾಮಾಸ ವೈದರ್ಭೀ ಮಾಥುರಂ ಪ್ರತಿ ।
ಉಗ್ರಸೇನಂ ನೃವೀರೇಂದ್ರಂ ಸಾದರೇಣ ದ್ವಿಜೋತ್ತಮ ॥ ೧೨ ॥

ಗತ್ವಾ ದೂತೋಽಥ ಮಥುರಾಂ ರಾಜಾನಂ ವಾಕ್ಯಮಬ್ರವೀತ್ ।
ವಿದರ್ಭಾಧಿಪತಿಂ ಭಕ್ತ್ಯಾ ಸ ಸ್ನೇಹೇನ ನ್ಯವೇದಯತ್ ॥ ೧೩ ॥

ಆತ್ಮನಃ ಕುಶಲಂ ಬ್ರೂತೇ ಭವತಾಂ ಪರಿಪೃಚ್ಛತಿ ।
ಸತ್ಯಕೇತುರ್ಮಹಾರಾಜ ತ್ವಾಮೇವಂ ಪರಿಸ್ನಿಗ್ಧವಾನ್ ॥ ೧೪ ॥

ದರ್ಶನಾಯ ಸುತಾಂ ಚಾರ್ಯ ಪದ್ಮಾವತೀಂ ಚ ಪ್ರೇಷಯ ।
ಯದಿ ತ್ವಂ ಮನ್ಯಸೇ ನಾಥ ಪ್ರೀತಿಸ್ನೇಹಂ ಹಿ ತಸ್ಯ ಚ ॥ ೧೫ ॥

---

೧೦. ಹೀಗೆ ಅವರು ಅನೋನ್ಯ ಪ್ರೀತಿವಂತರೂ, ಸ್ನೇಹವಂತರೂ ಶ್ರೇಷ್ಠ ಸುಖ ಭಾಗಿಗಳೂ ಆಗಿದ್ದರು.

೧೧. ಹೀಗಿರಲು ಆಕೆಯ ತಾಯಿಯು, ಮಗಳನ್ನು ನೋಡಬೇಕೆಂಬಾಸೆಯಿಂದ ದುಃಖಗೊಳ್ಳುವಳು. ಆಗ ಸತ್ಯಕೇತವು ಪದ್ಮಾವತಿಯನ್ನು ಜ್ಞಾಪಿಸಿಕೊಳ್ಳುವನು.

೧೨-೧೪. ಅವರು ಮಧುರೆಗೆ ದೂತರನ್ನು ಕಳುಹಿಸಲು, ಅವರು ಉಗ್ರ... ಸಲ್ಲಿಗೆ ಹೋಗಿ ಅವನಿಗೂ, ಪದ್ಮಾವತಿಗೂ ಭಕ್ತಿಯಿಂದ ನಮಸ್ಕರಿಸಿ, ವಿನಯದಿಂದ ಅರಿಕೆಮಾಡಿದರು—ಸತ್ಯಕೇತು ಮಹಾರಾಜನು ತಾನು ಕ್ಷೇಮವಾಗಿರುವೆನೆಂದೂ, ನಿಮ್ಮ ಕುಶಲವನ್ನು ಕೇಳಿದನೆಂದೂ ದೂತರು ಉಗ್ರಸೇನರಾಜನಿಗೆ ಬಿನ್ನವಿಸಿದರು.

೧೫. ನಿನಗೆ ಅವರಲ್ಲಿ ಪ್ರೀತಿಸ್ನೇಹಗಳಿದ್ದರೆ, ಪದ್ಮಾವತಿಯನ್ನು ಕಳುಹಿಸು. ಅವರು ನೋಡಬೇಕೆನ್ನುತ್ತಾರೆ.

ಪ್ರೇಷಯಸ್ವ ಮಹಾಭಾಗಾಂ ತವ ಪ್ರೀತಿಕರಾಂ ಸದಾ ।
ಔತ್ಸುಕ್ಯೇನ ಮಹಾರಾಜ ಸಾ ಶೋಕೇನಾನುವರ್ತತೇ ॥ ೧೬ ॥

ಸಮಾಕರ್ಣ್ಯ ತತೋ ವಾಕ್ಯಮುಗ್ರಸೇನೋ ನರೋತ್ತಮಃ ।
ಪ್ರೀತ್ಯಾ ಸ್ನೇಹೇನ ತಸ್ಯಾಪಿ ಸತ್ಯಕೇತೋರ್ಮಹಾತ್ಮನಃ ॥ ೧೭ ॥

ದಾಕ್ಷಿಣ್ಯೇನ ಚ ವಿಪ್ರೇಂದ್ರ ಪ್ರೇಷಯಾಮಾಸ ಭೂಪತಿಃ ।
ಪದ್ಮಾವತೀಂ ಪ್ರಿಯಾಂ ಭಾರ್ಯ್ಯಾಮುಗ್ರಸೇನಃ ಪ್ರತಾಪವಾನ್ ॥ ೧೮ ॥

ಪ್ರೇಷಿತಾ ತೇನ ರಾಜೇಂದ್ರ ಗತಾ ಪದ್ಮಾವತೀ ಸ್ವಕಂ।
ಪೂರ್ವಂ ಗೃಹಂ ಸತೀ ಸಾ ತು ಮಹಾಹರ್ಷೇಣ ಸಂಯುತಾ ॥ ೧೯ ॥

ಪಿತೃಪೂರ್ವಂ ಕುಟುಂಬಂ ತು ದದೃಶೇ ಚಾರುಮಂಗಳಾ ।
ಪಿತುಃ ಪಾದೌ ನನಾಮಾಥ ಶಿರಸಾ ಸತ್ಯತತ್ಪರಾ ॥ ೨೦ ॥

ಆಗತಾಯಾಂ ಮಹಾರಾಜ ಪದ್ಮಾವತ್ಯಾಂ ದ್ವಿಜೋತ್ತಮ ।
ಹರ್ಷೇಣ ಮಹತಾವಿಷ್ಟೋ ವಿದರ್ಭಾಧಿಪತಿರ್ನೃಪಃ ॥ ೨೧ ॥

ವರ್ಧಿತಾ ಮಾನದಾನೈಶ್ಚ ವಸ್ತ್ರಾಲಂಕಾರಭೂಷಣೈಃ ।
ಪದ್ಮಾವತೀ ಪಿತುರ್ಗೇಹೇ ಸುಖೇನಾಪಿ ಪ್ರವರ್ತತೇ ॥ ೨೨ ॥

---

೧೬. ನಿನ್ನ ಪ್ರೀತಿಪಾತ್ರಳಾದ ಆಕೆಯನ್ನು ನೋಡಬೇಕೆಂದು ರಾಜನೂ ರಾಣಿಯೂ ಹಂಬಲಿಸುತ್ತಿರುವರು. ಆದುದರಿಂದ ಪದ್ಮಾವತಿಯನ್ನು ಕಳುಹಿಸಿ ಅವರನ್ನು ಸಂತೋಷಪಡಿಸು ಎಂದರು.

೧೭-೧೯. ಉಗ್ರಸೇನನು ಆ ಮಾತನ್ನು ಕೇಳಿ, ಅವಳಲ್ಲಿರುವ ಪ್ರೀತಿಸ್ನೇಹ ಗಳಿಂದಲೂ, ಸತ್ಯಕೇತುವಿನ ದಾಕ್ಷಿಣ್ಯದಿಂದಲೂ ತನ್ನ ಪ್ರಿಯ ಮಡದಿಯಾದ ಪದ್ಮಾ ವತಿಯನ್ನು ಕಳುಹಿಸಲು, ಆಕೆಯು ಸಂತೋಷದಿಂದ ಹೊರಟು ತಂದೆಯ ಮನೆ ಯನ್ನು ಸೇರಿದಳು.

೨೦-೨೧. ಆಕೆಯು ಅಲ್ಲಿಗೆ ಹೋಗಿ ತಂದೆಯೇ ಮೊದಲಾದ ಮನೆಯವರನ್ನು ನೋಡಿ ಅವರಿಗೆ ನಮಸ್ಕಾರವನ್ನು ಮಾಡಲು, ಅದನ್ನು ಕಂಡು ವಿದರ್ಭಾಧಿಪತಿಯು ಸಂತೋಷಗೊಂಡನು.

೨೨-೨೩. ರಾಜನು ಉಡುಗರೆಗಳಿಂದಲೂ ವಸ್ತ್ರಾಭರಣಗಳಿಂದಲೂ ಪದ್ಮಾ ವತಿಯನ್ನು ಸಂತೋಷಗೊಳಿಸಿದನು. ಆಕೆಯು ಅಲ್ಲಿ ಸಖಿಯರೊಡನೆ ಚಿಕ್ಕಂದಿ ನಲ್ಲಿದಂತೆಯೇ ಇಷ್ಟಬಂದಹಾಗೆ ಆಟವಾಡುತ್ತಿದ್ದಳು.

**ಸಖೀಭಿಸ್ಸಹಿತಾ ಸಾ ತು ನಿಶ್ಶಂಕಂ ಪರಿವರ್ತತೇ ।**
**ರಮತೇ ಸಾ ತದಾ ತತ್ರ ಯಥಾಪೂರ್ವಂ ತಥೈವ ಚ ॥ ೨೩ ॥**

**ಗೃಹೇ ವನೇ ತಟಾಗೇಷು ಪ್ರಾಸಾದೇಷು ತಥೈವ ಚ ।**
**ಪುನರ್ಬಾಲಾ ಬಭೂವಾಥ ನಿರ್ಲಜ್ಜೇವ ಪ್ರವರ್ತತೇ ॥ ೨೪ ॥**

**ನಿಶ್ಶಂಕಾ ವರ್ತತೇ ವಿಪ್ರ ಸಖೀಭಿಸ್ಸಹ ಸರ್ವದಾ ।**
**ಪತಿವ್ರತಾ ಮಹಾಭಾಗಾ ಹರ್ಷೇಣ ಮಹತಾನ್ವಿತಾ ॥ ೨೫ ॥**

**ಸುಖಂ ತು ಪಿತೃಗೇಹಸ್ಯ ದುರ್ಲಭಂ ಶ್ವಾಶುದೇ ಗೃಹೇ ।**
**ಏವಂ ಜ್ಞಾತ್ವಾ ತದಾ ರೇಮೇ ಕದಾ ಈದೃಗ್ಭವಿಷ್ಯತಿ ॥ ೨೬ ॥**

**ಅನೇನ ಮೋಹಭಾವೇನ ಕ್ರೀಡಾಲುಬ್ಧಾ ವರಾನನಾ ।**
**ಸಖೀಭಿಸ್ಸಹಿತಾ ನಿತ್ಯಂ ವನೇಷೂಪವನೇ ತದಾ ॥ ೨೭ ॥**

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ಅಷ್ಟಚತ್ವಾರಿಂಶೋಽಧ್ಯಾಯಃ**

---

೨೪-೨೫. ಮನೆ, ಉದ್ಯಾನವನ, ಕೆರೆ, ಅರಮನೆಗಳಲ್ಲಿ ಬಾಲ್ಯದಂತೆಯೇ ಲಜ್ಜೆಯಿಲ್ಲದೆ ಪತಿವ್ರತೆಯಾದ ಆಕೆಯು ಹರ್ಷದಿಂದ ಕೂಡಿ ಸ್ವಲ್ಪವೂ ಶಂಕಿಸದೆ ಸಖಿಯರೊಡನೆ ಕ್ರೀಡಿಸುತ್ತಿದ್ದಳು.

೨೬-೨೭. ತಂದೆಯ ಮನೆಯ ಸುಖವು ಮಾವನ ಮನೆಯಲ್ಲಿ ಬರುವುದೇ? ಎಂದಿಗೂ ಇಲ್ಲ. ಮತ್ತೆ ಈ ವಿಧವಾದ ಸುಖವೆಲ್ಲಿ ಬರುವುದು ಎಂದು ತಿಳಿದು, ಮೋಹದಿಂದ ಆಟಪಾಡಗಳಲ್ಲಿ ಆಸಕ್ತಳಾಗಿ ಸಖಿಯರೊಡನೆ ವನದಲ್ಲಿಯೂ ಮನೆಯಲ್ಲಿಯೂ ಪ್ರತಿನಿತ್ಯವೂ ವಿಹರಿಸುತ್ತಿದ್ದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ ಏಕೋನಪಂಚಾಶತ್ತಮೋಽಧ್ಯಾಯಃ

॥ ಬ್ರಾಹ್ಮಣ್ಯುವಾಚ ॥

ಏಕದಾ ತು ಮಹಾಭಾಗ ಗತಾ ಸಾ ಪರ್ವತೋತ್ತಮಂ ।
ರಮಣೀಯಂ ವನಂ ದೃಷ್ಟ್ವಾ ಕದಳೀಖಂಡಮಂಡಿತಂ ॥ ೧ ॥

ಸಾಲೈಸ್ತಾಲೈಸ್ತಮಾಲೈಶ್ಚ ನಾಳಿಕೇರೈಸ್ತಥೋತ್ಕಟೈಃ ।
ಪೂಗೀಫಲೈರ್ಮಾತುಲಂಗೈ ರ್ನಾರಂಗೈಶ್ಚಾರುಜಂಬುಕೈಃ ॥ ೨ ॥

ಚಂಪಕೈಃ ಪಾಟಲೈಃ ಪುಷ್ಪೈಃ ಪುಷ್ಪಿತೈಃ ಕೇತಕೈರ್ವರೈಃ ।
ಅಶೋಕವಕುಲೋಪೇತಂ ನಾನಾವೃಕ್ಷೈರಲಂಕೃತಂ ॥ ೩ ॥

ಪರ್ವತಂ ಪುಷ್ಪವಂತಂ ಚ ಪುಷ್ಪಿತೈಶ್ಚ ನಗೋತ್ತಮೈಃ ।
ಸರ್ವತ್ರ ಶೋಭಿತಂ ರಮ್ಯಂ ನಾನಾಧಾತುಸಮಾಕುಲಂ ॥ ೪ ॥

---

## ನಲವತ್ತೊಂಭತ್ತನೆಯ ಅಧ್ಯಾಯವು

೧-೪. ಬ್ರಾಹ್ಮಣಿಯು ಹೇಳುತ್ತಾಳೆ. ಹೀಗಿರಲು ಒಂದು ಸಾರಿ ಪದ್ಮಾವತಿಯು ಕ್ರೀಡಿಸಲು ಪರ್ವತ ಸಮೀಪದಲ್ಲಿರುವ ವನಕ್ಕೆ ಹೋದಳು. ಆ ವನದಲ್ಲಿ ಬಾಳೆ, ಸಾಲ, ತಾಳೆ, ಹೊಂಗೆ, ತೆಂಗು, ಅಡಕೆ, ಮಾದಳ, ಹೇರಿಳೆ, ನೇರಿಳೆ, ಸಂಪಿಗೆ, ಪಾದರಿ, ಗೇದಗೆ, ಅಶೋಕ, ವಕುಲ, ಇವುಗಳು ಹೂಬಿಟ್ಟು ಶೋಭಿಸುವುದರಿಂದ ಎಲ್ಲ ಕಡೆಯಲ್ಲಿಯೂ ರಮ್ಯವಾಗಿದ್ದಿತು. ಅಲ್ಲದೆ ಅನೇಕ ಬಗೆಯ ಧಾತುಗಳಿಂದ ಕೂಡಿ ನಾನಾ ಬಣ್ಣವುಳ್ಳದ್ದಾಗಿ ಶೋಭಿಸುತ್ತಿತ್ತು.

ಗೌರರಮ್ಯತರಂ ದೃಷ್ಟ್ವಾ ತದೇವ ವನಮುತ್ತಮಂ ।
ತಟಾಕಂ ಸರ್ವತೋಭದ್ರಂ ಪುಷ್ಪತೋಯೇನ ಪೂರಿತಂ ॥ ೫ ॥

ಕಮಲೈಃ ಪುಷ್ಪಿತೈಶ್ಚಾನ್ಯೈಃ ಸುಗಂಧೈಃ ಕನಕೋತ್ಪಲೈಃ ।
ಶ್ವೇತೋತ್ಪಲೈರ್ವಿಭಾಸಂತಂ ರಕ್ತೋತ್ಪಲಸುಪುಷ್ಪಿತೈಃ ॥ ೬ ॥

ನೀಲೋತ್ಪಲೈಶ್ಚ ಕಲ್ಹಾರೈರ್ಹಂಸೈಶ್ಚ ಜಲಕುಕ್ಕುಟೈಃ ।
ಪಕ್ಷಿಭಿರ್ಜಲಜೈಶ್ಚಾನ್ಯೈರ್ನಾನಾಧಾತುಸಮಾಕುಲಂ ॥ ೭ ॥

ತಟಾಕಂ ಸರ್ವತಶ್ಶುಭ್ರಂ ನಾನಾಪಕ್ಷಿಗಣೈರ್ಯುತಂ ।
ಕೋಕಿಲಾನಾಂ ರುತೈಃ ಪುಣ್ಯೈಃ ಸುಸ್ವರೈಃ ಪರಿಶೋಭಿತಂ ॥ ೮ ॥

ಮಯೂರಾಣಾ ತಥಾ ಶಬ್ದೈಃ ಸ್ವರಂ ಚ ಮಧುರಾಯತೇ ।
ಷಟ್ಪದಾನಾಂ ಸುನಾದೇನ ಸರ್ವತ್ರ ಪರಿಶೋಭತೇ ॥ ೯ ॥

ಏವಂ ವಿಧಂ ಗಿರಿಂ ರಮ್ಯಂ ತದೇವ ವನಮುತ್ತಮಂ ।
ತಟಾಗಂ ಸರ್ವತೋಭದ್ರಂ ದದೃಶೇ ನೃಪನಂದಿನೀ ॥ ೧೦ ॥

ವೈದರ್ಭೀ ಕ್ರೀಡಮಾನಾ ಸಾ ಸಖೀಭಿಸ್ಸಹಿತಾ ತದಾ ।
ಸಮಾಲೋಕ್ಯ ವನಂ ಪುಣ್ಯಂ ಸರ್ವತ್ರ ಕುಸುಮಾಕುಲಂ ॥ ೧೧ ॥

---

೫-೧೦. ಅಲ್ಲೊಂದು ಕೆರೆಯಿದ್ದಿತು. ಅದರಲ್ಲಿದ್ದ ಕಮಲ, ಸುಗಂಧವಾದ ಕನ್ನೈದಿಲೆ, ಬಿಳಿಕಮಲ, ಕೆಂಪುಕಮಲ, ಇವುಗಳ ಸುವಾಸನೆಯಿಂದಲೂ, ಅಲ್ಲಲ್ಲಿ ಸಂಚರಿಸುತ್ತಿರುವ ನೀರುಕೋಳಿ, ಇನ್ನೂ ಅನೇಕವಾದ ನೀರಿನ ಹಕ್ಕಿಗಳಿಂದಲೂ, ನೀರಿನಲ್ಲಿರುವ ಗೈರಿಕಾದಿ ಧಾತುಗಳಿಂದಲೂ ಕೂಡಿ ಅತಿ ಮನೋಹರವಾಗಿರುವುದು. ನೋಡುವುದಕ್ಕೆ ಆ ಸರೋವರವು ಬಹು ಶುಭ್ರವಾಗಿ ಕಾಣುತ್ತಿರುವುದು. ಅಲ್ಲದೆ, ಕೋಗಿಲೆ ಮುಂತಾದ ಪಕ್ಷಿಗಳ ಸುಸ್ವರಗಳಿಂದಲೂ ನವಿಲುಗಳ ಕೇಕಾರವದಿಂದಲೂ ದುಂಬಿಗಳ ಝೇಂಕಾರ ಧ್ವನಿಗಳಿಂದಲೂ, ಎಲ್ಲಾ ಕಡೆಯಲ್ಲೂ ಮನೋಹರವಾಗಿ ರುವುದು. ಈ ರೀತಿ ಎಲ್ಲ ವಿಧದಲ್ಲಿಯೂ ರಮ್ಯವಾದ ಕೆರೆಯನ್ನು ನೋಡಿದಳು.

೧೧-೧೩. ಆ ಪದ್ಮಾವತಿಯು ಆ ಕೆರೆಯನ್ನು ನೋಡಿ ಕೆರೆಯ ಪ್ರಭಾವ ದಿಂದಲೂ, ತನ್ನ ಸ್ತ್ರೀಸ್ವಭಾವದ ಚಾಪಲ್ಯದಿಂದಲೂ, ಸಂತೋಷದಿಂದಲೂ,

ಚಾಪಲ್ಯೇನ ಪ್ರಭಾವೇಣ ಸ್ತ್ರೀಭಾವೇನ ಚ ಲೀಲಯಾ ।
ಪದ್ಮಾವತೀ ಸರಸ್ತೀರೇ ಸಖೀಭಿಸ್ಸಹಿತಾ ತದಾ ॥ ೧೨ ॥

ಜಲಕ್ರೀಡಾಸಮಾಲೀನಾ ಹಸತೇ ಗಾಯತೇ ಪುನಃ ।
ಸುಖೇನ ರಮಮಾಣಾ ಸಾ ತಸ್ಮಿಕ್ ಸರಸಿ ಭಾಮಿನೀ ॥ ೧೩ ॥

ಏವಂ ವಿಪ್ರ ತದಾ ಸಾ ತು ಸುಖೇನ ಪರಿವರ್ತತೇ ।
ಗೋಭಿಲೋ ನಾಮ ವೈ ದೈತ್ಯೋ ಭೃತ್ಯೋ ವೈಶ್ರವಣಸ್ಯ ಚ ॥ ೧೪ ॥

ದಿವ್ಯೇನಾಪಿ ವಿಮಾನೇನ ಸರ್ವಭೋಗಪರಿಷ್ಕೃತಃ ।
ಯಾತಿ ಚಾಕಾಶಮಾರ್ಗೇಣ ತಟಾಗಸ್ಯೋರ್ಧ್ವಮಾಗತಃ ॥ ೧೫ ॥

ತೇನ ದೃಷ್ಟ್ವಾ ವಿಶಾಲಾಕ್ಷೀ ವೈದರ್ಭೀ ನಿರ್ಭಯಾ ತದಾ ।
ಸರ್ವಯೋಷಿದ್ವರಾ ಸಾ ಹಿ ಉಗ್ರಸೇನಸ್ಯ ವೈ ಪ್ರಿಯಾ ॥ ೧೬ ॥

ರೂಪೇಣಾಪ್ರತಿಮಾ ಲೋಕೇ ಸರ್ವಾಂಗೇಷು ವಿರಾಜತೇ ।
ರತಿರ್ವೈ ಮನ್ಮಥಸ್ಯಾಪಿ ಕಿಂ ವಾಪೀಯಂ ಹರಿಪ್ರಿಯಾ ॥ ೧೭ ॥

ಕಿಂ ವಾಪಿ ಪಾರ್ವತೀ ದೇವೀ ಶಚೀ ಕಿಂ ವಾ ಭವಿಷ್ಯತಿ ।
ಯಾದೃಶೀ ದೃಶ್ಯತೇ ಚೇಯಂ ನಾರೀಣಾಮುತ್ತಮಾ ವರಾ ॥ ೧೮ ॥

---

ಸಖಿಯರೊಡನೆ ಜಲಕ್ರೀಡೆಯಾಡುತ್ತಾ, ಅದರ ದಡದಲ್ಲಿದ್ದುಕೊಂಡು, ನಗುತ್ತಲೂ, ಹಾಡುತ್ತಲೂ ಸುಖದಿಂದ ಅಲ್ಲಿ ಕ್ರೀಡಿಸುತ್ತಿದ್ದಳು.

೧೪-೧೫. ಈ ರೀತಿ ಸುಖದಿಂದಿರುತ್ತಿರಲು, ಕುಬೇರನ ಸೇವಕನಾದ ಗೋಭಿಲನೆಂಬ ರಾಕ್ಷಸನು ಸಮಸ್ತ ವೈಭವದಿಂದ ಕೂಡಿ ಆಕಾಶ ಮಾರ್ಗದಲ್ಲಿ ವಿಮಾನದಿಂದ ಬರುತ್ತಾ ಈ ಕೆರೆಯ ಮೇಲು ಭಾಗಕ್ಕೆ ಬಂದು ಅಲ್ಲಿ,

೧೬. ಭಯವಿಲ್ಲದೆ ಸಂಚರಿಸುತ್ತಿರುವ, ಹೆಂಗಸರೊಳಗೆ ಶ್ರೇಷ್ಠಳಾದ ಈ ಉಗ್ರಸೇನನ ಹೆಂಡತಿಯನ್ನು ಕಂಡನು. ಲೋಕದಲ್ಲಿ ಈಕೆಯಂತೆ ಸುಂದರಿಯು ಮತ್ತೊಬ್ಬಳಿಲ್ಲ. ಆಕೆಯು ರೂಪಿನಿಂದ ಲೋಕದಲ್ಲಿ ಸರ್ವಾಂಗಸುಂದರಿಯು.

೧೭-೧೮. ಇವಳೇನು ರತಿದೇವಿಯೇ, ಲಕ್ಷ್ಮಿಯೇ, ಪಾರ್ವತಿಯೇ, ಇಲ್ಲವೇ ಶಚೀದೇವಿಯೇ, ಯಾರಿರಬಹುದು? ಹೆಂಗಸರಲ್ಲಿ ಇಷ್ಟುಮಟ್ಟಿಗೆ ಉತ್ತಮಳಾಗಿರುವಳಲ್ಲ?

**ಅನ್ಯಾ ಚೈವೇದೃಶೀ ನಾಸ್ತಿ ದ್ವಿತೀಯಾ ಕ್ಷಿತಿಮಂಡಲೇ ।**
**ನಕ್ಷತ್ರೇಷು ಯಥಾ ಚಂದ್ರಃ ಸಂಪೂರ್ಣೋ ಭಾತಿ ಶೋಭನಃ ॥ ೧೯ ॥**

**ಗುಣರೂಪಕಲಾಭಿಸ್ತು ಯಥಾ ಭಾತಿ ವರನನಾ ।**
**ಪುಷ್ಕರೇಷು ಯಥಾ ಹಂಸಸ್ತಥೇಯಂ ಚಾರುಹಾಸಿನೀ ॥ ೨೦ ॥**

**ಅಹೋ ರೂಪಮಹೋ ಭಾವಮಸ್ಯಾಸ್ತು ಪರಿದೃಶ್ಯತೇ ।**
**ಕಾ ಕಸ್ಯ ಶೋಭನಾ ಬಾಲಾ ಚಾರುವೃತ್ತಪಯೋಧರಾ ॥ ೨೧ ॥**

**ವಿಪಶ್ಯ ಗೋಭಿಲೋ ದೈತ್ಯಃ ಪದ್ಮಾವತೀಂ ವರಾನನಾಂ ।**
**ಚಿಂತಯಿತ್ವಾ ಕ್ಷಣಂ ವಿಪ್ರ ಕಾ ಕಸ್ಯಾಪಿ ಭವಿಷ್ಯತಿ ॥ ೨೨ ॥**

**ಜ್ಞಾನೇನ ಮಹತಾ ಜ್ಞಾತ್ವಾ ವೈದರ್ಭೀತಿ ನ ಸಂಶಯಃ ।**
**ದಯಿತಾ ಉಗ್ರಸೇನಸ್ಯ ಪತಿವ್ರತಪರಾಯಣಾ ॥ ೨೩ ॥**

**ಆತ್ಮಬಲೇನ ತಿಷ್ಠಂತೀ ದುಷ್ಪ್ರಾಪ್ಯಾ ಪುರುಷೈರಪಿ ।**
**ಉಗ್ರಸೇನೋ ಮಹಾಮೂರ್ಖಃ ಪ್ರೇಷಿತಾ ಯೇನ ವೈ ವರಾ ॥ ೨೪ ॥**

---

೧೯-೨೦. ಈ ಭೂಮಂಡಲದಲ್ಲಿ ಇಂತಹವಳು ಮತ್ತೊಬ್ಬಳಿಲ್ಲ. ನಕ್ಷತ್ರಗಳ ಮಧ್ಯದಲ್ಲಿ ಚಂದ್ರನು ಸಂಪೂರ್ಣವಾಗಿ ಎಲ್ಲಾ ಕಲೆಗಳಿಂದಲೂ ಹೇಗೆ ಶೋಭಿಸುತ್ತಾನೋ ಹಾಗೆ ಗುಣ, ರೂಪ, ವಿದ್ಯೆಗಳಿಂದ ಈಕೆಯು ಸಖಿಯರ ಮಧ್ಯದಲ್ಲಿ ಶೋಭಿಸುತ್ತಿರುವಳು. ಕೊಳಗಳಲ್ಲಿ ಹಂಸವು ಶೋಭಿಸುವಂತೆ ಈಕೆಯು ಮನೋಹರವಾದ ಮುಗುಳುನಗೆಯಿಂದ ಶೋಭಿಸುತ್ತಿರುವಳು.

೨೧. ಆಹಾ ! ಇವಳ ರೂಪವೆಷ್ಟು ಚೆನ್ನಾಗಿರುವುದು ? ಹಾವಭಾವವಿಲಾಸ ಶೈಯ್ಯಾರಾದಿಗಳು ಇವಳಿಗೆ ಎಷ್ಟು ಚೆನ್ನಾಗಿ ಒಪ್ಪುವವು ? ಈಕೆ ಯಾರು ? ಯಾರ ಮಗಳಿರಬಹುದು ? ಹೀಗೆಂದು

೨೨-೨೩. ಆ ಗೋಭಿಲನು ಪದ್ಮಾವತಿಯನ್ನು ನೋಡಿ ಕ್ಷಣಕಾಲ ಯೋಚಿಸಿ ಜ್ಞಾನದೃಷ್ಟಿಯಿಂದ ಇವಳು ವೈದರ್ಭಿಯೆಂದೂ, ಉಗ್ರಸೇನನ ಹೆಂಡತಿಯೆಂದೂ ತಿಳಿದು ಇವಳು ಪತಿವ್ರತೆಯೆಂದೂ ಮನಸ್ಸಿನಲ್ಲೇ ತಿಳಿದುಕೊಂಡನು.

೨೪. ಇನ್ನೊಬ್ಬರ ಜೊತೆಯಲ್ಲಿಲ್ಲದೆ ತನ್ನಷ್ಟಕ್ಕೆ ತಾನೇ ಇರುವಳು. ಇವಳ ಪತಿಯಾದ ಉಗ್ರಸೇನನು ಮಹಾಮೂರ್ಖನು. ಈ ಉತ್ತಮಳಾದ ಸ್ತ್ರೀಯನ್ನು ಒಬ್ಬಳನ್ನೇ ಹೀಗೆ ಕಳುಹಿಸಿರುವನಲ್ಲ ?

ಪಿತುರ್ಗೇಹಮಿಯಂ ಬಾಲಾ ಸ ತು ಭಾಗ್ಯೇನವರ್ಜಿತಃ ।
ಅನಯಾ ವಿನಾ ಸ ಜೀವೇಚ್ಚ ಕಥಂ ಕೂಟಮತಿಸ್ಸದಾ ॥ ೨೫ ॥

ಕಿಂ ವಾ ನಪುಂಸಕೋ ರಾಜಾ ವಿನಾಂ ಯೋ ಹಿ ಪರಿತ್ಯಜೇತ್ ।
ತಾಂ ದೃಷ್ಟ್ವಾ ಸ ತು ಕಾಮಾತ್ಮಾ ಸಂಜಾತಸ್ತತ್ಕ್ಷಣಾದಪಿ ॥ ೨೬ ॥

ಇಯಂ ಪತಿವ್ರತಾ ಬಾಲಾ ದುಷ್ಪ್ರಾಪ್ಯಾ ಪುರುಷೈರಪಿ ।
ಕಥಂ ಭೋಕ್ಷ್ಯಾಮ್ಯಹಂ ಗತ್ವಾ ಕಾಮೋ ತಿ ಮಮ ಪೀಡಯೇತ್ ॥ ೨೭ ॥

ಅಭುಕ್ತ್ವಾಽಹಂ ಯದಾ ಯಾಸ್ಯೇ ಮೃತ್ಯುರ್ಮಮ ತದಾ ಭವೇತ್ ।
ಅದ್ಯೈವ ಹಿ ನ ಸಂದೇಹೋ ಯತಃ ಕಾಮೋ ಮಹಾಬಲಃ ॥ ೨೮ ॥

ಇತಿ ಚಿಂತಾಪರೋ ಭೂತ್ವಾ ಉಪಾಯಂ ಸಸೃಜೇ ತದಾ ।
ಕೃತ್ವಾ ಮಾಯಾಮಯಂ ರೂಪಂ ಉಗ್ರಸೇನಸ್ಯ ಭೂಪತೇಃ ॥ ೨೯ ॥

ಯಾದೃಶಸ್ತೂಗ್ರಸೇನಶ್ಚ ಸಾಂಗೋಪಾಂಗೋ ಮಹಾನೃಪಃ ।
ಗೋಭಿಲಸ್ತಾದೃಶೋ ಭೂತ್ವಾ ಗತ್ಯಾ ಚ ಸ್ವರಭಾಷಯಾ ॥ ೩೦ ॥

ಯಥಾ ವಸ್ತ್ರೋ ಯಥಾ ವೇಷೋ ವಯಸಾ ಚ ತಥಾ ಪುನಃ ।
ದಿವ್ಯಮಾಲಾಂಬರಧರೋ ದಿವ್ಯಗಂಧಾನುಲೇಪನಃ ॥ ೩೧ ॥

ಸರ್ವಾಭರಣಶೋಭಾಂಗೋ ಯಾದೃಶೋ ಮಾಥುರೇಶ್ವರಃ ।
ಭೂತ್ವಾ ಚ ತಾದೃಶೋ ದೈತ್ಯ ಉಗ್ರಸೇನಮಯಸ್ತದಾ ॥ ೩೨ ॥

---

೨೫-೨೬. ತಂದೆಯ ಮನೆಗೆ ಈರೀತಿ ಕಳುಹಿಸಬಹುದೆ ? ಅವನು ಹೀನ ಅದೃಷ್ಟದವನು. ಇವಳನ್ನು ಬಿಟ್ಟು ಹೇಗೆ ಜೀವಿಸಿರುವನು ? ಅವನೇನು ಕುಟಿಲ ಬುದ್ಧಿಯುಳ್ಳವನೋ ಅಥವಾ ನಪುಂಸಕನೋ ? ಆಕೆಯನ್ನು ನೋಡಿ ಆ ಗೋಭಿಲನು ಕಾಮಪರವಶನಾದನು.

೨೭-೨೮. ಇವಳೋ ಪತಿವ್ರತೆ. ಪರಪುರುಷರಿಗೆ ಸಿಕ್ಕುವವಳಲ್ಲ. ನಾನು ಹೇಗೆ ಇವಳನ್ನು ಅನುಭವಿಸಲಿ ? ಕಾಮವು ಬಹಳವಾಗಿ ಪೀಡಿಸುತ್ತಿರುವುದು, ಏನು ಮಾಡಲಿ ? ಅನುಭವಿಸದೇಹೋದರೆ ಆ ಯೋಚನೆಯಿಂದಲೇ ಸಾವು ನನಗೆ ಖಂಡಿತ. ಆಮೇಲೇಕೆ ? ಈಗಲೇ ಸಾವು ಸಿದ್ಧ. ಕಾಮನು ಬಹು ಬಲಿಷ್ಠನು. ನನ್ನನ್ನು ಬಹುಬಾಧಿಸುತ್ತಿರುವನು. ಹೀಗೆ-ಯೋಚಿಸಿ ಒಂದು ಉಪಾಯವನ್ನು ಕಂಡುಹಿಡಿದನು.

೨೯-೩೨. ಉಗ್ರಸೇನನು ಯಾವರೀತಿ ಇರುವನೋ ಅದೇ ರೀತಿಯಾಗಿ ಮಾಯಾಕಾರವಾದ ರೂಪವನ್ನು ಹೊಂದಿ ಎಲ್ಲಾ ವಿಷಯದಲ್ಲಿಯೂ ಎಲ್ಲಾ ಅಂಗಗಳಲ್ಲಿಯೂ, ನಡೆಗೆ,ಬಟ್ಟೆ, ಸ್ವರ, ಹೂ, ಗಂಧ, ಆಭರಣಗಳು ಎಲ್ಲದರಲ್ಲೂ ಆತನಂತೆ ಆಗಿ,

ಮಾಯಯಾ ಪರಯಾ ಯುಕ್ತೋ ರೂಪತಾರುಣ್ಯಸಂಯುತಃ ।
ಪರ್ವತಾಗ್ರೇ ಅಶೋಕಸ್ಯ ಛಾಯಾಮಾಶ್ರಿತ್ಯ ಸಂಸ್ಥಿತಃ ॥ ೩೩ ॥

ಶಿಲಾತಲಸ್ಥೋ ದುಷ್ಟಾತ್ಮಾ ವೀಣಾಂ ದಂಡೇನ ವಾದಕಃ ।
ಸುಸ್ವರಂ ಗಾಯಮಾನಸ್ತು ಗೀತಂ ವಿಶ್ವಪ್ರಮೋದನಂ ॥ ೩೪ ॥

ತಾಲಮಾನಕ್ರಿಯೋಪೇತಂ ಸಪ್ತಸ್ವರವಿಭೂಷಿತಂ ।
ಗೀತಂ ಗಾಯತಿ ದುಷ್ಟಾತ್ಮಾ ತಸ್ಯಾ ರೂಪೇಣ ಮೋಹಿತಃ ॥ ೩೫ ॥

ಪರ್ವತಾಗ್ರೇ ಸ್ಥಿತೋ ವಿಪ್ರ ಹರ್ಷೇಣ ಮಹತಾನ್ವಿತಃ ।
ಸಖೀಮಧ್ಯಗತಾ ಸಾ ತು ಪದ್ಮಾವತೀ ವರಾನನಾ ॥ ೩೬ ॥

ಶುಶ್ರುವೇ ಸುಸ್ವರಂ ಗೀತಂ ತಾಳಮಾನಲಯಾನ್ವಿತಂ ।
ಕೋಽಯಂ ಗಾಯತಿ ಧರ್ಮಾತ್ಮಾ ಮಹತ್ಸೌಖ್ಯಪ್ರದಾಯಕಂ ॥ ೩೭ ॥

ಗೀತಂ ಸತ್ಕ್ರಿಯೋಪೇತಂ ಸರ್ವಭಾವಮನ್ವಿತಂ ।
ಸಖೀಭಿಸ್ಸಹಿತಾ ಗತ್ವಾ ಔತ್ಸುಕ್ಯೇನ ನೃಪಾತ್ಮಜಾ ॥ ೩೮ ॥

ಅಶೋಕಚ್ಛಾಯಾಮಾಶ್ರಿತ್ಯ ವಿಮಲೇಽಥ ಶಿಲಾತಲೇ ।
ದೃಷ್ಟ್ವಾ ಭೂಪಾಲವೇಷೇಣ ಗೋಭಿಲಂ ದಾನವಾಧಮಂ ॥ ೩೯ ॥

---

೩೩-೩೫. ಮಾಯಾಬಲದಿಂದ ಆ ಉಗ್ರಸೇನನ ರೂಪು, ತಾರುಣ್ಯಗಳಿಂದ ಕೂಡಿಕೊಂಡು ಅಲ್ಲಿರುವ ಬೆಟ್ಟದತುದಿಯಲ್ಲಿ ಅಶೋಕಮರದ ನೆರಳಿನಲ್ಲಿದ್ದ ಒಂದು ಕಲ್ಲುಚಪ್ಪಡಿಯಮೇಲೆ ಕುಳಿತುಕೊಂಡು ಸುಸ್ವರವಾಗಿ ಪ್ರಪಂಚವನ್ನೇ ಮೋಹಗೊಳಿಸುವ, ತಾಲ ಮತ್ತು ಕ್ರಿಯೆಗಳಿಂದ ಕೂಡಿದ ಹಾಡುಗಳನ್ನು ಹಾಡುತ್ತಾ ದಂಡದಿಂದ ವೀಣೆಯನ್ನು ಬಾರಿಸುತ್ತಾ, ಆ ದುಷ್ಟಾತ್ಮನು ಅವಳ ರೂಪದಲ್ಲಿ ಮೋಹಿತನಾಗಿದ್ದನು.

೩೬. ಈರೀತಿ ಆ ದುಷ್ಟನು ಪರ್ವತದಮೇಲೆ ಸಂತೋಷದಿಂದ ಹಾಡುತ್ತಿರುವಾಗ ಈ ಪದ್ಮಾವತಿಯು ಸಖಿಯರ ಮಧ್ಯದಲ್ಲಿದ್ದುಕೊಂಡು ಈ ತಾಳ ಮುಂತಾದುವುಗಳಿಂದ ಕೂಡಿದ ಸುಸ್ವರವಾದ ಗೀತವನ್ನು ಕೇಳಿ,

೩೭. ಈ ಉತ್ತಮವಾದ ಭಾವಗರ್ಭಿತವಾದ ಗೀತವನ್ನು ಹಾಡುವ ಧರ್ಮಾತ್ಮನಾರು ? ಬಹು ಸೌಖ್ಯವಾಗಿರುವುದಲ್ಲ ? ಎಂದುಕೊಂಡು

**ಪುಷ್ಪಮಾಲಾಂಬರಧರಂ ದಿವ್ಯಗಂಧಾನುಲೇಪನಂ ।**
**ಸರ್ವಾಭರಣಶೋಭಾಢ್ಯಂ ಪದ್ಮಾವತೀ ಪತಿವ್ರತಾ ॥ ೪೦ ॥**

**ಮಾಥುರೇಶಸ್ಸಮಾಯಾತಃ ಕದಾ ಧರ್ಮಪರಾಯಣಃ ।**
**ಮಮ ನಾಥೋ ಮಹಾತ್ಮಾ ವೈ ರಾಜ್ಯಂ ತ್ಯಕ್ತ್ವಾ ಪ್ರದೂರತಃ ॥ ೪೧ ॥**

**ಯಾವದ್ವಿಚಿಂತಯೇತ್ಸಾ ಚ ತಾವತ್ಪಾಪೇನ ತೇನ ಸಾ ।**
**ಸಮಾಹೂತಾ ಸುವಸ್ತ್ರಾ ಚ ಏಹಿ ತ್ವಂ ಹಿ ಪ್ರಿಯೇ ಮಮ ॥ ೪೨ ॥**

**ಚಕಿತಾ ಶಂಕಿತಾ ಸಾ ಚ ಕಥಂ ಭರ್ತಾ ಸಮಾಗತಃ ।**
**ಲಜ್ಜಿತಾ ದುಃಖಿತಾ ಜಾತಾ ಅಧಃ ಕೃತ್ವಾ ತತೋ ಮುಖಂ ॥ ೪೩ ॥**

**ಅಹಂ ಪಾಪಾ ದುರಾಚಾರಾ ನಿಶ್ಶಂಕಾ ಪರಿವರ್ತಿತಾ ।**
**ಕೋಪಮೇವಂ ಮಹಾಭಾಗಃ ಕರಿಷ್ಯತಿ ನ ಸಂಶಯಃ ॥ ೪೪ ॥**

---

೩೮-೩೯. ಸಖಿಯರಿಂದ ಕೂಡಿ ಬಹು ಆಸೆಯಿಂದ ಆಕೆಯು ಅಶೋಕ ವೃಕ್ಷದ ನೆರಳಿನಲ್ಲಿ ಕಲ್ಲಿನಮೇಲೆ ಕುಳಿತು ರಾಜನ ವೇಷದಿಂದ ಹಾಡುತ್ತಿರುವ ಆದಾನ ವಾಧಮನಾದ ಗೋಭಿಲನನ್ನು ನೋಡಿದಳು. ಅವನು ಪುಷ್ಪಮಾಲೆಯನ್ನು

೪೦. ಧರಿಸಿ ಒಳ್ಳೆಯ ಗಂಧವನ್ನು ಪೂಸಿಕೊಂಡು ಸರ್ವಾಭರಣಶೋಭಿತನಾಗಿದ್ದನು. ಆತನನ್ನು ಪತಿವ್ರತೆಯಾದ ಪದ್ಮಾವತಿಯು ನೋಡಿದಳು.

೪೧. ಧರ್ಮಪರಾಯಣನಾಗಿಯೂ ಮಥುರಾಧಿಪತಿಯಾಗಿಯೂ ಇರುವ ನನ್ನ ಗಂಡನು ರಾಜ್ಯವನ್ನು ಬಿಟ್ಟು ಇಷ್ಟುದೂರಕ್ಕೆ ಯಾವಾಗ ಬಂದನು ?

೪೨. ಇವಳು ಹೀಗೆ ಯೋಚಿಸುತ್ತಿರುವಷ್ಟರಲ್ಲಿ ಆ ಪಾಪಿಯು, ವಸ್ತ್ರಾಲಂಕಾರಭೂಷಿತಳಾಗಿರುವ ಈಕೆಯನ್ನು ನೋಡಿ ಪ್ರಿಯಳೇ ಇಲ್ಲಿ ಬಾ ಎಂದು ಕರೆದನು.

೪೩-೪೪. ಆಕೆಯು ಚಿಕಿತಳಾಗಿ ಸಂಶಯಗೊಂಡು, ಆ ಧರ್ಮಾತ್ಮನು ಇಲ್ಲಿಗೆ ಹೇಗೆಬಂದನು ? ಎಂದುಕೊಂಡು ಲಜ್ಜೆಯಿಂದಲೂ ದುಃಖದಿಂದಲೂ ಮುಖವನ್ನು ಬಗ್ಗಿಸಿಕೊಂಡು, ನಾನು ಪಾಪಿಯು. ದುರಾಚಾರಿಣಿಯು, ನಿಶ್ಶಂಕಳಾಗಿ ನಡೆದುಕೊಳ್ಳುತ್ತಿರುವೆನಲ್ಲಾ ? ಹೀಗಿರುವುದರಿಂದ ಕೋಪಮಾಡಿಕೊಳ್ಳುವನು ಸಂಶಯವಿಲ್ಲ. ಎಂದು ಇವಳು ಯೋಚಿಸುತ್ತಿರುವಷ್ಟರಲ್ಲಿ ಆ ಪಾಪಿಯು, ಪ್ರಿಯಳೇ ಬಾ, ಬಾ, ಎಂದು ಮತ್ತೆ ಕರೆದನು.

**ಯಾವದ್ಧಿ ಚಿಂತಯೇತ್ಸಾ ಚ ತಾವತ್ತೇನಾಪಿ ಪಾಪಿನಾ ।**
**ಸಮಾಹೂತಾ ಸ್ವಯಂ ಸಾ ಚ ಏಹ್ಯೇಹಿ ತ್ವಂ ಮಮ ಪ್ರಿಯೇ ॥ ೪೫ ॥**

**ತ್ವಯಾ ವಿನಾ ಕೃತೋ ದೇವಿ ಪ್ರಾಣಾನ್ಧರ್ತುಂ ವರಾನನೇ ।**
**ನ ಹಿ ಶಕ್ನೋಮ್ಯಹಂ ಕಾಂತೇ ಜೀವಿತಂ ಪ್ರಿಯಮೇವ ಚ ॥ ೪೬ ॥**
**ತವ ಸ್ನೇಹೇನ ಮುಗ್ಧೋಽಸ್ಮಿ ತ್ವಾಂ ತ್ಯಕ್ತ್ವಾ ನೋತ್ಸಹೇ ಭೃಶಂ ।**

**॥ ಬ್ರಾಹ್ಮಣ್ಯುವಾಚ ॥**

**ಏವಮುಕ್ತ್ವಾ ಗತಾ ತಸ್ಯ ಸಂಮುಖೀ ಲಜ್ಜಯಾನ್ವಿತಾ ।**
**ಸಮಾಲಿಂಗ್ಯ ತತೋ ದೈತ್ಯಂ ಸತೀ ಪದ್ಮಾವತೀ ತದಾ ॥ ೪೭ ॥**

**ಏಕಾಂತಂ ತು ಸಮಾನೀತಾ ಸುಭುಕ್ತಾ ಸ್ವೇಚ್ಛಯಾ ತತಃ ।**
**ದೈತ್ಯೇನ ಗೋಭಿಲೇನಾಪಿ ಸತ್ಯಕೇತೋಽಸ್ಸುತಾ ತದಾ ॥ ೪೮ ॥**

**॥ ಸುಕಲೋವಾಚ ॥**

**ಸುಖಸ್ಥಾನೇಽಸ್ಯ ಸಂಕೇತಮವಿಂದಂತೀ ವರಾನನಾ ।**
**ಸ್ವವಸ್ತ್ರಂ ಸಾ ಪರಿಗೃಹ್ಯ ಶಂಕಿತಾ ದುಃಖಿತಾಭವತ್ ॥ ೪೯ ॥**

---

ಇವಳು ಯೋಚಿಸುತ್ತಿರುವಷ್ಟರಲ್ಲಿ ಆ ಪಾಪಿಯು, ಪ್ರಿಯಳೇ! ಬಾ, ಬಾ, ಎಂದು ಮತ್ತೆ ಕರೆದನು.

೪೬. ನಿನ್ನನ್ನು ಬಿಟ್ಟು ಇರುವುದರಿಂದ ಜೀವಿತವನ್ನು ಧರಿಸಲು ಸಾಧ್ಯವೇ ಇಲ್ಲ. ನಿನ್ನ ಸ್ನೆಹದಿಂದ ಮೂಢನಾಗಿ ನಿನ್ನನ್ನು ಬಿಡಲು ಸಾಧ್ಯವೇ ಇಲ್ಲದವನಾಗಿ ದ್ದೇನೆ ಎಂದು ಅವಳನ್ನು ಪ್ರಾರ್ಥಿಸಿದನು.

೪೭-೪೮. ಬ್ರಾಹ್ಮಣನ ಹೆಂಡತಿಯು ಹೇಳಿದಳು:—ಹೀಗೆ ಹೇಳಲು, ಆಕೆಯು ಲಜ್ಜೆಯಿಂದ ವೇಷಧಾರಿಯಾದ ಗೋಭಿಲನ ಬಳಿಗೆ ಹೋದಳು. ನಿರ್ಜನ ಪ್ರದೇಶಕ್ಕೆ ಆತನು ಆ ಪದ್ಮಾವತಿಯನ್ನು ಕರೆದುಕೊಂಡು ಹೋಗಿ ಯಥೇಚ್ಛವಾಗಿ ಕಾಮಸುಖವನ್ನು ಅನುಭವಿಸಿದನು.

೪೯. ಸುಕಲೆಯು ಹೇಳಿದಳು:—ದಂಪತಿಗಳು ಸುಖಪಡುತ್ತಿರುವಾಗ ಕೆಲವು ಸಂಕೇತಗಳುಂಟಷ್ಟೆ? ಅದನ್ನು ಅಲ್ಲಿ ತಿಳಿಯದಿರಲು ಆಗ ಆಕೆಯು ಸಂದೇಹಗೊಂಡು ತನ್ನ ಸೆರಗನ್ನು ಮುಚ್ಚಿಕೊಂಡು ದುಃಖಿತಳಾದಳು.

ಸಾ ಸಕ್ರೋಧಮುವಾಚಾಥ ಗೋಭಿಲಂ ದಾನವಾಧಮಂ ।
ಕಸ್ತ್ವಂ ಪಾಪಸಮಾಚಾರೋ ನಿರ್ಘೃಣೋ ದಾನವಾಕೃತಿಃ ॥ ೫೦ ॥

ಶಪ್ತುಕಾಮಾ ಸಮುದ್ಯುಕ್ತಾ ದುಃಖೇನಾಕುಲತೇಕ್ಷಣಾ ।
ವೇಪಮಾನಾ ತದಾ ರಾಜನ್ ದುಃಖಭಾರೇಣ ಪೀಡಿತಾ ॥ ೫೧ ॥

ಮಮ ಕಾಂತಚ್ಛಲೇನ್ನೈವ ತ್ವಮಾಗತೋ ದುರಾತ್ಮವಾನ್ ।
ನಾಶಿತಂ ಧರ್ಮವತ್ಕಾಯಂ ಪತಿವ್ರತಮನುತ್ತಮಂ ॥ ೫೨ ॥

ಸುಸ್ವರಂ ರುದಿತಂ ಕೃತ್ವಾ ಮಮ ಜನ್ಮ ತ್ವಯಾ ಹೃತಂ ।
ಪಶ್ಯ ಮೇ ಬಲಮತ್ರೈವ ಶಾಪಂ ದಾಸ್ಯೇ ಸುದಾರುಣಂ ॥ ೫೩ ॥

ಏವಂ ಸಂಭಾಷಮಾಣಾಂ ತಾಂ ಶಪ್ತುಕಾಮಾಂ ಸ ಗೋಭಿಲಃ ॥ ೫೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತ ಏಕೋನಪಂಚಾಶತ್ತಮೋಽಧ್ಯಾಯಃ

---

೫೦. ಆಗ ಆಕೆಯು ಕೋಪಗೊಂಡು ಗೋಭಿಲನಾದ ಆ ಅಯೋಗ್ಯನನ್ನು ಕುರಿತು ಈ ಪಾಪಕೆಲಸವನ್ನು ಮಾಡಿದ ನೀನಾರು? ದಯಾಶೂನ್ಯನಾದ ರಾಕ್ಷಸನಾಗಿರುವೆ. ಎಂದು ಕೋಪದಿಂದ ಹೇಳಿದಳು.

೫೧. ದುಃಖದಿಂದ ಕಣ್ಣುಗಳಲ್ಲಿ ನೀರುಸುರಿಸುತ್ತಾ ಆ ದುಃಖವನ್ನೂ ಸಹಿಸಲಾರದೆ ನಡುಗುತ್ತಾ ಆತನಿಗೆ ಶಾಪಕೊಡಲು ಸಿದ್ಧಳಾದಳು.

೫೨-೫೪. ದುಷ್ಟನಾದ ನೀನು ನನ್ನ ಗಂಡನ ರೂಪಿನಿಂದ ಬಂದು ನನ್ನ ಧರ್ಮಮೂರ್ತಿಯಾದ ಈ ದೇಹವನ್ನೂ ಉತ್ತಮವಾದ ಪಾತಿವ್ರತ್ಯವನ್ನೂ ಹಾಳು ಮಾಡಿದ್ದೀಯೆ. ಹೀಗೆಂದು ಬಹುವಾಗಿ ದುಃಖಿಸಿ, ಮತ್ತೆ ಅವನನ್ನು ಕುರಿತು ನನ್ನ ಈ ಜನ್ಮವನ್ನು ನೀನು ಹಾಳುಮಾಡಿದೆ. ನನ್ನ ಬಲವನ್ನು ಇಲ್ಲೇ ನೋಡು. ಘೋರವಾದ ಶಾಪವನ್ನು ಕೊಡುವೆನು ಎಂದು ಹೇಳುತ್ತಿರುವಷ್ಟರಲ್ಲಿಯೇ ಆಕೆಯನ್ನು ಕುರಿತು ಗೋಭಿಲನು ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಇಲ್ಲಿಗೆ ನಾಲ್ವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಾಶತ್ತಮೋಽಧ್ಯಾಯಃ

---

॥ ಸುಕಲೋವಾಚ ॥

ತಸ್ಯಾಸ್ತು ವಚನಂ ಶ್ರುತ್ವಾ ಗೋಭಿಲೋ ವಾಕ್ಯಮಬ್ರವೀತ್ ।
ಭವತೀ ಶಪ್ತುಕಾಮಾಸಿ ಕಸ್ಮಾನ್ಮೇ ಕಾರಣಂ ವದ ॥ ೧ ॥

ಕೇನ ದೋಷೇಣ ಲಿಪ್ತೋಽಸ್ಮಿ ಯಸ್ಮಾತ್ತ್ವಂ ಶಪ್ತುಮುದ್ಯತಾ ।
ಗೋಭಿಲೋ ನಾಮ ದೈತ್ಯೋಽಸ್ಮಿ ಪೌಲಸ್ತ್ಯಸ್ಯ ಭಟಶ್ಶುಭೇ ॥ ೨ ॥

ದೈತ್ಯಾಚಾರೇಣ ವರ್ತಾಮಿ ಜಾನೇ ವಿದ್ಯಾಮನುತ್ತಮಾಂ ।
ವೇದಶಾಸ್ತ್ರಾರ್ಥವೇತ್ತಾಸ್ಮಿ ಕಲಾಸು ನಿಪುಣಃ ಪುನಃ ॥ ೩ ॥

ಏವಂ ಸರ್ವಂ ವಿಜಾನಾಮಿ ದೈತ್ಯಾಚಾರಂ ಶೃಣುಷ್ವ ಮೇ ।
ಪರಸ್ವಂ ಪರದಾರಾಂಶ್ಚ ಬಲಾದ್ಭುಂಜಾಮಿ ನಾನ್ಯಥಾ ॥ ೪ ॥

---

## ಐವತ್ತನೆಯ ಅಧ್ಯಾಯವು

೧. ಸಕಲೆಯು ಹೇಳಿದಳು:—ಗೋಭಿಲನು ಆಕೆಯ ಮಾತನ್ನು ಕೇಳಿ, ನೀನು ನನ್ನನ್ನು ಶಪಿಸುವುದಕ್ಕೆ ಕಾರಣವೇನು ? ಹೇಳು

೨-೩. ನೀನು ಶಾಪಕೊಡಲು ಸಿದ್ಧಳಾಗಿರುವೆಯಲ್ಲ. ನನ್ನಲ್ಲಿರುವ ದೋಷ ವೇನು ? ನಾನು ಗೋಭಿಲನೆಂಬ ರಾಕ್ಷಸನು. ಕುಬೇರನ ಸೇವಕನು. ದೈತ್ಯರ ಆಚಾರ ವುಳ್ಳವನು. ಉತ್ತಮವಾದ ವಿದ್ಯೆಗಳನ್ನೂ ವೇದಶಾಸ್ತ್ರಾರ್ಥಗಳನ್ನೂ ಬಲ್ಲೆನು. ಕಲೆಗಳಲ್ಲಿ ನಿಪುಣನಾಗಿದ್ದೇನೆ. ಈ ರೀತಿ ಎಲ್ಲವನ್ನೂ ಬಲ್ಲೆನು. ಆದರೆ ದೈತ್ಯರ ಆಚಾರವನ್ನು ಹೇಳುವೆನು ಕೇಳು.

೪. ಪರರ ಸ್ವತ್ತನ್ನೂ, ಪರರ ಹೆಂಡಿರನ್ನೂ ಬಲಾತ್ಕಾರದಿಂದ ಅನುಭವಿಸು ವುದು ದೈತ್ಯರ ಸಹಜಸ್ವಭಾವವು. ಅದರಂತೆಯೇ ನಾನು ಆಚರಿಸುವೆನು.

ವಯಂ ದೈತ್ಯಾಃ ಸಮಾಕರ್ಣ್ಯ ದೈತ್ಯಾಚಾರೇಣ ಸಾಂಪ್ರತಂ ।
ವರ್ತಾಮೋ ಜ್ಞಾತಿಭಾವೇನ ಸತ್ಯಂ ಸತ್ಯಂ ವದಾಮ್ಯಹಂ ॥ ೫ ॥

ಬ್ರಾಹ್ಮಣಾನಾಂ ಹಿ ಚ್ಛಿದ್ರಾಣಿ ವಿಪಶ್ಯಾಮೋ ದಿನೇ ದಿನೇ ।
ತೇಷಾಂ ಹಿ ತಪಸಾಂ ನಾಶಂ ವಿಘ್ನೈಃ ಕುರ್ಮೋ ನ ಸಂಶಯಃ ॥ ೬ ॥

ಛಿದ್ರಂ ಪ್ರಾಪ್ಯ ನ ಸಂದೇಹೋ ನಾಶಯಾಮೋ ನ ಸಂಶಯಃ ।
ಬ್ರಾಹ್ಮಣಾನ್ ಶ್ರೂಯತಾಂ ಭದ್ರೇ ದೇವಯಜ್ಞಂ ವರಾನನೇ ॥ ೭ ॥

ನಾಶಯಾಮೋ ವಯಂ ಯಜ್ಞಾ ಧರ್ಮಂ ಯಜ್ಞಂ ನ ಸಂಶಯಃ ।
ಸುಬ್ರಾಹ್ಮಣಾನ್ ಪರಿತ್ಯಜ್ಯ ದೇವಂ ನಾರಾಯಣಂ ಪ್ರಭುಂ ॥ ೮ ॥

ಪತಿವ್ರತಾಂ ಮಹಾಭಾಗಾಂ ಸುದತೀಂ ಭರ್ತೃತತ್ಪರಾಂ ।
ದೂರೇಣಾಪಿ ಪರಿತ್ಯಜ್ಯ ತಿಷ್ಠಾಮೋ ನಾತ್ರ ಸಂಶಯಃ ॥ ೯ ॥

---

೫. ನಾವು ದೈತ್ಯರು, ಆದುದರಿಂದ ದೈತ್ಯಾಚಾರಾದಿಂದ ವರ್ತಿಸುತ್ತೇವೆ. ಅಲ್ಲದೆ ಮಿಕ್ಕವರಲ್ಲಿ ಜ್ಞಾತಿ ಭಾವವನ್ನಿಟ್ಟುಕೊಂಡು ದ್ವೇಷಿಸಿ ಅನುಭವಿಸುತ್ತೇವೆ. ಈ ಮಾತು ಸತ್ಯವೆಂದು ಮತ್ತೆ ಮತ್ತೆ ಹೇಳುತ್ತೇನೆ. ಅಲ್ಲದೆ,

೬. ಪ್ರತಿದಿನದಲ್ಲಿಯೂ ಬ್ರಾಹ್ಮಣರಲ್ಲಿ ಛಿದ್ರವನ್ನು ಹುಡುಕುತ್ತಲೇ ಇರುತ್ತೇವೆ. ಅವರು ತಪಸ್ಸನ್ನು ವಿಘ್ನಗಳಿಂದ ನಾಶಮಾಡುತ್ತಲೇ ಇರುತ್ತೇವೆ.

೭. ಅವರ ಛಿದ್ರಗಳನ್ನು ಹುಡುಕುವುದೇ ನಮ್ಮ ಕೆಲಸವು. ಅವರು ಮಾಡುವ ದೇವಯಜ್ಞವನ್ನು ನಾಶಮಾಡುತ್ತೇವೆ.

೮. ಒಳ್ಳೆಯ ಬ್ರಾಹ್ಮಣರನ್ನೂ ನಾರಾಯಣನನ್ನೂ ಬಿಟ್ಟು ಮಿಕ್ಕವರ ಯಜ್ಞಗಳನ್ನು, ಧರ್ಮಗಳನ್ನೂ ನಾಶಮಾಡುತ್ತೇವೆ. ಇವರಲ್ಲಿ ಸಂಶಯವಿಲ್ಲ.

೯. ಪತಿವ್ರತೆಯಾದವಳು, ಗಂಡನಲ್ಲೇ ಆಸಕ್ತಳಾಗಿದ್ದರೆ ಅವಳನ್ನು ದೂರದಲ್ಲೇ ಬಿಟ್ಟುಬಿಡುತ್ತೇವೆ. ಅವಳ ತಂಟೆಗೆ ಹೋಗುವುದಿಲ್ಲ. ಇದು ನಿಶ್ಚಯವು.

**ತೇಜೋ ದೇವಿ ಸುವಿಪ್ರಸ್ಯ ಹರೇಶ್ಚೈವ ಮಹಾತ್ಮನಃ ।**
**ಅನ್ಯಾಃ ಪತಿವ್ರತಾಯೊಶ್ಚ ಶಪ್ತುಂ ದೈತ್ಯಾಶ್ಚ ನಕ್ಷಮಾ ॥ ೧೦ ॥**

**ಪತಿವ್ರತಾ ಭಯೇನಾಪಿ ವಿಷ್ಣೋಃ ಸುಬ್ರಾಹ್ಮಣಸ್ಯ ಚ ।**
**ನಶ್ಯಂತಿ ದಾನವಾಸ್ಸರ್ವೇ ದೂರಂ ರಾಕ್ಷಸಪುಂಗವಾಃ ॥ ೧೧ ॥**

**ಅಹಂ ದಾನವಧರ್ಮೇಣ ವಿಚರಾಮಿ ಮಹೀತಳಂ ।**
**ಕಸ್ಮಾತ್ತ್ವಂ ಶಪ್ತುಕಾಮಾಸಿ ಮಮ ದೋಷೋ ವಿಚಾರ್ಯತಾಂ ॥ ೧೨ ॥**

**॥ ಪದ್ಮಾವತ್ಯುವಾಚ ॥**

**ಮಮ ಧರ್ಮಃ ಸುಕಾಯಶ್ಚ ತ್ವಯೈವ ಪರಿನಾಶಿತಃ ।**
**ಅಹಂ ಪತಿವ್ರತಾ ಸಾಧ್ವೀ ಪತಿಕಾಮಾ ತಪಸ್ವಿನೀ ॥ ೧೩ ॥**

**ಸ್ವಮಾರ್ಗೇ ಸಂಸ್ಥಿತಾ ಪಾಪ ಮಾಯಯಾ ಪರಿನಾಶಿತಾ ।**
**ತಸ್ಮಾತ್ತ್ವಾಮಪ್ಯಹಂ ದುಷ್ಟ ಅಧಕ್ಷ್ಯಾಮಿ ನ ಸಂಶಯಃ ॥ ೧೪ ॥**

---

೧೦. ಒಳ್ಳೆಯ ಬ್ರಾಹ್ಮಣರು, ಹರಿಯು, ಇವರು ತೇಜೋವಂತರು. ಇವರನ್ನು ದೂರದಲ್ಲೇ ಬಿಟ್ಟು ಸಂಚರಿಸುತ್ತೇವೆ. ಆದರೆ ಪತಿವ್ರತೆಯರಾದ ಇತರ ಸ್ತ್ರೀಯರೂ, ದೈತ್ಯರೂ ಶಾಪಕೊಡಲು ಸಮರ್ಥರಲ್ಲ.

೧೧. ಪತಿವ್ರತೆ, ವಿಷ್ಣು, ಸುಬ್ರಾಹ್ಮಣ, ಇವರ ಭಯದಿಂದ ರಾಕ್ಷಸರು ದೂರದಲ್ಲೇ ಇರುತ್ತಾರೆ. ಹತ್ತಿರ ಹೋಗುವುದೇ ಇಲ್ಲ.

೧೨. ನಾನು ಆ ರಾಕ್ಷಸಧರ್ಮವನ್ನು ಅನುಸರಿಸುತ್ತಾ ಸಂಚರಿಸುತ್ತಿದ್ದೇನೆ. ನೀನು ಶಾಪಕೊಡಲು ಕಾರಣವಾದರೂ ಏನು? ನನ್ನಲ್ಲಿ ದೋಷವೇನಿದೆ? ಯೋಚಿಸು ಎಂದನು.

೧೩-೧೪. ಪದ್ಮಾವತಿಯು ಹೇಳಿದಳು ನನ್ನ ಧರ್ಮವೂ, ಈ ಒಳ್ಳೆಯ ಶರೀರವೂ, ನಿನ್ನಿಂದ ದೂಷಿತವಾಯಿತು. ನಾನು ಪತಿವ್ರತೆ, ಸಾಧ್ವಿ, ತಪಸ್ವಿನಿ. ಯಾವಾಗಲೂ ಪತಿಯಲ್ಲೇ ಇಷ್ಟವುಳ್ಳವಳು. ನನ್ನ ಧರ್ಮದಲ್ಲಿ ನಾನಿದ್ದುಕೊಂಡು ಇದ್ದೆನು. ನೀನು ಅದನ್ನು ಮಾಯೆಯಿಂದ ನಾಶಮಾಡಿದೆ. ಆದ್ದರಿಂದ ನಿನ್ನನ್ನು ಸುಡುತ್ತೇನೆ ಸಂಶಯವಿಲ್ಲ ಎಂದಳು.

॥ ಗೋಭಿಲ ಉವಾಚ ॥

ಧರ್ಮಮೇವಂ ಪ್ರವಕ್ಷ್ಯಾಮಿ ಭವತೀ ಯದಿ ಮನ್ಯತೆ ।
ಅಗ್ನಿವಿದ್ಬ್ರಾಹ್ಮಣಸ್ಯಾಪಿ ಶ್ರೂಯತಾಂ ನೃಪನಂದಿನಿ ॥ ೧೫ ॥

ಜುಹೋತಿ ಚ ತ್ರಿಕಾಲಂ ಯೋ ನ ತ್ಯಜೇದಗ್ನಿಮಂದಿರಂ ।
ಸ ಚಾಗ್ನಿಹೋತ್ರೀ ಭವತಿ ಯಜತ್ಯೇವಂ ದಿನೇ ದಿನೇ ॥ ೧೬ ॥

ಅನ್ಯಚ್ಚೈವಂ ಪ್ರವಕ್ಷ್ಯಾಮಿ ಭೃತ್ಯಧರ್ಮಂ ವರಾನನೇ ।
ಮನಸಾ ಕರ್ಮಣಾ ವಾಚಾ ವಿಶುದ್ಧೋ ಯೋ ಹಿ ನಿತ್ಯಶಃ ॥ ೧೭ ॥

ನಿತ್ಯಮಾದೇಶಕಾರೀ ಯೋ ಭಕ್ತ್ಯಾ ತಿಷ್ಠಂತಿ ಚಾಗ್ರತಃ ।
ಸ ಭೃತ್ಯಃ ಕಥ್ಯತೇ ದೇವಿ ಪುಣ್ಯಭೋಕ್ತಾ ನ ಸಂಶಯಃ ॥ ೧೮ ॥

ಯಃ ಪುತ್ರೋ ಗುಣವಾನ್ ಜ್ಞಾತಾ ಪಿತರಂ ಪಾಲಯೇಚ್ಛುಭಃ ।
ಮಾತರಂ ಚ ವಿಶೇಷೇಣ ಮನಸಾ ಕಾಯಕರ್ಮಭಿಃ ॥ ೧೯ ॥

ತಸ್ಯ ಭಾಗೀರಥೀಸ್ನಾನಮಹನ್ಯಹನಿ ಜಾಯತೇ ।
ಅನ್ಯಥಾ ಕುರುತೇ ಯೋ ಹಿ ಸ ಪಾಪೀಯಾನ್ನಸಂಶಯಃ ॥ ೨೦ ॥

---

೧೫. ಗೋಭಿಲನು ಹೇಳಿದನು ಅಗ್ನಿಹೋತ್ರಿಯ ಮತ್ತು ಪತಿವ್ರತೆಯಧರ್ಮಗಳನ್ನು ಹೇಳುತ್ತೇನೆ. ಇಷ್ಟವಿದ್ದರೆ ಕೇಳು.

೧೬. ಯಾವನು ಅಗ್ನಿಮಂದಿರವನ್ನು ಬಿಡದೆ ತ್ರಿಕಾಲದಲ್ಲಿಯೂ ಅಗ್ನಿಹೋತ್ರ ಮಾಡಿಕೊಂಡು, ವಿಶೇಷಕಾಲದಲ್ಲಿ ಯಾಗಾದಿಗಳನ್ನು ಮಾಡಿಕೊಂಡಿರುತ್ತಾನೋ ಅವನೇ ಅಗ್ನಿಹೋತ್ರಿಯು.

೧೭-೧೮. ಅಲ್ಲದೆ ಭೃತ್ಯಧರ್ಮವನ್ನು ಹೇಳುತ್ತೇನೆ, ಕೇಳು. ಕಾಯಾ, ವಾಚಾ, ಮನಸಾ, ನಿತ್ಯದಲ್ಲೂ ಶುದ್ಧನಾಗಿರಬೇಕು. ನಿತ್ಯವೂ ಯಜಮಾನನ ಅಪ್ಪಣೆಯನ್ನು ಪಾಲಿಸುತ್ತಿರಬೇಕು. ತಿಂಡಿ ತಿನ್ನುವಾಗ ಉಪಚಾರಾದಿಗಳನ್ನು ಮಾಡುತ್ತಾ ಎದುರಿಗಿರಬೇಕು. ಅವನೇ ಭೃತ್ಯನೆಂಬುವನು. ಅವನೇ ಪುಣ್ಯವಂತನು. ಸಂಶಯವಿಲ್ಲ.

೧೯-೨೦. ಮಗನು ಗುಣವಂತನಾಗಿ ತಂದೆತಾಯಿಗಳನ್ನು ಅತಿಶಯ ಶ್ರದ್ಧಾ ಭಕ್ತಿಗಳಿಂದ ಕಾಪಾಡುತ್ತಾ, ಕಾಯಾ ವಾಚಾ ಮನಸಾ ಒಂದೇರೀತಿ ಇರುತ್ತಾನೋ

**ಅನ್ಯಚ್ಚೈವಂ ಪ್ರವಕ್ಷ್ಯಾಮಿ ಪತಿವ್ರತಮನುತ್ತಮಂ ।**
**ವಾಚಾ ಸುಮನಸಾ ಚೈವ ಕರ್ಮಣಾ ಶೃಣು ಭಾಮಿನಿ ॥ ೨೧ ॥**

**ಶುಶ್ರೂಷಾಂ ಕುರುತೆ ಯಾ ಹಿ ಭರ್ತುಶ್ಚೈವ ದಿನೇ ದಿನೇ ।**
**ತುಷ್ಟೇ ಭರ್ತರಿ ಯಾ ಪ್ರೀತಾ ನ ತ್ಯಜೇತ್ ಕ್ರೋಧನಂ ಪುನಃ ॥ ೨೨ ॥**

**ತಸ್ಯ ದೋಷಂ ನ ಗೃಹ್ಣಾತಿ ತಾಡಿತಾ ತುಷ್ಯತೇ ಪುನಃ ।**
**ಭರ್ತುಃ ಕರ್ಮಸು ಸರ್ವೇಷು ಪುರತಸ್ತಿಷ್ಠತೇ ಸದಾ ॥ ೨೩ ॥**

**ಸಾ ಚಾಪಿ ಕಥ್ಯತೇ ನಾರೀ ಪತಿವ್ರತಪರಾಯಣಾ ।**
**ಪತಿತಂ ಪಿತರಂ ಪುತ್ರೈರ್ಬಹುದೋಷಸಮನ್ವಿತಂ ।**
**ತಸ್ಮಾದಪಿಚ ನ ತ್ಯಾಜ್ಯಂ ಕ್ರೋಧಿತಂ ಕುಷ್ಠಿನಂ ತದಾ ॥ ೨೪ ॥**

**ಏವಂ ಪುತ್ರಾಶ್ಶುಶ್ರೂಷಂತಿ ಪಿತರಂ ಮಾತರಂ ಕಿಲ ।**
**ತೇ ಯಾಂತಿ ಪರಮಂ ಲೋಕಂ ತದ್ವಿಷ್ಣೋಃ ಪರಮಂ ಪದಂ ॥ ೨೫ ॥**

---

ಅವನಿಗೆ ಪ್ರತಿದಿನವೂ ಭಾಗೀರಥಿಸ್ನಾನಮಾಡಿದಷ್ಟು ಪುಣ್ಯಬರುತ್ತದೆ ಹಾಗಿಲ್ಲದಿದ್ದರೆ ಅತನು ಪಾಪಿಯಾಗುತ್ತಾನೆ. ಸಂಶಯವಿಲ್ಲ.

೨೧-೨೩. ಪಾತಿವ್ರತ್ಯಧರ್ಮವನ್ನು ಹೇಳುತ್ತೇನೆ, ಕೇಳು. ಮನೋವಾಕ್ಕಾಯಗಳಿಂದ ಗಂಡನನ್ನು ನಿತ್ಯವೂ ಶುಶ್ರೂಷೆಮಾಡಬೇಕು. ಗಂಡನು ಸಂತೋಷಗೊಂಡರೆ ತಾನು ಸಂತೋಷಪಡಬೇಕು. ಗಂಡನು ಕೋಪಿಷ್ಠನೆಂದು ಬಿಡಬಾರದು. ಅವನಲ್ಲಿರುವ ದೋಷಗಳನ್ನು ಗ್ರಹಿಸಬಾರದು. ಹೊಡೆದರೂ ಕೋಪಗೊಳ್ಳದೆ ಸಂತೋಷದಿಂದಿರಬೇಕು. ಗಂಡನು ಮಾಡಬೇಕಾದ ಕೆಲಸಗಳಲ್ಲಿ ತಾನು ಮುಂದಾಗಿ ಬರಬೇಕು. ಅಂತಹ ಸ್ತ್ರೀಯು ಪತಿವ್ರತೆಯೆಂದೆನಿಸಿಕೊಳ್ಳುತ್ತಾಳೆ.

೨೪. ಮಕ್ಕಳ ಧರ್ಮವನ್ನು ಹೇಳುವೆನು ಕೇಳು ತಂದೆಯು ಪತಿತನಾಗಿದ್ದರೂ, ಬಹುದೋಷಗಳಿಂದ ಕೂಡಿದ್ದರೂ ಅವನನ್ನು ಬಿಡಬಾರದು. ಕೋಪಿಯಾಗಲಿ, ಕುಷ್ಠಿಯಾಗಲಿ ಅತನನ್ನು ಶ್ರದ್ಧೆಯಿಂದ ಸೇವಿಸಬೇಕು.

೨೫. ಈ ರೀತಿ ಮಕ್ಕಳು ತಾಯಿತಂದೆಗಳನ್ನು ಶುಶ್ರೂಷಿಸಬೇಕು. ಅವರು ಉತ್ತಮಗತಿಯನ್ನು ಹೊಂದುತ್ತಾರೆ. ಪರಮಪದವಾದ ವೈಕುಂಠಕ್ಕೆ ಹೋಗುತ್ತಾರೆ.

ಏವಂ ಹಿ ಸ್ವಾಮಿನಂ ಯೇಽಪಿ ಉಪಚರ್ಯಂತಿ ಭೃತ್ಯಕಾಃ ।
ಪತ್ಯುರ್ಲೋಕಂ ಪ್ರಯಾಂತ್ಯೇತೇ ಪ್ರಸಾದಾತ್ಸ್ವಾಮಿನಸ್ತದಾ ॥ ೨೬ ॥

ಅಗ್ನಿಂ ನೈವ ತ್ಯಜೇದ್ವಿಪ್ರೋ ಬ್ರಹ್ಮಲೋಕಂ ಪ್ರಯಾತಿ ಸಃ ।
ಅಗ್ನಿತ್ಯಾಗಕರೋ ವಿಪ್ರೋ ವೃಷಲೀಪತಿರುಚ್ಯತೇ ॥ ೨೭ ॥

ಸ್ವಾಮಿ ದ್ರೋಹೀ ಭವೇದ್ಭೃತ್ಯಃ ಸ್ವಾಮಿತ್ಯಾಗಾನ್ನ ಸಂಶಯಃ ।
ಅಗ್ನಿಂ ಚ ಪಿತರಂ ಚೈವ ನ ತ್ಯಜೇತ್ಸ್ವಾಮಿನಂ ಶುಭೇ ॥ ೨೮ ॥

ತ್ಯಾಜ್ಯಂ ವಿಪ್ರಸುತೇ ಭೃತ್ಯೈಃ ಸತ್ಯಂ ಸತ್ಯಂ ವದಾಮ್ಯಹಂ ।
ಪರಿತ್ಯಜ್ಯ ಪ್ರಗಚ್ಛಂತಿ ತೇ ಯಾಂತಿ ನರಕಾರ್ಣವಂ ॥ ೨೯ ॥

ಪತಿತಂ ವ್ಯಾಧಿತಂ ದೇವಿ ವಿಕಲಂ ಕುಷ್ಠಿನಂ ಭವೇತ್ ।
ಸರ್ವಧರ್ಮವಿಹೀನಂ ತು ಕೃತಪಾತಕಸಂಚಯಂ ।
ಭರ್ತಾರಂ ನ ತ್ಯಜೇನ್ನಾರೀ ಯದಿ ಶ್ರೇಯ ಇಹೇಚ್ಛತಿ ॥ ೩೦ ॥

---

೨೬. ಹೀಗೆ ಸ್ವಾಮಿಯನ್ನು ಉಪಚಾರಮಾಡಿದ ಭೃತ್ಯರು ಸ್ವಾಮಿಯ ಅನುಗ್ರಹದಿಂದ ಒಡೆಯನ ಲೋಕವನ್ನು ಹೊಂದುತ್ತಾರೆ.

೨೭. ಅಗ್ನಿಯನ್ನು ಬಿಡದೆ ಶುಶ್ರೂಷೆಮಾಡಿದ ಬ್ರಾಹ್ಮಣನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಗ್ನಿಯನ್ನು ಬಿಟ್ಟವನನ್ನು ವೃಷಲೀಪತಿ ಎಂದೆನ್ನುತ್ತಾರೆ.

೨೮. ಭೃತ್ಯನು ಸ್ವಾಮಿಯನ್ನು ತ್ಯಜಿಸಿದರೆ ಸ್ವಾಮಿದ್ರೋಹಿಯಾಗುತ್ತಾನೆ. ಆದ್ದರಿಂದ ಅಗ್ನಿಯನ್ನೂ, ತಂದೆಯನ್ನೂ, ಸ್ವಾಮಿಯನ್ನೂ ಬಿಡಕೂಡದು.

೨೯. ಆಳುಗಳು ತಮ್ಮ ಸ್ವಾಮಿಯನ್ನು ಯಾವಾಗಲೂ ಬಿಡಬಾರದು. ಬಿಟ್ಟು ಹೋದರೆ ನರಕವನ್ನು ಹೊಂದುತ್ತಾರೆ. ಇದು ಸತ್ಯವು.

೩೦. ಗಂಡನಾದವನು, ಜಾತಿಗೆಟ್ಟವನು, ರೋಗಿ, ಅಂಗವಿಕಲ, ಕುಷ್ಠರೋಗಿ, ಸರ್ವಧರ್ಮವರ್ಜಿತ, ಪಾಪಿ ಆದವನಾದರೂ ಪತ್ನಿಯು ಅವನನ್ನು ಬಿಡಬಾರದು. ಬಿಡದಿದ್ದರೆ ಶ್ರೇಯಸ್ಸುಂಟು. ಬಿಟ್ಟರೆ ಶ್ರೇಯಸ್ಸಿಲ್ಲ.

**ತ್ಯಕ್ತ್ವಾ ಕಾಂತಂ ವ್ರಜೇನ್ನಾರೀ ಅನ್ಯತ್ಕಾರ್ಯಮಿಹೇಚ್ಛತೀ ।**
**ಸಾ ಸ್ಯಾದ್ಧಿ ಪುಂಶ್ಚಲೀ ಲೋಕೇ ಸರ್ವಧರ್ಮಬಹಿಷ್ಕೃತಾ ॥ ೩೧ ॥**

**ಗತೇ ಭರ್ತರಿ ಯಾ ಗ್ರಾಮಂ ಭೋಗಂ ಶೃಂಗಾರಮೇವ ಚ ।**
**ಲೌಲ್ಯಾಚ್ಚ ಕುರುತೇ ನಾರೀ ಪುಂಶ್ಚಲೀ ವದತೇ ಜನಃ ॥ ೩೨ ॥**

**ಏವಂ ಧರ್ಮಂ ವಿಜಾನಾಮಿ ವೇದಶಾಸ್ತ್ರೈಶ್ಚ ಸಂಮತಂ ।**
**ದಾನವಾ ರಾಕ್ಷಸಾಃ ಪ್ರೇತಾ ಧಾತ್ರಾ ಸೃಷ್ಟಾ ಯದಾ ತು ತೇ ॥ ೩೩ ॥**

**ತತ್ರೇ ಹಿ ಕಾರಣಂ ಸರ್ವಂ ಪ್ರವಕ್ಷ್ಯಾಮಿ ನ ಸಂಶಯಃ ।**
**ಬ್ರಾಹ್ಮಣಾ ದಾನವೇಷ್ವಿಹ ಪಿಶಾಚೇ ರಾಕ್ಷಸೇಷು ಚ ॥ ೩೪ ॥**

**ಧರ್ಮಾಧರ್ಮಫಲಂ ಪ್ರೋಕ್ತಮಧೀತಂ ತೈಸ್ತು ಸುಂದರಿ ।**
**ವಿಂದಂತಿ ಸಕಲಂ ಸರ್ವ ಆಚರಂತಿ ನ ದಾನವಾಃ ॥ ೩೫ ॥**

**ವಿಧಿಹೀನಂ ಪ್ರಕುರ್ವಂತಿ ದಾನವಾ ಜ್ಞಾನವರ್ಜಿತಾಃ ।**
**ಅನ್ಯಾಯೇನ ವ್ರಜಂತ್ಯೇತೇ ಮಾನವಾ ವಿಧಿವರ್ಜಿತಾಃ ॥ ೩೬ ॥**

---

೩೧. ಬೇರೆ ಕೆಲಸಕ್ಕಾಗಿ ಗಂಡನನ್ನು ಬಿಟ್ಟುಹೋದರೆ ಆಕೆಯು ಪುಂಶ್ಚಲಿಯಾಗುತ್ತಾಳೆ (ಗಂಡುಬೀರಿ) ಸರ್ವಧರ್ಮದಿಂದಲೂ ಆಕೆಯು ಬಹಿಷ್ಕೃತಳು.

೩೨. ಗಂಡನು ಇಲ್ಲದಕಾಲದಲ್ಲಿ ವಸ್ತ್ರಭೂಷಣಾದಿಗಳಿಂದ ಅಲಂಕರಿಸಿಕೊಂಡು ಮೆರೆಯುವ ಹೆಂಗಸು ಪುಂಶ್ಚಲಿಯು.

೩೩. ಈ ಧರ್ಮವು ವೇದಶಾಸ್ತ್ರಗಳಿಗೆ ಸಂಮತವಾದುದೆಂದು ತಿಳಿ. ದಾನವರು, ರಾಕ್ಷಸರು, ಪ್ರೇತಗಳು ಇವನ್ನು ಬ್ರಹ್ಮನು ಏಕೆ ಸೃಷ್ಟಿಮಾಡಿದನೆಂಬುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು.

೩೪-೩೫. ದಾನವರಿಗೂ, ರಾಕ್ಷಸರಿಗೂ, ಪಿಶಾಚಗಳಿಗೂ, ಬ್ರಾಹ್ಮಣಧರ್ಮವನ್ನು ಹೇಳಿದೆ. ಆ ಧರ್ಮವನ್ನೆಲ್ಲಾ ಅವರು ಓದಿಬಲ್ಲರು. ಸಕಲವನ್ನೂ ತಿಳಿದಿದ್ದಾರೆ. ಆದರೆ ಆಚರಿಸುವುದಿಲ್ಲ.

೩೬. ದಾನವರು ತಿಳುವಳಿಕೆಯಿಲ್ಲದೆ ಕ್ರಿಯೆಗಳನ್ನು ವಿಧಿವತ್ತಾಗಿ ಮಾಡುವುದಿಲ್ಲ. ಮಾನವರು ಅನ್ಯಾಯವಾಗಿ ಅದನ್ನೇ ಅನುಸರಿಸುತ್ತಾರೆ.

ತೇಷಾಂ ಸಂಸ್ಕಾರಕಾ ಧಾತ್ರಾ ಕೃತಾಸ್ತೇ ಚಾಪಿ ನಾನ್ಯಥಾ ।
ವಿಧಿಹೀನಂ ಪ್ರಕುರ್ವಂತಿ ಯೇ ತು ಧರ್ಮಂ ನರಾಧಮಾಃ ॥ ೩೭ ॥

ತಾನ್ವಯಂ ಶಾಸಯಾಮೋ ವೈ ದಂಡೇನ ಮಹತಾ ಕಿಲ ।
ಭವತ್ಯಾ ದಾರುಣಂ ಕರ್ಮ ಕೃತಮೇವ ಸುನಿರ್ಘೃಣಂ ॥ ೩೮ ॥

ಗಾರ್ಹಸ್ಥ್ಯಂ ಹಿ ಪರಿತ್ಯಜ್ಯ ಹ್ಯತ್ರಾಯಾತಾ ಕಿಮರ್ಥಂ ವೈ ।
ವದಸ್ಯೇವಂ ಮುಖೇನಾಪಿ ಅಹಂ ಹಿ ಪತಿದೇವತಾ ॥ ೩೯ ॥

ಕರ್ಮಣಾ ನಾಸ್ತಿ ತದ್ದೃಷ್ಟಂ ಪತಿದೈವತಮೇವ ತೇ ।
ನಿಶ್ಶಂಕಾ ವರ್ತಸೇ ಸಾ ವೈ ಪ್ರಮತ್ತಾ ಗಿರಿಕಾನನೇ ॥ ೪೦ ॥

ಮಯಾ ತ್ವಂ ಸಾಧಿತಾ ಪಾಪಾ ದಂಡೇನ ಮಹತಾ ಶೃಣು ।
ಭರ್ತಾರಂ ಚ ಪರಿತ್ಯಜ್ಯ ಕಿಮರ್ಥಂ ತ್ವಮಿಹಾಗತಾ ॥ ೪೧ ॥

ಶೃಂಗಾರಂ ಭೂಷಣಂ ವೇಷಂ ಕೃತ್ವಾ ತಿಷ್ಠಸಿ ನಿರ್ಘೃಣೇ ।
ಕಿಮರ್ಥಂ ಹಿ ಕೃತಂ ಪಾಪೇ ಕಸ್ಯ ಹೇತೋರ್ವದಸ್ವ ಮೇ ॥ ೪೨ ॥

---

೩೭-೩೮. ಅವರುಗಳು ಅನುಸರಿಸಬೇಕಾದ ಆಚಾರಾದಿ ನಿಯಮಗಳನ್ನು ಬ್ರಹ್ಮನೇ ನಿರ್ಮಿಸಿರುವನು, ಮತ್ತೆ ಬೇರೆ ಅಲ್ಲ. ಯಾವ ನರಾಧಮರು ವಿಧಿಹೀನವಾಗಿ ಆ ಕರ್ಮವನ್ನು ಮಾಡುತ್ತಾರೋ, ಅವರನ್ನು ನಾವು ದೊಡ್ಡ ಶಿಕ್ಷೆಯಿಂದ ಶಿಕ್ಷಿಸುತ್ತೇವೆ. ನೀನು ದಯೆಯಿಲ್ಲದೆ, ಆ ಧರ್ಮವನ್ನು ವಿಧಿವತ್ತಾಗಿ ಮಾಡದೆ, ಕ್ರೂರವಾಗಿ ಆಚರಿಸಿದೆ.

೩೯. ಗೃಹಸ್ಥಧರ್ಮವನ್ನು ಬಿಟ್ಟು ಇಲ್ಲಿಗೇತಕ್ಕೆ ಬಂದೆ ? ನಾನು ಪತಿವ್ರತೆಯೆಂದು ಬಾಯಿಬಿಟ್ಟು ಹೇಳುತ್ತಿರುವೆಯಲ್ಲ ?

೪೦. ಆ ಪಾತಿವ್ರತ್ಯವನ್ನು ಕಾರ್ಯತಃ ನೀನು ತೋರಿಸುತ್ತಿಲ್ಲ. ನಿಶ್ಶಂಕೆಯಿಂದ ಮತ್ತಳಾಗಿ ಬೆಟ್ಟದಲ್ಲೂ, ಕಾಡಿನಲ್ಲೂ ಓಡಾಡುವೆಯಲ್ಲ ?

೪೧. ಆದ್ದರಿಂದ ಪಾಪಿಯಾದ ನಿನ್ನನ್ನು ನಾನು ದಂಡಿಸಿರುವೆನು. ಗಂಡನನ್ನು ಬಿಟ್ಟು ನೀನೇಕೆ ಇಲ್ಲಿಗೆ ಬಂದೆ ?

೪೨. ಈರೀತಿ ಶೃಂಗಾರಾದಿ ಭೂಷಣಗಳಿಂದ ಅಲಂಕರಿಸಿಕೊಂಡು ಇಲ್ಲಿ ನಿಂತಿರುವೆಯಲ್ಲ ? ಈರೀತಿ ಮಾಡಿಕೊಂಡಿರುವುದು ಏತಕ್ಕೆಂದು ನನಗೆ ಹೇಳು.

**ಅಧರ್ಮಚಾರಿಣೀ ದುಷ್ಟಾ ಪತಿಂ ತ್ಯಕ್ತ್ವಾ ಸಮಾಗತಾ ।**
**ಕ್ವಾಸ್ತೇ ತತ್ಪತಿದೈವತ್ವಂ ದರ್ಶಯ ತ್ವಂ ಮಮಾಗ್ರತಃ ॥ ೪೩ ॥**

**ಭವತೀ ಪುಂಶ್ಚಲೀ ನಾಮ ಯಯಾ ತ್ಯಕ್ತಃ ಸ್ವಕಃ ಪತಿಃ ।**
**ಪೃಥಕ್ಶಯ್ಯಾ ಯದಾ ನಾರೀ ತದಾ ಸಾ ಪುಂಶ್ಚಲೀ ಮತಾ ॥ ೪೪ ॥**

**ಯೋಜನಾನಾಂ ಶತೈಕಸ್ಯ ಅಂತರೇಣ ಪ್ರವರ್ತಸೇ ।**
**ಕ್ವಾಸ್ತಿ ತೇ ಪತಿದೇವತ್ವಂ ಪುಂಶ್ಚಲ್ಯಾಚಾರಚಾರಿಣಿ ॥ ೪೫ ॥**

**ನಿರ್ಲಜ್ಜೇ ನಿರ್ಘೃಣೇ ದುಷ್ಟೇ ಕಿಂ ಮೇ ವದಸಿ ಸಮ್ಮುಖೀ ।**
**ತಪಸಃ ಕ್ವಾಸ್ತಿ ತೇ ಭಾವಃ ಕ್ವ ತೇಜೋ ಬಲಮೇವ ಚ ।**
**ದರ್ಶಯಸ್ವ ಮಮಾದ್ಯೈವ ಬಲವೀರ್ಯಪರಾಕ್ರಮಂ ॥ ೪೬ ॥**

**॥ ಪದ್ಮಾವತ್ಯುವಾಚ ॥**

**ಸ್ನೇಹೇನಾಪಿ ಸಮಾನೀತಾ ಶ್ರೂಯತಾಮಸುರಾಧಮ ।**
**ಭರ್ತುರ್ಗೇಹಾದಹಂ ಪಿತ್ರಾ ಕ್ವಾಸ್ತೇ ತತ್ರ ಚ ಪಾತಕಂ ॥ ೪೭ ॥**

---

೪೩. ನೀನು ಅಧರ್ಮದಲ್ಲಿದ್ದೀಯೆ, ಗಂಡನನ್ನು ಬಿಟ್ಟು ಬಂದು ದುಷ್ಟಳಾಗಿದ್ದೀಯೆ, ನಿನಗೆ ಪಾತಿವ್ರತ್ಯವೆಲ್ಲಿದೆ ? ನನ್ನೆದುರಿಗೆ ತೋರಿಸು.

೪೪-೪೫. ನೀನು ಗಂಡನನ್ನು ಬಿಟ್ಟು ಬಂದಿರುವುದರಿಂದ ಪುಂಶ್ಚಲಿಯು. ಹೆಂಗಸು ಗಂಡನೊಡನಿರದೆ ಬೇರೆ ಹಾಸಿಗೆಯಲ್ಲಿ ಮಲಗಿದರೇನೇ ಪುಂಶ್ಚಲಿ ಎನ್ನಿಸಿಕೊಳ್ಳುತ್ತಾಳೆ. ಹೀಗಿರುವಾಗ ಗಂಡನನ್ನು ಬಿಟ್ಟು ನೀನು ನೂರಾರು ಯೋಜನಗಳ ದೂರದಲ್ಲಿದ್ದೀಯೆ. ಪುಂಶ್ಚಲಿಯಂತೆ ಆಚರಿಸುತ್ತಲಿರುವ ನಿನಗೆ ಪಾತಿವ್ರತ್ಯವೆಲ್ಲಿದೆ? ದಯಾಶೂನ್ಯಳೇ, ನೀನು ದುಷ್ಟಳು, ನಿರ್ಲಜ್ಜೆಯಿಂದೆ ನನ್ನೆದುರಿಗೆ ಏನು ಬೊಗಳುತ್ತಿ ?

೪೬. ನಿನಗೆ ತಪಸ್ಸು, ತೇಜಸ್ಸು ಇವುಗಳ ಬಲವೆಲ್ಲಿದೆ ? ಎಲ್ಲಿ ನೋಡೋಣ ನಿನ್ನ ಪರಾಕ್ರಮವನ್ನು ಈಗ ತೋರಿಸು ಎಂದನು.

೪೭. ಪದ್ಮಾವತಿಯು ಹೇಳುವಳು :-ಎಲೈ ಅಸುರಾಧಮನೇ, ನನ್ನಮೇಲಿನ ಪ್ರೀತಿಯಿಂದ ನನ್ನನ್ನು ಗಂಡನಮನೆಯಿಂದ ತಂದೆಯ ಮನೆಯವರು ಕರೆತಂದಿದ್ದಾರೆ. ಅದರಲ್ಲಿ ಪಾತಕವೇನಿದೆ ?

ನೈವ ಕಾಮಾನ್ನ ಲೋಭಾಚ್ಚ ನ ಮೋಹಾನ್ನ ಚ ಮತ್ಸರಾತ್ ।
ಆಗತಾಹಂ ಪರಿತ್ಯಜ್ಯ ಪತಿಭಾವೇನ ಸಂಸ್ಥಿತಾ ॥ ೪೮ ॥

ಭರ್ತೃರ್ರೂಪಚ್ಛಲೇನಾಪಿ ತ್ವಯೈವ ಪರಿವಂಚಿತಾ ।
ಭವಸ್ತ್ವಂ ಮಾಥುರಂ ಜ್ಞಾತ್ವಾಽಽಗತಾಹಂ ಸಮ್ಮುಖಂ ತವ ॥ ೪೯ ॥

ಮಾಯಾವಿನಂ ಯದಾ ಜಾನೇ ತ್ವಾಮೇವಂ ದಾನವಾಧಮ ।
ಏಕೇನ ಹುಂಕೃತೇನೈವ ಭಸ್ಮೀಭೂತಂ ಕರೋಮ್ಯಹಂ ॥ ೫೦ ॥

॥ ಗೋಭಿಲ ಉವಾಚ ॥

ಚಕ್ಷುರ್ಹೀನಾ ನ ಪಶ್ಯಂತಿ ಮಾನವಾಃ ಶೃಣು ಸಾಂಪ್ರತಂ ।
ಧರ್ಮನೇತ್ರವಿಹೀನಾ ತ್ವಂ ಕಥಂ ಜಾನಾಸಿ ಮಾಮಿಹ ॥ ೫೧ ॥

ಯದಾ ತೇ ಭಾವ ಉತ್ಪನ್ನಃ ಪಿತುರ್ಗೇಹಂ ಪ್ರತಿ ಶೃಣು ।
ಪತಿಭಾವಂ ಪರಿತ್ಯಜ್ಯ ಮುಕ್ತಾ ಧ್ಯಾನೇನ ತ್ವಂ ತದಾ ॥ ೫೨ ॥

---

೪೮. ನಾನು ಕಾಮದಿಂದಾಗಲಿ, ಲೋಭದಿಂದಾಗಲಿ, ಮೋಹದಿಂದಾಗಲಿ, ಮತ್ಸರದಿಂದಾಗಲಿ ಗಂಡನನ್ನು ಬಿಟ್ಟು ಬಂದವಳಲ್ಲ, ಪತಿಯನ್ನೇ ಸ್ಮರಿಸುತ್ತಿರುವೆನು.

೪೯. ನೀನು ನನ್ನ ಗಂಡನವೇಷದಿಂದ ಇಲ್ಲಿಗೆ ಬಂದು ನನ್ನನ್ನು ವಂಚಿಸಿದೆ. ನೀನು ಮಧುರಾಧಿಪತಿಯೆಂದೇ ನಿನ್ನ ಬಳಿಗೆ ನಾನು ಬಂದೆನು.

೫೦. ನೀನು ಮಾಯಾವಿಯೆಂದು ತಿಳಿದಿದ್ದರೆ. ಒಂದು ಹುಂಕಾರದಿಂದಲೇ ನಿನ್ನನ್ನು ಸುಟ್ಟು ಬೂದಿಯನ್ನಾಗಿ ಮಾಡುತ್ತಿದ್ದೆನು ಎನ್ನಲು,

೫೧. ಗೋಭಿಲನು ಹೇಳುವನು :—ಕುರುಡರಿಗೆ ಕಣ್ಣು ಕಾಣುವುದಿಲ್ಲ. ನಿನಗೆ ಧರ್ಮವೆಂಬ ಕಣ್ಣಿಲ್ಲ. ನನ್ನನ್ನು ಹೇಗೆ ತಿಳಿಯುವೆ ?

೫೨. ತಂದೆ ಮನೆಗೆ ಹೋಗಬೇಕೆಂಬ ಅಭಿಪ್ರಾಯ ನಿನಗೆ ಬಂದಾಗಲೇ ಪಾತಿವ್ರತ್ಯ ಹೋಯಿತು. ಪತಿಧ್ಯಾನವು ಅಲ್ಲಿಗೇ ನಿಂತಿತಷ್ಟೆ ?

ಜ್ಞಾನೇ ತತ್ತ್ವಂ ಯದಾ ನಷ್ಟಂ ಸ್ಫುಟಂ ಚ ಹೃದಯಂ ತವ ।
ಕಥಂ ಮಾಂ ತ್ವಂ ವಿಜಾನಾಸಿ ಜ್ಞಾನಚಕ್ಷುರ್ಹತಾ ಭುವಿ　　॥ ೫೩ ॥

ಕಸ್ಯಾ ಮಾತಾ ಪಿತಾ ಭ್ರಾತಾ ಕಸ್ಯಾಸ್ಸ್ವಜನಬಾನ್ಧವಾಃ ।
ಸರ್ವಸ್ಥಾನೇ ಪತಿರ್ಹ್ಯೇಕೋ ಭಾರ್ಯಾಯಾಸ್ತು ನ ಸಂಶಯಃ　　॥ ೫೪ ॥

ಇತ್ಯುಕ್ತ್ವಾ ಹಿ ಪ್ರಹಸ್ಯೈವ ಗೋಭಿಲೋ ದಾನವಾಧಮಃ ।
ನ ಭಯಂ ವಿದ್ಯತೇ ತೇಽದ್ಯ ಮಮಾಪಿ ಶೃಣು ಪುಂಶ್ಚಲಿ　　॥ ೫೫ ॥

ಕಿಂ ಭವೇತ್ತವ ರೋಷೇಣ ವೃಥೈವ ಪರಿಕಂಪಸೇ ।
ಮಮ ಗೇಹಂ ಸಮಾಶ್ರಿತ್ಯ ಭುಂಕ್ಷ್ವ ಭೋಗಾನ್ಮನೋಽನುಗಾನ್　　॥ ೫೬ ॥

॥ ಪದ್ಮಾವತ್ಯುವಾಚ ॥

ಗಚ್ಛ ಪಾಪಸಮಾಚಾರ ಕಿಂ ತ್ವಂ ವದಸಿ ನಿರ್ಘೃಣ ।
ಸತೀಭಾವೇನ ಸಂಸ್ಥಾಸ್ಮಿ ಪತಿವ್ರತಪರಾಯಣಾ　　॥ ೫೭ ॥
ಧಕ್ಷ್ಯಾಮಿ ತ್ವಾಂ ಮಹಾಪಾಪ ಯದ್ಯೇವಂ ತು ವದಿಷ್ಯಸಿ　　॥ ೫೮ ॥

---

೫೩. ತಿಳಿವಳಿಕೆಯು ಹೋದನಂತರ ಹೃದಯದಲ್ಲಿ ಸ್ಥೈರ್ಯವಿರುವುದಿಲ್ಲ. ಜ್ಞಾನ ಚಕ್ಷುಸ್ಸಿಲ್ಲದುದರಿಂದ ನನ್ನನ್ನು ಹೇಗೆ ತಿಳಿಯುತ್ತೀಯೆ ?

೫೪. ತಾಯಿ, ತಂದೆ ಸೋದರ, ಸ್ವಜನ ಬಂಧುಗಳು ಎಂಬ ಮಮತೆಯು ಯಾರಿಗೆ ಇರಬೇಕೆಂಬುದು ಗೊತ್ತೆ ? ಪತಿವ್ರತೆಗಲ್ಲ, ಇತರರಿಗೆ. ಪತಿವ್ರತೆಗೆ ಅವರ ಸ್ಥಾನದಲ್ಲಿ ಪತಿಯೊಬ್ಬನೇ ಇರಬೇಕು ಎಂದರೆ ಪತಿವ್ರತೆಗೆ ಪತಿಯನ್ನು ಬಿಟ್ಟು ಬೇರೆ ಬಂಧುಗಳಿಲ್ಲ.

೫೫. ಹೀಗೆಂದು ಹೇಳಿ ಆ ಗೋಭಿಲನು ನಕ್ಕು, ಈಗ ನಿನಗೂ ಭಯವಿಲ್ಲ ನನಗೂ ಭಯವಿಲ್ಲ ಗಂಡುಬೀರಿಯೇ, ಕೇಳು.

೫೬. ನಿನ್ನ ಕೋಪದಿಂದೇನಾಗುತ್ತದೆ ? ವ್ಯರ್ಥವಾಗಿ ನಡಗುತ್ತಿರುವೆಯಲ್ಲ. ನನ್ನ ಮನೆಗೆ ಬಾ. ಬಂದು ಮನಸ್ಸಿಗೆ ಬಂದ ಭೋಗಗಳನ್ನು ಅನುಭವಿಸು ಎಂದು ಅವಳನ್ನು ಬಲಾತ್ಕರಿಸಿದನು.

೫೭-೫೮. ಪದ್ಮಾವತಿಯು ಹೇಳಿದಳು—ಎಲೈ ಪಾಪಿಯೇ, ಇಲ್ಲಿಂದ ಹೊರಡು. ಲಜ್ಜೆಯಿಲ್ಲದೆ ಏನು ಬೊಗಳುತ್ತೀಯೇ ? ನಾನು ಪತಿಪರಾಯಣೆಯಾಗಿದ್ದೇನೆ. ಪತಿವ್ರತೆಯಾದ ನನಗೆ ಹೀಗೆ ಹೇಳುತ್ತಿದ್ದರೆ ನಿನ್ನನ್ನು ಸುಡುತ್ತೇನೆ.

ಏವಮುಕ್ತ್ವಾ ತು ಸಾ ಕಾಂತಾ ನಿಷಸಾದ ಮಹೀತಲೇ ।
ದುಃಖೇನ ಮಹತಾವಿಷ್ಟಾ ತಾಮುವಾಚ ಸ ಗೋಭಿಲಃ ॥ ೫೯ ॥

ತವೋದರೇ ಮಯಾ ನ್ಯಾಸಃ ಸ್ವವೀರ್ಯಸ್ಯ ಕೃತಃ ಶುಭೇ ।
ತಸ್ಮಾದುತ್ಪತ್ಸ್ಯತೇ ಪುತ್ರಸ್ತ್ರೈಲೋಕ್ಯಕ್ಷೋಭಕಾರಕಃ ।
ಏವಮುಕ್ತ್ವಾ ಜಗಾಮಾಥ ಗೋಭಿಲೋ ದಾನವಸ್ತದಾ ॥ ೬೦ ॥

ಗತೇ ತಸ್ಮಿನ್ದುರಾಚಾರೇ ದಾನವೇ ಪಾಪಚಾರಿಣಿ ।
ದುಃಖೇನ ಮಹತಾವಿಷ್ಟಾ ನೃಪಕನ್ಯಾ ರುರೋದ ಹ ॥ ೬೧ ॥

**ಇತಿ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ಪಂಚಾಶತ್ತಮೋಽಧ್ಯಾಯಃ**

---

೫೯-೬೦. ಹೀಗೆಂದು ಹೇಳಿ ಆಕೆಯು ನೆಲದಮೇಲೆ ಕುಳಿತು ದುಃಖಿಸುತ್ತಿದ್ದಳು. ಆಗ ಗೋಭಿಲನು ಪುನಃ ಪದ್ಮಾವತಿಯನ್ನು ಕುರಿತು, ನಿನ್ನ ಉದರದಲ್ಲಿ ನಾನು ವೀರ್ಯವನ್ನು ಬಿಟ್ಟಿದ್ದೇನೆ. ಆದರಿಂದ ಮೂರು ಲೋಕವನ್ನೂ ತಲ್ಲಣಿಸುವಂತೆ ಮಾಡುವ ಒಬ್ಬ ಮಗನು ಹುಟ್ಟುತ್ತಾನೆ ಎಂದು ಹೇಳಿ ಆ ಗೋಭಿಲನು ಅಲ್ಲಿಂದ ಹೊರಟುಹೋದನು.

೬೧. ಆ ಪಾಪಿಯು ಹೊರಟುಹೋಗುತ್ತಲೂ, ಬಹು ದುಃಖಗೊಂಡು ಈಕೆಯು ಅಳುತ್ತಿದ್ದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ ಏಕಪಂಚಾಶತ್ತಮೋಽಧ್ಯಾಯಃ

॥ ಬ್ರಾಹ್ಮಣ್ಯುವಾಚ ॥

ಗತೇ ತಸ್ಮಿನ್ದುರಾಚಾರೇ ಗೋಭಿಲೇ ಪಾಪಚೇತಸಿ ।
ಪದ್ಮಾವತೀ ರುರೋದಾಥ ದುಃಖೇನ ಮಹತಾನ್ವಿತಾ ॥ ೧ ॥

ತಸ್ಯಾಸ್ತು ರುದಿತಂ ಶ್ರುತ್ವಾ ಸಖ್ಯಃ ಸರ್ವಾ ದ್ವಿಜೋತ್ತಮ ।
ಪಪ್ರಚ್ಛುಸ್ತಾಂ ರಾಜಕನ್ಯಾಂ ತಾಸ್ಸರ್ವಾಶ್ಚ ವರಾನನಾಂ ॥ ೨ ॥

ಕಸ್ಮಾದ್ರೋದಿಷಿ ಭದ್ರಂ ತೇ ಕಥಯಸ್ವ ಹಿ ಚೇಷ್ಟಿತಂ ।
ಕ್ವ ಗತೋಽಸೌ ಮಹಾರಾಜೋ ಮಾಥುರಾಧಿಪತಿಸ್ತವ ॥ ೩ ॥

ಯೇನ ತ್ವಂ ಹಿ ಸಮಾಹೂತಾ ಪ್ರಿಯೇ ತ್ಯಕ್ತ್ವಾ ವದಸ್ವ ನಃ ।
ತಾ ಉವಾಚ ಸುದುಃಖೇನ ರುದಮಾನಾ ಪುನಃ ಪುನಃ ॥ ೪ ॥

---

## ಐವತ್ತೊಂದನೆಯ ಅಧ್ಯಾಯವು

೧. ಆ ಪಾಪಿಯಾದ ಗೋಭಿಲನು ಹೊರಟುಹೋಗುತ್ತಲೂ ಬಹು ದುಃಖದಿಂದ ಕೂಡಿ ಪದ್ಮಾವತಿಯು ಅಳುತ್ತಿದ್ದಳು.

೨-೪. ಅವಳು ಅಳುತ್ತಿರುವುದನ್ನು ಕೇಳಿ ಆಕೆಯ ಸಖಿಯರೆಲ್ಲರೂ ಬಂದು ಆ ರಾಜಪುತ್ರಿಯರನ್ನು ಸಂತೈಸುತ್ತಾ, ಅಮ್ಮ, ಸಖಿ ಏಕೆ ಅಳುವೆ ? ನೀನು ಭಯ ಪಡಲು ಕಾರಣವೇನು ? ಏನು ನಡೆಯಿತು ಹೇಳು, ನಿನ್ನ ಗಂಡನಾದ ಮಧುರಾಧಿಪತಿಯು ಎಲ್ಲಿಹೋದನು ? ನಿನ್ನನ್ನು ಕರೆದ ಆತನು ನಿನ್ನನ್ನು ಬಿಟ್ಟು ಎಲ್ಲಿಹೋದನು ಎಂಬುದನ್ನು ಹೇಳು ಎಂದು ಕೇಳಿದರು. ಆಗ ಪದ್ಮಾವತಿಯು ಬಾರಿಬಾರಿಗೂ ಅಳುತ್ತ ಆ ಸಖಿಯರನ್ನು ಕುರಿತು.

**ತಯಾ ಆವೇದಿತಂ ಸರ್ವಂ ಯಜ್ಜಾತಂ ದೋಷಸಂಭವಂ ।**
**ತಾಭಿರ್ನೀತಾ ಪಿತುರ್ಗೇಹಂ ವೇಪಮಾನಾ ಸುದುಃಖಿತಾ ॥ ೫ ॥**

**ಮಾತುಃ ಸಮಕ್ಷಂ ತಸ್ಯಾಸ್ತು ಆಚಚಕ್ಷುಸ್ತದಾ ಸ್ತ್ರಿಯಃ ।**
**ಸಮಾಕರ್ಣ್ಯ ತತೋ ದೇವೀ ಗತಾ ಸಾ ಭರ್ತೃಮಂದಿರಂ ॥ ೬ ॥**

**ಭರ್ತಾರಂ ಶ್ರಾವಯಾಮಾಸ ಸುತಾವೃತ್ತಾಂತಮೇವ ಹಿ ।**
**ಸಮಾಕರ್ಣ್ಯ ತತೋ ರಾಜಾ ಮಹಾದುಃಖೀ ತ್ವಜಾಯತ ॥ ೭ ॥**

**ಯಾನಾಚ್ಛಾದನಕಂ ದತ್ವಾ ಪರಿವಾರಸಮನ್ವಿತಾಂ ।**
**ಮಥುರಾಂ ಪ್ರೇಷಯಾಮಾಸ ಗತಾ ಸಾ ಪ್ರಿಯಮಂದಿರಂ ॥ ೮ ॥**

**ಸುತಾದೋಷಂ ಸಮಾಚ್ಛಾದ್ಯ ಪಿತಾ ಮಾತಾ ದ್ವಿಜೋತ್ತಮ ।**
**ಉಗ್ರಸೇನಸ್ತು ಧರ್ಮಾತ್ಮಾ ಪದ್ಮಾವತೀಂ ಸಮಾಗತಾಂ ॥ ೯ ॥**

**ಸ ದೃಷ್ಟ್ವಾ ಮುಮುದೇ ದೇವೀಮುವಾಚೇದಂ ವಚಃ ಪುನಃ ।**
**ತ್ವಯಾ ವಿನಾ ನ ಶಕ್ನೋಮಿ ಜೀವಿತುಂ ಹಿ ವರಾನನೇ ॥ ೧೦ ॥**

**ಬಹು ಪ್ರಭಾಸಿ ಮೇ ಪ್ರೀತಾ ಗುಣೈಶ್ಶೀಲೈಸ್ತು ಸರ್ವದಾ ।**
**ಭಕ್ತ್ಯಾ ಸತ್ಯೇನ ಮೇ ಕಾಂತೇ ಪತಿದೈವತ್ಯಕೈರ್ಗುಣೈಃ ॥ ೧೧ ॥**

---

೫. ಅಲ್ಲಿ ನಡೆದ ಅನರ್ಥಗಳನ್ನೆಲ್ಲಾ ಆಕೆಯು ಹೇಳಿದಳು. ದುಃಖದಿಂದ ನಡಗುತ್ತಿದ್ದ ಆಕೆಯನ್ನು ಆ ಸಖಿಯರು ತಂದೆಯ ಮನೆಗೆ ಕರೆದುಕೊಂಡುಹೋಗಿ ಆಕೆಯ ತಾಯಿಯೊಡನೆ ನಡೆದ ವಿಷಯವನ್ನು ಹೇಳಿದರು.

೬-೭. ಇದೆಲ್ಲವನ್ನೂ ಆಕೆಯು ಕೇಳಿ, ತನ್ನ ಗಂಡನಿದ್ದಲ್ಲಿಗೆ ಹೋಗಿ ಮಗಳ ಸಮಾಚಾರವೆಲ್ಲವನ್ನೂ ಗಂಡನಿಗೆ ತಿಳಿಸಿದಳು. ರಾಜನು ಅದೆಲ್ಲವನ್ನೂ ಕೇಳಿ ಬಹಳ ದುಃಖಗೊಂಡನು.

೮. ಬಳಿಕ ಬೇಕಾದ ಉಡುಗರೆಗಳನ್ನು ಕೊಟ್ಟು ಮಗಳನ್ನು ಪರಿವಾರದೊಡನೆ ಮಥುರೆಗೆ ಕಳುಹಿದನು. ಆಕೆಯು ಗಂಡನ ಮನಗೆ ಹೋದಳು. ಮಗಳ ಈ ದೋಷವನ್ನು ಆ ತಾಯಿತಂದೆಗಳು ಯಾರಿಗೂ ತಿಳಿಸದೆ ಮುಚ್ಚಿದರು.

೯-೧೨. ಧರ್ಮಾತ್ಮನಾದ ಉಗ್ರಸೇನನು, ಪದ್ಮಾವತಿಯು ಬಂದುದನ್ನು ನೋಡಿ ಸಂತೋಷಗೊಂಡನು. ಆಕೆಯನ್ನು ಕುರಿತು ಎಲೈ ಪ್ರಿಯಳೇ, ನಿನ್ನನ್ನು ಬಿಟ್ಟಿರಲಾರೆ. ನೀನಿಲ್ಲದಿದ್ದರೆ ಜೀವವೇ ಉಳಿಯುವುದಿಲ್ಲ. ಗುಣಶೀಲಗಳಿಂದ ಪ್ರೀತಿ

**ಸಮಾಭಾಷ್ಯ ಪ್ರಿಯಾಂ ಭಾರ್ಯಾಂ ಪದ್ಮಾವತೀಂ ನರೇಶ್ವರಃ ।**
**ತಯಾ ಸಾರ್ಧಂ ಸ ವೈ ರೇಮ ಉಗ್ರಸೇನೋ ನೃಪೋತ್ತಮಃ ॥ ೧೨ ॥**

**ವವೃಧೇ ದಾರುಣೋ ಗರ್ಭಃ ಸರ್ವಲೋಕಭಯಂಕರಃ ।**
**ಪದ್ಮಾವತೀ ವಿಜಾನಾತಿ ತಸ್ಯ ಗರ್ಭಸ್ಯ ಕಾರಣಂ ॥ ೧೩ ॥**

**ಸ್ವೋದರೇ ವರ್ಧಮಾನಸ್ಯ ಚಿಂತಯಂತೀ ದಿವಾನಿಶಂ ।**
**ಅನೇನಾಪಿ ವಿಜಾತೇನ ಲೋಕನಾಶಕರೇಣ ವೈ ॥ ೧೪ ॥**

**ಅನೇನಾಪಿ ನ ಮೇ ಕಾರ್ಯಂ ದುಷ್ಟಪುತ್ರೇಣ ಸಾಂಪ್ರತಂ ।**
**ಔಷಧೀಂ ಪೃಚ್ಛತೇ ಸಾತು ಗರ್ಭಪಾತಸ್ಯ ಸರ್ವತಃ ॥ ೧೫ ॥**

**ನಾರೀಮಹೌಷಧೀಂ ಸಾ ಹಿ ವಿಂದತೀ ಚ ದಿನೇ ದಿನೇ ।**
**ಗರ್ಭಸ್ಯ ಪಾತನಾಯೈವ ಉಪಾಯಾ ಬಹುಶಃ ಕೃತಾಃ ॥ ೧೬ ॥**

---

ಯನ್ನುಂಟುಮಾಡುತ್ತಾ ನನಗೆ ಬಹಳ ಚೆನ್ನಾಗಿ ಕಾಣುತ್ತೀಯೆ. ಎಲೈ ಕಾಂತಳೇ, ಭಕ್ತಿಯಿಂದಲೂ ಸತ್ಯದಿಂದಲೂ ಪಾತಿವ್ರತ್ಯದಿಂದಲೂ ನನಗೆ ಬಹಳ ಸಂತೋಷವನ್ನುಂಟು ಮಾಡುತ್ತೀಯೆ ಎಂದು ಪದ್ಮಾವತಿಯನ್ನು ರಾಜನು ಶ್ಲಾಘಿಸಿ ಅವಳೊಡನೆ ಕ್ರೀಡಿಸುತ್ತಿದ್ದನು.

೧೩. ಹೀಗಿರಲು ಸರ್ವಲೋಕಭಯಂಕರವಾದ ಅವಳ ಆ ಗರ್ಭವು ಬೆಳೆಯುತ್ತಿತ್ತು. ಪದ್ಮಾವತಿಯೊಬ್ಬಳು ಮಾತ್ರ ಆ ಗರ್ಭದ ಕಾರಣವನ್ನು ಬಲ್ಲಳು.

೧೪-೧೫. ತನ್ನ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಆ ಗರ್ಭದ ವಿಚಾರವನ್ನು ಪದ್ಮಾವತಿಯು ಹಗಲೂ, ರಾತ್ರಿ ಯೋಚಿಸುವಳು. ಲೋಕಕಂಟಕನಾಗಿ ಹುಟ್ಟುವ ಈ ಮಗನಿಂದ, ಅದರಲ್ಲೂ ಈ ದುಷ್ಟನಿಂದ ನನಗಾಗಬೇಕಾದ್ದೇನೂ ಇಲ್ಲ ಎಂದು ಯೋಚಿಸಿ ಗರ್ಭವನ್ನು ನಾಶಮಾಡಿಕೊಳ್ಳಲು ಎಲ್ಲರನ್ನೂ ಔಷಧವನ್ನು ಕೇಳುವಳು.

೧೬. ಆಕೆಯು ದಿನದಿನಕ್ಕೂ ಒಂದೊಂದುಬಗೆಯ ಔಷಧಿಯನ್ನು ತಿಳಿದು ಮಾಡುತ್ತಾ, ಗರ್ಭಪಾತನಕ್ಕೆ ಅನೇಕ ಉಪಾಯಗಳನ್ನು ಮಾಡಿದಳು.

ವವೃಧೇ ದಾರುಣೋ ಗರ್ಭಃ ಸರ್ವಲೋಕಭಯಂಕರಃ ।
ತಾಮುವಾಚ ತತೋ ಗರ್ಭಃ ಪದ್ಮಾವತೀಂ ಸ ಮಾತರಂ ॥ ೧೭ ॥

ಕಸ್ಮಾತ್ತ್ವಂ ವ್ಯಥಸೇ ಮಾತಶ್ಚೌಷಧೀಭಿರ್ದಿನೇ ದಿನೇ ।
ಪುಣ್ಯೇನ ವರ್ಧತೇ ಚಾಯುಃ ಪಾಪೇನಾಲ್ಪಂ ತು ಜೀವಿತಂ ॥ ೧೮ ॥

ಆತ್ಮಕರ್ಮವಿಪಾಕೇನ ಜೀವಂತಿ ಚ ಮ್ರಿಯಂತಿ ಚ ।
ಆಮಗರ್ಭಾ ಮ್ರಿಯಂತ್ಯಂತೇ ತ್ವಪಕ್ವಾಸ್ತು ಮಹೀತಲೇ ॥ ೧೯ ॥

ಜಾತಮಾತ್ರಾ ಮ್ರಿಯಂತ್ಯನ್ಯೇ ಕತಿ ತೇ ಯೌವನಾನ್ವಿತಾಃ ।
ಬಾಲವೃದ್ಧಾಶ್ಚ ತರುಣಾ ಆಯುಷೋ ವಶತಾಂ ಗತಾಃ ॥ ೨೦ ॥

ಸರ್ವೇ ಕರ್ಮವಿಪಾಕೇನ ಜೀವಂತಿ ಚ ಮ್ರಿಯಂತಿ ಚ ।
ಓಷಧ್ಯೋ ಮಂತ್ರದೇವಾಶ್ಚ ನಿಮಿತ್ತಾನಿ ನ ಸಂಶಯಃ ॥ ೨೧ ॥

---

೧೭. ಸರ್ವಲೋಕಭಯಂಕರವಾದ ಗರ್ಭವು ಬೆಳೆಯುತ್ತಲೇ ಇದ್ದಿತು. ಆಮೇಲೆ ಆ ಗರ್ಭವು ತಾಯಿಯಾದ ಪದ್ಮಾವತಿಯನ್ನು ಕುರಿತು ಹೇಳಿತು.

೧೮. ಅಮ್ಮ, ದಿನದಿನದಲ್ಲೂ ಔಷಧಿಮಾಡುತ್ತಾ ಏಕೆ ದುಃಖಪಡುತ್ತೀಯೆ. ಪುಣ್ಯದಿಂದ ಆಯುಸ್ಸು ಹೆಚ್ಚುತ್ತದೆ. ಪಾಪದಿಂದ ಆಯುಸ್ಸು ಕ್ಷೀಣಿಸುತ್ತದೆ.

೧೯. ಪ್ರಾಣಿಗಳು ತಮ್ಮ ಪಾಪಪುಣ್ಯಬಲದಿಂದಲೇ ಜೀವಿಸುತ್ತಾರೆ ಅಥವಾ ಸಾಯುತ್ತಾರೆ. ಇನ್ನೂ ಕೆಲವು ಲೋಕದಲ್ಲಿ ಗರ್ಭಪತನದಿಂದ ಸಾಯುತ್ತವೆ.

೨೦. ಮತ್ತೆ ಕೆಲವು ಹುಟ್ಟಿದೊಡನೆಯೇ ಸಾಯುತ್ತವೆ. ಎಷ್ಟೋ ಯೌವನದಿಂದ ಕೂಡಿಯೂ, ಬಾಲರಾಗಿಯೂ, ವೃದ್ಧರಾಗಿಯೂ, ತರುಣರಾಗಿಯೂ ಆಯುಷ್ಮಂತರಾಗಿಯೂ ಇರುತ್ತಾರೆ.

೨೧. ಎಲ್ಲರೂ ಕರ್ಮವಿಪಾಕದಿಂದ ಜೀವಿಸುತ್ತಾರೆ ಮತ್ತು ಸಾಯುತ್ತಾರೆ. ಔಷಧಿಗಳು, ಮಂತ್ರ, ದೇವತೆಗಳು, ಬದುಕುವುದಕ್ಕೂ, ಸಾಯುವುದಕ್ಕೂ ನಿಮಿತ್ತ ಮಾತ್ರಗಳಷ್ಟೆ ? ಅವುಗಳಿಗೆ ಬದುಕಿಸುವ ಅಥವಾ ಸಾಯಿಸುವ ಶಕ್ತಿಯಿಲ್ಲ.

**ಮಾಮೇವ ಹಿ ನ ಜಾನಾಸಿ ಭವತೀ ಯಾದೃಶೋ ಹ್ಯಹಂ।**
**ದೃಷ್ಟಶ್ಶ್ರುತಸ್ತ್ವಯಾ ಪೂರ್ವಂ ಕಾಲನೇಮಿರ್ಮಹಾಬಲಃ ॥ ೨೨ ॥**

**ದಾನವಾನಾಂ ಮಹಾವೀರ್ಯಸ್ತ್ರೈಲೋಕಸ್ಯ ಭಯಪ್ರದಃ ।**
**ದೇವಾಸುರಮಹಾಯುದ್ಧೇ ಹತೋಽಹಂ ವಿಷ್ಣುನಾ ಪುರಾ ॥ ೨೩ ॥**

**ಸಾಧನಾಯ ಚ ತದ್ವೈರಮಾಗತೋಽಸ್ಮಿ ತವೋದರೇ ।**
**ಸಾಹಸಂ ಚ ಶ್ರಮಂ ಮಾತರ್ಮಾ-ಕುರುಷ್ವ ದಿನೇ ದಿನೇ ॥ ೨೪ ॥**

**ಏವಮುಕ್ತ್ವಾ ದ್ವಿಜಶ್ರೇಷ್ಠ ಮಾತರಂ ವಿರರಾಮ ಸಃ ।**
**ಮಾತಾ ಚ ಉದ್ಯಮಂ ತ್ಯಜ್ಯ ಮಹಾದುಃಖಾದಭೂತ್ತದಾ ॥ ೨೫ ॥**

**ದಶಾಬ್ದಾಶ್ಚ ಗತಾ ಯಾವತ್ತಾವದ್ವೃದ್ಧಿಮವಾಪ್ನುಯಾತ್ ।**
**ಪಶ್ಚಾಜ್ಜಜ್ಞೇ ಮಹಾತೇಜಾಃ ಕಂಸೋಽಭೂತ್ಸ ಮಹಾಬಲಃ ॥ ೨೬ ॥**

**ಯೇನ ಸಂತ್ರಾಸಿತಾ ಲೋಕಾಸ್ತ್ರೈಲೋಕ್ಯಸ್ಯ ನಿವಾಸಿನಃ ।**
**ಏಷೋ ಹತೋ ವಾಸುದೇವೇನ ಗತೋ ಮೋಕ್ಷಂ ನ ಸಂಶಯಃ ॥ ೨೭ ॥**

---

೨೨-೨೪. ನಾನು ಯಾವರೀತಿಯಾದವನೆಂಬುದನ್ನು ನೀನು ತಿಳಿಯೆ. ಕಾಲನೇಮಿಯೆಂಬ ಮಹಾಬಲಿಷ್ಠನಾದ ರಾಕ್ಷಸನನ್ನು ನೀನು ಹಿಂದೆ ಕೇಳಿರಬಹುದು. ನೋಡಿಯೂ ಇರಬಹುದು. ಅವನೇ ನಾನು. ನಾನು ದಾನವರಲ್ಲಿ ಬಹು ಬಲಿಷ್ಠನು. ಮೂರುಲೋಕಕ್ಕೂ ಭಯಪ್ರದನು. ಆ ದೇವಾಸುರರ ಮಹಾಯುದ್ಧದಲ್ಲಿ ವಿಷ್ಣುವು ನನ್ನನ್ನು ಕೊಂದನು. ಆ ವಿಷ್ಣುವಿನಲ್ಲಿ ವೈರಸಾಧನೆಗೋಸ್ಕರ ನಿನ್ನ ಗರ್ಭಕ್ಕೆ ಬಂದಿದ್ದೇನೆ. ಸಾಹಸ ಕೆಲಸವನ್ನೂ, ಶ್ರಮವನ್ನೂ ಇನ್ನು ಮೇಲೆ ದಿನದಿನದಲ್ಲೂ ಮಾಡಬೇಡ. ಎಂದು ಆ ಗರ್ಭವು ತಾಯಿಗೆ ಹೇಳಿ ಸುಮ್ಮನಾಯಿತು.

೨೫-೨೭. ತಾಯಿಯೂ ಕೂಡ ದುಃಖದಿಂದ ಗರ್ಭಪಾತಸಂಬಂಧವಾದ ಕೆಲಸಗಳ ಮಾಡುವದನ್ನು ಬಿಟ್ಟು ಸುಮ್ಮನಾದಳು. ಹತ್ತುವರ್ಷ ತುಂಬುವವರೆಗೂ ಗರ್ಭವು ವೃದ್ಧಿಯನ್ನು ಹೊಂದಿತು. ಆ ಮೇಲೆ ಒಬ್ಬ ಪುತ್ರನನ್ನು ಹೆತ್ತಳು. ಅವನೇ ಕಂಸನೆಂಬ ಮಹಾಬಲಿಷ್ಠನಾಗಿ ಮೂರುಲೋಕದವರನ್ನೂ ತೊಂದರೆಪಡಿಸುತ್ತಿದ್ದನು ಅನಂತರ ಅವನು ವಾಸುದೇವನಿಂದ ಹತನಾಗಿ ಮೋಕ್ಷಪದವಿಯನ್ನು ಹೊಂದಿದನು.

ಏವಂ ಶ್ರುತಂ ಮಯಾ ಕಾಂತ ಭವಿತವ್ಯಂ ಭವಿಷ್ಯತಿ ।
ಪುರಾಣೇಷ್ವೇವ ಸರ್ವೇಷು ನಿಶ್ಚಿತಂ ಕಥಿತಂ ತವ ॥ ೨೮ ॥

ಪಿತೃಗೇಹೇ ಸ್ಥಿತಾ ಕನ್ಯಾ ನಾಶಮೇವಂ ಪ್ರಯಾತಿ ಸಾ ।
ಗೃಹವಾಸಾಯ ಮೇ ಕಾಂತ ಕನ್ಯಾಮೋಹಂ ನ ಕಾರಯೇತ್ ॥ ೨೯ ॥

ಇಮಾಂ ದುಷ್ಟಾಂ ಮಹಾಪಾಪಾಂ ಪರಿತ್ಯಜ್ಯ ಸ್ಥಿರೋ ಭವ ।
ಪ್ರಾಪ್ತವ್ಯಂ ತು ಮಹಾಪಾಪಂ ದುಃಖಂ ದಾರುಣಮೇವ ಚ ॥ ೩೦ ॥
ಲೋಕೇ ಶ್ರೇಯಸ್ಕರಂ ಕಾಂತ ತದ್ಭುಂಕ್ಷ್ವ ತ್ವಂ ಮಯಾಸಹ ।

॥ ಶೂಕರ್ಯುವಾಚ ॥

ಏತದ್ವಾಕ್ಯಂ ಸುಮಂತ್ರಂ ತು ಶ್ರುತ್ವಾ ಸ ಹಿ ದ್ವಿಜೋತ್ತಮಃ ।
ತ್ಯಾಗೇ ಮತಿಂ ಚಕಾರಾಸೌ ಸಮಾಹೂತಾ ವಹಂ ತಥಾ ॥ ೩೧ ॥

ಸಕಲಂ ವಸ್ತ್ರಶೃಂಗಾರಂ ಮಮ ದತ್ತಂ ಶುಭೇ ಶೃಣು ।
ತವೈವ ದುರ್ನಯೈರ್ವಿಪ್ರಃ ಶಿವಶರ್ಮಾ ದ್ವಿಜೋತ್ತಮಃ ॥ ೩೨ ॥

ಗತೋ ವೈ ಮತಿರ್ಮಾ ದುಷ್ಟೇ ಕುಲದುಷ್ಟಪ್ರಚಾರಿಣಿ ।
ಯತ್ರ ತೇ ತಿಷ್ಠತೇ ಭರ್ತಾ ತತ್ರ ಗಚ್ಛ ನ ಸಂಶಯಃ ॥ ೩೩ ॥

ತ್ವಯಾ ಯದ್ರೋಚತೇ ಸ್ಥಾನಂ ಯಥಾ ದೃಷ್ಟಂ ತಥಾ ಕುರು ।
ಏವಮುಕ್ತ್ವಾ ಮಹಾಭಾಗೇ ಪಿತೃಮಾತೃಕುಟುಂಬಕೈಃ ।
ಪರಿತ್ಯಕ್ತಾ ಗತಾ ಶೀಘ್ರಂ ನಿರ್ಲಜ್ಜಾಹಂ ವರಾನನೇ ॥ ೩೪ ॥

---

೨೮. ಈ ರೀತಿ ನಾನು ಕೇಳಿದ್ದೇನೆ. ಆದುದರಿಂದ ಆಗುವುದು ಆಗಿಯೇ ಆಗುತ್ತದೆ. ತಪ್ಪುವುದಿಲ್ಲ. ಎಲ್ಲ ಪುರಾಣದಲ್ಲೂ ಹೀಗೆ ನಿಶ್ಚಯಿಸಲ್ಪಟ್ಟಿರುವುದನ್ನು ನಿನಗೆ ಹೇಳಿದ್ದೇನೆ.

೨೯. ಮಗಳು ತಂದೆಮನೆಯಲ್ಲಿದ್ದರೆ ಹೀಗೆ ಹಾಳಾಗುವಳು. ಮನೆಯಲ್ಲಿಟ್ಟುಕೊಳ್ಳುವ ಮೋಹವನ್ನು ಮಗಳವಿಷಯದಲ್ಲಿ ಮಾಡಬಾರದು.

೩೦. ಇವಳು ಪಾಪಿಯು. ಈ ದುಷ್ಟಳನ್ನು ಬಿಟ್ಟು ಸ್ಥಿರವಾಗಿರು. ಮಹಾಪಾಪಗಳೂ ದಾರುಣವಾದ ದುಃಖಗಳೂ ಬರಬೇಕಾಗಿದ್ದರೆ ಬಂದೇಬರುತ್ತವೆ. ಲೋಕದಲ್ಲಿ ಶ್ರೇಯಸ್ಕರವಾದ ಸುಖಗಳನ್ನು ನನ್ನೊಡನೆ ಅನುಭವಿಸು. ಯೋಚಿಸಬೇಡ ಎಂದು ಹೇಳಿದಳು.

೩೧-೩೪. ಹಂದಿಯೂ ಮುಂದುವರಿದು ಹೇಳಿತು.--ಸುಮಂತ್ರನು ಈ ಮಾತನ್ನು ಕೇಳಿ ನನ್ನನ್ನು ಬಿಟ್ಟುಬಿಡಬೇಕೆಂದು ಯೋಚಿಸಿ, ನನ್ನನ್ನು ಕರೆದು ಸಮಸ್ತ ವಸ್ತ್ರಒಡವೆಗಳನ್ನೂ ನನಗೆಕೊಟ್ಟು, ನಿನ್ನ ಅಯೋಗ್ಯತನದಿಂದಲೇ ನಿನ್ನ

ನ ಲಭಾಮ್ಯಹಮೇವಾಪಿ ವಾಸಸ್ಥಾನಂ ಸುಖಂ ಶುಭೇ ।
ಭರ್ತ್ಸಯಂತಿ ಚ ಮಾಂ ಲೋಕಾಃ ಪುಂಶ್ಚಲೀಯಂ ಸಮಾಗತಾ ॥ ೩೫ ॥

ಅಟಮಾನಾ ಗತಾ ದೇಶಾತ್ಕುಲಮಾನೇನ ವರ್ಜಿತಾ ।
ದೇಶೇ ಗುರ್ಜರಕೇ ಪುಣ್ಯೇ ಸೌರಾಷ್ಟ್ರೇ ಶಿವಮಂದಿರೇ ॥ ೩೬ ॥

ವನಸ್ಥಲೀತಿ ವಿಖ್ಯಾತಂ ನಗರಂ ವೃದ್ಧಿಸಂಕುಲಂ ।
ಅತೀವ ಪೀಡಿತಾ ದೇವೀ ಕ್ಷುಧಯಾಹಂ ಯದಾ ಶೃಣು ॥ ೩೭ ॥

ಕರ್ಪರಂ ಹಿ ಕರೇ ಗೃಹ್ಯ ಭಿಕ್ಷಾರ್ಥಮುಪಚಕ್ರಮೇ ।
ಗೃಹಾಣಾಂ ದ್ವಾರದೇಶೇಷು ಪ್ರವಿಶಾಮಿ ಸುದುಃಖಿತಾ ॥ ೩೮ ॥

ಮಮ ರೂಪಂ ವಿಪಶ್ಯಂತಿ ಲೋಕಾಃ ಕುತ್ಸಂತಿ ಭಾಮಿನಿ ।
ನ ದದಾತಿ ಚ ಮೇ ಭಿಕ್ಷಾಂ ಪಾಪಾ ಚೇಯಂ ಸಮಾಗತಾ ॥ ೩೯ ॥

---

ಗಂಡನಾದ ಶಿವಶರ್ಮನು ಹೊರಟುಹೋದನು ನೀನು ದುಷ್ಟಳು. ಕುಲಕ್ಕೆ ಕೆಟ್ಟತನವನ್ನು ತರುತ್ತೀಯೆ. ಆದುದರಿಂದ ನೀನು ಇಲ್ಲಿರಬೇಡ. ನಿನ್ನ ಗಂಡನಿರುವಲ್ಲಿಗೆ ಹೋಗು. ಇಲ್ಲದಿದ್ದರೆ ನಿನಗೆ ಬೇಕಾದಜಾಗಕ್ಕೆ ಹೋಗು. ಅಥವಾ ನಿನ್ನ ಇಷ್ಟ ಬಂದಂತೆ ಮಾಡು. ಎಂದು ಹೇಳಿ ತಾಯಿತಂದೆ ಮನೆಯವರೆಲ್ಲರೂ ನನ್ನನ್ನು ಬಿಟ್ಟುಬಿಟ್ಟರು. ಲಜ್ಜೆಯಿಲ್ಲದೆ ನಾನು ಅಲ್ಲಿಂದ ಹೊರಟುಹೋದೆನು.

೩೫. ಒಳ್ಳೆಯ ವಾಸಸ್ಥಾನವೇ ನನಗೆ ಸಿಕ್ಕಲಿಲ್ಲ. ಜನರು ನನ್ನನ್ನು ನೋಡಿ ಇವಳು ಗಂಡಬೀರಿಯು, ಹಾದರಗಿತ್ತಿಯು ಬಂದಳೆಂದು ಬಯ್ಯುತ್ತಿದ್ದರು.

೩೬. ಕುಲದಿಂದ ಬಹಿಷ್ಕೃತಳಾಗಿ, ಮಾನಮರ್ಯಾದೆಯಿಲ್ಲದೆ, ಆ ದೇಶದಿಂದ ಹೊರಟೆ. ಗುರ್ಜರ ದೇಶದಲ್ಲಿ ಪುಣ್ಯವಾದ ಸೌರಾಷ್ಟ್ರದಲ್ಲಿ ಫಲವತ್ತಾದ ವನಸ್ಥಳವೆಂಬ ಊರಿನಲ್ಲಿ ಒಂದು ಶಿವಮಂದಿರವಿದೆ. ಅಲ್ಲಿಗೆ ಹೋದೆನು.

೩೭. ಹಸಿವು ನನ್ನನ್ನು ಬಹಳವಾಗಿ ಬಾಧಿಸುತ್ತಲಿತ್ತು ಆದುದರಿಂದ ಕೈಯಲ್ಲಿ ಕರಟವನ್ನು ಹಿಡಿದುಕೊಂಡು ಭಿಕ್ಷೆಗೆ ಪ್ರಾರಂಭಿಸಿದೆನು.

೩೮-೩೯. ಬಹುದುಃಖದಿಂದ ಮನೆಯ ಬಾಗಿಲಿಗೆ ಭಿಕ್ಷೆಗೆ ಹೋದರೆ ಜನರು ನನ್ನರೂಪವನ್ನು ನೋಡಿ ಬೈಯುತ್ತಿದ್ದರು. ಪಾಪಿಯು ಬಂದಳೆಂದು ನನಗೆ ಭಿಕ್ಷೆಯನ್ನೇ ಹಾಕುತ್ತಿರಲಿಲ್ಲ.

**ಏವಂ ದುಃಖಸಮಾಚಾರಾ ಮಹಾರೋಗೇಣ ಪೀಡಿತಾ ।**
**ಅಟಮಾನಾ ಯದಾ ದೃಷ್ಟಂ ಗೃಹಮೇಕಮನುತ್ತಮಂ ॥ ೪೦ ॥**

**ತುಂಗಪ್ರಾಕಾರಸಂವೇಷ್ಟಂ ವೇದಶಾಲಾಸಮನ್ವಿತಂ ।**
**ವೇದಧ್ವನಿಸಮಾಕೀರ್ಣಂ ಬಹುವಿಪ್ರಸಮಾಕುಲಂ ॥ ೪೧ ॥**

**ಧನಧಾನ್ಯಸಮಾಕೀರ್ಣಂ ದಾಸೀದಾಸ್ಯೈರಲಂಕೃತಂ ।**
**ಪ್ರವಿವೇಶ ಗೃಹಂ ರಮ್ಯಂ ಲಕ್ಷ್ಮ್ಯಾಮುದಿತಮೇವ ತತ್ ॥ ೪೨ ॥**

**ತದ್ಗೃಹಂ ಸರ್ವತೋ ಭದ್ರಂ ತಸ್ಯೈವ ಶಿವಶರ್ಮಣಃ ।**
**ಭಿಕ್ಷಾಂ ದೇಹೀತ್ಯುವಾಚಾಥ ಸುದೇವಾ ದುಃಖಪೀಡಿತಾ ॥ ೪೩ ॥**

**ಶಿವಶರ್ಮಾಥ ಶುಶ್ರಾವ ಭಿಕ್ಷಾಶಬ್ದಂ ದ್ವಿಜೋತ್ತಮಃ ।**
**ಮಂಗಳಾ ನಾಮ ವೈ ಭಾರ್ಯಾ ಲಕ್ಷ್ಮೀರೂಪಾ ವರಾನನಾ ॥ ೪೪ ॥**

**ತಾಂ ಹರ್ಷ ಪ್ರಾಹ ಧರ್ಮಾತ್ಮಾ ಶಿವಶರ್ಮಾ ಮಹಾಮತಿಃ ।**
**ಹಸಂತೀಂ ದುರ್ಬಲಾಂ ಪ್ರಾಪ್ತಾಂ ಭಿಕ್ಷಾರ್ಥಂ ದ್ವಾರಮಾಗತಾಂ ॥ ೪೫ ॥**

---

೪೦-೪೨. ಹೀಗೆ ದುಃಖಗೊಂಡು ಮಹಾ ರೋಗಪೀಡಿತಳಾಗಿ ಸುತ್ತುತ್ತಿರುವಾಗ ದೊಡ್ಡ ಪೌಳಿಗೋಡೆಗಳುಳ್ಳ ಒಂದು ದಿವ್ಯಮಂದಿರವು ಕಂಡುಬಂದಿತು. ಅಲ್ಲಿದ್ದ ವೇದ ಪಾಠಶಾಲೆಯಲ್ಲಿ ಬ್ರಾಹ್ಮಣರು ಪಠಿಸುತ್ತಿದ್ದ ಸುಸ್ವರವಾದ ವೇದಘೋಷವು ಕೇಳಿಬರುತ್ತಿತ್ತು. ಆ ಮಂದಿರದಲ್ಲಿ ಅನೇಕ ಬ್ರಾಹ್ಮಣರೂ, ಧನಧಾನ್ಯ ಸಮೃದ್ಧಿಯೂ ಅಲಂಕೃತರಾದ ದಾಸದಾಸಿಯರೂ ಬೇಕಾದಷ್ಟಾಗಿದ್ದರು. ಲಕ್ಷ್ಮಿಯ ಸ್ವಯಂಮಂದಿರವೋ ಎನ್ನುವಂತೆ ಆ ಮಂದಿರವು ಬಹು ಸಂಭ್ರಮಗಳಿಂದ ಕೂಡಿತ್ತು

೪೩. ಮಂಗಳಪ್ರದವೂ ವಿಶಾಲವೂ ಆದ ಆ ಮನೆಯು ನನ್ನ ಗಂಡನಾದ ಶಿವಶರ್ಮನದು. ಆ ಮನೆಗೆ ಹೋಗಿ ಭಿಕ್ಷೆಕೊಡಿ ಎಂಬುದಾಗಿ ಸುದೇವೆಯು ದುಃಖದಿಂದ ಕೇಳಿದಳು.

೪೪. ಅಲ್ಲಿದ್ದ ಶಿವಶರ್ಮನು ಈ ಭಿಕ್ಷೆಕೊಡಿ ಎಂಬ ಶಬ್ದವನ್ನು ಕೇಳಿದನು. ಈತನು ನನ್ನನ್ನು ಬಿಟ್ಟಮೇಲೆ ಲಕ್ಷ್ಮಿಯಂತಿರುವ ಮಂಗಳಾ ಎಂಬ ಬೇರೆ ಹುಡುಗಿಯನ್ನು ಮದುವೆಯಾಗಿದ್ದನು.

೪೫. ಶಿವಶರ್ಮನು ನಗುತ್ತ ಆ ಮಂಗಳೆಯನ್ನು ಕೂಗಿ, ಬಲಹೀನಳಾಗಿ ಭಿಕ್ಷೆಗೆಬಂದಿರುವ ನನ್ನನ್ನು ಆಕೆಗೆತೋರಿಸಿ, ಎಲೈ ಪ್ರಿಯಳೇ, ಭಿಕ್ಷೆಗೆ ಬಂದಿರುವ ಈಕೆಯನ್ನು ಕರೆದು ಭೋಜನಮಾಡಿಸು ಎಂದನು.

ಸಮಾಹೂಯ ಪ್ರಿಯೇ ಚೈನಾಂ ದೇಹಿ ತ್ವಂ ಭೋಜನಂ ಶುಭೇ ।
ಕೃಪಯಾ ಪರಯಾವಿಷ್ಟಾ ಜ್ಞಾತ್ವಾ ಮಾಂ ತು ಸಮಾಗತಾಂ ॥ ೪೬ ॥

ಪ್ರೋವಾಚ ಮಂಗಳಾ ಕಾಂತಂ ದಾಸ್ಯಾಮಿ ಪ್ರಿಯಭೋಜನಂ ।
ಏವಮುಕ್ತ್ವಾ ಚ ಭರ್ತಾರಂ ಮಂಗಳಾ ಮಂಗಳಾನ್ವಿತಾ ॥ ೪೭ ॥

ಪುನರ್ಮಾಂ ಭೋಜಯಾಮಾಸ ಮೃಷ್ಟಾನ್ನೇನ ಸುದುರ್ಬಲಾಂ ।
ಮಾಮುವಾಚ ಸ ಧರ್ಮಾತ್ಮಾ ಶಿವಶರ್ಮಾ ಮಹಾಮುನಿಃ ॥ ೪೮ ॥

ಕಾ ತ್ವಮತ್ರ ಸಮಾಯಾತಾ ಕಥಂ ವಾ ಭ್ರಮಸೇ ಜಗತ್ ।
ಕೇನ ಕಾರ್ಯೇಣ ಸರ್ವತ್ರ ಕಥಯಸ್ವ ಮಮಾಗ್ರತಃ ॥ ೪೯ ॥

ಏವಮಾಕರ್ಣ್ಯ ತದ್ವಾಕ್ಯಂ ಭರ್ತುಶ್ಚೈವ ಮಹಾತ್ಮನಃ ।
ಸ್ವರೇಣ ಲಕ್ಷಿತಃ ಕಾಂತೋ ಮಯಾ ವೈ ಪಾಪಯಾ ತದಾ ॥ ೫೦ ॥

---

೪೬-೪೭. ನಾನು ಭಿಕ್ಷೆಗೆ ಹೋದುದನ್ನು ತಿಳಿದು ಬಹು ದಯೆಗೊಂಡು ಆಮಂಗಳೆಯು ಈಕೆಗೆ ಒಳ್ಳೆಯ ಊಟವನ್ನು ಮಾಡಿಸುತ್ತೇನೆಂದು ಗಂಡನೊಡನೆ ಹೇಳಿ, ನನಗೆ ರುಚಿರುಚಿಯಾದ ಅನ್ನವನ್ನು ಬಡಿಸಿ ಊಟಮಾಡಿಸಿದಳು.

೪೮-೪೯. ಆ ಧರ್ಮಾತ್ಮನಾದ ಶಿವಶರ್ಮನು ನನ್ನನ್ನು ಕುರಿತು ನೀನಾರು ? ಇಲ್ಲಿಗೆ ಬಂದ ಕಾರಣವೇನು ? ಪ್ರಪಂಚವನ್ನೇಕೆ ಸುತ್ತುತ್ತಿರುವೆ ? ನಿನಗೇನು ಕೆಲಸ ? ಇವೆಲ್ಲವನ್ನೂ ಹೇಳೆಂದು ನನ್ನನ್ನು ಕೇಳಿದನು.

೫೦. ಗಂಡನಾದ ಆ ಶಿವಶರ್ಮನ ಆ ಮಾತುಗಳನ್ನು ಕೇಳುತ್ತಲೂ ಧ್ವನಿ ಯಿಂದ ಈತನು ನನ್ನ ಗಂಡನೆಂದು ತಿಳಿದೆನು.

**ವ್ರೀಡಯಾಽಧೋಮುಖೀ ಜಾತಾ ದೃಷ್ಟ್ವೋ ಭರ್ತಾ ಯದಾ ಮಯಾ ।**
**ಮಂಗಳಾ ಚಾರುಸರ್ವಾಂಗೀ ಭರ್ತಾರಮಿದಮಬ್ರವೀತ್ ॥ ೫೧ ॥**

**ಕಾ ಚೇಯಂ ಹಿ ಸಮಾಚಕ್ಷ್ವ ತ್ವಾಂ ದೃಷ್ಟ್ವಾ ಹಿ ವಿಲಜ್ಜತಿ ।**
**ಕಥಯಸ್ವ ಪ್ರಸಾದೇನ ಕಾ ಚ ಏಷಾ ಭವಿಷ್ಯತಿ ॥ ೫೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತ ಏಕೋನಪಂಚಾಶತ್ತಮೋಽಧ್ಯಾಯಃ**

---

೫೧-೫೨. ನಾನು ಈ ಅವಸ್ಥೆಯಲ್ಲಿ ಗಂಡನನ್ನು ನೋಡಿದೊಡನೆಯೇ ಲಜ್ಜೆಯಿಂದ ತಲೆಬಗ್ಗಿಸಿಕೊಂಡು ನಿಂತೆನು. ಸುಂದರಿಯಾದ ಆ ಮಂಗಳೆಯು ಗಂಡನನ್ನು ಕುರಿತು, ಈಕೆ ಯಾರು? ನಿನ್ನನ್ನು ನೋಡಿ ಲಜ್ಜೆಗೊಳ್ಳುತ್ತಾಳಲ್ಲ? ದಯೆಯಿಟ್ಟು ಇವಳಾರೆಂಬುದನ್ನು ನನ್ನೊಡನೆ ಹೇಳೆಂದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಐವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ ದ್ವಿಪಂಚಾಶತ್ತಮೋಽಧ್ಯಾಯಃ

॥ ಶಿವಶರ್ಮೋವಾಚ ॥

**ಮಂಗಲೇ ಶ್ರೂಯತಾಂ ವಾಕ್ಯಂ ಯದಿ ಪೃಚ್ಛಸಿ ಸಾಂಪ್ರತಂ ।**
**ಯದರ್ಥಂ ಹಿ ತ್ವಯಾ ಪೃಷ್ಟಂ ತನ್ನಿಬೋಧ ವರಾನನೇ ॥ ೧ ॥**

**ಇಯಂ ಹಿ ಸಾಂಪ್ರತಂ ಪ್ರಾಪ್ತಾ ವರಾಕೀ ಭಿಕ್ಷುರೂಪಿಣೀ ।**
**ವಸುದತ್ತಸ್ಯ ವಿಪ್ರಸ್ಯ ಸುತೇಯಂ ಚಾರುಲೋಚನೇ ॥ ೨ ॥**

**ಸುದೇವಾ ನಾಮ ಭದ್ರೇಯಂ ಮಮ ಜಾಯಾ ಪ್ರಿಯಾ ಸದಾ ।**
**ಕೇನಾಪಿ ಕಾರಣೇನೈವ ದೇಶಂ ತ್ಯಕ್ತ್ವಾ ಸಮಾಗತಾ ॥ ೩ ॥**

**ಮಮ ದುಃಖೇನ ದಗ್ಧೇಯಂ ವಿಯೋಗೇನ ವರಾನನೇ ।**
**ಮಾಂ ಜ್ಞಾತ್ವಾ ಸಾ ಸಮಾಯಾತಾ ಭಿಕ್ಷುರೂಪೇಣ ತೇ ಗೃಹಂ ॥ ೪ ॥**

---

## ಐವತ್ತೆರಡನೆಯ ಅಧ್ಯಾಯವು

೧. ಎಲೈ ಮಂಗಳೆಯೇ, ಇವಳ ವಿಷಯವನ್ನು ಕೇಳಿದೆಯಲ್ಲವೆ ? ಹೇಳುತ್ತೇನೆ ಕೇಳು.

೨-೩. ಈಗ ಭಿಕ್ಷುಕಿಯಾಗಿ ಬಂದಿರುವ ಇವಳು ವಸುದತ್ತನೆಂಬ ಬ್ರಾಹ್ಮಣನ ಮಗಳು. ಈಕೆಯ ಹೆಸರು ಸುದೇವೆಯೆಂದು. ಈಕೆಯು ನನಗೆ ಪ್ರೀತಿಪಾತ್ರಳಾದ ಹೆಂಡತಿಯು. ಏನೋ ಕಾರಣಾಂತರದಿಂದ ಆ ದೇಶವನ್ನು ಬಿಟ್ಟುಬಂದಿದ್ದಾಳೆ.

೪. ನನ್ನನ್ನು ಬಿಟ್ಟು ವಿಯೋಗದುಃಖದಿಂದ ನೊಂದಿದ್ದಾಳೆ. ನಾನು ಇಲ್ಲಿರುವುದನ್ನು ತಿಳಿದು ಭಿಕ್ಷುಕರೂಪದಿಂದ ಇಲ್ಲಿಗೆ ಬಂದಿದ್ದಾಳೆ.

ಏವಂ ಜ್ಞಾತ್ವಾ ತ್ವಯಾ ಭದ್ರೇ ಆತಿಥ್ಯಂ ಪರಿಶೋಭನಂ ।
ಕರ್ತವ್ಯಂ ಚ ನ ಸಂದೇಹ ಇಚ್ಛಂತ್ಯಾ ಮಮ ಸುಪ್ರಿಯಂ ॥ ೫ ॥

ಭರ್ತುರ್ವಾಕ್ಯಂ ನಿಶಮ್ಯೈವ ಮಂಗಳಾ ಪತಿದೇವತಾ ।
ಹರ್ಷೇಣ ಮಹತಾವಿಷ್ಟಾ ಸ್ವಯಮೇವ ಸುಮಂಗಳಾ ॥ ೬ ॥

ಸ್ನಾನಾಚ್ಛಾದನಭೋಜ್ಯಂ ಚ ಮಮ ಚಕ್ರೇ ವರಾನನೇ ।
ರತ್ನಕಾಂಚನಯುಕ್ತೈಶ್ಚಾಭರಣೈಶ್ಚ ಪತಿವ್ರತಾ ॥ ೭ ॥

ಅಹಂ ಹಿ ಭೂಷಿತಾ ಭದ್ರೇ ತಥೈವ ಪತಿಕಾಮ್ಯಯಾ ।
ತಯಾಹಂ ಸುಖಿತಾ ದೇವಿ ಮಾನಸ್ನಾನೈಶ್ಚ ಭೋಜನೈಃ ॥ ೮ ॥

ಭರ್ತ್ರಾಹಂ ಮಾನಿತಾ ಭದ್ರೇ ಜಾತಂ ದುಃಖಮನಂತಕಂ ।
ಮಮೋರಸಿ ಮಹಾತೀವ್ರಂ ಸರ್ವಪ್ರಾಣವಿನಾಶನಂ ॥ ೯ ॥

---

೫. ಎಲೈ ಭದ್ರೆಯೇ, ಇದನ್ನು ತಿಳಿದು ಈಕೆಗೆ ಉತ್ತಮವಾದ ಆತಿಥ್ಯವನ್ನು ಮಾಡು. ನನಗೆ ಪ್ರಿಯವನ್ನು ಮಾಡಬೇಕೆಂದಿದ್ದರೆ ಹಾಗೆ ಸಂದೇಹಪಡದೆ ಮಾಡು.

೬-೭. ಪತಿಯೇ ತನ್ನ ದೈವವೆಂದು ತಿಳಿದಿದ್ದ ಆ ಮಂಗಳೆಯು ಗಂಡನ ಮಾತನ್ನು ಕೇಳಿ, ಸಂತೋಷಗೊಂಡು ತಾನೇ ಅವಳಿಗೆ ಸ್ನಾನಮಾಡಿಸಿ ವಸ್ತ್ರಾದಿಗಳನ್ನು ಕೊಟ್ಟು ಭೋಜನಾದಿಗಳನ್ನು ಮಾಡಿಸಿದಳು. ರತ್ನಸುವರ್ಣಗಳಿಂದ ಕೂಡಿರುವ ಆಭರಣಗಳನ್ನು ಕೊಟ್ಟಳು.

೮. ಪತಿಯು ಪ್ರೀತಿಗೋಸ್ಕರ ನನಗೆ ಎಲ್ಲ ಅಲಂಕಾರವನ್ನೂ ಮಾಡಿದಳು. ಈರೀತಿ ಅವಳು ನನ್ನನ್ನು ಆದರಿಸಿ ಸ್ನಾನ, ಪಾನಗಳಿಂದ ಸುಖವಾಗುವಂತೆ ಮಾಡಿದಳು.

೯. ಗಂಡನೂ ಕೂಡ ನನ್ನನ್ನು ಗೌರವಿಸಿದನು. ಇದನ್ನು ನೋಡಿ ನನ್ನ ಮನಸ್ಸಿನಲ್ಲಿ ಮಹತ್ತಾದ ನಾಚಿಕೆಯುಂಟಾಗಿ, ಸರ್ವಪ್ರಾಣಗಳನ್ನೂ ನಾಶಮಾಡುವ ಅಪಾರವಾದ ದುಃಖವುಂಟಾಯಿತು.

ತಸ್ಯಾ ಮಾನಂ ಮಯಾ ದೃಷ್ಟಮಾತ್ಮನಶ್ಚ ಸುದುಷ್ಕೃತಂ ।
ಚಿಂತಾ ಮೇ ದಾರುಣಾ ಜಾತಾ ಯಯಾ ಪ್ರಾಣಾ ವ್ರಜಂತಿ ಮೇ ॥ ೧೦ ॥

ಕದಾ ಸುವಚನಂ ದತ್ತಂ ನ ಮಯಾ ಪಾಪಯಾ ಭೃಶಂ ।
ಅಸ್ಯೈವ ವಿಪ್ರವರ್ಯಸ್ಯ ಹ್ಯಾಚರಂತ್ಯಾ ಚ ದುಷ್ಕೃತಂ ॥ ೧೧ ॥

ಪಾದಪ್ರಕ್ಷಾಳನಂ ನೈವ ಚಾಂಗಸಂವಾಹನಂ ನ ಹಿ ।
ಏಕಾಂತಂ ನ ಮಯಾ ದತ್ತಂ ತಸ್ಯೈವ ಹಿ ಮಹಾತ್ಮನಃ ॥ ೧೨ ॥

ಕಥಂ ಸಂಭಾಷ್ಯಮಸ್ಯೈವ ಕರಿಷ್ಯೇ ಪಾಪನಿಶ್ಚಯಾ ।
ರಾತ್ರೌ ಚೈವ ತದಾ ತತ್ರ ಪತಿತಾ ದುಃಖಸಾಗರೇ ॥ ೧೩ ॥

ಏವಂ ಹಿ ಚಿಂತಮಾನಾಯಾಃ ಸ್ಫುಟಿತಂ ಹೃದಯಂ ಮಮ ।
ಗತಾಃ ಪ್ರಾಣಾಃ ಶರೀರಂ ಮೇ ತ್ಯಕ್ತ್ವಾ ತತ್ರ ವರಾನನೇ ॥ ೧೪ ॥

ಅಥ ದೂತಾಸ್ಸಮಾಯಾತಾ ಧರ್ಮರಾಜಸ್ಯ ವೈ ತದಾ ।
ವೀರಾಶ್ಚ ದಾರುಣಾ ಕ್ರೂರಾ ಗದಾಚಕ್ರಾಸಿಧಾರಿಣಃ ॥ ೧೫ ॥

ತೈಸ್ತು ಬದ್ಧಾ ಮಹಾಭಾಗೇ ಶೃಂಖಲೈರ್ದೃಢಬಂಧನೈಃ ।
ನೀತಾ ಯಮಪುರಂ ತೈಸ್ತು ರುದಮಾನಾ ಸುದುಃಖಿತಾ ॥ ೧೬ ॥

---

೧೦. ಅವಳು ಮಾಡಿದ ಗೌರವವನ್ನೂ ನೋಡಿದೆನು. ನಾನು ಆಚರಿಸಿದ ಪಾಪವನ್ನು ಯೋಚಿಸಿದೆನು. ಆಗ ನನಗೆ ಪ್ರಾಣಗಳು ಹಾರಿಹೋಗುವಷ್ಟು ಬಹುವಾದ ದುಃಖವುಂಟಾಯಿತು.

೧೧-೧೩. ಪಾಪಿಯಾದ ನಾನು ಒಂದುಸಾರಿಯಾದರೂ ಒಳ್ಳೆಯ ಮಾತನ್ನಾಡಲ್ಲಿಲ್ಲವಲ್ಲಾ ? ಈತನಿಗೆ ಯಾವಾಗಲೂ ಕೆಡಕನ್ನೇ ಮಾಡುತ್ತಿದ್ದೆನು. ಕಾಲನ್ನೂ ತೊಳೆಯುತ್ತಿರಲಿಲ್ಲ. ಕೈಕಾಲುಗಳನ್ನು ಒತ್ತಲೂ ಇಲ್ಲ. ಏಕಾಂತದಲ್ಲಿ ಈತನನ್ನು ಸುಖಪಡಿಸಲೇ ಇಲ್ಲ. ಈಗ ಇವಳೊಡನೆ ಈ ಪಾಪಿಯಾದ ನಾನು ಹೇಗೆತಾನೇ ಮಾತನಾಡಲಿ. ರಾತ್ರಿಯೆಲ್ಲವೂ ಈರೀತಿ ದುಃಖದಲ್ಲೇ ಮಗ್ನಳಾಗಿದ್ದೆನು.

೧೪. ಹೀಗೆ ರಾತ್ರಿಯೆಲ್ಲಾ ಯೋಚಿಸುತ್ತಿರುವಾಗ ಹೃದಯವು ಒಡೆದುಹೋಗಿ ಅಲ್ಲಿಯೇ ಪ್ರಾಣಗಳು ಹಾರಿಹೋದವು.

ಮುದ್ಗರೈಸ್ತಾಡ್ಯಮಾನಾಹಂ ದುರ್ಗಮಾರ್ಗೇಣ ಪೀಡಿತಾ ।
ಭರ್ತ್ಸ್ಯಮಾನಾ ಯಮಸ್ಯಾಗ್ರೇ ತೈಸ್ತತ್ರಾಹಂ ಪ್ರವೇಶಿತಾ ॥ ೧೭ ॥

ದೃಷ್ಟ್ವಾಹಂ ಯಮರಾಜೇನ ಸಕ್ರೋಧೇನ ಮಹಾತ್ಮನಾ ।
ಅಂಗಾರಸಂಚಯೇ ಕ್ಷಿಪ್ತಾ ಕ್ಷಿಪ್ತಾ ನರಕಸಂಚಯೇ ॥ ೧೮ ॥

ಲೋಹಸ್ಯ ಪುರುಷಂ ಕೃತ್ವಾ ಅಗ್ನಿನಾ ಪರಿತಾಪಿತಃ ।
ಮಮೋರಸಿ ಸಮುತ್ಕ್ಷಿಪ್ತೋ ನಿಜಭರ್ತುಶ್ಚ ವಂಚನಾತ್ ॥ ೧೯ ॥

ನಾನಾಪೀಡಾತಿಸಂತಪ್ತಾ ನರಕಾಗ್ನಿಪ್ರತಾಪಿತಾ ।
ತೈಲದ್ರೋಣ್ಯಾಂ ಪರಿಕ್ಷಿಪ್ತಾ ಕರಂಭವಾಲುಕೋಪರಿ ॥ ೨೦ ॥

ಅಸಿಪತ್ರೈಶ್ಚ ಸಂಛಿನ್ನಾ ಜಲಯಂತ್ರೇಣ ಭ್ರಾಮಿತಾ ।
ಕೂಟಶಾಲ್ಮಲಿವೃಕ್ಷೇಷು ಕ್ಷಿಪ್ತಾನೇನ ಮಹಾತ್ಮನಾ ॥ ೨೧ ॥

---

೧೫. ಅನಂತರ ಕೈಯಲ್ಲಿ ಗದೆ, ಚಕ್ರ, ಕತ್ತಿಗಳನ್ನು ಹಿಡಿದು ಕ್ರೂರರಾದ ಯಮದೂತರು ಅಲ್ಲಿಗೆ ಬಂದರು.

೧೬. ಅವರು ಪರಪಣಿಗಳಿಂದ ನನ್ನನ್ನು ಕಟ್ಟಿಹಾಕಿ ಅಳುತ್ತಿರುವ ನನ್ನನ್ನು ಯಮನಪಟ್ಟಣಕ್ಕೆ ಕರೆದುಕೊಂಡುಹೋದರು.

೧೭. ಮುದ್ಗರದಿಂದ ಹೊಡೆಯುತ್ತಾ, ಕಷ್ಟವಾದ ದಾರಿಯಲ್ಲಿ ಒಯುತ್ತಾ, ಹೆದರಿಸಿ ಬಯ್ಯುತ್ತಾ, ನನ್ನನ್ನು ಯಮನ ಮುಂದಕ್ಕೆ ಕರೆದೊಯ್ದರು.

೧೮. ಕೋಪಗೊಂಡ ಯಮರಾಜನು ಕ್ರೂರದೃಷ್ಟಿಯಿಂದ ನನ್ನನ್ನು ನೋಡಿದನು. ಅವನ ಆಳುಗಳು ಆತನ ಅಪ್ಪಣೆಯಿಂದ ನನ್ನನ್ನು ಬೆಂಕಿಯ ಮಧ್ಯದಲ್ಲಿ ಹಾಕಿದರು. ಆಮೇಲೆ ನರಕಗಳಿಗೆ ನೂಕಿದರು.

೧೯. ಕಬ್ಬಿಣದಿಂದ ಪುರುಷಾಕೃತಿಯನ್ನು ಮಾಡಿ ಬೆಂಕಿಯಿಂದ ಕಾಯಿಸಿ ಗಂಡನಿಗೆ ವಂಚನೆಮಾಡಿದ ನನ್ನನ್ನು ಎದೆಯಿಂದ ಅಪ್ಪಿಕೊಳ್ಳುವಂತೆ ಮಾಡಿದರು.

೨೦. ಇನ್ನೂ ನಾನಾ ಪೀಡೆಗಳಿಂದ ದುಃಖಪಟ್ಟೆನು. ನರಕಾಗ್ನಿಯಲ್ಲಿ ಬೆಂದೆನು. ಕಾದಿರುವ ಎಣ್ಣೆ ಕೊಪ್ಪರಿಗೆಯಲ್ಲಿ ದೂಡಿದರು. ಕಾದ ಮರಳಿನ ಮೇಲೆ ನಿಲ್ಲಿಸಿದರು.

೨೧. ಕತ್ತಿಗಳಿಂದ ಕತ್ತರಿಸಿದರು. ನರಕದಲ್ಲಿ ಕತ್ತಿಯಂತಿರುವ ಎಲೆಗಳನ್ನು ಬಿಡುವ ಮರಗಳಿವೆ. ಅವುಗಳ ಕೆಳಗೆ ಪಾಪಿಗಳನ್ನು ಕರೆದೊಯ್ಯುತ್ತಾರೆ. ಕೆಳಗೆ

**ಸರ್ವೇಷ್ವೇವ ನರಕೇಷು ಕ್ಷಿಪ್ತಾಹಂ ನೃಪನಂದಿನಿ ।**
**ಪೀಡಾಯುಕ್ತೇಷು ತೀವ್ರೇಷು ತೇನೈವಾಪಿ ಮಹಾತ್ಮನಾ ॥ ೨೨ ॥**

**ಪೂಯಶೋಣಿತವಿಷ್ಠಾಯಾಂ ಪಾತಿತಾ ಕೃಮಿಸಂಕುಲೇ ।**
**ಕರಪತ್ರೈಃ ಪಾಟಿತಾಹಂ ಶಕ್ತಿಭಿಸ್ತಾಡಿತಾ ಭೃಶಂ ॥ ೨೩ ॥**

**ಅನ್ಯೇಷ್ವೇವ ನರಕೇಷು ಪಾತಿತಾ ನೃಪನಂದಿನಿ ।**
**ಯೋನಿವಕ್ತ್ರೇ ಪ್ರಕ್ಷಿಪ್ತಾಸ್ಮಿ ಪಾತಿತಾ ದುಃಖಕಂಟಕೇ ॥ ೨೪ ॥**

**ಧರ್ಮರಾಜೇನ ತೇನಾಹಂ ನರಕೇಷು ನಿಪಾತಿತಾ ।**
**ಬಹುಲಾಂ ಯೋನಿಮಾಸಾದ್ಯ ಭುಕ್ತಂ ದುಃಖಂ ಸುದಾರುಣಂ ॥ ೨೫ ॥**

**ಗತಾಹಂ ಕ್ರೋಷ್ಟುಕೀಂ ಯೋನಿಂ ಶ್ವಾನಯೋನಿಂ ಪುನರ್ಗತಾ ।**
**ಸರ್ಪಕುಕ್ಕುಟಮಾರ್ಜಾರೀಮಾಖುಯೋನಿಂ ಗತಾ ಹ್ಯಹಂ ॥ ೨೬ ॥**

---

ಬಿದ್ದಿರುವ ಕತ್ತಿಗಳಂತಿರುವ ಅವನ್ನು ತುಳಿಯುವುದರಿಂದ ಕಾಲುಕತ್ತರಿಸಿಹೋಗುತ್ತದೆ. ಮೇಲೆ ಎಲೆಗಳು ಬೀಳುವುದರಿಂದ ಮೈ ಕತ್ತರಿಸಿಹೋಗುತ್ತದೆ. ನೀರಿನ ಯಂತ್ರಗಳಿಂದ ಸುತ್ತಿಸಿದರು. ಬೂರುಗದ ಮರಗಳ ತುದಿಯಲ್ಲಿ ನಿಲ್ಲಿಸಿದರು.

೨೨-೨೪. ತೊಂದರೆಯನ್ನುಂಟುಮಾಡುವ ತೀವ್ರವಾದ ಅನೇಕ ನರಕಗಳಲ್ಲಿ ಹಾಕಿದರು. ಕೀವು, ರಕ್ತ, ಅಮೇಧ್ಯಗಳಿಂದ ಕೂಡಿ ಹುಳು ಬಿದ್ದಿರುವ ಬಾವಿಗೆ ತಳ್ಳಿದರು ಗರಗಸದಿಂದ ಕೊಯ್ದರು. ಶಕ್ತ್ಯಾಯುಧದಿಂದ ಹೊಡೆದರು. ಇನ್ನೂ ಅನೇಕಬಗೆಯಾದ ಬೇರೆಬೇರೆ ನರಕಗಳಲ್ಲಿ ಹಾಕಿದರು. ಇಕ್ಕಳದಂತಿರುವ ಯೋನಿ ವಕ್ತ್ರವೆಂಬ ಆಯುಧದಲ್ಲಿ ಸಿಕ್ಕಿಸಿದರು.

೨೫. ಈರೀತಿ ಧರ್ಮರಾಜನು ಅನೇಕ ನರಕಗಳಲ್ಲಿ ಹಾಕಿ ಬಹು ಕಷ್ಟಪಡಿಸಿದನು. ಬಳಿಕ, ಅನೇಕ ಜನ್ಮಗಳನ್ನು ಹೊಂದಿ, ಅನೇಕ ದುಃಖಗಳನ್ನು ಅನುಭವಿಸಿದೆನು.

೨೬. ನರಿ, ನಾಯಿ, ಹಾವು, ಕೋಳಿ, ಬೆಕ್ಕು, ಇಲಿ ಇವುಗಳ ಹೊಟ್ಟೆಯಲ್ಲೂ ಹುಟ್ಟಿದೆನು.

ಏವಂ ಯೋನಿವಿಶೇಷೇಷು ಪಾಪಯೋನಿಷು ತೇನ ಚ ।
ಕ್ಷಿಪ್ತಾಸ್ಮಿ ಧರ್ಮರಾಜ್ಞಾ ವೈ ಪೀಡಾಸು ಸರ್ವಯೋನಿಷು ॥ ೨೭ ॥

ತೇನೈವಾಹಂ ಕೃತಾ ಭೂಮೌ ಶೂಕರೀ ನೃಪನಂದಿನಿ ।
ತವ ಹಸ್ತೇ ಮಹಾಭಾಗೇ ಸಂತಿ ತೀರ್ಥಾನ್ಯನೇಕಶಃ ॥ ೨೮ ॥

ತೇನೋದಕೇನ ಸಿಕ್ತಾಸ್ಮಿ ತ್ವಯೈವ ವರವರ್ಣಿನಿ ।
ಮಮ ಪಾಪಂ ಗತಂ ದೇವಿ ಪ್ರಸಾದಾತ್ತವ ಸುಂದರಿ ॥ ೨೯ ॥

ತವೈವ ತೇಜಃಪುಣ್ಯೇನ ಜಾತಂ ಜ್ಞಾನಂ ವರಾನನೆ ।
ಇದಾನೀಮುದ್ಧರ ತ್ವಂ ಮಾಂ ಪತಿತಾಂ ನರಕಸಂಕಟಾತ್ ॥ ೩೦ ॥

ಯದಾ ನೋದ್ಧರಸೇ ದೇವಿ ಪುನರ್ಯಾಸ್ಯಾಮಿ ದಾರುಣಾಂ ।
ನರ್ಕಯೋನಿಂ ಮಹಾಭಾಗೇ ತ್ರಾಹಿ ಮಾಂ ದುಃಖಭಾಗಿನೀಂ ।
ಗತಾಹಂ ಪಾಪಭಾವೇನ ದೀನಾಹಂ ಚ ನಿರಾಶ್ರಯಾ ॥ ೩೧ ॥

॥ ಸುಶ್ರವೋವಾಚ ॥

ಕಿಂ ಕೃತಂ ಹಿ ಮಯಾ ಭದ್ರೇ ಸುಕೃತಂ ಪುಣ್ಯಸಂಭವಂ ।
ಯೇನಾಹಮುದ್ಧರೇ ತ್ವಾಂ ವೈ ತನ್ಮೇ ವದಸ್ವ ಸಾಂಪ್ರತಂ ॥ ೩೨ ॥

---

೨೭. ಈರೀತಿಯಾಗಿ ಯಮನು ಪಾಪವಾದ ಬೇರೆಬೇರೆ ಜನ್ಮದಲ್ಲಿ ಹಾಕಿ ತೊಂದರೆಪಡಿಸಿದನು.

೨೮. ಅವನೇ ನನ್ನನ್ನು ಭೂಮಿಯಲ್ಲಿ ಈ ಹಂದಿಯ ಜನ್ಮದಲ್ಲಿ ಹಾಕಿದನು. ಎಲೈ ಪುಣ್ಯವಂತಳೇ, ನಿನ್ನ ಕೈಯಲ್ಲಿ ಅನೇಕ ತೀರ್ಥಗಳಿವೆ.

೨೯. ನೀನು ಆ ತೀರ್ಥಗಳಿಂದ ನನ್ನನ್ನು ಸ್ನಾನಮಾಡಿಸಿದೆ. ನಿನ್ನ ಪ್ರಸಾದ ದಿಂದ ನನ್ನ ಪಾಪವೆಲ್ಲವೂ ಹೋಯಿತು.

೩೦. ನಿನ್ನ ತೇಜಸ್ಸಿನ ಪುಣ್ಯದಿಂದಲೇ ನನಗೆ ಇಷ್ಟು ಜ್ಞಾನೋದಯವಾ ಯಿತು. ಈ ನರಕದಲ್ಲಿ ಬಿದ್ದಿರುವ ನನ್ನನ್ನು ಈಗ ನೀನು ಉದ್ಧರಿಸಮ್ಮಾ.

೩೧. ನೀನು ಈಗ ಉದ್ಧಾರಮಾಡದಿದ್ದರೆ ಪುನಃ ನರಕವನ್ನೇ ಹೊಂದುತ್ತೇನೆ. ದೀನಳಾದ, ನಿರಾಶ್ರಿತಳಾದ ನನ್ನನ್ನು ಉದ್ಧರಿಸಮ್ಮಾ, ನಿನ್ನನ್ನು ಕೇಳಿಕೊಳ್ಳುತ್ತೇನೆ ಎಂದು ಪ್ರಾರ್ಥಿಸಿತು.

೩೨. ಸುಶ್ರವೆಯು ಹೇಳಿದಳು :—ನಾನು ಮಾಡಿರುವ ಪುಣ್ಯಕೆಲಸವಾದರೂ ಏನು? ನಿನ್ನನ್ನು ಕಾಪಾಡಲು ನನಗೆ ಯಾವ ಶಕ್ತಿಯಿರುವುದು ? ಅದನ್ನು ಈಗ ನನಗೆ ಹೇಳೆಂದು ಕೇಳಲು,

॥ ಶೂಕರ್ಯುವಾಚ ॥

ಅಯಂ ರಾಜಾ ಮಹಾಭಾಗ ಇಕ್ಷ್ವಾಕುರ್ಮನುನಂದನಃ ।
ವಿಷ್ಣುರೇಷ ಮಹಾಪ್ರಾಜ್ಞೋ ಭವತೀ ಶ್ರೀರ್ಹಿ ನಾನ್ಯಥಾ ॥ ೩೩ ॥

ಪತಿವ್ರತಾ ಮಹಾಭಾಗಾ ಪತಿವ್ರತಪರಾಯಣಾ ।
ತ್ವಂ ಸತೀ ಸರ್ವದಾ ಭದ್ರೇ ಸರ್ವತೀರ್ಥಮಯೀ ಪ್ರಿಯಾ ॥ ೩೪ ॥

ದೇವೀ ಸರ್ವಮಯೀ ನಿತ್ಯಂ ದೇವೀ ಸರ್ವಮಯೀ ಸದಾ ।
ಮಹಾಪತಿವ್ರತಾ ಲೋಕೇ ಏಕಾ ತ್ವಂ ನೃಪತೇಃ ಪ್ರಿಯಾ ॥ ೩೫ ॥

ಯಥಾ ಶುಶ್ರೂಷಿತೋ ಭರ್ತಾ ಭವತ್ಯಾ ಹಿ ನ ಸಂಶಯಃ ।
ಏಕಸ್ಯ ದಿವಸಸ್ಯಾಪಿ ಪುಣ್ಯಂ ದೇಹಿ ವರಾನನೇ ॥ ೩೬ ॥

ಪತಿಶುಶ್ರೂಷಿತಸ್ಯಾಪಿ ಯದಿ ಮೇ ಕುರುಷೇ ಪ್ರಿಯಂ ।
ಮಮ ಮಾತಾ ಪಿತಾ ತ್ವಂ ವೈ ತ್ವಂ ಮೇ ಗುರುಃ ಸನಾತನಃ ॥ ೩೭ ॥

ಅಹಂ ಪಾಪಾ ದುರಾಚಾರಾ ಅಸತ್ಯಾ ಜ್ಞಾನವರ್ಜಿತಾ ।
ಮಾಮುದ್ಧರ ಮಹಾಭಾಗೇ ಭೀತಾಹಂ ಯಮತಾಡನಾತ್ ॥ ೩೮ ॥

---

೩೩. ಹಂದಿಯು ಹೇಳಿತು :—ಈ ರಾಜನು ಮಹಾನುಭಾವನಾದ ವಿಷ್ಣುವು. ನೀನು ಲಕ್ಷ್ಮಿಯೇ ಹೊರತು ಬೇರೆಯಲ್ಲ.

೩೪. ನೀನು ಪತಿಪರಾಯಣೆಯಾದ ಪತಿವ್ರತೆಯು. ನೀನು ಯಾವಾಗಲೂ ಸತಿಯು. ಸರ್ವತೀರ್ಥಸ್ವರೂಪಳು.

೩೫. ನೀನೇ ಸರ್ವಮಯಿಯಾದ ದೇವಿಯು. ನೀನೇ ಲೋಕದಲ್ಲಿ ಮಹಾ ಪತಿವ್ರತೆಯು. ರಾಜನಿಗೆ ಪ್ರಿಯಳಾದವಳು.

೩೬. ನೀನು ಗಂಡನನ್ನು ಬಹುವಾಗಿ ಸೇವೆಮಾಡಿದ್ದೀಯೆ. ಸಂಶಯವಿಲ್ಲ. ಆ ಪತಿಶುಶ್ರೂಷೆಯ ಒಂದು ದಿನದ ಪುಣ್ಯವನ್ನು ನನಗೆ ಕೊಟ್ಟು ನನ್ನನ್ನು ಉದ್ಧರಿಸು.

೩೭. ಪತಿಶುಶ್ರೂಷೆಯ ಫಲದಿಂದ ನನಗೆ ಒಳ್ಳೆಯದನ್ನು ಮಾಡಿದರೆ, ನೀನೇ ನನಗೆ ತಂದೆ. ನೀನೇ ತಾಯಿ. ನೀನೇ ನನಗೆ ಉತ್ತಮ ಗುರುವು.

೩೮. ನಾನು ಪಾಪಿಯು, ದುರಾಚಾರಳು, ಅನೃತವಾದಿನಿಯು, ಅಜ್ಞಾನಿಯು. ಯಮನ ಶಿಕ್ಷೆಯಿಂದ ಹೆದರಿ ಪರಿತಪಿಸುತ್ತಿರುವ ನನ್ನನ್ನು ಕಾಪಾಡಮ್ಮ ಎಂದು ಬೇಡಿಕೊಂಡಿತು.

॥ ಸುಕಲೋವಾಚ ॥

ಏವಂ ಶ್ರುತ್ವಾ ತದಾ ರಾಜ್ಞೀ ಸಮಾಲೋಕ್ಯ ನೃಪಂ ತದಾ ।
ಕಿಂ ಕರೋಮಿ ಮಹಾರಾಜ ಏಷಾ ಕಿಂ ವದತೇ ಪ್ರಭೋ ॥ ೩೯ ॥

॥ ಇಕ್ಷ್ವಾಕುರುವಾಚ ॥

ಏತಾಂ ದುಃಖಾಂ ವರಾಕೀಂ ವೈ ಪಾಪಯೋನಿಂ ಗತಾಂ ಶುಭೇ ।
ಸಮುದ್ಧರ ಸುಪುಣ್ಯೈಸ್ತ್ವಂ ಮಹಚ್ಛ್ರೇಯೋ ಭವಿಷ್ಯತಿ ॥ ೪೦ ॥

ಏವಮುಕ್ತಾ ವರಾ ನಾರೀ ಸುಶ್ರವಾ ಚಾರುಮಂಗಳಾ ।
ವರ್ಷೈಕಸ್ಯ ಸುಪುಣ್ಯಂ ತೇ ಮಯಾ ದತ್ತಂ ವರಾನನೇ ॥ ೪೧ ॥

ಏವಮುಕ್ತೇನ ವಾಕ್ಯೇನ ತಯಾ ದೇವ್ಯಾ ಹಿ ತತ್‌ಕ್ಷಣಾತ್ ।
ರೂಪಯೌವನಸಂಪನ್ನಾ ದಿವ್ಯಮಾಲಾವಿಭೂಷಿತಾ ॥ ೪೨ ॥

ದಿವ್ಯದೇಹಾ ಚ ಸಂಭೂತಾ ತೇಜೋಜ್ವಾಲಾಸಮಾಕುಲಾ ।
ಸರ್ವಭೂಷಣಶೋಭಾಢ್ಯಾ ನಾನಾರತ್ನೈಶ್ಚ ಶೋಭಿತಾ ॥ ೪೩ ॥

ಸಂಜಾತಾ ದಿವ್ಯರೂಪಾ ಸಾ ದಿವ್ಯಗಂಧಾನುಲೇಪನಾ ।
ದಿವ್ಯಂ ವಿಮಾನಮಾರೂಢಾ ಅಂತರಿಕ್ಷಂ ಗತಾ ಸತೀ ॥ ೪೪ ॥

---

೩೯. ಸುಕಲೆಯು ಹೇಳುತ್ತಾಳೆ:—ಇದನ್ನು ಕೇಳಿ ರಾಣಿಯು ರಾಜನ ಮುಖವನ್ನು ನೋಡಿ ಇವಳೇನು ಹೇಳುತ್ತಾಳೆ ಕೇಳಿದೆಯಾ ? ಈಗ ಏನುಮಾಡಲಿ ? ಎಂದಳು.

೪೦-೪೧. ಇಕ್ಷ್ವಾಕುವು ಹೇಳಿದನು:— ಪಾಪಯೋನಿಯನ್ನು ಹೊಂದಿ ದುಃಖಗೊಂಡ ಈ ದೀನಳನ್ನು ಪುಣ್ಯದಾನದಿಂದ ಉದ್ಧರಿಸು. ನಿನಗೆ ಒಳ್ಳೆಯದಾಗುತ್ತದೆ ಎಂದು ರಾಜನು ಹೇಳುತ್ತಲೂ ಆ ಸುಶ್ರವೆಯು ತನ್ನ ಒಂದು ವರ್ಷದ ಪುಣ್ಯವನ್ನು ಆ ಹಂದಿಗೆ ಕೊಡುತ್ತೇನೆಂದಳು.

೪೨-೪೪. ಹೀಗೆ ಹೇಳಿದ ಒಡನೆಯೇ ಆಕೆ ರೂಪಯೌವನವುಳ್ಳವಳಾಗಿ ಮಾಲೆಯನ್ನು ಹಾಕಿಕೊಂಡು, ಒಳ್ಳೇ ದೇಹವುಳ್ಳವಳಾಗಿಯೂ, ತೇಜೋವತಿಯಾಗಿಯೂ, ಸರ್ವಭೂಷಣವತಿಯಾಗಿಯೂ, ರತ್ನಗಳಿಂದ ಶೋಭಿತೆಯಾಗಿಯೂ, ಒಳ್ಳೆಯ ಗಂಧವನ್ನು ಲೇಪಿಸಿದವಳೂ ಆಗಿ, ದಿವ್ಯವಿಮಾನವನ್ನು ಹತ್ತಿ ಅಂತರಿಕ್ಷಕ್ಕೆ ಹೋದಳು.

ತಾಮುವಾಚ ತತೋ ರಾಜ್ಞೀಂ ಪ್ರಣತಾ ನತಕಂಧರಾ ।
ಸ್ವಸ್ತ್ಯಸ್ತು ತೇ ಮಹಾಭಾಗೇ ಪ್ರಸಾದಾತ್ತವ ಸುಂದರಿ ॥ ೪೫ ॥

ವ್ರಜಾಮಿ ಪಾತಕಾನ್ಮುಕ್ತಾ ಸ್ವರ್ಗಂ ಪುಣ್ಯತಮಂ ಶುಭಂ ।
ಪ್ರಣಮ್ಯೈವ ಗತಾ ಸ್ವರ್ಗಂ ಸುದೇವಾ ಶೃಣು ಸತ್ತಮ ॥ ೪೬ ॥

ಏತತ್ತೇ ಸರ್ವಮಾಖ್ಯಾತಂ ಸುಕಲಾಯಾ ನಿವೇದಿತಂ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಸುದೇವಾಸ್ವರ್ಗಾರೋಹಣಂ ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೪೫. ಆಗ ಆ ಸುಂದರಿಯು ರಾಣಿಗೆ ನಮಸ್ಕರಿಸಿ ಅಮ್ಮಾ, ನಿನಗೆ ಮಂಗಳವಾಗಲಿ. ನಿನ್ನ ಅನುಗ್ರಹದಿಂದ ನಾನು ಪಾಪದಿಂದ ಮುಕ್ತಳಾಗಿ ಪುಣ್ಯತರವೂ ಶುಭವೂ ಆದ ಸ್ವರ್ಗವನ್ನು ಹೊಂದುತ್ತೇನೆ ಎಂದಳು

೪೬-೪೭. ಹೀಗೆ ಸುದೇವಳು ರಾಣಿಗೆ ನಮಸ್ಕರಿಸಿ ಸ್ವರ್ಗವನ್ನು ಹೊಂದಿದಳು. ಈ ರೀತಿ ಸುಕಲೆಯ ಚರಿತ್ರೆಯೆಲ್ಲವನ್ನೂ ನಿನಗೆ ಹೇಳಿದ್ದೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಿಪಂಚಾಶತ್ತಮೋಽಧ್ಯಾಯಃ

॥ ಸುಕಲೋವಾಚ ॥



ಏವಂ ಧರ್ಮಂ ಶ್ರುತಂ ಪೂರ್ವಂ ಪುರಾಣೇಷು ಮಯಾ ತದಾ ।
ಪತಿಹೀನಾ ಕಥಂ ಭೋಗಂ ಕರಿಷ್ಯೇ ಪಾಪನಿಶ್ಚಯಾ ॥ ೧ ॥

ಕಾಂತೇನ ತು ವಿನಾ ತೇನ ಜೀವಂ ಕಾಯೇ ನ ಧಾರಯೇ ।
ಏವಮುಕ್ತ್ವಾ ಪರಂ ಧರ್ಮಂ ಪತಿವ್ರತಮನುತ್ತಮಂ ॥ ೨ ॥

ತಾಸ್ತು ಸತ್ಯಪರಾ ನಾರ್ಯೋ ಹರ್ಷೇಣ ಮಹತಾನ್ವಿತಾಃ ।
ಶ್ರುತ್ವಾ ಧರ್ಮಂ ಪರಂ ಪುಣ್ಯಂ ನಾರೀಣಾಂ ಗತಿದಾಯಕಂ ॥ ೩ ॥

ಸ್ತುವಂತಿ ತಾಂ ಮಹಾಭಾಗಾಂ ಸುಕಲಾಂ ಧರ್ಮವತ್ಸಲಾಂ ।
ಬ್ರಾಹ್ಮಣಾಸ್ಸುಸ್ವರಾಸ್ಸರ್ವೇ ಪುಣ್ಯಸ್ತ್ರೀಯೋ ನರೋತ್ತಮ ॥ ೪ ॥

---

## ಐವತ್ತಮೂರನೆಯ ಅಧ್ಯಾಯವು

೧. ಸುಕಲೆಯು ಹೇಳಿದಳು — ಈ ರೀತಿಯಾದ ಧರ್ಮಗಳನ್ನು ನಾನು ಪುರಾಣಗಳಲ್ಲಿ ಕೇಳಿರುವಂತೆ ಹೇಳಿದ್ದೇನೆ. ಗಂಡನಿಲ್ಲದೆ ನಾನು ಹೇಗೆತಾನೇ ಭೋಗಗಳನ್ನು ಅನುಭವಿಸಲಿ? ಪಾಪಿಯಾಗುವೆನಲ್ಲ?

೨. ಗಂಡನಿಲ್ಲದಿದ್ದರೆ ಜೀವವು ನನ್ನ ದೇಹದಲ್ಲಿ ನಿಲ್ಲುವುದೇ ಇಲ್ಲ. ಉತ್ತಮವಾದ ಪತಿವ್ರತಾಧರ್ಮವು ಈ ರೀತಿಯಾಗಿ ಹೇಳಲ್ಪಟ್ಟಿದೆ.

೩-೪. ಹೆಂಗಸರಿಗೆ ಗತಿದಾಯಕವಾದ, ಉತ್ತಮವಾದ, ಈ ಸ್ತ್ರೀ ಧರ್ಮವನ್ನು ಕೇಳಿ, ಈ ಹೆಂಗಸರೆಲ್ಲ ಸಂತೋಷಗೊಂಡು ಧರ್ಮವತ್ಸಲೆಯಾದ ಸುಕಲೆಯನ್ನು ಹೊಗಳುತ್ತಾರೆ, ಬ್ರಾಹ್ಮಣರೂ ಕೂಡ ಹೊಗಳುತ್ತಾರೆ.

॥ ವಿಷ್ಣುರುವಾಚ ॥

ತಸ್ಯಾಧ್ಯಾನಪ್ರಭಾವಂ ತು ಪತಿಕಾಮುಪ್ರಭಾವತಾಂ ।
ಅತ್ಯರ್ಥಂ ದೃಷ್ಟವಾನಿಂದ್ರಃ ಸುವಿಚಿಂತ್ಯ ಸುರೇಶ್ವರಃ ॥ ೫ ॥

ಸುಕಲಾಯಾಃ ಪರಂ ಭಾವಂ ಸುವಿಚಾರ್ಯ ನರೇಶ್ವರಃ ।
ಅಚಲಂ ಧೈರ್ಯಮಸ್ಯಾಶ್ಚ ಪತಿಷ್ಯೇऽಹಂ ನ ಸಂಶಯಃ ॥ ೬ ॥

ಸಸ್ಮಾರ ಮನ್ಮಥಂ ದೇವಂ ತ್ವರಮಾಣಃ ಸುರಾಧಿಪಃ ।
ಪುಷ್ಪಚಾಪಂ ಸ ಸಂಗೃಹ್ಯ ಮೀನಕೇತುಸ್ಸಮಾಗತಃ ॥ ೭ ॥

ಪ್ರಿಯಯಾ ತಯಾ ಸಮಾಯುಕ್ತೋ ರತ್ಯಾ ದೃಷ್ಟೋ ಮಹಾಬಲಃ ।
ಬದ್ಧಾಂಜಲಿಪುಟೋ ಭೂತ್ವಾ ಸಹಸ್ರಾಕ್ಷಮುವಾಚ ಸಃ ॥ ೮ ॥

ಕಸ್ಮಾದಹಂ ತ್ವಯಾ ನಾಥ ಅಧುನಾ ಸಂಸ್ಮೃತೋ ವಿಭೋ ।
ಆದೇಶೋ ದೀಯತಾಂ ಮೇऽದ್ಯ ಸರ್ವಭಾವೇನ ಮಾನದ ॥ ೯ ॥

---

೫. ವಿಷ್ಣುವು ಹೇಳಿದನು.–ಪತಿಯಲ್ಲೇ ಅಪೇಕ್ಷೆಯುಳ್ಳ ಅವಳ ಧ್ಯಾನದರೀತಿ ಯನ್ನೂ ಪತಿಭಕ್ತಿಯನ್ನೂ ಕೇಳಿ ಇಂದ್ರನು ಬಹಳವಾಗಿ ಯೋಚಿಸಿ ಸಂತೋಷ ಪಟ್ಟನು.

೬. ಸುಕಲೆಯ ಉತ್ತಮಭಾವವನ್ನೂ, ಅಚಲವಾದ ಧೈರ್ಯವನ್ನೂ ಪರೀ ಕ್ಷಿಸುತ್ತೇನೆಂದುಕೊಂಡನು.

೭-೮. ಆಗ ಇಂದ್ರನು ಜಾಗ್ರತೆಯಾಗಿ ಬರಬೇಕೆಂದು ಮನ್ಮಥನನ್ನು ಸ್ಮರಿಸಿ ದನು. ಆ ಮನ್ಮಥನು ಪುಷ್ಪಚಾಪವನ್ನು ಸರಿಮಾಡಿಕೊಂಡು ಒಡನೆಯೇ ಅಲ್ಲಿಗೆ ಬಂದು ಪ್ರಿಯಳಾದ ರತಿಯಿಂದ ಕೂಡಿಕೊಂಡು ಸಹಸ್ರಾಕ್ಷನಿಗೆ ಕಾಣಿಸಿಕೊಂಡು ಕೈಕಟ್ಟಿಕೊಂಡು ನಿಂತು,

೯. ಎಲೈ ಸ್ವಾಮಿಯೇ ನನ್ನನ್ನು ಈಗ ಏಕೆ ಸ್ಮರಿಸಿದೆ? ನಾನು ಮಾಡಬೇ ಕಾದ ಕಾರ್ಯವೇನು? ಅಪ್ಪಣೆಕೊಡು ಎಂದನು.

॥ ಇಂದ್ರ ಉವಾಚ ॥

**ಸುಕಲೇಯಂ ಮಹಾಭಾಗಾ ಪತಿವ್ರತಪರಾಯಣಾ ।**
**ಶೃಣುಷ್ವ ಕಾಮದೇವ ತ್ವಂ ಕುರು ಸಾಹಾಯ್ಯಮುತ್ತಮಂ ॥ ೧೦ ॥**

**ನಿಕರ್ಷಿಷ್ಯೆ ಮಹಾಭಾಗಾಂ ಸುಕಲಾಂ ಪುಣ್ಯಮಂಗಳಾಂ ।**
**ತಚ್ಛ್ರುತ್ವಾ ವಚನಂ ತಸ್ಯ ಶಕ್ರಸ್ಯ ತಮಥಾಬ್ರವೀತ್ ॥ ೧೧ ॥**

**ಏವಮಸ್ತು ಸಹಸ್ರಾಕ್ಷ ಕರಿಷ್ಯಾಮಿ ನ ಸಂಶಯಃ ।**
**ಸಾಹಾಯ್ಯಂ ದೇವದೇವೇಶ ತವ ಕೌತುಕಕಾರಣಾತ್ ॥ ೧೨ ॥**

**ಏವಮುಕ್ತ್ವಾ ಮಹಾತೇಜಾಃ ಕಂದರ್ಪೋ ಮುನಿದುರ್ಜಯಃ**
**ದೇವಾನ್ ಜೇತುಂ ಸಮರ್ಥೋಽಹಂ ಸ ಮುನೀನೃಷಿಸತ್ತಮಾನ್ ॥ ೧೩ ॥**

**ಕಿಂ ಪುನಃ ಕಾಮಿನೀಂ ದೇವ ಯಸ್ಯಾಂಗೆ ನಾಸ್ತಿ ವೈ ಬಲಂ ।**
**ಕಾಮಿನೀನಾಮಹಂ ದೇವ ಅಂಗೇಷು ನಿವಸಾಮ್ಯಹಂ ॥ ೧೪ ॥**

**ಭಾಲೇ ಕಚೇಷು ನೇತ್ರೇಷು ಕುಚಾಗ್ರೇಷು ಚ ಸರ್ವದಾ ।**
**ನಾಭೌ ಕಟೌ ಪೃಷ್ಠದೇಶೇ ಜಘನೇ ಯೋನಿಮಂಡಲೇ ॥ ೧೫ ॥**

---

೧೦. ಇಂದ್ರನು ಹೇಳುತ್ತಾನೆ.—ಸುಕಲೆಯು ಪತಿವ್ರತಪರಾಯಣೆಯಾಗಿ ತಪಸ್ಸುಮಾಡುತ್ತಿದ್ದಾಳೆ. ಅವಳನ್ನು ಪರೀಕ್ಷಿಸಲೋಸುಗ ತಪೋಹೀನಳನ್ನಾಗಿ ಮಾಡಬೇಕೆಂದಿರುತ್ತೇನೆ. ಈ ವಿಷಯದಲ್ಲಿ ನನಗೆ ಸಹಾಯವನ್ನು ಮಾಡು ಎಂದನು.

೧೧-೧೩. ಇಂದ್ರನ ಮಾತನ್ನು ಕೇಳಿ ಮನ್ಮಥನು ಎಲೈ ಸಹಸ್ರಾಕ್ಷನೇ ನಿನ್ನ ಅಪೇಕ್ಷೆಯಂತೆ ಸಂಶಯವಿಲ್ಲದೆ ಸಹಯಮಾಡುತ್ತೇನೆ. ನಾನು ದೇವತೆಗಳನ್ನೂ ಋಷಿಗಳನ್ನೂ ಮುನಿಗಳನ್ನೂ ಜಯಿಸಬಲ್ಲೆ. ನನಗೆ ಅಷ್ಟು ಸಾಮರ್ಥ್ಯವಿದೆ.

೧೪. ಹೆಂಗಸರನ್ನು ಜಯಿಸುವುದು ಒಂದು ಲೆಕ್ಕವೆ? ಅವರ ದೇಹದಲ್ಲಿ ಬಲವೇ ಇಲ್ಲ. ಅಲ್ಲದೆ ಅವರ ಅಂಗದಲ್ಲೇ ನಾನೂ ವಾಸವಾಗಿದ್ದೇನೆ.

೧೫-೧೬.—ಮುಖ, ಕೇಶ, ಕಣ್ಣು, ಕುಚ, ಹೊಕ್ಕಳು, ಸೊಂಟ, ಪಿರ್ರೆಗಳು, ತೊಡೆ, ಯೋನಿ ತುಟಿ, ಹಲ್ಲು, ಕಂಕುಳು, ಈ ಸ್ಥಳಗಳಲ್ಲಿ ಸಂಶಯವಿಲ್ಲದೆ ವಾಸವಾಗಿರುತ್ತೇನೆ. ಇದೂ ಅಲ್ಲದೆ ಇನ್ನೂ ಇತರ ಅಂಗ ಪ್ರತ್ಯಂಗಗಳಲ್ಲೂ, ವಾಸಿವಾಗಿದ್ದೇನೆ.

**ಅಧರೇ ದಂತಭಾಗೇಷು ಕಕ್ಷಾಯಾಂ ಹಿ ನ ಸಂಶಯಃ ।**
**ಅಂಗೇಷ್ವೇವಂ ಪ್ರತ್ಯಂಗೇಷು ಸರ್ವತ್ರ ನಿವಸಾಮ್ಯಹಂ ॥ ೧೬ ॥**

**ನಾರೀ ಮಮ ಗೃಹಂ ದೇವ ಸದಾ ತತ್ರ ವಸಾಮ್ಯಹಂ ।**
**ತತ್ರಸ್ಥಃ ಪುರುಷಾನ್ ಸರ್ವಾನ್ ಮಾರಯಾಮಿ ನ ಸಂಶಯಃ ॥ ೧೭ ॥**

**ಸ್ವಭಾವೇನಾಬಲಾ ನಾರೀ ಸಂತಪ್ತಾ ಮಮ ಮಾರ್ಗಣೈಃ ।**
**ಭ್ರಾತರಂ ಪಿತರಂ ದೃಷ್ಟ್ವಾ ಅನ್ಯಂ ಸ್ವಜನಭಾಂಧವಂ ॥ ೧೮ ॥**

**ಸರೂಪಂ ಸಗುಣಂ ದೇವ ಮಮ ಬಾಣಹತಾ ಸತೀ ।**
**ಚಲತೇ ನಾತ್ರ ಸಂದೇಹೋ ವಿಪಾಕಂ ನೈವ ಚಿಂತಯೇತ್ ॥ ೧೯ ॥**

**ಯೋನಿಃ ಸ್ಪಂದತಿ ನಾರೀಣಾಂ ಸ್ತನೌ ಚೈವ ಸುರೇಶ್ವರ ।**
**ನಾಸ್ತಿ ಧೈರ್ಯಂ ಸುರೇಶಾನ ಸುಕಲಾಂ ನಾಶಯಾಮ್ಯಹಂ ॥ ೨೦ ॥**

**॥ ಇಂದ್ರ ಉವಾಚ ॥**

**ಪುರುಷೋಽಹಂ ಭವಿಷ್ಯಾಮಿ ರೂಪವಾನ್ ಗುಣವಾನ್ ಧನೀ ।**
**ಕೌತುಕಾರ್ಥಮಿಮಾಂ ನಾರೀಂ ಚಾಲಯಾಮಿ ಮನೋದ್ಭವ ॥ ೨೧ ॥**

---

೧೭. ಸ್ತ್ರೀಯೇ ನನಗೆ ಆವಾಸಸ್ಥಾನವು. ಅಲ್ಲಿ ಯಾವಾಗಲೂ ವಾಸವಾಗಿರುತ್ತೇನೆ. ಅಲ್ಲಿದ್ದುಕೊಂಡು ಗಂಡಸರೆಲ್ಲರನ್ನೂ ಕಾಮಬಾಧೆಯಿಂದ ಕೊಲ್ಲುತ್ತೇನೆ. ಸಂಶಯವಿಲ್ಲ.

೧೮-೧೯. ಹೆಂಗಸರು ಸ್ವಭಾವವಾಗಿಯೇ ಅಬಲೆಯರು. ನನ್ನ ಬಾಣಗಳಿಂದ ನೊಂದಮೇಲಂತೂ ಅವರಿಗೆ ಸೋದರ, ತಂದೆ, ಇತರ ಸ್ವಜನಬಾಂಧವರು, ಇನ್ನೂ ರೂಪುಗುಣವುಳ್ಳವರುಗಳನ್ನು ನೋಡಿದರೆ ಮನಸ್ಸು ಒಡನೆಯೇ ಚಲಿಸುತ್ತದೆ. ಸಂದೇಹವಿಲ್ಲ. ಅದರಿಂದ ಆಗುವ ಫಲಿತಾಂಶವನ್ನು ಯೋಚಿಸಬೇಕಾದದ್ದೇ ಇಲ್ಲ.

೨೦. ಅಂತಹ ಸುಂದರಪುರುಷರನ್ನು ನೋಡಿದರೆ ಹೆಂಗಸರಿಗೆ ಗುಹ್ಯಸ್ಥಾನವೂ ಹಾರುತ್ತದೆ. ಮತ್ತು ಸ್ತನಗಳೂ ಹಾರುತ್ತವೆ. ಅವರಿಗೆ ಧೈರ್ಯವೇ ಇಲ್ಲ. ಆ ಸುತಲೆಯನ್ನು ನಾಶಮಾಡುವುದು ನನಗೆ ಎಷ್ಟರ ಕೆಲಸ? ಎಂದನು.

೨೧. ಇಂದ್ರನು ಹೇಳಿದನು—ಎಲೈ ಮನ್ಮಥನೆ, ಧನ ರೂಪು, ಗುಣಗಳಿರುವ ಮನುಷ್ಯನಾಗಿ ನಾನು ಆಗುತ್ತೇನೆ. ಆಸೆಯಿಂದ ಈಕೆಯ ಮನಸ್ಸು ತಿರುಗುವಂತೆ ಮಾಡುತ್ತೇನೆ.

ನೈವ ಕಾಮಾನ್ನ ಸಂತ್ರಾಸಾನ್ನ ವಾ ಲೋಭಾನ್ನ ಕಾರಣಾತ್ ।
ನ ವೈ ಮೋಹಾನ್ನ ವೈ ಕ್ರೋಧಾತ್ ಸತ್ಯಂ ಸತ್ಯಂ ಶತಿಪ್ರಿಯಃ ॥ ೨೨ ॥

ಕಥಂ ಮೇ ದೃಶ್ಯತೇ ತಸ್ಯಾ ಮಹತ್ಸತ್ಯಂ ಪತಿವ್ರತಂ ।
ನಿಷ್ಕರ್ಷಿಷ್ಯ ಇತೋ ಗತ್ವಾ ಭವನ್ಮೋಹೋಽತ್ರ ಕಾರಣಂ ॥ ೨೩ ॥

ಏವಂ ಕಾಮಂ ಚ ಸಂದಿಶ್ಯ ಜಗಾಮ ಸುರರಾಟ್ ಸ್ವಯಂ ।
ಮನ್ಮಥಾಕೃತಿಃ ಸಂಭೂತೋ ರೂಪವಾನ್ಗುಣವಾನ್ ಸ್ವಯಂ ॥ ೨೪ ॥

ಸರ್ವಾಭರಣಶೋಭಾಂಗಃ ಸರ್ವಭೋಗಸಮನ್ವಿತಃ ।
ಭೋಗಲೀಲಾಸಮಾಕೀರ್ಣಃ ಸರ್ವದೌದಾರ್ಯಸಂಯುತಃ ॥ ೨೫ ॥

ಯತ್ರ ಸಾ ತಿಷ್ಠತೇ ದೇವೀ ಕೃಕಲಸ್ಯ ಪ್ರಿಯಾ ನೃಪ ।
ಆತ್ಮಲೀಲಾಂ ಚ ರೂಪಂ ಚ ಗುಣಭಾವಂ ಪ್ರದರ್ಶಯೇತ್ ॥ ೨೬ ॥

ನೈವ ಪಶ್ಯತಿ ಸಾ ತಂ ತು ಪುರುಷಂ ರೂಪಸಂಪದಂ ।
ಯತ್ರ ಯತ್ರ ವ್ರಜೇತ್ಸಾ ಹಿ ತತ್ರ ತಾಂ ಪಶ್ಯತೇ ನೃಪ ॥ ೨೭ ॥

---

೨೨. ಎಲೈ- ಮನ್ಮಥನೇ, ಆಕೆಯನ್ನು ಕಾಮ, ಹೆದರಿಕೆ, ಆಸೆ, ಮೋಹ, ಕೋಪಗಳೊಂದನ್ನೂ ತೋರಿಸದೆ ಆಕೆಯ ಮನಸ್ಸು ಚಲಿಸುವಂತೆ ಖಂಡಿತವಾಗಿ ಮಾಡುತ್ತೇನೆ.

೨೩-೨೪. ಆಕೆಯ ಪಾತಿವ್ರತ್ಯವು ಹೇಗೆ ನಿಲ್ಲುವುದೆಂದು ನೋಡುತ್ತೇನೆ. ಇಲ್ಲಿಂದ ಹೋಗಿ ಅದನ್ನು ಎಳೆದು ಬಿಸಾಡುತ್ತೇನೆ. ನೀನು ಮೋಹವನ್ನು ಮಾತ್ರ ಉಂಟುಮಾಡು ಎಂದು ಕಾಮನಿಗೆ ಅಪ್ಪಣೆಮಾಡಿ, ದೇವೇಂದ್ರನು ಹೊರಟು ಹೋದನು.

೨೫-೨೬. ಬಳಿಕ ಆತನು ರೂಪ, ಗುಣ, ಆಭರಣ, ಭೋಗ, ಔದಾರ್ಯ ಗಳಿಂದ ಕೂಡಿಕೊಂಡು, ಮನ್ಮಥನಂತೆ ಸುಂದರಾಕಾರವನ್ನು ಹೊಂದಿ ಕೃಕಲನ ಹೆಂಡತಿಯಾದ ಆ ದೇವಿಯಿರುವಲ್ಲಿಗೆ ಹೋಗಿ ತನ್ನ ಬೆಡಗನ್ನೂ ರೂಪವನ್ನೂ ಗುಣವನ್ನೂ ತೋರಿಸಿ ಮೆರೆಯುತ್ತಿದ್ದನು.

೨೭. ರೂಪವಂತನಾದ ಆ ಪುರುಷನನ್ನು ಆಕೆಯು ದೃಷ್ಟಿಸಿ ನೋಡುತ್ತಲೇ ಇರಲಿಲ್ಲ. ಆದರೂ ಅವಳು ಎಲ್ಲೆಲ್ಲಿ ಹೋದರೆ ಅಲ್ಲಲ್ಲಿಗೆ ತಾನೂ ಹೋಗುವನು.

ಸಾಭಿಲಾಷೇಣ ಮನಸಾ ತಾಮೇವಂ ಪರಿಪಶ್ಯತಿ ।
ಕಾಮಚೇಷ್ಟಾಂ ಸಹಸ್ರಾಕ್ಷೋ ದರ್ಶಯನ್ ಸರ್ವಭಾವಕೈಃ ॥ ೨೮ ॥

ಚತುಷ್ಪಥೇ ಪಥೇ ತೀರ್ಥೇ ಯತ್ರ ದೇವೀ ಪ್ರಯಾತಿ ಸಾ ।
ತತ್ರ ತತ್ರ ಸಹಸ್ರಾಕ್ಷಸ್ತಾಮೇವ ಪರಿಪಶ್ಯತಿ ॥ ೨೯ ॥

ಇಂದ್ರೇಣ ಪ್ರೇಷಿತಾ ದೂರೇ ತತ್ಪಾರ್ಶ್ವಂ ಪ್ರತಿ ಸಾ ಗತಾ ।
ಸುಕಲಾಂ ಚ ಮಹಾಭಾಗಾಂ ಪ್ರತ್ಯುವಾಚ ಪ್ರಹಸ್ಯ ವೈ ॥ ೩೦ ॥

ಅಹೋ ಸತ್ಯಮಹೋ ಧೈರ್ಯಮಹೋ ಕೀರ್ತಿರಹೋ ಕ್ಷಮಾ ।
ಅಸ್ಯಾ ರೂಪೇಣ ಸಂಸಾರೇ ನಾಸ್ತಿ ನಾರೀ ವರಾನನಾ ॥ ೩೧ ॥

ಕಾ ತ್ವಂ ಭವಸಿ ಕಲ್ಯಾಣಿ ಕಸ್ಯ ಭಾರ್ಯಾ ಭವಿಷ್ಯಸಿ ।
ಯಸ್ಯ ತ್ವಂ ಸಗುಣಾ ಭಾರ್ಯಾ ಸ ಧನ್ಯಃ ಪುಣ್ಯಭಾಗ್ಭುವಿ ॥ ೩೨ ॥

---

೨೮. ಅಭಿಲಾಷೆಯನ್ನು, ಹೊರಪಡಿಸುವ ಮನಸ್ಸಿನಿಂದ ಆಕೆಯನ್ನು ನೋಡುವನು. ಕಾಮಚೇಷ್ಟೆಗಳನ್ನು ಆಕೆಯ ಮುಂದೆ ತೋರಿಸುವನು.

೨೯. ಬೀದಿಯ ಚೌಕ, ದಾರಿ, ತೀರ್ಥಗಳು ಮೊದಲಾದ ಸ್ಥಳಗಳಲ್ಲಿ ಆಕೆಯು ಎಲ್ಲೆಲ್ಲಿಹೋದರೂ ತಾನೂ ಅಲ್ಲಲ್ಲಿಗೆ ಹೋಗಿ ಆಕೆಯ ಎದುರಿಗೆ ಸುಳಿದಾಡುತ್ತಿರುವನು.

೩೦. ಇಷ್ಟೆ ಅಲ್ಲದೆ ಇಂದ್ರನು ಆಕೆಯ ಬಳಿಗೆ ಒಬ್ಬ ದೂತಿಯನ್ನು ಕಳುಹಿಸಿದನು. ಆಕೆಯು ಅವಳ ಬಳಿಗೆ ಹೋಗಿ ಆ ಸುಕಲೆಯನ್ನು ಕುರಿತು ನಗುತ್ತ ಹೇಳಿದಳು.

೩೧. ಅಮ್ಮ ಸುಕಲೆ, ಈತನ, ಧೈರ್ಯ, ಸತ್ಯ, ಕೀರ್ತಿ, ಕ್ಷಮೆಗಳು ಅಸಾಧಾರಣವಾದುವು. ಈತನಿಗೆ ಸಂಸಾರದಲ್ಲಿ ಸರಿಯಾದವಳೊಬ್ಬ ಹೆಂಡತಿಮಾತ್ರ ಇಲ್ಲ.

೩೨. ಅಮ್ಮಾ ನೀನಾರು? ಯಾರ ಹೆಂಡತಿ? ನೀನು ಯಾರಿಗೆ ಹೆಂಡತಿಯೋ ಆತನೇ ಲೋಕದಲ್ಲಿ ಧನ್ಯನು. ಎಂದು ಹೇಳಲು, ಅವಳ ಮಾತನ್ನು ಕೇಳಿ ಅವಳನ್ನು ಕುರಿತು ಸುಕಲೆಯು ಇಂತೆಂದಳು.

ತಸ್ಯಾಸ್ತು ವಚನಂ ಶ್ರುತ್ವಾ ತಾಮುವಾಚ ಮನಸ್ವಿನೀ ।
ವೈಶ್ಯಜಾತ್ಯಾಂ ಸಮುತ್ಪನ್ನೋ ಧರ್ಮಾತ್ಮಾ ಸತ್ಯವತ್ಸಲಃ ॥ ೩೩ ॥

ತಸ್ಯಾಹಂ ಹಿ ಪ್ರಿಯಾ ಭಾರ್ಯಾ ಸತ್ಯಸಂಧಸ್ಯ ಧೀಮತಃ ।
ಕೃಕಲಸ್ಯಾಪಿ ಚ ವೈಶ್ಯಸ್ಯ ಸತ್ಯಮೇವ ವದಾಮಿ ತೇ ॥ ೩೪ ॥

ಮಮ ಭರ್ತಾ ಸ ಧರ್ಮಾತ್ಮಾ ತೀರ್ಥಯಾತ್ರಾಂ ಗತಸ್ಸುಧೀಃ ।
ತಸ್ಮಿನ್ಗತೇ ಮಹಾಭಾಗೇ ಮಮ ಭರ್ತರಿ ಸಾಂಪ್ರತಂ ॥ ೩೫ ॥

ಅತಿಕ್ರಾಂತಾಃ ಶೃಣುಷ್ವ ತ್ವಂ ತ್ರಯಶ್ಚೈವಾಪಿ ವತ್ಸರಾಃ
ತತೋಽಹಂ ದುಃಖಿತಾ ಜಾತಾ ವಿನಾ ತೇನ ಮಹಾತ್ಮನಾ ॥ ೩೬ ॥

ಏತತ್ತೇ ಸರ್ವಮಾಖ್ಯಾತಮಾತ್ಮವೃತ್ತಾಂತಮೇವ ಚ ।
ಭವತೀ ಪೃಚ್ಛತೀ ಕಾ ಮಾಂ ಭವಿಷ್ಯತಿ ವದಸ್ವ ಮೇ ॥ ೩೭ ॥

ಸುಕಲಾಯಾ ವಚಃ ಶ್ರುತ್ವಾ ದೂತ್ಯಾ ಆಭಾಷಿತಂ ಪುನಃ ।
ಮಾಮೇವಂ ಪೃಚ್ಛಸೇ ಭದ್ರೇ ತತ್ತೇ ಸರ್ವಂ ವದಾಮ್ಯಹಂ ॥ ೩೮ ॥

ಅಹಂ ತವಾಂತಿಕಂ ಪ್ರಾಪ್ತಾ ಕ್ಯಾರ್ಯಾರ್ಥಂ ವರವರ್ಣಿನಿ ।
ಶ್ರೂಯತಾಮಭಿಧಾಸ್ಯಾಮಿ ಶ್ರುತ್ವಾ ಚೈವಾವಧಾರ್ಯತಾಂ ॥ ೩೯ ॥

---

೩೩-೩೭. ವೈಶ್ಯಜಾತಿಯಲ್ಲಿ ಹುಟ್ಟಿದ ಧರ್ಮಾತ್ಮನೂ, ಸಂತ್ಯಸಂಧನೂ, ಆದ ಕೃಕಲನೆಂಬ ಒಬ್ಬ ಪುರುಷನಿರುವನು. ನಾನು ಆ ಪುಣ್ಯಾತ್ಮನ ಹೆಂಡತಿಯು. ಆ ಪುಣ್ಯಾತ್ಮನಾದ ನನ್ನ ಗಂಡನು ತೀರ್ಥಯಾತ್ರೆಗೆ ಹೋಗಿರುವನು. ಆತನು ತೀರ್ಥ ಯಾತ್ರೆಗೆ ಹೋಗಿ ಇಲ್ಲಿಗೆ ಮೂರು ವರ್ಷಗಳಾದವು. ಆದಕಾರಣ ಅವನಿಲ್ಲದುದರಿಂದ ನಾನೂ ದುಃಖಿಯಾಗಿದ್ದೇನೆ. ನನ್ನ ಎಲ್ಲಾ ವಿಷಯಗಳನ್ನೂ ನಿನಗೆ ಹೇಳಿದೆನು. ನೀನಾರು? ನನ್ನನ್ನು ಇಷ್ಟು ವಿಧವಾಗಿ ಕೇಳುತ್ತಿರುವೆಯಲ್ಲ? ಹೇಳು ಎನ್ನಲು,

೩೮. ಆ ದೂತಿಯು ಸುಕಲೆಯ ಈ ಮಾತನ್ನು ಕೇಳಿ ನನ್ನನ್ನೂ ನೀನು ಕೇಳುವ ಪಕ್ಷದಲ್ಲಿ ನನ್ನ ವೃತ್ತಾಂತವೆಲ್ಲವನ್ನೂ ಹೇಳುತ್ತೇನೆ.

೩೯. ನಾನು ನಿನ್ನಬಳಿಗೆ ಒಂದು ಕೆಲಸಕ್ಕೋಸ್ಕರ ಬಂದಿದ್ದೇನೆ. ಅದನ್ನು ಕೇಳಿ ಮನಸ್ಸಿಗೆ ತಂದುಕೋ.

**ಗತಸ್ತೇ ನಿರ್ಘೃಣೋ ಭರ್ತಾ ತ್ವಾಂ ತ್ಯಕ್ತ್ವಾ ತು ವರಾನನೇ ।**
**ಕಿಂ ಕರಿಷ್ಯಸಿ ತೇನಾಪಿ ಪ್ರಿಯಾಘಾತಕರೇಣ ಚ ॥ ೪೦ ॥**

**ಯಸ್ತ್ವಾಂ ತ್ಯಕ್ತ್ವಾ ಗತಃ ಪಾಪೀ ಸಾಧ್ವ್ಯಾಚಾರಸಮನ್ವಿತಾ ।**
**ಕಿಂ ವಾ ಸ ತೇ ಗತೋ ಬಾಲೇ ತತ್ರ ಜೀವತಿ ನೈ ಮೃತಃ ॥ ೪೧ ॥**

**ಕಿಂ ಕರಿಷ್ಯತಿ ತೇನಾಪಿ ಭವತೀ ಖಿದ್ಯತೇ ವೃಥಾ ।**
**ಕಸ್ಮಾನ್ನಾಶಯಸೇ ತ್ವಂ ಚ ದೇಹಂ ಹೇಮಸಮಪ್ರಭಂ ॥ ೪೨ ॥**

**ಬಾಲ್ಯೇ ವಯಸಿ ಸಂಪ್ರಾಪ್ತೇ ಮಾನವೋ ನ ಚ ವಿಂದತಿ ।**
**ಏಕಂ ಸುಖಂ ಮಹಾಭಾಗೇ ಬಾಲಕ್ರೀಡಾಂ ವಿನಾ ಶುಭೇ ॥ ೪೩ ॥**

**ವಾರ್ಧಕ್ಯೇ ದುಃಖಸಂಪ್ರಾಪ್ತಿರ್ಜರಾ ಕಾಯಂ ಪ್ರಹಾರಯೇತ್ ।**
**ತಾರುಣ್ಯೇ ಭುಜ್ಯತಾಂ ಭೋಗಾಃ ಸುಖಾನ್ಸರ್ವಾನ್ಸ್ವಾನಸೇ ॥ ೪೪ ॥**

---

೪೦ ಆ ದಯಾಹೀನನಾದ ನಿನ್ನ ಗಂಡನು ನಿನ್ನನ್ನು ಬಿಟ್ಟು ಹೊರಟು ಹೋದನು ನಿನ್ನಂತಹ ಹೆಂಡತಿಗೆ ಅನ್ಯಾಯಮಾಡಿದ ಅವನನ್ನು ಕಟ್ಟಿಕೊಂಡು ನೀನೇನು ಮಾಡುತ್ತಿ ?

೪೧-೪೨. ಪತಿವ್ರತಾಪರಾಯಣಳಾದ ನಿನ್ನನ್ನು ಬಿಟ್ಟುಹೋದ ಆತನನ್ನು ಯೋಚಿಸಿ ಫಲವೇನು ? ಹೋದ ಅವನನ್ನೇ ಕಟ್ಟಿಕೊಂಡು ನಿನಗೇನು ಉಪಯೋಗ ? ಅವನು ಬದುಕಿದ್ದಾನೋ ಅಥವಾ ಇಲ್ಲವೋ ಒಂದೂ ಗೊತ್ತಿಲ್ಲ. ಅಂತವನನ್ನು ಕಟ್ಟಿಕೊಂಡು ಏನುಮಾಡುತ್ತಿ ? ವ್ಯರ್ಥವಾಗಿ ದುಃಖಿಸುತ್ತೀಯೆ. ಚಿನ್ನದಂತಿರುವ ಈ ನಿನ್ನ ದೇಹವನ್ನು ಏತಕ್ಕೋಸ್ಕರ ವ್ಯರ್ಥಮಾಡುತ್ತೀಯೆ ?

೪೩-೪೪. ಮನುಷ್ಯನು ಬಾಲ್ಯವಯಸ್ಸಿನಲ್ಲಿ ಬಾಲಕ್ರೀಡೆ ಎಂಬ ಒಂದು ಸುಖವನ್ನು ಹೊರತಾಗಿ ಮತ್ತೇನನ್ನೂ ತಿಳಿಯನು. ಮುಪ್ಪಿನಲ್ಲಿ ದುಃಖಗಳೊದಗುತ್ತವೆ. ಮುಪ್ಪುದೇಹವನ್ನು ನಾಶಮಾಡುತ್ತದೆ. ಆದ್ದರಿಂದ ತಾರುಣ್ಯದಲ್ಲಿಯೇ ಭೋಗಗಳನ್ನೂ, ಸುಖಗಳನ್ನೂ ಅನುಭವಿಸಬೇಕು.

ಯಾವತ್ತಿಷ್ಠತಿ ತಾರುಣ್ಯೇ ತಾವದ್ಭುಂಜತಿ ಮಾನವಃ ।
ಸುಖಭೋಗಾದಿಕಂ ಸರ್ವಂ ಸ್ವೇಚ್ಛಯಾ ಸೇವತೇ ನರಃ ॥ ೪೫ ॥

ಯಾವತ್ತಿಷ್ಠತಿ ತಾರುಣ್ಯಂ ತಾವದ್ಭೋಗಾನ್ ಪ್ರಭುಂಜತೇ ।
ವಯಸ್ಯಪಿ ಗತೇ ಭದ್ರೇ ತಾರುಣ್ಯೇ ಕಿಂ ಕರಿಷ್ಯಸಿ ॥ ೪೬ ॥

ಸಂಪ್ರಾಪ್ತೇ ವಾರ್ಧಕೇ ದೇವಿ ಕಿಂಚಿತ್ಕಾರ್ಯಂ ನ ಸಿಧ್ಯತಿ ।
ಸ್ಥವಿರಶ್ಚ ತಪಃ ಕರ್ತುಂ ಸುಖಕಾರ್ಯಂ ನ ಗಚ್ಛತಿ ॥ ೪೭ ॥

ವಯಸ್ಯಾಪಿ ಗತೇ ಬಾಲೇ ಕ್ರಿಯತೆ ಸೇತುಬಂಧನಂ ।
ತಾದೃಶೋಽಯಂ ಭವೇತ್ಕಾಯಸ್ತಾರುಣ್ಯೇ ತು ಗತೇ ಶುಭೇ ॥ ೪೮

ತಸ್ಮಾತ್ಸುಸಂಮುಖೇನಾಪಿ ಪಿಬಸ್ವ ಮಧುಮಾಧವೀಂ ।
ಕಾಮ ಏಷ ದಹತ್ಯಂಗಂ ತವೇದಂ ಚಾರುಲೋಚನೇ ॥ ೪೯ ॥

---

೪೫. ತಾರುಣ್ಯವಿರುವವರೆಗೂ ಮನುಷ್ಯನು ಸುಖಭೋಗಾದಿಗಳನ್ನು ಸ್ವೇಚ್ಛೆಯಿಂದ ಅನುಭವಿಸಬೇಕು.

೪೬. ತಾರುಣ್ಯವಿರುವವರೆಗೂ ಭೋಗಗಳನ್ನು ಅನುಭವಿಸದಿದ್ದರೆ ತಾರುಣ್ಯವಯಸ್ಸು ಹೋದನಂತರ ಏನುಮಾಡುತ್ತೀಯೆ ?

೪೭. ಮುಪ್ಪು ಬಂದಮೇಲೆ ಒಂದು ಕೆಲಸವನ್ನೂ ಮಾಡಲಾಗುವುದಿಲ್ಲ. ಮುಪ್ಪು ತಪಸ್ಸಿಗೂ ಯೋಗ್ಯವಾದ ಕಾಲವಲ್ಲ.

೪೮. ನೀರು ಹೋದಮೇಲೆ ಅಣೆಕಟ್ಟಿದಂತಾಗುತ್ತದೆ. ಆ ತಾರುಣ್ಯವು ಹೋದಮೇಲೆ ಕಾಲವು ಉಪಯೋಗವಿಲ್ಲದ್ದಾಗುತ್ತದೆ.

೪೯. ಆದ್ದರಿಂದ ಸಂತೋಷಪಟ್ಟುಕೊಂಡು ದಿವ್ಯವಾದ ಪಾನಗಳನ್ನು ಪಾನಮಾಡು. ಈ ಕಾಮನು ನಿನ್ನ ಈ ಸುಂದರವಾದ ಅವಯವಗಳನ್ನು ಸುಡುತ್ತಿರುವನಲ್ಲ.

**ಅಯಮೇಕಸ್ಸಮಾಯಾತಃ ಪುರುಷೋ ರೂಪವಾನ್ಗುಣೀ ।**
**ಅಯಂ ಹಿ ಪುರುಷವ್ಯಾಘ್ರಃ ಸರ್ವಜ್ಞೋ ಗುಣವಾನ್ಧನೀ　　॥ ೫೦ ॥**

**ತವಾರ್ಥೇ ನಿತ್ಯಸಂಯುಕ್ತಃ ಸ್ನೇಹೇನ ವರವರ್ಣಿನಿ ।**
**ವೃದ್ಧತ್ವಂ ನಾಸ್ತಿ ಚೈವಾಸ್ಯ ಸ್ವಯಂ ಸಿದ್ಧಃ ಸುಸಿದ್ಧಿದಃ　　॥ ೫೧ ॥**

**ಅಜರೋ ನಿರ್ಜರೋ ವ್ಯಾಪೀ ಸುಸಿದ್ಧಃ ಸರ್ವವಿತ್ತಮಃ ।**
**ಅಕಾಮಃ ಕಾಮದೋ ಲೋಕೇ ಆತ್ಮರೂಪೇಣ ವರ್ತತೇ　　॥ ೫೨ ॥**

**ಯಥಾ ಗೇಹಸ್ಯ ಸಂಸ್ಥಾನಂ ತಥಾ ದೇಹಸ್ಯ ದೃಶ್ಯತೇ ।**
**ಯಥಾ ವಾರ್ಧಕಿನಾ ಕಾಯೋ ಯಥಾ ಸೂತ್ರೇಣ ಮಂದಿರಂ　　॥ ೫೩ ॥**

**ಅಶ್ಮಕಾಷ್ಠಸುಸಂಪನ್ನೈರ್ನಾನಾದಾರು ಸಮುದ್ಭವೈಃ ।**
**ಮೃತ್ತಿಕಾಷ್ಠೋದಕೇನಾಪಿ ಪ್ರಮಾತಾ ಪರಿಮಾಣಯೇತ್　　॥ ೫೪ ॥**

---

೫೦. ಇಗೋ, ಇಲ್ಲೊಬ್ಬ ಪುರುಷನು ಬಂದಿರುವನು. ಅವನು ರೂಪವಂತ, ಗುಣವಂತ, ನೋಡುವುದಕ್ಕೆ ಬಹು ಚೆನ್ನಾಗಿದ್ದಾನೆ, ಸರ್ವಜ್ಞನು, ಧನವಂತನು.

೫೧. ನಿನ್ನಲ್ಲಿ ನಿತ್ಯವೂ ಸ್ನೇಹದಿಂದಿರುವನು. ಇವನಿಗೆ ಮುಪ್ಪೇ ಇಲ್ಲ. ತಾನು ಸಿದ್ಧನಾಗಿದ್ದಾನೆ. ಇತರರಿಗೂ ಸಿದ್ಧಿಯನ್ನುಂಟುಮಾಡುತ್ತಾನೆ.

೫೨. ಈತನು ದೇವಪುರುಷನಾದುದರಿಂದ ಈತನಿಗೆ ಮುಪ್ಪೆಂಬುದೇ ಇಲ್ಲ. ಮತ್ತು ಇವನು ಅಪೇಕ್ಷಾರಹಿತನು. ಬೇಕಾದದ್ದನ್ನು ಕೊಡತಕ್ಕವನು. ಆತ್ಮನ ಸ್ವರೂಪದಿಂದಿದ್ದಾನೆ.

೫೩. ಪ್ರಪಂಚದಲ್ಲಿ ಮನೆಯು ಯಾವರೀತಿ ಇರುವುದೋ ದೇಹವೂ ಹಾಗೆಯೇ ಇರುವುದು. ಎಂದರೆ ದೇಹವೇ ಒಂದು ಮನೆ, ಆ ಮನೆಯನ್ನು ಒಡಗಿಯು ಹೇಗೆ ನೂಲಿನಿಂದ ಅಳೆಯುತ್ತಾನೋ, ಹಾಗೆ ದೇಹವನ್ನು (ಬ್ರಹ್ಮನು) ಅಳೆಯುತ್ತಾನೆ.

೫೪. ಕಲ್ಲು, ಮರ, ಮಣ್ಣು, ನೀರುಗಳಿಂದ ಇಷ್ಟುಬೇಕೆಂದು ಅಳತೆ ಮಾಡುವಂತೆ ದೇಹಕ್ಕೂ ಅಳತೆಮಾಡಿ ಸೇರಿಸುತ್ತಾನೆ.

ಲೇಪಿತಂ ಲೇಪನೈಃ ಕಾಷ್ಠಂ ಚಿತ್ರಂ ಭವತಿ ಚಿತ್ರಕೈಃ ।
ಪ್ರಥಮಂ ರೂಪಮಾಯಾತಿ ಗೃಹಂ ಸೂತ್ರೇಣ ಮೂಲತಃ ॥ ೫೫ ॥

ಪುಷ್ಣಾತಿ ಚ ಸ್ವಯಂ ತತ್ತು ಲೇಪನಾದ್ಯೈ ದಿನೇ ದಿನೇ ।
ವಾಯುನಾ ದೋಲಿತಂ ನಿತ್ಯಂ ಗೃಹಂ ಚ ಮಲಿನಾಯತೇ ॥ ೫೬ ॥

ಮಧ್ಯಮೋ ವಾರ್ತಿತಃ ಕಾಲೋ ಗೃಹಸ್ಯ ಪರಿಕಥ್ಯತೇ ।
ರೂಪಹಾನಿರ್ಭವೇತ್ತಸ್ಯ ಗೃಹಸ್ವಾಮೀ ವಿಲೇಪಯೇತ್ ॥ ೫೭ ॥

ಸ್ವೇಚ್ಛಯಾ ಚ ಗೃಹಸ್ವಾಮೀ ರೂಪವಂತಂ ನಯೇದ್ಗೃಹಂ ।
ಸಂಪನ್ನೇ ತಸ್ಯ ಗೇಹಸ್ಯ ದೂತಿಕೇ ಪರಿಕಥ್ಯತೇ ।
ಕಾಷ್ಠಶಿಲ್ಪಸ್ಯ ಶೀರ್ಣತ್ವಂ ಬಹುಕಾಲೈಃ ಪ್ರಯಾತಿ ತೇ ॥ ೫೮ ॥

॥ ಸುಕಲೋವಾಚ ॥

ಬಾಲ್ಯಂ ನಾಸ್ತ್ಯಪಿ ಜೀವಸ್ಯ ತಾರುಣ್ಯಂ ನಾಸ್ತಿ ಜೀವಿತೇ ।
ಸ್ಥಾನಭ್ರಷ್ಟಾ ಪ್ರಜಾಯಂತೇ ಮೂಲಾಗ್ರಂ ಪ್ರಚಲಂತಿ ತೇ ॥ ೫೯ ॥

---

೫೫. ಮರಗಳನ್ನು ಬಣ್ಣಗಳಿಂದ ಲೇಪಿಸುತ್ತಾನೆ. ಚಿತ್ರಗಳಿಂದ ಚಿತ್ರಿಸುತ್ತಾನೆ. ಸೂತ್ರವನ್ನು ಹಿಡಿದು ನೋಡುತ್ತಿರುವುದರಿಂದ ಬುಡದಿಂದಲೂ ಮನೆಯು ಒಂದು ರೂಪಕ್ಕೆ ಬರುತ್ತದೆ.

೫೬. ಪ್ರತಿದಿನವೂ ಲೇಪನಾದಿಗಳಿಂದ ಆ ಮನೆಯನ್ನು ಬಲಪಡಿಸುತ್ತಾನೆ. ಅದು ನಿತ್ಯವೂ ಗಾಳಿಬೀಸುತ್ತಿದ್ದರೆ ಕೊಳೆಯಾಗುತ್ತವೆ.

೫೭. ಮಧ್ಯಮಕಾಲವು ಆ ಮನೆಗೆ ವೃದ್ಧಿಕಾಲವೆಂದು ಹೇಳುತ್ತಾರೆ. ರೂಪಹಾನಿಯಾದಾಗ ಸ್ವಾಮಿಯು ಅದಕ್ಕೆ ಬಣ್ಣ ಬಳಿಯುತ್ತಾನೆ.

೫೮. ಮನೆಯ ಯಜಮಾನನು ಇಷ್ಟಬಂದಂತೆ ಮನೆಯನ್ನು ರೂಪಗೊಳಿಸಬಹುದು. ಹೀಗೆ ಮಾಡಿದರೆ ಆ ಮನೆಗೆ ಸಂಪೂರ್ಣತೆ ಉಂಟೆಂದು ಹೇಳಿದಂತಾಯಿತು. ಬಹಳಕಾಲವಾದಮೇಲೆ ಮರದ ಶಿಲ್ಪಗಳು ಹಳೆಯದಾಗಿ ನಾಶವಾಗುತ್ತದೆ. ಪ್ರಾಣಿಗಳ ದೇಹಗಳೂ ಹೀಗೆಯೇ ಇರುವವು.

೫೯. ಸುಕಲೆಯು ಹೇಳುತ್ತಾಳೆ:—ಜೀವಕ್ಕೆ ಬಾಲ್ಯವಿಲ್ಲ. ತಾರುಣ್ಯವೂ ಇಲ್ಲ. ಹಾಗೆಣಿಸುವವರು ಬುದ್ಧಿಹೀನರಾಗಿ ಸ್ಥಾನಭ್ರಷ್ಟರಾಗುತ್ತಾರೆ. ಅವರು ಪ್ರಾಯವನ್ನೇ ಹಾಳುಮಾಡಿಕೊಳ್ಳುತ್ತಾರೆ.

ನ ಸಹೇಲ್ಲೇಪನಾಭಾರಮಾಧಾರೇಣ ಪ್ರತಿಷ್ಠತಿ ।
ಏತದ್ಗೃಹಸ್ಯ ವಾರ್ಧಕ್ಯಂ ಕಥಿತಂ ಶೃಣು ದೂತಿಕೇ ॥ ೬೦ ॥

ಪತಮಾನಂ ಗೃಹಂ ಗತ್ವಾ ಗೃಹಸ್ವಾಮೀ ಪರಿತ್ಯಜೇತ್ ।
ಗೇಹಮನ್ಯಂ ಪ್ರವಿಂದೇದ್ಯಃ ಪ್ರಯಾತ್ಯೇವಂ ಹಿ ಸತ್ವರಂ ॥ ೬೧ ॥

ತಥಾ ಬಾಲ್ಯಂ ಚ ತಾರುಣ್ಯಂ ನೃಣಾಂ ವೃದ್ಧತ್ವಮೇವ ಚ ।
ಸ ಬಾಲ್ಯೇ ಬಾಲರೂಪಶ್ಚ ಜ್ಞಾನಹೀನಂ ಪ್ರಕಾರಯೇತ್ ॥ ೬೨ ॥

ಚಿಂತಯೇತ್ಕಾಮಮೇವಾಪಿ ವಸ್ತ್ರಾಲಂಕಾರಭೂಷಣೈಃ ।
ಲೇಪನೈಶ್ಚಂದನೈಶ್ಚಾನ್ಯೈಸ್ತಾಂಬೂಲಪ್ರಭವಾಧಿಭಿಃ ॥ ೬೩ ॥

ಕಾಯಸ್ತಾರುಣ್ಯತಾಂ ಯಾತಿ ಅತಿರೂಪೋ ವಿಜಾಯತೇ ।
ಬಾಹ್ಯಾಭ್ಯಂತರಮೇವಾಪಿ ರಸೈಸ್ಸರ್ವೈಃ ಪ್ರಪೋಷಯೇತ್ ॥ ೬೪ ॥

---

೬೦. ಮೇಲಿನ ಕಟ್ಟುಬಣ್ಣವು ಮನೆಯನ್ನು ಭದ್ರಪಡಿಸುವುದಿಲ್ಲ. ಇದ್ದ ಸ್ಥಿತಿಯಿಂದಲೇ ಇರುತ್ತದೆ. ಆಧಾರದಿಂದಲೇ ಬದಕುತ್ತದೆ. ಇದೇ ಮನೆಗೆ ಮುಪ್ಪು ಬಂದಿದೆ ಎನಿಸಿಕೊಳ್ಳುವುದು.

೬೧. ಗೃಹಸ್ವಾಮಿಯು ಮನೆ ಬೀಳುತ್ತಿರುವುದನ್ನು ನೋಡಿ ಆ ಮನೆಯನ್ನು ಬಿಟ್ಟುಬಿಡುತ್ತಾನೆ. ಬೇರೆ ಮನೆಯನ್ನು ನೋಡಿಕೊಂಡು ಜಾಗ್ರತೆ ಹೊರಟು ಹೋಗುತ್ತಾನೆ. ಅಂತೆಯೇ ಬಾಲ್ಯ, ತಾರುಣ್ಯ, ವೃದ್ಧತ್ವಗಳು ಮನುಷ್ಯರಿಗೆ ಬರುತ್ತವೆ.

೬೨-೬೪. ಅವನು ಬಾಲ್ಯದಲ್ಲಿ ಜ್ಞಾನಹೀನನಾಗಿ ವಸ್ತ್ರಾಲಂಕಾರಗಳನ್ನೂ, ಲೇಪನಗಳನ್ನೂ, ತಾಂಬೂಲಾದಿಗಳನ್ನೂ ಅಪೇಕ್ಷಿಸುತ್ತಾನೆ. ದೇಹವು ತಾರುಣ್ಯವನ್ನು ಹೊಂದಿದರೆ ಅತಿರೂಪವನ್ನು ಹೊಂದಿ ಪ್ರಕಾಶವಾಗುತ್ತದೆ. ದೇಹದ ಮೇಲು ಭಾಗವನ್ನೂ, ಹೊರಭಾಗವನ್ನೂ, ಅದಕ್ಕೆ ಅನುಕೂಲವಾದ ರಸಗಳಿಂದ ಪೋಷಿಸಬೇಕು.

ತೇನ ಪೋಷಣಭಾವೇನ ಪರಿಪುಷ್ಟಃ ಪ್ರಜಾಯತೇ ।
ಜಾಯತೇ ಮಾಂಸವೃದ್ಧಿಸ್ತು ರಸೈಶ್ಚಾಪಿ ನೃಪೋತ್ತಮ ॥ ೬೫ ॥

ಯಾತಿ ವಿಸ್ತರತಾಂ ರಾಜನ್ ಅಂಗಾನ್ಯಾಪ್ಯಾಯಿತಾನ್ಯಪಿ ।
ಪ್ರತ್ಯಂಗಾನಿ ರಸೈಶ್ಚೈವ ಸ್ವಂ ಸ್ವಂ ರೂಪಂ ಪ್ರಯಾಂತಿ ವೈ ॥ ೬೬ ॥

ದಂತಾಧರೌ ಸ್ತನೌ ಬಾಹೂ ಕಟಿಪೃಷ್ಠೇ ಊರೂ ಉಭೇ ।
ಹಸ್ತಪಾದತಲೌ ತದ್ವದ್ಬುದ್ಧಿತತ್ತ್ವಂ ತು ಚ ಪ್ರಪೇದಿರೆ ॥ ೬೭ ॥

ಉಭಾಭ್ಯಾಮಪಿ ತಾನ್ಯೇವ ವೃದ್ಧಿಮಾಯಾಂತಿ ತಾನಿವೈ ।
ಅಂಗಾನಿ ರಸಮಾಂಸಾಭ್ಯಾಂ ಸ್ವರೂಪಾಣಿ ಭವಂತಿ ತೇ ॥ ೬೮ ॥

ತೈಃ ಸ್ವರೂಪೈರ್ಭವೇನ್ಮರ್ತ್ಯೋ ರಸವೃದ್ಧಶ್ಚ ದೂತಿಕೇ ।
ಸ್ವರೂಪಃ ಕಥ್ಯತೇ ಮರ್ತ್ಯ-ಲೋಕೇ ಕೇನ ಪ್ರಿಯೋ ಭವೇತ್ ॥ ೬೯ ॥

---

೬೫. ಆ ರೀತಿ ಪೋಷಿಸುವುದರಿಂದ ಪುಷ್ಟವಾಗುತ್ತದೆ. ಆ ರಸಗಳಿಂದ ಮಾಂಸದ ವೃದ್ಧಿಯಾಗುತ್ತದೆ.

೬೬. ಅಂಗಗಳನ್ನೂ ಆಯಾ ರೀತಿಯಿಂದ ಸಂತೋಷಪಡಿಸಿದರೆ ವಿಸ್ತಾರ ವಾಗುತ್ತವೆ. ಆಯಾ ರಸಗಳಿಂದ ಪ್ರತಿಯೊಂದು ಅಂಗವೂ ಅವುಗಳು ಇರಬೇಕಾದ ರೀತಿಯನ್ನು ಹೊಂದುತ್ತದೆ.

೬೭. ಹಲ್ಲು, ತುಟಿ, ಸ್ತನ, ತೋಳು, ಸೊಂಟ, ಪೃಷ್ಠ, ತೊಡೆ, ಕೈ, ಕಾಲು, ಹೆಜ್ಜೆ ಅಂತೆಯೇ ಬುದ್ಧಿಗಳೂ ಹೆಚ್ಚು ವೃದ್ಧಿಯನ್ನು ಹೊಂದುತ್ತವೆ.

೬೮. ಆ ಒಳಗಿನ, ಹೊರಗಿನ, ಪೋಷಣೆಯಿಂದ ಅವು ವೃದ್ಧಿಹೊಂದುತ್ತವೆ. ಈ ಅಂಗಗಳು ರಸಮಾಂಸಗಳಿಂದ ತಮ್ಮ ತಮ್ಮ ಸ್ವರೂಪಸ್ಥಿತಿಯನ್ನು ಹೊಂದುತ್ತವೆ.

೬೯. ಅವುಗಳ ಆ ಸ್ವರೂಪದಿಂದ ಮನುಷ್ಯನು ರಸದಿಂದ ಬೆಳೆದವನಾಗು ತ್ತಾನೆ. ಈ ರೀತಿಯಾದ ಮನುಷ್ಯನ ರೂಪವುಂಟಾಗುತ್ತದೆ. ಹೀಗೆ ಉಂಟಾದುದು ಹೇಗೆ ಪ್ರಿಯವಾದೀತು?

ವಿಣ್ಮೂತ್ರಸ್ಯ ವೈ ಕೋಶಃ ಕಾಯ ಏಷ ಚ ದೂತಿಕೇ ।
ಅಪವಿತ್ರಂ ಶರೀರೋಽಯಂ ಸದಾ ಸ್ರವತಿ ನಿರ್ಘೃಣಃ ॥ ೭೦ ॥

ತಸ್ಯ ಕಿಂ ವರ್ಣ್ಯತೇ ರೂಪಂ ಜಲಬುದ್ಬುದವಚ್ಛುಭೇ ।
ಯಾವತ್ಪಂಚಾಶದ್ವರ್ಷಾಣಿ ತಾವತ್ತಿಷ್ಠತಿ ವೈ ದೃಢಃ ॥ ೭೧ ॥

ಪಶ್ಚಾಚ್ಚ ಜಾಯತೇ ಹಾನಿರಸ್ಯೈವಾಪಿ ದಿನೇ ದಿನೇ ।
ದಂತಾಶ್ಶಿಥಿಲತಾಂ ಯಾಂತಿ ಲಾಲಾಯತೇ ತಥಾ ಮುಖಂ ॥ ೭೨ ॥

ಚಕ್ಷುರ್ಭ್ಯಾಮಪಿ ನ ಪಶ್ಯೇತ್ಕರ್ಣಾಭ್ಯಾಂ ನ ಶೃಣೋತಿ ಚ ।
ಗಂತುಂ ಕರ್ತುಂ ನ ಶಕ್ನೋತಿ ಹಸ್ತಪಾದೈಶ್ಚ ದೂತಿಕೇ ॥ ೭೩ ॥

ಅಕ್ಷಮೋ ಜಾಯತೇ ಕಾಯೋ ಜರಾಕಾಲೇನ ಪೀಡಿತಃ ।
ತದ್ರಸಶ್ಶೋಷಮಾಯಾತಿ ತದಾಗ್ನಿನಾ ಪ್ರಶೋಷಿತಃ ।
ಅಕ್ಷಮೋ ಜಾಯತೇ ದೂತಿ ಕೇನ ರೂಪಮಿಹೇಷ್ಯತೇ ॥ ೭೪ ॥

ಯಥಾ ಜೀರ್ಣೇ ಗೃಹೇ ಯಾತಿ ಕ್ಷಯಮೇವ ನ ಸಂಶಯಃ ।
ತಥಾ ಸಂಕ್ಷಯಮಾಯಾತಿ ವಾರ್ಧಕ್ಯೇ ತು ಕಳೇಬರಂ ॥ ೭೫ ॥

---

೭೦-೭೧. ಮಲಮೂತ್ರಗಳಿಗೆ ಈ ದೇಹವು ಆ ವಾಸಸ್ಥಾನವಲ್ಲವೇ? ಈ ದೇಹದಿಂದ ಅಪವಿತ್ರವಾದ ನೀರುಗಳು ಯಾವಾಗಲೂ ಬಿಡದೆ ಜಿಗಿಯುತ್ತಿರುವವು. ಹೀಗಿರುವಾಗ ಅದರ ರೂಪವನ್ನೇಕೆ ವರ್ಣಿಸುತ್ತೀಯೆ? ಅದು ನೀರಿನ ಮೇಲಿನ ಗುಳ್ಳೆಯಂತೆ ಅಶಾಶ್ವತವಾದುದು.

೭೨-೭೪. ಐವತ್ತು ವರ್ಷಗಳಾಗುವವರೆಗೂ ಶರೀರವು ಗಟ್ಟಿಯಾಗಿರುತ್ತದೆ. ಆಮೇಲೆ ದಿನದಿನಕ್ಕೂ ಕ್ಷಯವುಂಟಾಗುತ್ತಿರುತ್ತದೆ. ಹಲ್ಲೆಲ್ಲವೂ ಅಲ್ಲಾಡುತ್ತವೆ. ಬಾಯಲ್ಲಿ ಜೊಲ್ಲು ಬೀಳುತ್ತದೆ. ಕಣ್ಣು ಕಾಣುವುದಿಲ್ಲ. ಕಿವಿ ಕೇಳುವುದಿಲ್ಲ. ನಡೆಯುವುದಕ್ಕೆ ಕಾಲೂ ಕೆಲಸಮಾಡುವುದಕ್ಕೆ ಕೈಯೂ ಸಾಧ್ಯವಾಗುವುದಿಲ್ಲ. ಹೀಗೆ ಮುಪ್ಪಿನ ಕಾಲದಲ್ಲಿ ದೇಹವು ಶಕ್ತಿಹೀನವಾಗುತ್ತದೆ. ಆಗ ಅಗ್ನಿಯಿಂದ ಕಾಯಿಸಲ್ಪಟ್ಟು ಆ ರಸವು ಶೋಷಿಸುತ್ತದೆ.

೭೫. ಎಲೈ ದೂತಿಯೇ, ಹೀಗಾಗಿ ಬಲಗುಂದುತ್ತದೆ. ರೂಪನ್ನು ಕೊಡತಕ್ಕ ರಸವಾದ ರಕ್ತವೇ ಹೀಗಾಗಿ ನಾಶವಾಗುವುದರಿಂದ ದೇಹವು ಬಲಗುಂದುತ್ತದೆ. ಮನೆಯು ಜೀರ್ಣವಾಗುತ್ತಲೂ ನಾಶಹೊಂದುತ್ತದೆ. ಸಂಶಯವಿಲ್ಲ. ಆ ಮನೆಯಂತೆಯೇ ಮುಪ್ಪಿನಲ್ಲಿ ಈ ದೇಹವು ಕ್ಷಯವನ್ನು ಹೊಂದುತ್ತದೆ.

**ಮಮ ರೂಪಂ ಸಮಂ ಜಾತಂ ವರ್ಣಸ್ಯೇವಂ ದಿನೇ ದಿನೇ ।**
**ಕೇನಾಹಂ ರೂಪಸಂಯುಂಕ್ತಾ ಕೇನ ರೂಪತ್ವಮಿಷ್ಯತೇ ॥ ೭೬ ॥**

**ಯಥಾ ಜೀರ್ಣೋ ಗೃಹೋ ಯಾತಿ ಕೇನಾಸೌ ಪುರುಷೋ ಬಲೀ ।**
**ಯಸ್ಯಾರ್ಥಮಾಗತಾ ದೂತಿ ಭವತಿ ಕೇನ ಸಂಶಯಃ ॥ ೭೭ ॥**

**ಕಿಮತ್ರೈವ ತ್ವಯಾ ದೃಷ್ಟಂ ಮಮಾಂಗೇ ವದ ಸಾಂಪ್ರತಂ ।**
**ತಸ್ಯಾಂಗಾದಿಹ ಮೇ ದೂತಿ ನಾಸ್ತಿ ಚಾಧಿಕಮೇವ ಚ ॥ ೭೮ ॥**

**ಯಥಾ ತ್ವಂ ಚ ತಥ್ಯಾಸೌ ವೈ ತಥಾಹಂ ನಾಸ್ತಿ ಸಂಶಯಃ ।**
**ಕಸ್ಯ ರೂಪಂ ನ ವಿದ್ಯೇತ ರೂಪಂ ಸ್ತ್ರೀ ನಾಸ್ತಿ ಭೂತಲೇ ॥ ೭೯ ॥**

**ಉಚ್ಛ್ರಯಾಃ ಪತನಾಂತಾಶ್ಚ ನಗಾಸ್ತು ಗಿರಯಶ್ಶುಭೇ ।**
**ಕಾಲೇನ ಪೀಡಿತಾ ಯಾಂತಿ ತದ್ವದ್ಭೂತಾನಿ ನಾನ್ಯಥಾ ॥ ೮೦ ॥**

---

೭೬. ಅದೇ ಸ್ಥಿತಿಯಲ್ಲಿ ನನ್ನ ರೂಪವೂ ದಿನದಿನಕ್ಕೆ ಹೀಗಾಗಿದೆ ಯಾರು ತಾನೇ ನನಗೆ ರೂಪನ್ನು ಕೂಡಿಸಿದರು? ಯಾವನು ತಾನೇ ರೂಪನ್ನು ಸೇರಿಸಬಲ್ಲ?

೭೭. ಯಾವುದರಿಂದ ಪುರುಷನು ಬಲಿಷ್ಠನಾದನೋ ಅದರಿಂದಲೇ ಜೀರ್ಣ ನಾಗುತ್ತಾನೆ. ನೀನು ಯಾವನಿಗೋಸ್ಕರ ಬಂದಿರುವೆಯೋ ಅವನಿಗೆ ಸಂಶಯ ವೇನಿದೆ?

೭೮. ನನ್ನ ಅವಯುವದಲ್ಲಿ ಏನು ಅತಿಶಯುವನ್ನು ನೋಡಿದೆ? ಹೇಳು. ಅವನ ಅವಯುವಕ್ಕಿಂತಲೂ ನನ್ನ ಅವಯುವಗಳಲ್ಲಿ ವಿಶೇಷವೇನೂ ಇಲ್ಲವಷ್ಟೆ.

೭೯. ನೀನು ಹೇಗೋ ಅವನೂ ಹಾಗೆಯೇ. ಅವನು ಹೇಗೋ ನಾನೂ ಹಾಗೆಯೇ. ಇದರಲ್ಲಿ ಸಂಶಯವಿಲ್ಲ. ರೂಪವು ಯಾರಿಗೆ ಲೋಕದಲ್ಲಿಲ್ಲ? ರೂಪಿಲ್ಲದ ಹೆಂಗಸು ಒಬ್ಬಳೂ ಲೋಕದಲ್ಲಿಲ್ಲ.

೮೦. ಉತ್ಕರ್ಷತೆಯು ಅಥವಾ ಬೆಳವಣಿಗೆಯು, ದೇಹವು ನಾಶವಾಗಿ ಬೀಳುವ ವರೆಗೆ ಇರುವುದು. ಪರ್ವತಗಳು, ಬೆಟ್ಟಗಳೂ ಕೂಡ ಕಾಲಕ್ರಮದಿಂದ ನಾಶವಾಗುತ್ತವೆ. ಅದರಂತೆಯೇ, ಪ್ರಾಣಿಗಳೂ ಕೂಡ ನಾಶವನ್ನೈದುವವು. ಇದರಲ್ಲಿ ಸಂಶಯವಿಲ್ಲ.

**ಅರೂಪೋ ರೂಪವಾನ್ದಿವ್ಯ ಆತ್ಮಾ ಸರ್ವಗತಶ್ಶುಚಿ ।**
**ಸ್ಥಾವರೇಷ್ವೇವ ಸರ್ವೇಷು ಜಂಗಮೇಷ್ವೇವ ದೂತಿಕೇ ॥ ೮೧ ॥**

**ಏಕೋ ನಿವಸತೇ ಶುದ್ಧೋ ಘಟೇಷ್ವೇವ ಯಥೋದಕಂ ।**
**ಘಟನಾಶಾತ್ಪ್ರಯಾತ್ಯೇಕಮೇಕತ್ವಂ ತತ್ರ ಬುಧ್ಯತೇ ॥ ೮೨ ॥**

**ಪಿಂಡನಾಶಾಯ ಪಂಚಾತ್ಮಾ ಏಕರೂಪೋ ಹಿ ಜಾಯತೇ ।**
**ಏಕಂ ರೂಪಂ ಮಯಾ ದೃಷ್ಟಂ ಸಂಸಾರೇ ವಸತಾಂ ಸದಾ ।**
**ಏವಂ ವದಸ್ವ ತಾಂ ಗತ್ವಾ ಯಸ್ಯಾರ್ಥಮಿಹ ಚಾಗತಾ ॥ ೮೩ ॥**

**ದರ್ಶಯಸ್ವ ಅಪೂರ್ವಂ ಮೇ ಯದಿ ಮಾಂ ಭೋಕ್ತುಮಿಚ್ಛಸಿ ।**
**ವ್ಯಾಧಿನಾ ಪೀಡ್ಯಮಾನಸ್ಯ ಕಫೇನಾಪಿ ವೃತಸ್ಯ ಚ ॥ ೮೪ ॥**

**ಅಂಗಾದ್ವಿಚಲತೇ ಶೋಣೇ ಸ್ಥಾನಭ್ರಷ್ಟೋಽಭಿಜಾಯತೇ ।**
**ಅಂಗಸಂಧಿಷು ಸರ್ವಾಸು ಪಲತ್ವಂ ಚಾಂತರಂಗತಃ ।**
**ಏಕತೋ ನಾಶಮಾಯಾತಿ ಸ್ವಂ ಹಿ ರೂಪಂ ಪರಿತ್ಯಜೇತ್ ॥ ೮೫ ॥**

---

೮೧. ರೂಪರಹಿತನಾದ, ಉತ್ಕೃಷ್ಟನಾದ ಆತ್ಮನು ಚರಾಚರಗಳೆಲ್ಲದರಲ್ಲೂ ಇದ್ದಾನೆ.

೮೨. ಮಡಕೆಗಳಲ್ಲಿ ಶುದ್ಧವಾದ ನೀರಿರುವಂತೆ ಒಬ್ಬನೇ ಆತ್ಮನು ಎಲ್ಲದರಲ್ಲೂ ಶುದ್ಧನಾಗಿದ್ದಾನೆ. ಆ ಮಡಕೆಗಳು ನಾಶವಾದರೆ ಒಂದೊಂದು ಸಂಖ್ಯೆಯು ಹೋಗುತ್ತದೆ. ನೀರು ಮಾತ್ರ ನಾಶವಾಗದೆ ಒಟ್ಟುಗೂಡಿ ಇರುತ್ತದೆ. ಒಂದರ ಭಾವ ಮಾತ್ರ ಉಳಿಯುತ್ತದೆ. ಅದರಂತೆಯೇ,

೮೩. ಪಂಚಭೂತರೂಪವಾದ ಈ ಪಿಂಡನಾಶವಾದ ಮೇಲೆ ಆ ಆತ್ಮನು ಏಕರೂಪನಾಗಿರುತ್ತಾನೆ. ನಾನು, ಸಂಸಾರದಲ್ಲಿರುವವರು ಒಂದೇ ರೂಪರೆಂದು ತಿಳಿದಿದ್ದೇನೆ. ಯಾವನಿಗೋಸ್ಕರ ಬಂದಿದ್ದೀಯೋ ಅವನಲ್ಲಿಗೆ ಹೋಗಿ ಹೀಗೆಂದು ಹೇಳು.

೮೪. ನನ್ನನ್ನು ನೀನು ಅನುಭವಿಸಬೇಕಾದರೆ ನಿನ್ನಲ್ಲಿರುವ ಅಪೂರ್ವ ವಿಷಯವನ್ನು ತೋರಿಸು. ಎಂದರೆ ಯಾರಲ್ಲಿಯೂ ಇಲ್ಲದ ಅತಿಶಯವೇನಿದೆಯೋ ಅದನ್ನು ತಿಳಿಸು.

೮೫. ವ್ಯಾಧಿಯಿಂದ ಪೀಡಿತನಾಗಿ ಕಫದಿಂದ ಕೂಡಿಕೊಂಡು ಅವಯವದಲ್ಲಿ ರಕ್ತವೆಲ್ಲಾ ನಾಶವಾದಾಗ ಮನುಷ್ಯನ ರೂಪವು ನಾಶವಾಗುತ್ತದೆ. ಕೀಲುಗಳಲ್ಲೆಲ್ಲಾ ಒಳಗೆ ದೇಹದಲ್ಲೂ ಕೂಡ ಮಾಂಸವು ನಾಶವಾಗುತ್ತದೆ. ಆಗ ಪುರುಷನು ತನ್ನ ರೂಪವನ್ನು ಬಿಡುತ್ತಾನೆ.

**ವಿಷ್ಟಾತ್ವಂ ಜಾಯತೇ ಶೀಘ್ರಂ ಕ್ರಿಮಿಭಿಶ್ಚ ಭವೇತ್ಕಿಲ ।**
**ತದ್ವದ್ದುಃಖಕರೇ ವಾಪಿ ನಿಜರೂಪಂ ಪರಿತ್ಯಜೇತ್ ॥ ೮೬ ॥**

**ರೂಪತ್ವಂ ಯಾತಿ ವೈ ಪಶ್ಚಾತ್ಕ್ರಿಮಿದುರ್ಗಂಧಿಸಂಕುಲಃ ।**
**ಜಾಯಂತೇ ತತ್ರ ವೈ ಯೂಕಾಃ ಕ್ರಿಮಿತ್ವಂ ವಾ ನ ಸಂಶಯಃ ॥ ೮೭ ॥**

**ಸ ಕೃಮಿಃ ಕುರುತೇ ಸ್ಫೋಟಂ ಕಂಡುಶ್ಚ ಪರಿದಾರುಣಾ ।**
**ವ್ಯಥಾಮುತ್ಪಾದಯೇತ್ಸೋಯಃ ಸರ್ವಾಂಗಂ ಪರಿಚಾಲಯೇತ್ ॥ ೮೮ ॥**

**ನಖಾಗ್ರೈರ್ಘೃಷ್ಯಮಾಣಾ ಸಾ ಕಂಡೂಶಾಂತಿಃ ಪ್ರಜಾಯತೇ ।**
**ತದ್ವತ್ತೈಶ್ಚ ಶೃಣುಷ್ವೈವ ಸುರತಸ್ಯ ನ ಸಂಶಯಃ ॥ ೮೯ ॥**

**ಭುಂಜತ್ಯೇವ ರಸಾನ್ ಮರ್ತ್ಯಃ ಸುಭಿಕ್ಷಾನ್ಪಿಬತೇ ಪುನಃ ।**
**ವಾಯುನಾ ತೇನ ಪ್ರಾಣೇನ ಪಾಕಸ್ಥಾನಂ ಪ್ರಣೀಯತೇ ॥ ೯೦ ॥**

---

೮೬. ಅನಂತರ ಅದು ಅಮೇಧ್ಯವಾಗುತ್ತದೆ. ಅದರಲ್ಲಿ ಹುಳುಗಳು ಬೀಳುತ್ತವೆ. ಆರೀತಿ ದುಃಖಕರವಾದ ಶರೀರದಲ್ಲಿ ನಿಜವಾದ ರೂಪವು ನಾಶವಾಗುತ್ತದೆ.

೮೭. ಹುಳು, ದುರ್ಗಂಧಗಳಿಂದ ಕೂಡಿದಮೇಲೆ ರೂಪತ್ವವು ಹೋಗುತ್ತದೆ. ಆ ರೂಪತ್ವವು ಹೋದಮೇಲೆ ಹೇರಾಗಲಿ, ನತ್ತಾಗಲಿ ಹುಟ್ಟುತ್ತವೆ. ಸಂಶಯವಿಲ್ಲ.

೮೮. ಆ ಕೃಮಿಯು ಗುಳ್ಳೆಯನ್ನುಂಟುಮಾಡುತ್ತದೆ. ಅದು ಹೆಚ್ಚಾಗಿ ಕಡಿತವಾಗುತ್ತದೆ. ಅದರಲ್ಲಿ ಕೀವು ಬಂದು ಸರ್ವಾಂಗವನ್ನೂ ಅಲ್ಲಾಡಿಸುತ್ತದೆ (ತೊಂದರೆ ಕೊಡುತ್ತವೆ).

೮೯. ಉಗುರಿನಿಂದ ಕೆರೆದರೆ ಆ ನವೆಯು ಹೋಗುತ್ತದೆ. ಅದರಂತೆಯೇ ಅವರೊಡನೆ ಮೈಥುನದಿಂದಾಗುತ್ತದೆ. ಸಂಶಯವಿಲ್ಲ.

೯೦. ಮನುಷ್ಯನು ರಸಗಳನ್ನು ಕುಡಿಯುತ್ತಾನೆ. ಒಳ್ಳೆಯ ಊಟಗಳನ್ನು ಮಾಡುತ್ತಾನೆ. ದೇಹದಲ್ಲಿರುವ ವಾಯುವು ಅವನ್ನು ಪಾಕವಾಗುವ ಸ್ಥಾನಕ್ಕೆ ಹೋಗುವಂತೆ ಮಾಡುತ್ತದೆ.

**ಯದುಕ್ತಂ ಪ್ರಾಣಿಭಿರ್ದೂತಿ ಪಾಕಸ್ಥಾನಂ ಗತಂ ಪುನಃ ।**
**ಸರ್ವಂ ತವೇಹಿತಂ ತತ್ರ ಮಯಾ ವೈ ಪಾತಯೇನ್ಮಲಂ ॥ ೯೧ ॥**

**ಸಾರಭೂತೋ ರಸಸ್ತತ್ರ ತದ್ರಕ್ತಶ್ಚ ಪ್ರಜಾಯತೇ ।**
**ನಿರ್ಮಲಃ ಶುದ್ಧವೀರ್ಯಂ ಚ ಬ್ರಹ್ಮಸ್ಥಾನಂ ಪ್ರಯಾತಿ ಚ ॥ ೯೨ ॥**

**ಆ ಕೃಷ್ಟಃ ಸ ಸಮಾನೇನ ನೀತಸ್ತೇನಾಪಿ ವಾಯುನಾ ।**
**ಸ್ಥಾನಂ ನ ಲಭತೇ ವೀರ್ಯಂ ಚಂಚಲತ್ವೇನ ವರ್ತತೇ ॥ ೯೩ ॥**

**ಪ್ರಾಣಿನಾಂ ಚ ಕಪಾಲೇಷು ಕ್ರಿಮಯಃ ಸಂತಿ ಪಂಚ ವೈ ।**
**ದ್ವಾವೇತೌ ಕರ್ಣಮೂಲೇ ತು ನೇತ್ರಸ್ಥಾನೇ ತತಃ ಪುನಃ ॥ ೯೪ ॥**

**ಕನಿಷ್ಠಾಂಗುಲಿಮಾನೇನ ರಕ್ತಪುಚ್ಛಾಶ್ಚ ದೂತಿಕೇ ।**
**ಅತಸೀಪುಷ್ಪವರ್ಣೇನ ಕೃಷ್ಣಪುಚ್ಛಾ ನ ಸಂಶಯಃ ॥ ೯೫ ॥**

---

೯೧. ಪಾಕಸ್ಥಾನಕ್ಕೆ ಹೋದ ಆ ಆಹಾರವು ಅಷ್ಟೂ ಅಲ್ಲಿ ಪಾಕವಾಗಿ ಶರೀರಕ್ಕೆ ಸೇರಿ, ಉಪಯೋಗವಿಲ್ಲದ್ದು ಮಲವಾಗಿ ಹೊರಕ್ಕೆ ಬೀಳುತ್ತದೆ.

೯೨. ಸಾರಭೂತವಾದ ರಸವು ರಕ್ತಗತವಾಗುತ್ತದೆ. ಆ ರಕ್ತದಿಂದುಂಟಾದ ನಿರ್ಮಲವಾದ ವೀರ್ಯವು ಬ್ರಹ್ಮಸ್ಥಾನಕ್ಕೆ ಹೋಗುತ್ತದೆ.

೯೩. ಸಮಾನವೆಂಬ ವಾಯುವು, ಹೋಗುತ್ತಿರುವ ಆ ವೀರ್ಯವನ್ನು ಎಳೆಯುತ್ತದೆ. ವೀರ್ಯವು ತಾನು ಹೋಗಲು ಪ್ರಯತ್ನಪಡುತ್ತದೆ. ಅಂತೂ ಈರೀತಿ ಸ್ಥಾನವಿಲ್ಲದೆ ಚಂಚಲವಾಗಿ ಆ ವೀರ್ಯವಿರುತ್ತದೆ.

೯೪. ಪ್ರಾಣಿಗಳ ಕಪಾಲದಲ್ಲಿ ಐದು ಹುಳುಗಳಿರುತ್ತವೆ. ಅವುಗಳಲ್ಲಿ ಎರಡು ಕಿವಿಯ ಮೂಲದಲ್ಲಿರುತ್ತವೆ. ಮಿಕ್ಕವು ನೇತ್ರಸ್ಥಾನದಲ್ಲಿರುತ್ತವೆ.

೯೫. ಅವು ಕಿರುಬೆಟ್ಟಿನ ದಪ್ಪಕ್ಕೆ ಕೆಂಪುಬಾಲವುಳ್ಳದ್ದಾಗಿರುತ್ತವೆ ಮತ್ತು ಅಗಸೇಹೂವಿನಂತೆ ಕಪ್ಪುಕೂಡಿದ ನೀಲಿಬಣ್ಣವಾಗಿಯೂ ಇರುತ್ತವೆ.

ತೇಷಾಂ ನಾಮಾನಿ ಭದ್ರಂ ತೇ ಮತ್ತೋ ನಿಗದತಃ ಶೃಣು ।
ಪಿಂಗಳಾ ಶೃಂಗಲೀ ನಾಮ ದ್ವೌ ಕೃಮೀ ಕರ್ಣಮೂಲಯೋಃ ।
ಚಪಲಃ ಪಿಪ್ಪಲಶ್ಚೈವ ದ್ವಾವೇತೌ ನಾಸಿಕಾಗ್ರಯೋಃ ॥ ೯೬ ॥

ಶೃಂಖಲೀ ಜಂಗಲೀ ಚಾನ್ಯೇ ನೇತ್ರಯೋರಂತರೇ ಸ್ಥಿತೌ ।
ಕೃಮೀಣಾಂ ಶತಪಂಚಾಶತ್ತಾದೃಗ್ರೂಪಾ ನ ಸಂಶಯಃ ॥ ೯೭ ॥

ಭಾಲಾಂತೇಽ ವಸ್ಥಿತಾಸ್ಸರ್ವೇ ರಾಜಿಕಾಯಾಃ ಪ್ರಮಾಣತಃ ।
ಕಪಾಲರೋಗಿಣಃ ಸರ್ವೇ ವಿಕುರ್ವಂತಿ ನ ಸಂಶಯಃ ॥ ೯೮ ॥

ಅನ್ಯಮೇವಂ ಪ್ರವಕ್ಷ್ಯಾಮಿ ಪುತ್ರೋತ್ಪತ್ತ್ಯಂ ಮಹಾಕ್ರಿಮಿಂ ।
ತಂಡುಲಸ್ಯ ಪ್ರಮಾಣೇನ ತದ್ವದ್ವರ್ಣೋ ನ ಸಂಶಯಃ ॥ ೯೯ ॥

ಕೇಶದ್ವಯಂ ಮುಖೇ ತಸ್ಯ ವಿದ್ಯತೇ ಶೃಣು ದೂತಿಕೇ ।
ಪ್ರಾಣಿನಾಂ ಸಂಕ್ಷಯಂ ವಿದ್ಧಿ ತತ್ಕ್ಷಣೇ ಹಿ ನ ಸಂಶಯಃ ॥ ೧೦೦ ॥

ಸ್ವಸ್ಥಾನೇ ಸಂಸ್ಥಿತಸ್ಯಾಪಿ ಪ್ರಜಾಪತ್ಯಸ್ಯ ವೈ ಮುಖೇ ।
ತದ್ವೀರ್ಯರಸರೂಪೇಣ ಪತನೇನಾತ್ರ ಸಂಶಯಃ ॥ ೧೦೧ ॥

---

೯೬-೯೭. ಅವುಗಳ ಹೆಸರನ್ನು ಹೇಳುತ್ತೇನೆ ಕೇಳು :—ಪಿಂಗಳೆ, ಶೃಂಗಲಿ, ಎಂಬೆರಡು ಕ್ರಿಮಿಗಳು ಕಿವಿಯ ಮೂಲದಲ್ಲಿವೆ. ಚಪಲ, ಪಿಪ್ಪಲವೆಂಬುದು ಮೂಗಿನ ತುದಿಯಲ್ಲಿವೆ. ಶೃಂಖಲ, ಜಂಗಳಿಗಳು ಕಣ್ಣುಗಳ ಮಧ್ಯದಲ್ಲಿವೆ. ಐದುಸಾವಿರ ಕ್ರಿಮಿಗಳು ಅದೇರೀತಿಯಾಗಿವೆ.

೯೮. ಅವು ಸಾಸುವೆಯ ಪ್ರಮಾಣಕ್ಕಿದ್ದು ಹಣೆಯಲ್ಲಿರುತ್ತವೆ. ಇವೆಲ್ಲವೂ ಕಪಾಲರೋಗವನ್ನುಂಟುಮಾಡುತ್ತವೆ.

೯೯. ಪುತ್ರೋತ್ಪತ್ತಿಯಾಗುವ ಮಹಾಕ್ರಿಮಿ ಮತ್ತೊಂದನ್ನು ಹೇಳುವೆನು ಕೇಳು. ಅವು ಅಕ್ಕಿಕಾಳಿನಷ್ಟು ದಪ್ಪವಿದ್ದು ಅದೇ ಬಣ್ಣಕ್ಕಿವೆ.

೧೦೦. ಅವುಗಳಿಗೆ ಎರಡೆರುಡು ಕೂದಲುಳ್ಳ ಮೀಸೆ ಇದೆ. ಅನಂತರ ಆ ಪ್ರಾಣಿಗಳು ನಾಶವಾಗುವ ಬಗೆಯನ್ನು ಕೇಳು.

೧೦೧. ಬ್ರಹ್ಮರಂಧ್ರವೆಂಬ ತನ್ನ ಜಾಗದಲ್ಲಿದ್ದರೂ ಅವನ ವೀರ್ಯರಸರೂಪ ದಿಂದ ಕೆಳಗೆ ಎಳೆಯಲ್ಪಟ್ಟು ಬೀಳುತ್ತವೆ.

**ಪಿಬತೆ ಮುಖೇನ ತದ್ವೀರ್ಯಂ ತೇನ ಮತಃ ಪ್ರಜಾಯತೇ ।**
**ತಾಲುಸ್ಥಾನೇ ಪ್ರತೋದ್ಯೈವ ಚಂಚಲತ್ವೇನ ವರ್ತತೇ ॥ ೧೦೨ ॥**

**ಇಡಾ ಚ ಪಿಂಗಳಾ ನಾಡೀ ಸೂಕ್ಷ್ಮತಾಮುಪಸಂಸ್ಥಿತಾ ।**
**ಸುಚಲೇನಾಪಿ ತಸ್ಯೈವ ನಾಡಿಕಾ ಜಾಲ ಕಂಪತೆ ॥ ೧೦೩ ॥**

**ಕಾಮುಕಂಡೂರ್ಭವೇದ್ದೂತಿ ಸರ್ವೇಷಾಂ ಪ್ರಾಣಿನಾಂ ಕಿಲ ।**
**ಪುಂಸಶ್ಚ ಸ್ಫುಟತೇ ಲಿಂಗಂ ನಾರ್ಯಾ ಯೋನಿಶ್ಚ ದೂತಿಕೇ ॥ ೧೦೪ ॥**

**ಸ್ತ್ರೀಪುಂಸೌ ಪ್ರಸಂಪನ್ನೌ ತೌ ವ್ರಜೇತೇ ಸಂಗಮಂ ತತಃ ।**
**ಕಾಯೇನ ಕಾಯಸ್ಯ ಸಂಸ್ಪೃಷ್ಯ ಮೈಥುನೇನ ಹಿ ಜಾಯತೇ॥ ೧೦೫ ॥**

**ಕ್ಷಣಮಾತ್ರಂ ಚ ವೈ ಸೌಖ್ಯಂ ಪುನಃ ಕಂಡೂಶ್ಚ ತಾದೃಶೀ ।**
**ಸರ್ವತ್ರ ದೃಶ್ಯತೇ ದೂತಿ ಭಾವನೇವಂ ವಿಧಂ ಕಿಲ ॥ ೧೦೬ ॥**

---

೧೦೨. ಅದು ಬಾಯಿಂದ ಆ ವಿರ್‍ಯವನ್ನು ಕುಡಿದು ಸುರಿಸುತ್ತದೆ. ಅನಂತರ ಬಾಯಿನ ಆಚೀಚೆಯು ದವಡೆಯಲ್ಲಿರುತ್ತದೆ.

೧೦೩. ಇಡಾಪಿಂಗಳವೆಂಬ ನಾಡಿಗಳು ಸೂಕ್ಷ್ಮದಿಂದಿರುತ್ತವೆ. ಆ ಚಂಚಲ ವಾದ ಹುಳುಗಳು ನಾಡಿಯನ್ನು ಅಲ್ಲಾಡಿಸುತ್ತದೆ.

೧೦೪. ಆಗ ಎಲ್ಲಾ ಪ್ರಾಣಿಗಳಿಗೂ ಕಾಮದ ನವೆ ಹುಟ್ಟುತ್ತದೆ. ಗಂಡಸಿಗೂ ಹೆಂಗಸಿಗೂ ಆಗ ಗುಹ್ಯಸ್ಥಾನಗಳು ಮೆಡೆಯುತ್ತವೆ.

೧೦೫. ಅನಂತರ ಸ್ತ್ರೀಪುರುಷರು ಅನುಮತಿಸಿದವರಾಗಿ ಸಂಗಮವನ್ನು ಹೊಂದುತ್ತಾರೆ. ದೇಹದಿಂದ ದೇಹವನ್ನು ಘರ್ಷಿಸಿ ಮೈಥುನದಿಂದ ಸೌಖ್ಯವನ್ನು ಹೊಂದುತ್ತಾರೆ.

೧೦೬-೧೦೭. ಆಗ ಉಂಟಾಗುವ ಸೌಖ್ಯವು ಕ್ಷಣಕಾಲಮಾತ್ರವಿರುತ್ತದೆ. ನವೆಯು ಯಥಾಪ್ರಕಾರವುಂಟಾಗುತ್ತದೆ. ಈರೀತಿಯೊದ ಅಭಿಪ್ರಾಯವೇ ಎಲ್ಲಾ ಕಡೆಯಲ್ಲೂ ಕಂಡುಬರುತ್ತದೆ. ಇದರಲ್ಲಿ ಅತಿಶಯವೇನಿದೆ ? ಆದುದರಿಂದ ನಿನ್ನ

**ವ್ರಜ ತ್ವಮಾತ್ಮನಸ್ಸ್ಥಾನಂ ನೈವಾಸ್ತ್ಯತ್ರ ಅಪೂರ್ವತಾ ।**
**ಅಪೂರ್ವಂ ನಾಸ್ತಿ ಮೇ ಕಿಂಚಿತ್ ಕರೋಮ್ಯೇವಂ ನ ಸಂಶಯಃ ॥ ೧೦೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ತ್ರಿಪಂಚಾಶತ್ತಮೋಽಧ್ಯಾಯಃ**

---

ಜಾಗಕ್ಕೆ ನೀನು ಹೋಗು. ಇಲ್ಲಿ ಅಪೂರ್ವವೇನೂ ಇಲ್ಲ. ನನಗಾವುದೂ ಅಪೂರ್ವವೆನಿಸುವುದಿಲ್ಲ. ನಾನು ಹೀಗೆ ತಪಸ್ಸುಮಾಡುತ್ತೇನೆ, ಇದು ನಿಶ್ಚಯವು ಎಂದು ಹೇಳಿದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಐವತ್ತಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಅಥ ಪಾದ್ಮೇ ಮಹಾಪುರಾಣೇ ಭೂಮಿಖಂಡೇ ಚತುಷ್ಪಂಚಾಶತ್ತಮೋऽಧ್ಯಾಯಃ

॥ ವಿಷ್ಣುರುವಾಚ ॥

ಏವಮುಕ್ತ್ವಾ ಗತಾ ದೂತೀ ತಯಾ ಸುಕಲಯಾ ತದಾ ।
ಸಮಾಸೇನ ಸುಸಂಪ್ರೋಕ್ತಮವಧಾರ್ಯ ಪುರಂದರಃ ॥ ೧ ॥

ತದರ್ಥಂ ಭಾಷಿತಂ ತಸ್ಯಾಃ ಸತ್ಯಧರ್ಮಸಮನ್ವಿತಂ ।
ಆಲೋಚ್ಯ ಸಾಹಸಂ ಧೈರ್ಯಂ ಜ್ಞಾನಮೇವ ಪುರಂದರಃ ॥ ೨ ॥

ಈದೃಶಂ ನ ವದೇತ್ಕಾಚಿನ್ನಾರೀ ಭೂತ್ವಾ ಮಹೀತಳೇ ।
ಯೋಗರೂಪಂ ಸುಸಿದ್ಧಂ ಚ ಜ್ಞಾನೋದಕೇನ ಕ್ಷಾಳಿತಂ ॥ ೩ ॥

ಪವಿತ್ರೇಯಂ ಮಹಾಭಾಗಾ ಸತ್ಯರೂಪಾ ನ ಸಂಶಯಃ ।
ತ್ರೈಲೋಕ್ಯಂ ಹಿ ಸಮಸ್ತಂ ತು ಏಷಾ ಧರ್ತುಂ ಭವೇತ್ ಕ್ಷಮಾ ॥ ೪ ॥

---

## ಐವತ್ತನಾಲ್ಕನೆಯ ಅಧ್ಯಾಯವು

೧-೨. ವಿಷ್ಣುವು ಹೇಳಿದನು—ಸುಕಲೆಯು ಹೀಗೆ ಹೇಳಲು ಆ ದೂತಿಯು ಅಲ್ಲಿಂದ ಹೊರಟು ಅವಳು ಹೇಳಿದ ಸತ್ಯಧರ್ಮಗಳಿಂದ ಕೂಡಿದ ಮಾತನ್ನು ಇಂದ್ರನಿಗೆ ಹೇಳಿದಳು. ಇಂದ್ರನು ಆ ಮಾತುಗಳನ್ನು ಆಲೋಚಿಸಿ, ಆಕೆಯ ಸಾಹಸ, ಧೈರ್ಯ, ಜ್ಞಾನಗಳನ್ನು ಆಲೋಚಿಸಿ ನೋಡಿದನು.

೩. ಹೆಂಗಸಾದವಳು ಒಬ್ಬಳೂ ಲೋಕದಲ್ಲಿ ಈ ರೀತಿ ಹೇಳುವುದಿಲ್ಲ. ಸಿದ್ಧವಾದ ಯೋಗವನ್ನು ಕೂಡ ಜ್ಞಾನವೆಂಬ ನೀರಿನಿಂದ ತೊಳೆದಳು. ಯೋಗಕ್ಕಿಂತ ಜ್ಞಾನವೇ ಮೇಲೆಂದು ಹೇಳಿದಳು.

೪. ಈಕೆಯು ಪವಿತ್ರಳು. ಸತ್ಯರೂಪಳು. ಈ ವಿಷಯದಲ್ಲಿ ಸಂಶಯವಿಲ್ಲ. ಮೂರು ಲೋಕವನ್ನೂ ಧರಿಸಲು ಈಕೆಯು ಶಕ್ತಳಾಗಿದ್ದಾಳೆ.

ಏತದರ್ಥಂ ವಿಚಾರ್ಯೈವ ಜಿಷ್ಣುಃ ಕಂದರ್ಪಮಬ್ರವೀತ್ ।
ತ್ವಯಾ ಸಹ ಗಮಿಷ್ಯಾಮಿ ದ್ರಷ್ಟುಂ ತಾಂ ಕೃಕಲಪ್ರಿಯಾಂ ॥ ೫ ॥

ಪ್ರತ್ಯುವಾಚ ಸಹಸ್ರಾಕ್ಷಂ ಮನ್ಮಥೋ ಬಲದರ್ಪಿತಃ ।
ಗಮ್ಯತಾಂ ತತ್ರ ದೇವೇಶ ಯತ್ರಾಸ್ತೇ ಸಾ ಪತಿವ್ರತಾ ॥ ೬ ॥

ಜ್ಞಾನಂ ವೀರ್ಯಂ ಬಲಂ ಧೈರ್ಯಂ ತಸ್ಯಾಸ್ಸತ್ಯಂ ಪತಿವ್ರತಂ ।
ಗತ್ವಾಹಂ ನಾಶಯಿಷ್ಯಾಮಿ ಕಿಯನ್ಮಾತ್ರಂ ಸುರೇಶ್ವರ ॥ ೭ ॥

ಸಮಾಕರ್ಣ್ಯ ಸಹಸ್ರಾಕ್ಷೋ ವಚನಂ ಮನ್ಮಥಸ್ಯ ಚ ।
ಭೋ ಭೋ ದೂತ ಶೃಣುಷ್ವ ತ್ವಮಧಿಕಂ ಭಾಷಿತಂ ತ್ವಯಾ ॥ ೮ ॥

ಸುದೃಢಾ ಸತ್ಯವೀರ್ಯೇಣ ಸುಸ್ಥಿರಾ ಧರ್ಮಕರ್ಮಭಿಃ ।
ಸುಕಲೇಯಮಜೇಯಾ ವೈ ತತ್ರ ತೇ ಪೌರುಷಂ ನ ಹಿ ॥ ೯ ॥

---

೫. ಇವನ್ನು ವಿಚಾರಿಸಿಯೇ, ಇಂದ್ರನು ಮನ್ಮಥನನ್ನು ಕುರಿತು, ಕೃಕಲನ ಹೆಂಡತಿಯಾದ ಸುಕಲೆಯನ್ನು ನಾನು ನೋಡಬೇಕೆಂದಿದ್ದೇನೆ ಬಾ ಹೋಗೋಣ ವೆಂದು ಹೇಳಿದನು.

೬-೭. ಬಲದಿಂದ-ಕೊಬ್ಬಿದ ಮನ್ಮಥನು ಎಲೈ ದೇವೇಶನೇ ನಡೆ. ಆ ಪತಿವ್ರತೆಯಿದ್ದಲ್ಲಿಗೆ ಹೋಗೋಣ. ಆಕೆಯು, ಜ್ಞಾನ, ವೀರ್ಯ, ಬಲ, ಧೈರ್ಯ, ಸತ್ಯ ಪರಾಕ್ರಮಗಳನ್ನು ನಾನು ಒಂದು ನಿಮಿಷದಲ್ಲಿ ನಾಶಮಾಡುತ್ತೇನೆ. ಅದು ಎಷ್ಟರದು? ಎಂದನು.

೮-೯. ಇಂದ್ರನು ಮನ್ಮಥನ ಮಾತನ್ನು ಕೇಳಿ, ಎಲೈ ದೂತನೇ, ನೀನು ದುಡುಕಿ ಮಾತನಾಡಬೇಡ. ಆಕೆಯು ಸತ್ಯವೀರ್ಯಗಳಿಂದ ದೃಢಳಾಗಿದ್ದಾಳೆ. ಧರ್ಮ ಕರ್ಮದಲ್ಲಿ ಸ್ಥಿರಳಾಗಿದ್ದಾಳೆ. ಆದ್ದರಿಂದ ಈ ಸುಕಲೆಯನ್ನು ನೀನು ಜಯಿಸಲಾರೆ. ಆ ಪೌರುಷ ನಿನಗಿಲ್ಲ ಎಂದನು.

ಇತ್ಯಾಕರ್ಣ್ಯ ತತಃ ಕ್ರುದ್ಧೋ ಮನ್ಮಥಸ್ತ್ವಿಂದ್ರಮಬ್ರವೀತ್ ।
ಋಷೀಣಾಂ ದೇವತಾನಾಂ ಚ ಮಯಾ ಬಲಂ ಪ್ರಣಾಶಿತಂ ॥ ೧೦ ॥

ಅಸ್ಯಾ ಬಲಂ ಕಿಯನ್ಮಾತ್ರಂ ಭವೇನ್ಮಮ ಪ್ರಕಥ್ಯತಾಂ ।
ತ್ವಂ ಚ ಪಶ್ಯಸ್ವ ದೇವೇಶ ನಾಶಯಿಷ್ಯಾಮಿ ತಾಂ ಸ್ತ್ರಿಯಂ ॥ ೧೧ ॥

ಭವಂತಂ ವೈ ಯಥಾ ಚಾಗ್ರೇ ತತೋ ದೃಷ್ಟ್ವಾ ತ್ವರಂ ವ್ರಜೇತ್ ।
ತಥೇಮಾಂ ಭಾವಯಿಷ್ಯಾಮಿ ರೂಪೇಣ ಸ್ವೇನ ತೇಜಸಾ ॥ ೧೨ ॥

ಗಚ್ಛ ತತ್ರ ಮಹತ್ಕಾರ್ಯಮುತ್ಪಾದ್ಯಂ ಸಾಂಪ್ರತಂ ಧ್ರುವಂ ।
ತಸ್ಮಾತ್ಕುತ್ಸಸಿ ಮೇ ತೇಜಸ್ತ್ರೈಲೋಕ್ಯಸ್ಯ ವಿನಾಶನಂ ॥ ೧೩ ॥

॥ ವಿಷ್ಣುರುವಾಚ ॥

ಆಕರ್ಣ್ಯ ವಾಕ್ಯಂ ತು ಮನೋಭವಸ್ಯ
ಏಷಾ ನ ಸಾಧ್ಯಾ ತವ ಕಾಮ ಚಾನೇ ।
ಧರ್ಮೇಣ ವೀರ್ಯೇಣ ಸುಸತ್ಯಭಾವಾ
ಪುಣ್ಯೇನ ಪುಣ್ಯಾ ಬಹು ಪುಣ್ಯಚಾರಾ ॥ ೧೪ ॥

---

೧೦-೧೧. ಈ ಮಾತನ್ನು ಮನ್ಮಥನು ಕೇಳಿ ಕೋಪಗೊಂಡು ಇಂದ್ರನನ್ನು ಕುರಿತು ಋಷಿಗಳ ಮತ್ತು ದೇವತೆಗಳ ಮನಸ್ಸ್ಥೈರ್ಯವನ್ನು ನಾನು ನಾಶಮಾಡಿದ್ದೇನೆ. ಈಕೆಯ ಮನೋದಾರ್ಢ್ಯವು ಎಷ್ಟರದು? ಎಲೈ ಇಂದ್ರನೇ, ನೀನೇ ನೋಡು. ಆ ಹೆಂಗಸನ್ನು ಈಗಲೇ ನಾಶಮಾಡುವೆನು ಎಂದನು

೧೨. ನೀನು ಮಾತ್ರ ಅವಳ ಎದುರಿಗಿದ್ದರೆ ನಿನ್ನನ್ನು ನೋಡಿ ಕಾಮಾತುರಪಡಬೇಕು. ಹಾಗೆ ಈಕೆಯನ್ನು ರೂಪತೇಜಸ್ಸುಗಳಿಂದ ಮಾಡುತ್ತೇನೆ. ನೋಡು.

೧೩. ಅಲ್ಲಿಗೆ ನಡೆ. ಅಲ್ಲಿ ಈ ಮಹತ್ಕಾರ್ಯವಾಗಬೇಕು. ಖಂಡಿತ. ನನ್ನ ಶಕ್ತಿಯನ್ನು ತಿಳಿದಿದ್ದರೂ ಏಕೆ ತಿರಸ್ಕರಿಸುತ್ತೀಯೆ? ನನ್ನ ತೇಜಸ್ಸು ಮೂರು ಲೋಕವನ್ನೂ ನಾಶಪಡಿಸಬಲ್ಲದು.

೧೪. ವಿಷ್ಣುವು ಹೇಳಿದನು—ಮನ್ಮಥನ ಈ ವಾಕ್ಯವನ್ನು ಕೇಳಿ, ಎಲೈ ಕಾಮನೇ, ಈಕೆಯು ನಿನಗೆ ಸಾಧ್ಯಳಲ್ಲ. ಧರ್ಮ, ವೀರ್ಯ, ಸತ್ಯ, ಸದಾಚಾರ, ಮೊದಲಾದ ಪುಣ್ಯ ಪ್ರವೃತ್ತಿಗಳು ಈಕೆಯಲ್ಲಿ ಮೂರ್ತಿಮತ್ತಾಗಿ ನೆಲಸಿವೆ. ಈಕೆಯ ಚಿತ್ತವನ್ನು ಚಂಚಲಗೊಳಿಸುವುದು ಅಷ್ಟೇನೂ ಸುಲಭವಲ್ಲದೆಂದು ನನಗೆ ತೋರುವುದು. ಎಂದು ಇಂದ್ರನು ಹೇಳಿ.

ಪಶ್ಯಾಮಿ ತೇಜೋ ಬಲಮುಗ್ರವೀರ್ಯ
ಮಿತೋ ಹಿ ಗತ್ವಾ ಚ ಧನುಷ್ಮತಾ ವೈ ।
ತೇನಾಪಿ ಸಾರ್ಧಂ ಪ್ರಜಗಾಮ ದೇವೋ
ರತ್ಯಾ ಚ ದೂತ್ಯಾ ಚ ಪತಿವ್ರತಾಂ ತಾಂ ॥ ೧೫ ॥

ಏಕಾಂ ಸುಪುಣ್ಯಾಂ ಸ್ವಗೃಹೇ ಸ್ಥಿತಾಂ ತಾಂ
ಧ್ಯಾನೇ ಪ್ರಲೀನಾಂ ಪರಿಹರ್ತುಕಾಮಾಂ ।
ಯಥಾಸುಯೋಗಂ ಪರಿಧ್ಯಾಯಮಾನಾಂ
ವಿಕಲ್ಪಹೀನಾಂ ನ ಚ ಕಲ್ಪಯೇತ್ಕಃ ॥ ೧೬ ॥

ಅತ್ಯದ್ಭುತಂ ರೂಪಮನನ್ಯತೇಜಃ
ಕಂದರ್ಪಯುಕ್ತಂ ಹಿ ಸತಾಂ ಪ್ರಮೋದಂ ।
ಲೀಲಾಯುತಂ ಭಾವಯುತಂ ಮಹಾತ್ಮಾ
ತಸ್ಯಾಗ್ರಮೇವಂ ಚ ಪುನರ್ದದರ್ಶ ॥ ೧೭ ॥

---

೧೫. ಧನುರಾಳಿಯಾದ ಈತನೊಡನೆ ಹೋಗಿ ಇವಳ ತೇಜಸ್ಸು, ವೀರ್ಯ ಇವನ್ನು ಪರೀಕ್ಷಿಸಿ ನೋಡೋಣವೆಂದು ರತಿಯನ್ನೂ, ದೂತಿಯನ್ನಾಗಿ ಮಾಡಿಕೊಂಡು ಮನ್ಮಥನೊಡನೆ ಹೊರಟನು.

೧೬. ಆ ಸುಕಲೆಯಾದರೋ ತನ್ನ ಪತಿಯ ವಿರಹದಿಂದ ಏಕಾಕಿನಿಯಾಗಿದ್ದು ಧ್ಯಾನದಲ್ಲಿಯೇ ಮಗ್ನಳಾಗಿದ್ದಳು. ಪುನಃ ತನ್ನ ಪತಿಯ ಸಮಾಗಮವನ್ನೇ ಯಾವಾಗಲೂ ಯೋಚಿಸುತ್ತಿರುವಳು. ಕೆಟ್ಟಭಾವನೆಗಳಲ್ಲಿ ಅವಳ ಮನಸ್ಸು ಪ್ರವೇಶಿಸುತ್ತಿರಲಿಲ್ಲ. ಇಂತಹ ದೃಢನಿಶ್ಚಯವುಳ್ಳ ಆ ಸಾಧ್ವೀಶಿರೋಮಣಿಯ ಚಿತ್ತವೃತ್ತಿಯನ್ನು ದುಷ್ಟವಾದ ಕಾಮವಿಕಾರಾದಿಗಳಿಂದ ಚಂಚಲಗೊಳಿಸಲು ಸಮರ್ಥನಾವನು ?

೧೭. ಅತ್ಯದ್ಭುತರೂಪ, ಉತ್ತಮವಾದ ಶರೀರ ಕಾಂತಿ, ಸಾಲದುದಕ್ಕೆ ಕಂದರ್ಪನೇ ಜೊತೆಗಾರ, ಸತ್ಪುರುಷರಿಗೆ ಸಂತೋಷವನ್ನುಂಟುಮಾಡುವ ಲೀಲೆ, ಭಾವಗಳಿಂದ ಕೂಡಿದ ರೀತಿಯಲ್ಲಿ ಆ ಇಂದ್ರನು ಆಕೆಯ ಎದುರಿನಲ್ಲಿ ಸುಳಿದಾಡುತ್ತಾ ಕಾಣಿಸಿಕೊಂಡನು.

ದೃಷ್ಟ್ವಾ ಸುಲೀಲಂ ಪುರುಷಂ ಮಹಾಂತಂ
ಚರಂ ತಮೇವಂ ಪರಿಕಾಮುಭಾವಂ ।
ಜಾಯಾ ಹಿ ವೈಶ್ಯಸ್ಯ ಮಹಾತ್ಮನಸ್ತು
ಮೇನೇ ನ ಸಾ ರೂಪಗುಣಂ ನ ತೇಜಃ ॥ ೧೮ ॥

ಜಲಂ ಯಥಾ ಪದ್ಮದಳೇ ಗತಂ ವೈ
ಪ್ರಯಾತಿ ದೂರಂ ಚ ದಳಂ ವಿಹಾಯ ।
ಶಂಕಾಕುಲಂ ಮಾನಸಮೇವ ಸದ್ಯಃ
ಸಂಜಾತಮಸ್ಯಾಸ್ತು ಪತಿವ್ರತಾಯಾಃ ॥ ೧೯ ॥

ಅನೇನ ದೂತೀ ಪರಿಪ್ರೇಷಿತಾ ಪುರಾ
ತಂ ತು ಬ್ರುವತ್ಯೇವ ಗುಣಜ್ಞಮೇನಂ ।
ಲೀಲಾಸ್ವರೂಪಂ ಬಹು ಆತ್ಮಭಾವಂ
ಮಾಮೇವ ಸರ್ವಂ ಪರಿದರ್ಶಯೇದ್ಯಃ ॥ ೨೦ ॥

---

೧೮. ಲೀಲೆಯುಕ್ತನಾದ ಆ ಪುರುಷನನ್ನು ನೋಡಿದರೂ ಸುಕಲೆಯ ಮನಸ್ಸು ಆ ಇಂದ್ರನ ರೂಪ. ಗುಣ ತೇಜಸ್ಸುಗಳ ಕಡೆಗೆ ಹೋಗಲೇ ಇಲ್ಲ.

೧೯. ಪದ್ಮ ಪತ್ರದ ಮೇಲೆ ಬಿದ್ದ ನೀರು, ಅದರಲ್ಲಿ ಅಂಟಿಕೊಳ್ಳದೆ ಅತ್ತಿತ್ತ ಓಡಾಡುವಂತೆ, ಅಥವಾ ಅದನ್ನೇ ಬಿಟ್ಟು ದೂರ ಹೋಗುವಂತೆ ಸಂದೇಹಗೊಂಡ ಈಕೆಯ ಮನಸ್ಸು ಇಂದ್ರನನ್ನು ಒಡನೆಯೇ ಬಿಟ್ಟು ದೂರಹೋಯಿತು.

೨೦. ಇವನಿಂದ ಕಳುಹಿಸಲ್ಪಟ್ಟ ದೂತಿಯಾದ ರತಿಯು ಪುನಃ ಇಂದ್ರನ ಬಳಿಗೆ ಬಂದು ಗುಣಜ್ಞನಾದ ನಿನಗೆ ಲೀಲೆಯಿಂದಲೇ ಆತ್ಮಸ್ವರೂಪವನ್ನು ತೋರಿಸುತ್ತಾಳೆಂದಳು. ಜೀವಾತ್ಮನಿಗೂ, ಪರಮಾತ್ಮನಿಗೂ ಅಭೇದವನ್ನು ತೋರಿಸುತ್ತಾಳೆ. ನೀನು ನಾನೆಂಬ ಭೇದವಿಲ್ಲವೆಂದೂ ಎಲ್ಲವೂ ಆತ್ಮಸ್ವರೂಪವೆಂದೂ ಅವಳ ಭಾವವು.

ಮನ್ಯೈವ ಕಾಲಂ ಪ್ರಬಲಂ ಪ್ರಬುದ್ಧ್ವಾ
ಗತೇ ಹಿ ಕಾಂತೇ ಸ್ವಗುಣೌಘಶೃಂಖಲೈಃ ।
ರತ್ಯಾ ಸಮೇತಃ ಸ ಕಥಂ ತು ಜೀವೇತ್
ಪತ್ಯಾ ಸ್ವಭಾವೇನ ಪ್ರಸಾದಿತಂ ಚ ॥ ೨೧ ॥

ಮಮಾಪಿ ಭಾವಂ ಪರಿಗೃಹ್ಯ ಕಾಂತೋಽ
ಜೀವತ್ಕ್ರಿಯಾನ್ವಾಪಿ ಸುಬುದ್ಧಿಯುಕ್ತೈಃ ।
ಶೂನ್ಯೋ ಹಿ ಕಾಯೋ ಮಮ ಚಾಸ್ತಿ ಸದ್ಯ
ಶ್ಚೇಷ್ಟಾವಿಹೀನೋ ಮೃತಕಲ್ಪ ಏವ ॥ ೨೨ ॥

ಕಾಯಸ್ವಯಾನಸ್ಯ ಪ್ರಜಾಃ ಪ್ರಣಷ್ಟಾ
ಸುಹೃತ್ಕ್ರಿಯಾಖ್ಯಂ ಪರಿಗೃಹ್ಯ ಕರ್ಮ ।
ಮಮಾಪಿ ಕೇನಾಪಿ ಸಮಂ ತು ಕಾಂತಂ
ಸ ಊರ್ಧ್ವಶೋಭಾಮನಯಚ್ಚ ಕಾಮಃ ॥ ೨೩ ॥

---

೨೧. ನಿನ್ನ ಮೇಲಿನ ಆಸೆಯಿಂದಲೇ ನಿನ್ನ ಗಂಡನು ಹೋಗಿದ್ದರೂ ಮೋಹದಿಂದ ಜಾಗ್ರತೆ ಬರಬೇಕಾಗಿದ್ದಿತು. ಹಾಗೆ ಬಾರದುದರಿಂದ ಅವನು ಬದುಕಿರಲಾರ ನೀನೇಕೆ ವ್ಯರ್ಥವಾಗಿ ಕಷ್ಟಪಡುತ್ತೀಯೆ ಎಂದು ಸಮಾಧಾನಪಡಿಸಿದೆನು.

೨೨. ನನ್ನ ಅಭಿಪ್ರಾಯವನ್ನು ತಿಳಿದು—ನನ್ನ ಗಂಡನು ಬುದ್ಧಿವಂತನಾದುದರಿಂದ ಎಷ್ಟುಕಾಲ ಬೇಕಾದರೂ ಜೀವಿಸಿರುವನು. ನನ್ನ ದೇಹವು ಈಗ ಭಾವರಹಿತವಾಗಿ ಶೂನ್ಯವಾಗಿದೆ. ಚೇಷ್ಟೆಮಾಡದಿದ್ದರೆ ಸತ್ತಂತೆಯೇ ತಾನೆ? ಎಂದರೆ ನನ್ನ ಭಾವವನ್ನು ತಿಳಿದಿರುವ ಆವನು ಎಷ್ಟು ಕಾಲವಾದರೂ ಬಂದೇ ಬರುವನು. ಅವನೊಡನೆ ನಾನು ಸೇರುವೆನು. ಅಥವಾ ಅವನು ಸತ್ತಿದ್ದರೆ ನಾನೂ ಚೇಷ್ಟಾವಿಹೀನಳಾದುದರಿಂದ ಅವನಂತೆ ಸತ್ತಿದ್ದೇನೆ ಎಂದು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿದಳು.

೨೩. ಸ್ನೇಹಿತನ ಕಾರ್ಯವನ್ನು ನೆರವೇರಿಸಲು ಕಾಮನು ನಿರಪರಾಧಿಗಳಾದ ಪ್ರಜೆಗಳಿಗೆ ಕಾಮಬಾಧೆಯನ್ನು ಉಂಟುಮಾಡಿ ಅನ್ಯಾಯವಾಗಿ ಅವರನ್ನು ಕೊಲ್ಲುತ್ತಿರುವನು. ಪರಮಾತ್ಮನಿಗೆ ಸಮಾನನಾದ ನನ್ನ ಕಾಂತನನ್ನೇ ಆ ಕಾಮನು ಕಾಂತಿಹೀನನನ್ನಾಗಿ ಮಾಡಿರುವನು.

ಯದಾ ಸ್ತುತೋ ವಚನೈರ್ಹರ್ಷಯುಕ್ತಃ
ಸ್ವಕಂಧರೋಪರಿ ನೃತ್ಯಮಾನಃ ।
ದತ್ವಾ ಅನೇನಾಪಿ ಪ್ರಭಾಷಯೇದ್ಧ್ರುವಂ
ಯೋ ಮಾಂ ಹಿ ವಾಂಛತ್ಯಪಿ ಭೋಕ್ತುಕಾಮಃ ॥ ೨೪ ॥

ಏವಂ ವಿಚಾರ್ಯೈವ ತದಾ ಮಹಾಸತೀ
ಸತ್ಯಾಖ್ಯರಜ್ವ್ವಾ ವಿನಿಬದ್ಧತೇಜಾಃ ।
ಜ್ಞಾತ್ವಾ ಗೃಹಾಂತಃ ಪ್ರವಿವೇಶ ಸಾ ತದಾ
ಸ್ವಕಾಂತಭಾವಂ ನಿಜಮೇವ ರಕ್ತಾ ॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಚತುಷ್ಪಂಚಾಶತ್ತಮೋಽಧ್ಯಾಯಃ

---

೨೪. ತನ್ನ ಹೆಗಲಿನಮೇಲೆ ನರ್ತನಮಾಡುತ್ತಿರುವ ಕಾಮನನ್ನು ಹೀಗೆ ಸ್ತೋತ್ರಮಾಡಲು ಅವನು ಹರ್ಷಯುಕ್ತನಾದನು. ನನ್ನನ್ನು ಭೋಗಿಸಲು ಯಾವನು ಅಪೇಕ್ಷಿಸುತ್ತಾನೋ ಅವನು ಈ ರೀತಿ ಮಾತನಾಡುವುದು ಸಹಜವೇ ತಾನೆ?

೨೫. ಆ ಮಹಾ ಸತಿಯು ಹೀಗೆ ಬಹಳ ಹೊತ್ತು ಯೋಚಿಸಿ, ಪಾತಿವ್ರತ್ಯ ವೆಂಬ ಪಾಶದಿಂದ ಬದ್ಧಳಾಗಿ ಎಂದರೆ ಪಾತಿವ್ರತ್ಯವನ್ನು ಬಿಡದೆ ತನ್ನ ಪತಿಯನ್ನೇ ಅನನ್ಯಭಾವದಿಂದ ಯೋಚಿಸುತ್ತಾ ತನ್ನ ಮನೆಯೊಳಕ್ಕೆ ಹೋದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಇಲ್ಲಿಗೆ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೆ ಭೂಮಿಖಂಡೇ ಪಂಚಪಂಚಾಶತ್ತಮೋಽಧ್ಯಾಯಃ

॥ ವಿಷ್ಣುರುವಾಚ ॥

ಭಾವಂ ವಿದಿತ್ವಾ ಸುರರಾಟ್ ತು ತಸ್ಯಾಃ
ಪ್ರೋವಾಚ ಕಾಮಂ ಪುರತಃ ಸ್ಥಿತಂ ತಂ ।
ನ ಚಾಸ್ತಿ ಶಕ್ಯಾ ಸುಕಲಾ ವಿಜೇತುಂ
ಸತ್ಯಾತ್ಮಕಂ ಧ್ಯಾನಮುದಂಶಿತಾ ಸತೀ ॥ ೧ ॥

ಧರ್ಮಾಖ್ಯಚಾಪಂ ಸ್ವಕರೇ ಗೃಹೀತ್ವಾ
ಜಾನಾತಿ ಧ್ಯಾನಂ ವರಮೇಕಬಾಣಂ ।
ಯೋದ್ಧುಂ ರಣೇ ಸಂಪ್ರತಿ ಸಂಸ್ಥಿತಾ ಸತೀ
ವೀರೋ ಯಥಾ ದರ್ಪಿತವೀರ್ಯಭಾವೈಃ ॥ ೨ ॥

---

## ಐವತ್ತೈದನೆಯ ಅಧ್ಯಾಯವು

೧. ದೇವೇಂದ್ರನು ಆಕೆಯ ಭಾವವನ್ನು ತಿಳಿದು ಕಾಮನನ್ನು ಕುರಿತು ಸತ್ಯದಿಂದಲೂ ಧ್ಯಾನದಿಂದಲೂ ಮುಂದುವರಿದಿರುವ ಆ ಸುಕಲೆಯನ್ನು ಜಯಿಸಲು ಸಾಧ್ಯವಾಗಲಾರದು ಎಂದನು.

೨. ಆಕೆಯು ಧರ್ಮವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡು ಕೊಬ್ಬಿದ ವೀರನಂತೆ ಈಗ ಯುದ್ಧಕ್ಕೆ ನಿಂತಿರುವಳು.

ಜಿಗೀಷತೇಯಂ ಪುರುಷಾರ್ಥಮೇವ
ತ್ವಮಾತ್ಮಯುಕ್ತಃ ಕುರು ಪೌರುಷಂ ತು ।
ದೇವಾ ನ ಜೇತುಂ ಸುಕಲಾಂ ಸಮರ್ಥಾ
ಯದ್ಭವ್ಯಮೇವಂ ಹಿ ಮಯ್ಯೈವ ಚಿಂತ್ಯಂ॥ ॥ ೩ ॥

ದಗ್ಧೋऽಸಿ ಪೂರ್ವಂ ತ್ವಮಿಹೈವ ಶಂಭುನಾ
ಮಹಾತ್ಮನಾऽನೇನ ಸಮಂ ವಿರೋಧಂ ।
ಕೃತ್ವಾ ಫಲಂ ತಸ್ಯ ವಿಕರ್ಮಣಶ್ಚ
ಪ್ರಾಪ್ತೋऽಸ್ಯಲಂ ಭಸ್ಮ ಸುಸತ್ಯಮೇವ ॥ ೪ ॥

ಯಥಾ ಪುರಾ ಕರ್ಮಕೃತಂ ತ್ವಯಾ ಸ್ಮರ
ಪ್ರಾರಬ್ಧಮೇವಂ ತು ತಥೈವ ತ್ರೀವಂ ।
ಸುಕುತ್ಸಿತಾಂ ಕೀರ್ತಿಮವಾಪ್ಸ್ಯಸಿ ಧ್ರುವಂ
ಸಾಧ್ವೀ ಮಯಾ ಸಾರ್ಧಮಿಹೈವ ಕುಪ್ಯತೇ ॥ ೫ ॥

---

೩. ಈಕೆಯು ಪುರುಷಾರ್ಥಗಳನ್ನೇ ಜಯಿಸುವವಳಾಗಿರುವಳು. ನೀನು ನಿನ್ನ ಶೌರ್ಯದ ರೀತಿಯಲ್ಲಿ ಹೋಗಬೇಡ. ಆತ್ಮವಾದವನ್ನು ಮುಂದುಮಾಡಿಕೊಂಡು ನಿನ್ನ ಸಾಮರ್ಥ್ಯವನ್ನು ತೋರಿಸು. ದೇವತೆಗಳೂ ಸಹ ಈಕೆಯನ್ನು ಜಯಿಸಲಾರರು ಮುಂದಾಗತಕ್ಕದ್ದು ನನಗೆ ಗೊತ್ತೇಯಿದೆ.

೪. ಹಿಂದೆ ನೀನು ಮಹಾತ್ಮನಾದ ಶಂಭುವಿನೊಡನೆ ವಿರೋಧವನ್ನು ಕಟ್ಟಿಕೊಂಡು ಸುಟ್ಟುಹೋದೆ. ಆ ಕೆಟ್ಟ ಕೆಲಸದಿಂದ ನೀನು ಭಸ್ಮವಾಗಿ ಹೋದೆ. ಇಂತಹ ಶಿಕ್ಷೆಯು ಖಂಡಿತವಾಗಿಯೂ ಆಯಿತು.

೫. ನೀನು ಹಿಂದೆ ಮಾಡಿದಂತೆಯೇ ಈಗಲೂ ಬಹು ಕಷ್ಟವಾದ ಕೆಲಸಕ್ಕೆ ಕೈಯಿಟ್ಟಿದ್ದೀಯೆ. ಆದುದರಿಂದ ನೀನು ಅಪಕೀರ್ತಿಯನ್ನು ಹೊಂದುವುದು ಖಂಡಿತ. ನಿನ್ನ ಮೇಲೆ ಆಕೆಯೂ ನಾನೂ ಇಬ್ಬರೂ ಕೋಪಿಕೊಳ್ಳುವುದು ಖಂಡಿತ.

ಯೇऽಜ್ಞಾನವಂತಃ ಪುರುಷಾ ಜಗತ್ತ್ರಯೇ
ವೈರಂ ವಿಕುರ್ವಂತಿ ಮಹಾತ್ಮಭಿಸ್ಸಮಂ ।
ಭುಂಜಾವ ದುಃಖಂ ತದನಂತಪಾರಂ
ಚಾಪಾಯುಧಾಸ್ಯಾಶ್ಚ ತಪೋವಿನಾಶಾತ್ ॥ ೬ ॥

ವ್ಯಾಘುಷ್ಯ ಆವಾಂ ತು ವ್ರಜಾವ ಕಾಮ
ಏನಾಂ ಪರಿತ್ಯಜ್ಯ ಸತೀಂ ಪ್ರಯುಕ್ತಾಂ ।
ಸತ್ಯಾಃ ಪ್ರಸಂಗೇನ ಪುರಾ ಮಯಾ ತು
ಲಬ್ಧಂ ಫಲಂ ಪಾಪಮಯಂ ತ್ವಸಹ್ಯಂ ॥ ೭ ॥

ತ್ವಮೇವ ಜಾನಾಸಿ ಚರಿತ್ರಮೇತತ್
ಶಪ್ತೋऽಸ್ಮಿ ತೇನಾಪಿ ಚ ಗೌತಮೇನ
ಜಾತಶ್ಚ ಸರ್ವಾಂಗಭಗಾಂಕಕೋऽಹಂ
ಭವಾನ್ ಗತೋ ಮಾಂ ತು ವಿಹಾಯ ತತ್ರ ॥ ೮ ॥

---

೬. ಲೋಕದಲ್ಲಿ ಜ್ಞಾನವಿಲ್ಲದವರು ಮಹಾತ್ಮರೊಡನೆ ವೈರಮಾಡಿಕೊಳ್ಳುತ್ತಾರೆ. ಎಲೈ ಮನ್ಮಥನೇ, ಈಕೆಯ ತಪೋವಿನಾಶಮಾಡುವುದರಿಂದ ನಾವಿಬ್ಬರೂ ಅಪಾರವಾದ ದುಃಖವನ್ನು ಅನುಭವಿಸಬೇಕಾಗುತ್ತದೆ.

೭. ಎಲೈ ಕಾಮನೇ, ನಾವಿಬ್ಬರೂ ಈ ತಪಸ್ಸುಮಾಡುತ್ತಿರುವ ಸತಿಯನ್ನು ಬಿಟ್ಟುಬಿಟ್ಟು ಸುಮ್ಮನೆ ಹೊರಟುಹೋಗೋಣ. ಸತಿಯ ವಿಷಯದಲ್ಲಿ ಕೈಹಾಕಿದುದರಿಂದಲೇ ಹಿಂದೆ ನಾನು ಕೆಟ್ಟ ಫಲವನ್ನು ಹೊಂದಿದ್ದೇನೆ.

೮. ಆ ಚರಿತ್ರೆಯನ್ನು ನೀನೇ ಬಲ್ಲೆ. ಗೌತಮನಿಂದ ಶಾಪಹೊಂದಿ, ನನಗೆ ಮೈಯಲ್ಲಾ ಭಗದ ಆಕಾರವಾಗಿರುವುದು. ಆಗ ನೀನು ನನ್ನನ್ನು ಬಿಟ್ಟು ಹೊರಟುಹೋದೆ.

ತೇಜಃ ಪ್ರಭಾವೋ ಹ್ಯತುಲಃ ಸತೀನಾಂ
ಧಾತಾ ಸಮರ್ಥಃ ಸಹಿತುಂ ನ ಸೂರ್ಯಃ ।
ಸುಕುತ್ಸಿತಂ ರೂಪಮಿದಂ ತು ರಕ್ಷ್ಯೇ
ತ್ಪುರಾನುಸೂಯಾ ಮುನಿನಾ ಹಿ ಶಪ್ತಂ ॥ ೯ ॥

ನಿರುಧ್ಯ ಸೂರ್ಯಂ ಪರಿತೇಜವಂತ
ಮುದ್ಯಂತಮೇವಂ ಪ್ರಭಯಾ ಸುದೀಪ್ತಂ ।
ಭರ್ತುಶ್ಚ ಮೃತ್ಯುಂ ಪರಿಜ್ಞಾಯ ಕಾಮಂ
ಮಾಂಡವ್ಯಶಪ್ತಸ್ಯ ತು ಕೌಂಡಿಕಸ್ಯ ॥ ೧೦ ॥

ಅತ್ರೇಃ ಪ್ರಿಯಾ ಸತ್ಯಮಯಾ ಪತಿವ್ರತಾ
ಸ್ವಪುತ್ರತಾಂ ದೇವತ್ರಯಂ ಹಿ ನಿನ್ಯೇ ।
ತಥಾ ಪುರಾ ಮನ್ಮಥ ತೇ ಶ್ರುತಂ ಯದಾ
ಸತ್ಕಾರಯೋಗ್ಯಾಃ ಪ್ರಭವಂತಿ ಸತ್ಯಃ ॥ ೧೧ ॥

---

೯. ಸತಿಯರಿಗಿರುವ ತೇಜಃಪ್ರಭಾವವು ಅಸದೃಶವಾದದು. ಬ್ರಹ್ಮ ನೊಬ್ಬನೇ, ಅದನ್ನು ಸಹಿಸಬಲ್ಲನು. ಸೂರ್ಯನು ಕೂಡ ಸಹಿಸಲಾರನು. ಮೊದಲೇ ಗೌತಮನು ಶಾಪಕೊಟ್ಟದ್ದರಿಂದ ಈ ದೇಹವು ಕೆಟ್ಟದೆ. ಅದರ ಜೊತೆಗೆ ಅನಸೂಯೆ ಬೇರೆ ತಪಸ್ಸುಮಾಡುತ್ತಿದ್ದಾಗ ಶಪಿಸಿದ್ದಾಳೆ. ಇವೆರಡನ್ನೂ ಹೊಂದಿರುವ ಈ ದೇಹ ವನ್ನು ನಾನು ಕಾಪಾಡಿಕೊಳ್ಳಬೇಕಾಗಿದೆ.

೧೦. ಕೌಂಡಿಕನ ಮಗನಾದ ಮಾಂಡವ್ಯನ ಹೆಂಡತಿಯು ತನ್ನ ಗಂಡನಿಗೆ ಮಾರನೆಯದಿನ ಮರಣವಾಗುವುದನ್ನು ತಿಳಿದು, ಆಕೆಯು ಮಾರನೆಯದಿನವೇ ಆಗ ದಿರಲೆಂದು ಸೂರ್ಯನುದಿಸದ ಹಾಗೆ ಸೂರ್ಯಗತಿಯನ್ನು ತಡೆಗಟ್ಟುವ ಕಾರ್ಯವನ್ನು ತನ್ನ ಪಾತಿವ್ರತ್ಯದಿಂದಲೇ ಮಾಡಿದಳು. ಆಕೆ ಕೊಟ್ಟಿರುವ ಶಾಪವನ್ನಾದರೂ ಬಲ್ಲೆಯಾ?

೧೧. ಪತಿವ್ರತೆಯಾದ ಅತ್ರಿಯ ಹೆಂಡತಿ ಅನಸೂಯೆಯು ತ್ರಿಮೂರ್ತಿ ಗಳನ್ನೂ ಕೂಡ ಮೂರು ಮಕ್ಕಳನ್ನಾಗಿ ಮಾಡಿಕೊಂಡಳು. ಇವೆಲ್ಲವನ್ನೂ ನೀನು ಕೇಳಿ ಬಲ್ಲೆಯಷ್ಟೆ? ಆದುದರಿಂದ ಪತಿವ್ರತೆಯರನ್ನು ಸತ್ಕಾರಮಾಡಬೇಕೇ ಹೊರತು ತಿರಸ್ಕರಿಸಬಾರದು.

ಸಾವಿತ್ರಿನಾಮ್ನಾ ದ್ಯುಮತ್ಸೇನಪುತ್ರೀ
ನೀತಂ ಪ್ರಿಯಂ ಸಾ ತ್ವಿಹ ಆನಿನಾಯ ।
ಯಮಾದಹೋ ಸತ್ಯವತಶ್ಚ ಪತ್ನೀ
ಸತೀತ್ವಮೇವಂ ಪರಿಪೂಜಿತಂ ಚ ॥ ೧೨ ॥

ಅಗ್ನೇಃ ಶಿಖಾಂ ಕಃ ಪರಿಸಂಸ್ಪೃಶೇದ್ವೈ
ಭವೇದ್ಧಿ ಕಃ ಸಾಗರಮೇವ ರೂಢಃ ।
ಗಳೇ ತು ಬದ್ಧ್ವಾ ಸುಶಿಲಾಂ ಮಹತ್ತರಾಂ
ಯೋ ಮರ್ತುಕಾಮಃ ಪರಿಚಾಲಯೇತ್ಸತೀಂ ॥ ೧೩ ॥

ಉಕ್ತೇ ತು ವಾಕ್ಯೇ ಬಹುನೀತಿಯುಕ್ತೆ
ಇಂದ್ರೇಣ ಕಾಮಸ್ಯ ಸುಶಿಕ್ಷಣಾರ್ಥಂ ।
ಆಕರ್ಣ್ಯ ವಾಕ್ಯಂ ಮಕರಧ್ವಜಸ್ತು
ಉವಾಚ ದೇವೇಂದ್ರಮಥೈನಮೇವ ॥ ೧೪ ॥

ತವಾತಿದೇಶಾದಹಮಾಗತೋ ವೈ
ಧೈರ್ಯಂ ಸುಹೃತ್ತ್ವಂ ಪುರುಷಾರ್ಥಮೇವ ।
ತ್ಯಕ್ತ್ವಾ ತದರ್ಥಂ ಪರಿಭಾಷಸೇ ಮಾಂ
ನಿಸ್ಸತ್ತ್ವರೂಪಂ ಬಹುಭೀತಿಯುಕ್ತಂ ॥ ೧೫ ॥

---

೧೨. ಸತ್ತು ಯಮಲೋಕಕ್ಕೆ ಹೋಗಿದ್ದ ತನ್ನ ಗಂಡನನ್ನು ದುಮತ್ಸೇನನ ಮಗಳಾದ ಸಾವಿತ್ರಿಯು, ಯಮನಿಂದ ಕರೆಸಿಕೊಂಡಳು. ಈ ರೀತಿಯಾಗಿ ಸತ್ಯವತಿಯರ ಚರಿತ್ರೆಯು ಪೂಜ್ಯನಾಗಿದೆ.

೧೩. ಅಗ್ನಿಯ ಶಿಖೆಯನ್ನು ಯಾವನು ಕೈಯಿಂದ ಮುಟ್ಟಲು ಪ್ರಯತ್ನಿಸುತ್ತಾನೆ? ಕತ್ತಿಗೆ ಕಲ್ಲನ್ನು ಕಟ್ಟಿಕೊಂಡು ಯಾವನು ತಾನೇ ಸಮುದ್ರದಲ್ಲಿ ಈಜುವುದಕ್ಕೆ ಹೋದಾನು? ಅದರಂತೆಯೇ ಸಾಯಲಿಚ್ಛಿಸುವವನು ಮಾತ್ರ ಸತಿಯ ಪಾತಿವ್ರತ್ಯನಿಯಮವನ್ನು ಕೆಡಿಸಲು ಪ್ರಯತ್ನಿಸುವನು.

೧೪. ಇಂದ್ರನು ಕಾಮನಿಗೆ ಬುದ್ಧಿವಾದ ರೂಪದ ಇಷ್ಟು ನೀತಿಗಳನ್ನು ಹೇಳಿದನು. ಇದನ್ನು ಆ ಕಾಮನು ಕೇಳಿ ಇಂದ್ರನನ್ನು ಕುರಿತು ಹೀಗೆಂದನು.

೧೫. ನಿನ್ನ ಅಪ್ಪಣೆಯಿಂದಲ್ಲವೇ ನಾನು ಇಲ್ಲಿಗೆ ಬಂದುದು? ಧೈರ್ಯ, ಸ್ನೇಹ ಪುರುಷಾರ್ಥಗಳನ್ನು ಆ ಹೆದರಿಕೆಗೋಸ್ಕರ ಬಿಟ್ಟು, ಧೈರ್ಯಹೀನವಾದ ಹೇಡಿತನವನ್ನು ತೋರಿಸುವ ಈ ಮಾತನ್ನು ನೀನೇ ಆಡುತ್ತಿರುವೆಯಲ್ಲ?

ನ್ಯಾಬುದ್ಧಿ ಯಾಸ್ಯಾಮಿ ಯದಾ ಸುರೇಶ
ಸ್ಯಾಲ್ಲೋಕಮಧ್ಯೇ ಮಮ ಕೀರ್ತಿನಾಶಃ ।
ಊಢಿಂಕರೋ ಮಾನವಿಹೀನ ಏವ
ಸರ್ವೇ ವದಿಷ್ಯಂತ್ಯನಯಾ ಜಿತಂ ಮಾಂ ॥ ೧೬ ॥

ಯೇ ವೈ ಜಿತಾ ದೇವಗಣಾಶ್ಚ ಮಾನವಾಃ
ಪೂರ್ವಂ ಮುನೀಂದ್ರಾಸ್ತಪಸಾ ಪ್ರಯುಕ್ತಾಃ ।
ಹಾಸ್ಯಂ ಕರಿಷ್ಯಂತಿ ಮಮಾಪಿ ಸರ್ವೇ
ನಾರ್ಯಾ ಜಿತೋ ಮನ್ಮಥ ಏಷ ಭೀತಃ ॥ ೧೭ ॥

ತಸ್ಮಾತ್ಪ್ರಯಾಸ್ಯಾಮಿ ತ್ವಯೈವ ಸಾರ್ಧಂ
ಅಸ್ಯಾ ಬಲಂ ಮಾನಧನಃ ಸುರೇಶ ।
ತೇಜಶ್ಚ ಧೈರ್ಯಂ ಪರಿನಾಶಯಿಷ್ಯೇ
ಭವಾಂಸ್ತು ಕಸ್ಮಾತ್ಪ್ರಬಿಭೇತಿ ಇಂದ್ರ ॥ ೧೮ ॥

ಸಂಬೋಧ್ಯ ಚೈವಂ ಸ ಸುರಾಧಿನಾಥಂ
ಚಾಪಂ ಗೃಹೀತ್ವಾ ಸಶರಂ ಸಪುಷ್ಪಂ ।

---

೧೬. ಎಲೈ ಸುರೇಶನೇ, ಬುದ್ಧಿಗೆಟ್ಟು ನಾನು ಹಿಂದಕ್ಕೆ ಹೋದರೆ ಲೋಕದಲ್ಲಿ ನನ್ನ ಕೀರ್ತಿ ನಾಶವಾಗುವುದು. ಅಲ್ಲದೆ ಇವಳಿಂದ ನಾನು ಸೋತಂತಾಗಿ ಎಲ್ಲರೂ ನನ್ನನ್ನು ಕೈಲಾಗದವನು, ಮಾನಹೀನನು ಎಂದೆನ್ನುತ್ತಾರೆ.

೧೭. ನಾನು ಹಿಂದೆ ಯಾವ ದೇವತೆಗಳನ್ನೂ, ಮುನಿಗಳನ್ನೂ, ಜಯಿಸಿರುವೆನೋ ಅವರೆಲ್ಲರೂ ನನ್ನನ್ನು ಹೆಂಗಸಿಗೆ ಸೋತು ಹೆದರಿ ಓಡಿಹೋದನೆಂದು ಹಾಸ್ಯಮಾಡುತ್ತಾರೆ.

೧೮. ಎಲೈ ಇಂದ್ರನೇ, ನಿನ್ನೊಡನೆ ಆಕೆಯ ಬಳಿಗೆ ಹೋಗುತ್ತೇನೆ. ಆಕೆಯ ಬಲ, ಮಾನ, ಧನ, ಧೈರ್ಯ, ತೇಜಸ್ಸು, ಎಲ್ಲವನ್ನೂ ನಾಶಮಾಡುತ್ತೇನೆ. ನೀನೇಕೆ ಹೆದರುತ್ತೀಯೆ?

೧೯-೨೦. ಹೀಗೆ ಇಂದ್ರನಿಗೆ ಹೇಳಿ, ತಾನು ಬಿಲ್ಲಬಾಣಗಳನ್ನು ತೆಗೆದುಕೊಂಡು ರತಿಯನ್ನು ಕುರಿತು ನೀನು ಮಾಯೆಯನ್ನು ಉಂಟುಮಾಡಿ ಮುಂದೆ

ಉವಾಚ ಕ್ರೀಡಾಂ ಪುರತಸ್ಸ್ಥಿತಾಂ ಸಖೀಂ
ವಿಧಾಯ ಮಾಯಾಂ ಭವತಿ ಪ್ರಿಯಾ ಹಿ ॥ ೧೯ ॥

ವೈಶ್ಯಸ್ಯ ಭಾರ್ಯಾಂ ಸುಕಲಾಂ ಸುಪುಣ್ಯಾಂ
ಸತ್ಯೇ ಸ್ಥಿತಾಂ ಧರ್ಮವಿದಾಂ ಗುಣಜ್ಞಾಂ ।
ಇತೋ ಹಿ ಗತ್ವಾ ಕುರು ಕಾರ್ಯಮುತ್ತಮಂ
ಸಾಹಾಯ್ಯರೂಪಂ ಚ ಪ್ರಿಯೇ ಸಖೇ ಶೃಣು ॥ ೨೦ ॥

ಕ್ರೀಡಾಂ ಸಮಾಭಾಷ್ಯ ತತೋ ಮನೋಭವ
ಸ್ತ್ವಂತೇ ಸ್ಥಿತಾಂ ಪ್ರೀತಿಮಥಾಹ್ವಯತ್ಪುನಃ ।
ಕಾರ್ಯಂ ಭವತ್ಯಾ ಮಮ ಕಾರ್ಯಮುತ್ತಮ
ಮೇನಾಂ ಸುಹೃದ್ಯೈಃ ಪರಿಭಾವಯಸ್ವ ॥ ೨೧ ॥

ಇಂದ್ರಂ ಹಿ ದೃಷ್ಟ್ವಾ ಸುಕಲಾ ಯಥಾ ಭವೇತ್
ಸ್ನೇಹಾನುಗಾ ಚಾರುವಿಲೋಚನೇಯಂ ।
ತೈಸ್ತೈಃ ಪ್ರಭಾವೈರ್ಗುಣವಾಕ್ಯಯುಕ್ತೈ
ರ್ನಯಸ್ವ ವಶ್ಯಂ ಮಮ ವ್ಯಾಕುಲಾಂ ಕುರು ॥ ೨೨ ॥

ಭೋ ಭೋಃ ಸಖೇ ಸಾಧಯ ಗಚ್ಛ ಶೀಘ್ರಂ
ಮಾಯಾಮಯಂ ನಂದನರೂಪಯುಕ್ತಂ ।

---

ಹೋಗಿ ಪುಣ್ಯವತಿಯೂ ಸತ್ಯವತಿಯೂ ಆದ ಆ ವೈಶ್ಯನ ಹೆಂಡತಿ ಸುಕಲೆಯ ಬಳಿಗೆ ಹೋಗಿ, ನನಗೆ ಸಹಾಯರೂಪವಾದ ಕೆಲಸವನ್ನು ಮಾಡು ಎಂದನು.

೨೧. ಈ ರೀತಿ ರತಿಗೆ ಹೇಳಿ, ಹೋಗುತ್ತಿದ್ದ ಆಕೆಯನ್ನು ಪುನಃ ಕರೆದು ನನ್ನ ಕೆಲಸವನ್ನು ಹೇಗಾದರೂ ಖಂಡಿತವಾಗಿ ಮಾಡಲೇಬೇಕು. ಆಕೆಯನ್ನು ಒಳ್ಳೆಯ ಮಾತುಗಳಿಂದ ವಶಮಾಡಿಕೋ.

೨೨. ಈ ಮನೋಹರವಾದ ಕಣ್ಣುಗಳುಳ್ಳ ಸುಕಲೆಯು ಇಂದ್ರನನ್ನು ನೋಡಿ ಮೋಹಗೊಳ್ಳುವಂತೆ ನಿನ್ನ ಪ್ರಭಾವದಿಂದಲೂ ಒಳ್ಳೆಯ ಮಾತಿನಿಂದಲೂ ನನ್ನ ಬಾಣಕ್ಕೆ ವಶಳಾಗಿ ಕಾಮಬಾಧೆಯಿಂದ ದುಃಖಪಡುವಂತೆ ಮಾಡು.

೨೩. ವನದಲ್ಲಿರುವ ವೃಕ್ಷಗಳು ಪುಷ್ಪಫಲಭರಿತವಾಗಿರುವಂತೆಯೂ, ದುಂಬಿಗಳ ಝೇಂಕಾರ ರವದಿಂದಲೂ, ಕೋಗಿಲೆಗಳ ಕುಹೂ ಶಬ್ದದಿಂದಲೂ ಅತಿ ಮನೋ

ಪುಷ್ಪೋಪಯುಕ್ತಂ ತು ಫಲಪ್ರಭಾವಂ
ಘುಷ್ಟಂ ರುತೈಃ ಕೋಕಿಲಷಟ್ಪದಾನಾಂ　　॥ ೨೩ ॥

ಆಹೂಯ ವೀರಂ ಮಕರಂದಮೇವ
ರಸಾಯನಂ ಸ್ವಾದುಗುಣೈರುಪೇತಂ ।
ಸಹಾನಿಲಾದ್ಯೈರ್ನಿಜಕರ್ಮಯುಕ್ತೈಃ
ಸಂಪ್ರೇಷಯಿತ್ವಾ ಪುನರೇವ ಕಾಮಃ　　॥ ೨೪ ॥

ಚಕ್ರೇ ಪ್ರಯಾಣಂ ಸುರರಾಜಸಾರ್ಧಂ ।
ಸಂಮೋಹನಾಯಾಪಿ ಮಹಾಸತೀಂ ತಾಂ　　॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಪಂಚಪಂಚಾಶತ್ತಮೋಽಧ್ಯಾಯಃ

---

ಹರವಾಗಿರುವಂತೆಯೂ ಮಾಡಿ, ಮಾಯಾಮಯವಾದ ನಿನ್ನ ನಂದನರೂಪವನ್ನು ಧರಿಸಿ ನನ್ನ ಕಾರ್ಯಕ್ಕೆ ಅನುವಾಗು ಎಂದು ರತಿಗೆ ಹೇಳಿ,

೨೪-೨೫. ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ಸುರಭಿಯುಕ್ತವಾದ ಮಕರಂದನನ್ನೂ ಮೆಲ್ಲನೆ ಬೀಸುವ ಮಂದಾನಿಲನನ್ನೂ ಕರೆದು, ಅವರನ್ನು ತಮ್ಮ ತಮ್ಮ ಕಾರ್ಯಗಳಲ್ಲಿ ನಿಯಮಿಸಿ, ಇಂದ್ರನೊಡನೆ ಆ ಮಹಾಸತಿಯನ್ನು ಮೋಹಪಡಿಸಲು ಪ್ರಯಾಣಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಐವತ್ತೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೆ ಭೂಮಿಖಂಡೇ ಷಟ್ಪಂಚಾಶತ್ತಮೋಽಧ್ಯಾಯಃ

॥ ವಿಷ್ಣುರುವಾಚ ॥

---

ತಸ್ಯಾಸ್ಸತ್ಯವಿನಾಶಾಯ ಮನ್ಮಥಶ್ಚ ಸುರಾಧಿಪಃ ।
ಪ್ರಸ್ಥಿತೌ ಸುಕಲಾಂ ತರ್ಹಿ ಸತ್ಯಂ ಧರ್ಮಮಥಾಬ್ರವೀತ್ ॥ ೧ ॥

ಪಶ್ಯ ಧರ್ಮ ಮಹಾಪ್ರಾಜ್ಞ ಮನ್ಮಥಸ್ಯಾಪಿ ಚೇಷ್ಟಿತಂ ।
ತವಾರ್ಥಮಾತ್ಮನಶ್ಚೈವ ಪುಣ್ಯಸ್ಯಾಪಿ ಮಹಾತ್ಮನಃ ॥ ೨ ॥

ವಿಸೃಜಾಮಿ ಮಹತ್ಸ್ಥಾನಂ ವಾಸರೂಪಂ ಸುಖೋದಯಂ ।
ಸತ್ಯಾಖ್ಯಂ ಸ ಚ ವಿಪ್ರಾಖ್ಯಂ ಸುದೇವಾಖ್ಯಂ ಗೃಹೋತ್ತಮಂ ॥ ೩ ॥

ತಮೇವ ನಾಶಯೇತ್ ಜ್ಞಾತ್ವಾ ಕಾಮ ಏಷ ಪ್ರಸನ್ನಧೀಃ ।
ದ್ವಿಷದ್ರೂಪಃ ಸ ದುಷ್ಟಾತ್ಮಾ ಅಸ್ಮಾಕಂ ಹಿ ನ ಸಂಶಯಃ ॥ ೪ ॥

---

## ಐವತ್ತಾರನೆಯ ಅಧ್ಯಾಯವು

೧-೨. ವಿಷ್ಣುವು ಹೇಳಿದನು—ಆಕೆಯ ಸತ್ಯವನ್ನು ನಾಶಮಾಡುವುದಕ್ಕೆ ಉದ್ಯುಕ್ತರಾಗಿ ಮನ್ಮಥನೂ, ಇಂದ್ರನೂ ಹೊರಟರು. ಆಗ ಸತ್ಯವು ಧರ್ಮನನ್ನು ಕುರಿತು ಎಲೈ ಪ್ರಾಜ್ಞನಾದ ಧರ್ಮನೇ, ನಿನ್ನ ಮತ್ತು ಮಹಾತ್ಮನಾದ ಪುಣ್ಯನ ನಾಶಕ್ಕೋಸ್ಕರ ಮನ್ಮಥನು ಮಾಡುವ ಚೇಷ್ಟೆಯನ್ನು ನೋಡು.

೩. ಎಲೈ ಧರ್ಮನೇ, ಸತ್ಯನೆಂದು ಪ್ರಸಿದ್ಧನಾದ ವಿಪ್ರನಾದ ಆ ಸುದೇವನ ಶರೀರವೆಂಬ ಉತ್ತಮವಾದ ಸುಖವನ್ನು ಕೊಡುವ ಮನೆಯನ್ನು ಬಿಟ್ಟುಬಿಡುತ್ತೇನೆ.

೪. ಈ ಶತ್ರುವಾದ, ದುಷ್ಟನಾದ ಕಾಮನು ತಿಳಿದರೆ ಆ ಸುದೇವನನ್ನೂ ನಮ್ಮನ್ನೂ ಸಹ ನಾಶಮಾಡುವನು. ಸಂಶಯವಿಲ್ಲ.

ಪತಿಸ್ತಪೋಧನೋ ವಿಪ್ರಃ ಸತೀ ಭಾರ್ಯಾ ಪತಿವ್ರತಾ ।
ಸುಸತ್ಯೋ ಭೂಪತಿರ್ಧರ್ಮೋ ಮಮ ಗೇಹಂ ನ ಸಂಶಯಃ ॥ ೫ ॥

ಯತ್ರಾಹಂ ವೃದ್ಧಿಸಂತುಷ್ಟಾ ತತ್ರ ವಾಸೋ ಹಿ ತೇ ಭವೇತ್ ।
ತತ್ರ ಪುಣ್ಯಂ ಸಮಾಯಾತಿ ಶ್ರದ್ಧಯಾ ಸಹ ಕ್ರೀಡತೇ ॥ ೬ ॥

ಕ್ಷಮಾ ಶಾಂತಿಸಮಾಯುಕ್ತಮಾಯಾತಿ ಮಮ ಮಂದಿರಂ ।
ಸಂತೋಷಶ್ಚ ದಮಶ್ಚೈವ ದಯಾ ಸೌಹೃದ ಏವ ಚ ॥ ೭ ॥

ಪ್ರಜ್ಞಾಯುಕ್ತಸ್ಸ ನಿರ್ಲೋಭೋ ಯತ್ರಾಹಂ ತತ್ರ ಸಂಸ್ಥಿತಃ ।
ಶುಚೀಪ್ರಭಾವಸ್ತತ್ರೈವ ಅಮೀ ವೈ ಸತ್ಯಬಾಂಧವಾಃ ॥ ೮ ॥

ಅಸ್ತೇಯಮಪ್ಯಹಿಂಸಾ ಚ ತಿತಿಕ್ಷಾ ಬುದ್ಧಿರೇವ ಚ ।
ಮಮ ಗೇಹೇ ಸಮಾಯಾಂತಿ ಧನ್ಯತಾಂ ಶೃಣು ಧರ್ಮರಾಟ್ ॥ ೯ ॥

ಗುರುಣಾ ಚ ಪಿತೃಭ್ಯಾಂ ಚ ವಿಷ್ಣುರ್ಲಕ್ಷ್ಮ್ಯಾ ಸಮನ್ವಿತಃ ।
ಮದ್ಗೇಹಂ ತು ಸಮಾಯಾಂತಿ ದೇವಾಶ್ಚಾಗ್ನಿಪುರೋಗಮಾಃ ॥ ೧೦ ॥

---

೫. ಆಕೆಯ ಗಂಡನೋ ತಪಸ್ವಿಯಾದ ವಿಪ್ರನು. ಹೆಂಡತಿಯು ಮಹಾ ಪತಿವ್ರತೆಯು. ಸತ್ಯವೇ ರಾಜನು. ಧರ್ಮವೇ ನನಗೆ ಮನೆಯು.

೬. ನಾನು ಎಲ್ಲಿ ವೃದ್ಧಿಯಿಂದ ಕೂಡಿರುತ್ತೇನೆಯೋ, ಅಲ್ಲಿ ನೀನು ವಾಸ ಮಾಡುತ್ತೀಯೆ. ಅಲ್ಲೇ ಪುಣ್ಯವೂ ಬಂದು ಶ್ರದ್ಧೆಯೊಡನೆ ಕ್ರೀಡಿಸುತ್ತದೆ.

೭-೮. ಶಾಂತಿಯಿಂದ ಕೂಡಿರುವ ಕ್ಷಮೆಯು ನನ್ನ ಮನೆಗೆ ಬರುತ್ತದೆ. ಸಂತೋಷ, ದಮ, ದಯೆ, ಸೌಹಾರ್ದ, ಪ್ರಜ್ಞೆ, ನಿರ್ಲೋಭ, ಇವು ನಾನಿದ್ದಲ್ಲಿಗೆ ಬರುತ್ತವೆ. ಶುಚಿಪ್ರಭಾವವೂ ಕೂಡ ಸತ್ಯದ ಬಂಧುಗಳೇ.

೯. ಅಸ್ತೇಯ, ಅಹಿಂಸೆ, ತಿತಿಕ್ಷೆ, ಒಂದೊಂದೂ ನನ್ನ ಮನೆಗೆ ಬರುತ್ತವೆ. ನನ್ನ ಧನ್ಯತೆಯೆಷ್ಟಿರಬಹುದು? ನೀನೇ ನೋಡು.

೧೦. ಆಗ ಗುರುಗಳೂ, ಪಿತೃಗಳೂ, ಲಕ್ಷ್ಮೀನಾರಾಯಣನೂ, ಅಗ್ನಿಯೇ ಮೊದಲಾದ ದೇವತೆಗಳೂ ಸಹ ನನ್ನ ಮನೆಗೆ ಬರುತ್ತಾರೆ.

**ಮೋಕ್ಷಮಾರ್ಗಂ ಪ್ರಕಾಶೇದ್ಯೋ ಜ್ಞಾನೌದಾರ್ಯಸಮನ್ವಿತಃ ।**
**ಏತೈಸ್ಸಾರ್ಧಂ ವಸಾಮ್ಯೇವ ಸತೀಷು ಧರ್ಮವತ್ಸು ಚ ॥ ೧೧ ॥**

**ಸಾಧುಷ್ವೇತೇಷು ಸರ್ವೇಷು ಗೃಹರೂಪೇಷು ಮೇ ಸದಾ ।**
**ಭಕ್ತೇನಾಪಿ ಕುಟುಂಬೇನ ವಸಾಮ್ಯೇವ ತ್ವಯಾ ಸಹ ॥ ೧೨ ॥**

**ಸಮರ್ಥಾಸ್ಸಾಧುರೂಪಾಸ್ತೇ ವೇಧಸಾ ಮೇ ಗೃಹಾಃ ಕೃತಾಃ ।**
**ಸಂಚರಾಮಿ ಮಹಾಭಾಗ ಸ್ವಚ್ಛಂದೇನ ಬಲೀಯಸಾ ॥ ೧೩ ॥**

**ಈಶ್ವರಶ್ಚ ಜಗತ್ಸ್ವಾಮೀ ತ್ರಿಶೂಲೀ ವೃಷವಾಹನಃ ।**
**ಮಮ ಗೇಹಸ್ವರೂಪೇಣ ವರ್ತತೇ ಶಿವಸಂಗತಃ ॥ ೧೪ ॥**

**ತದಹಂ ಸಂಸ್ಥಿತೋ ಯಾಚೇ ಗೃಹರೂಪಂ ಮಹೇಶ್ವರಂ ।**
**ಸದನಂ ಶಂಕರಾಖ್ಯಂ ಮೇ ನಾಶಿತಂ ಮನ್ಮಥೇನ ವೈ ॥ ೧೫ ॥**

---

೧೧. ಜ್ಞಾನ, ಉದಾರತನಗಳಿಂದ ಯಾವನು ಮೋಕ್ಷಮಾರ್ಗವನ್ನು ತುಡುಕುತ್ತಾನೋ ಅವನಲ್ಲಿಯೂ, ಧರ್ಮವತಿಯರಾದ ಪತಿವ್ರತೆಯರಲ್ಲಿಯೂ ನಾನು ವಾಸ ಮಾಡುತ್ತೇನೆ.

೧೨. ನನಗೆ ಮನೆಯಂತಿರುವ ಎಲ್ಲಾ ಸಾಧುಗಳಲ್ಲಿಯೂ ನನ್ನ ಭಕ್ತರಿಂದಲೂ ಕುಟುಂಬದೊಡನೆಯೂ, ನಿನ್ನೊಡನೆಯೂ, ಸೇರಿ ವಾಸಮಾಡುತ್ತೇನೆ,

೧೩. ಗಟ್ಟಿಗರಾದ ಸಾಧುಗಳನ್ನು ಬ್ರಹ್ಮನು ನನಗೆ ಮನೆಯನ್ನಾಗಿ ಮಾಡಿ ಕೊಟ್ಟಿದ್ದಾನೆ. ನಿರಾತಂಕವಾಗಿಯೂ ನಿರ್ಭಯವಾಗಿಯೂ ಸ್ವೇಚ್ಛೆಯಿಂದ ಅಲ್ಲೆಲ್ಲಾ ಸಂಚರಿಸುತ್ತೇನೆ.

೧೪. ಜಗತ್ತಿಗೆ ಸ್ವಾಮಿಯೂ, ತ್ರಿಶೂಲಧಾರಿಯೂ, ವೃಷಭವಾಹನನೂ, ಮಂಗಳಕರನೂ ಆದ ಈಶ್ವರನು ನನಗೆ ಮನೆಯು.

೧೫. ನನಗೆ ಗೃಹರೂಪನಾದ ಮಹೇಶ್ವರನನ್ನು ಇಲ್ಲಿದ್ದುಕೊಂಡು ಯಾಚಿಸುತ್ತೇನೆ. ಶಂಕರನೆಂಬ ನನ್ನ ಮನೆಯನ್ನು ಹಿಂದೆ ಮನ್ಮಥನು ನಾಶಮಾಡಿದನು.

ವಿಶ್ವಾಮಿತ್ರಂ ಮಹಾತ್ಮಾನಂ ತಪಸ್ತಂ ತಪ ಉತ್ತಮಂ ।
ಮೇನಕಾಂ ಹಿ ಸಮಾಶ್ರಿತ್ಯ ಕಾಮೋ ನಾಶಿತವಾನ್ ಪುರಾ ॥ ೧೬ ॥

ಸತೀ ಪತಿವ್ರತಾಹಲ್ಯಾ ಗೌತಮಸ್ಯ ಪ್ರಿಯಾ ಶುಭಾ ।
ಸತ್ಯಾಚ್ಚ ಚಾಲಿತಾ ತೇನ ಮನ್ಮಥೇನ ದುರಾತ್ಮನಾ ॥ ೧೭ ॥

ಮುನಯಸ್ಸತ್ಯಧರ್ಮಜ್ಞಾ ನಾನಾಸ್ತ್ರಿಯಃ ಪತಿವ್ರತಾಃ ।
ಸಸ್ಪೃಹಾಶ್ಚ ಕೃತಾಃ ಸರ್ವಾ ದೀಪಿತಾಃ ಕಾಮವಹ್ನಿನಾ ॥ ೧೮ ॥

ದುರ್ಧರೋ ದುಸ್ಸಹಃ ಪಾಪೀ ಯೋಽತಿಸತ್ಯೇಷು ನಿಷ್ಠುರಃ ।
ಮಾಮೇವ ಪಶ್ಯತೇ ನಿತ್ಯಂ ಕ್ವಥಿತಃ ಕುತ್ರ ತಿಷ್ಠತಿ ॥ ೧೯ ॥

ಸ ಮಾಂ ಜ್ಞಾತ್ವಾ ಸಮಾಯಾತಿ ಬಾಣಪಾಣಿರ್ಧನುರ್ಧರಃ ।
ನಾಶಯೇನ್ಮದ್ಗೃಹಂ ಪಾಪೋ ವೀತಿಹೋತ್ರೈಶ್ಚ ನಾಮಕೈಃ ॥ ೨೦ ॥

ಪಾಪಲೇಶಾಶ್ಚ ಯೇ ಕೂಟಾ ಅನ್ಯೇ ಪಾಷಂಡಸಂಶ್ರಯಾಃ ।
ತೇ ತು ಬುದ್ಧ್ಯಾಽಹಿತಾಸ್ಸರ್ವೇ ಸತ್ಯಗೇಹಂ ವಿಶಂತಿ ಹಿ ॥ ೨೧ ॥

---

೧೬. ಉಗ್ರ ತಪಸ್ಸನ್ನು ಮಾಡುತ್ತಿದ್ದ ಮಹಾತ್ಮನಾದ ವಿಶ್ವಾಮಿತ್ರನನ್ನು ಸಹ ಕಾಮನು ಮೇನಕೆಯನ್ನು ಆಶ್ರಯಿಸಿ ಅವಳ ಮೂಲಕ ನಾಶಮಾಡಿದನು.

೧೭. ಗೌತಮನ ಹೆಂಡತಿಯೂ, ಪತಿವ್ರತೆಯೂ ಆದ ಅಹಲ್ಯೆಯನ್ನು ಪೂರ್ವದಲ್ಲಿ ಮನ್ಮಥನು ಸತ್ಯಮಾರ್ಗದಿಂದ ಅಗಲಿಸಿದನು.

೧೮. ಸತ್ಯ ಧರ್ಮಗಳನ್ನು ಬಲ್ಲ ಇನ್ನೂ ಎಷ್ಟೋ ಋಷಿಗಳೂ, ಪತಿವ್ರತೆಯರಾದ ಹೆಂಗಸರೂ, ಆಸೆಯನ್ನು ಹೊಂದಿ ಕಾಮವಹ್ನಿಗೆ ಬಿದ್ದರು

೧೯. ದುರಾತ್ಮನಾದ ಇವನು ತಡೆಯಲಸಾಧ್ಯನು. ಪಾಪಿಯೂ ನಿರ್ದಯನೂ ಆದ ಈ ಕಾಮನು ಯಾವಾಗಲೂ ನನ್ನನ್ನೇ ನೋಡುತ್ತಾನೆ. ಬೆಂಕಿಯಿಂದ ಬೆಂದವನು ಎಲ್ಲಿ ನಿಲ್ಲುವನು ?

೨೦. ನಾನು ಇರುವುದನ್ನು ತಿಳಿದರೆ ಕೈಯಲ್ಲಿ ಬಾಣವನ್ನು ಹಿಡಿದು ಅಲ್ಲಿಗೆ ಬಂದೇ ಬರುತ್ತಾನೆ. ಆ ಪಾಪಿಯು ನನ್ನ ಮನೆಯನ್ನು ಬೆಂಕಿಯಿಂದ ಸುಡುತ್ತಾನೆ.

೨೧. ಆಗ ಪಾಪಿಗಳು. ಸುಳ್ಳುಗಾರರು, ಪಾಷಂಡಿಗಳು, ಇವರು ಸ್ವಬುದ್ಧಿಯಿಂದಲೇ ನನಗೆ ಶತ್ರುಗಳು. ಅವರೆಲ್ಲರೂ ಸತ್ಯನಾದ ನನ್ನ ಮನೆಯನ್ನು ನುಗ್ಗುತ್ತಾರೆ.

**ಸೇನಾಧ್ಯಕ್ಷೈರಸತ್ಯೈಸ್ತು ಛದ್ಮನಾ ತೇನ ನಾಶಿತಃ ।**
**ಪಾತಯೇನ್ಮರ್ದಯೇದ್ಗೇಹಂ ಪಾಪಃ ಶಸ್ತ್ರೈರ್ದುರಾತ್ಮಭಿಃ ॥ ೨೨ ॥**

**ಮಾಮೇವಂ ತಾಡಯೇತ್ಪ್ರಾಯಃ ಮಹಾಬಲಮನೋಭವಃ ।**
**ಅಸ್ಯ ನಾಮ್ನಾ ಪ್ರದಗ್ಧೋಽಹಂ ಶೂನ್ಯತಾಂ ಹಿ ವ್ರಜಾಮಿ ವೈ ॥ ೨೩ ॥**

**ನೂತನಂ ಗೃಹಮಿಚ್ಛಾಮಿ ಸ್ತ್ರಿಯಂ ಸತ್ಯಂ ಚ ಭೂಪತಿಂ ।**
**ಕೃಕಲಸ್ಯಾಪಿ ವೈಶ್ಯಸ್ಯ ಪ್ರಿಯೇಯಂ ಶಿವಮಂಗಳಾ ॥ ೨೪ ॥**

**ಸದ್ಗೃಹಂ ಸುಕಲಾಖ್ಯಂ ಮೇ ದಗ್ಧುಂ ಪಾಪಸ್ಸಮುತ್ಥಿತಃ ।**
**ಅಯಮೇಷ ಸಹಸ್ರಾಕ್ಷಃ ಕಾಮೇನ ಸಹಿತೋ ಬಲೀ ॥ ೨೫ ॥**

**ಕಾಮಸ್ಯ ಕಾರಣಾತ್ಕಸ್ಮಾತ್ಪೂರ್ವವೃತ್ತಂ ನ ವಿಂದತಿ ।**
**ಅಹಲ್ಯಾಯಾಃ ಪ್ರಸಂಗೇನ ಮಂದಪುಂಸ್ತ್ವಂ ಪ್ರಜಗ್ಮಿವಾನ್ ॥ ೨೬ ॥**

---

೨೨. ಆ ಕಾಮನ ಸೇನಾಧಿಪತಿಯಾದ ಅಸತ್ಯನು ಕಪಟದಿಂದ ನನ್ನ ಮನೆಯನ್ನು ನಾಶಮಾಡಿ ಕೆಟ್ಟ ಶಸ್ತ್ರಗಳಿಂದ ನನ್ನ ಮನೆಯನ್ನು ಕೆಡವಿ ತುಳಿಯುತ್ತಾನೆ.

೨೩. ಮಹಾ ಬಲಿಷ್ಠನಾದ ಕಾಮನು ನನ್ನನ್ನು ಈ ರೀತಿ ಪೀಡಿಸುತ್ತಾನೆ. ಅವನಿಂದ ನನ್ನ ಮನೆಯೂ ನಾಶವಾದ ಮೇಲೆ ನಾನೂ ನಾಶವಾಗಿ ಹಾಳಾಗುತ್ತೇನೆ.

೨೪. ಆದುದರಿಂದ ಸತ್ಯವೂ, ಧರ್ಮವೂ, ಉಳ್ಳ ಹೊಸದಾದ ಸ್ತ್ರೀರೂಪವಾದ ಒಂದು ಮನೆಯನ್ನು ಅಪೇಕ್ಷಿಸುತ್ತೇನೆ. ಅದು ಕೃಕಲನೆಂಬ ವೈಶ್ಯನ ಪ್ರಿಯೆಯಾದ ಮಂಗಳರೂಪಳಾದ ಸುಕಲೆಯು.

೨೫. ಆ ಪಾಪಿಯು ಸುಕಲೆಯೆಂಬ ಹೆಸರುಳ್ಳ ಆ ಮನೆಯನ್ನು ಸುಡುವುದಕ್ಕೆ ಉದ್ಯುಕ್ತನಾಗಿದ್ದಾನೆ. ಈ ಬಲಿಷ್ಠನಾದ ಇಂದ್ರನೂ ಅವನ ಜೊತೆಯಲ್ಲಿ ಬಂದಿದ್ದಾನೆ.

೨೬. ಆ ಇಂದ್ರನು ಕಾಮನ ಜೊತೆಯಲ್ಲಿದ್ದುದರಿಂದ ಪೂರ್ವದಲ್ಲಿ ತನಗಾದ ತೊಂದರೆಯನ್ನೇಕೆ ತಿಳಿದುಕೊಳ್ಳುವುದಿಲ್ಲ? ಅಹಲ್ಯೆಯಲ್ಲಿ ಪ್ರವೇಶಮಾಡಿದುದರಿಂದ ಅವನ ಪುಂಸ್ತ್ವವೇ ನಾಶವಾಯಿತಲ್ಲ?

ಪೌರುಷಂ ಹಿ ತತೋ ನಷ್ಟಂ ಸತ್ಯಸ್ಯೈವ ಪ್ರಧರ್ಷಣಾತ್ ।
ನಷ್ಟಃ ಕಾಮಸ್ಯ ದೋಷೇಣ ಸುರರಾಟ್ ತತ್ರ ಸಂಸ್ಥಿತಃ ॥ ೨೭ ॥

ಭುಕ್ತ್ವಾರ್ತಿ ದಾರುಣಂ ಶಾಪಂ ದುಃಖೇನ ಮಹತಾನ್ವಿತಃ ।
ಕೃಕಲಸ್ಯ ಪ್ರಿಯಾಮೇತಾಂ ಸುಕಲಾಂ ಧರ್ಮಚಾರಿಣೀಂ ।
ಏಷ ಹರ್ತುಂ ಸಹಸ್ರಾಕ್ಷ ಉದ್ಯತಃ ಕಾಮಸಂಯುತಃ ॥ ೨೮ ॥

ಕಥಮೇತೇನ ಇಂದ್ರೇಣ ನ ಪ್ರಯಾತಿ ತಥಾ ಕುರು ।
ಧರ್ಮರಾಜ ಮಹಾಪ್ರಾಜ್ಞ ಭವಾನ್ಮತಿಮತಾಂ ವರಃ ॥ ೨೯ ॥

॥ ಧರ್ಮರಾಜ ಉವಾಚ ॥

ಊನಂ ತೇಜಃ ಕರಿಷ್ಯಾಮಿ ಕಾಮಸ್ಯ ಮರಣಂ ತಥಾ ।
ಉಪಾಯಸ್ಸಮಯಾ ದೃಷ್ಟೋ ಯೇನಾದ್ಯೈವ ವಿನಶ್ಯತಿ ॥ ೩೦ ॥

ಪ್ರಯಾತ್ವೇಷಾ ಮಹಾಪ್ರಾಜ್ಞಾ ಶಕುನೀ ರೂಪಧಾರಿಣೀ ।
ಭರ್ತುರಾಗಮನಂ ಪುಣ್ಯಂ ಶಬ್ದೇನಾಖ್ಯಾತು ವೈ ಯತಃ ॥ ೩೧ ॥

---

೨೭. ಸತ್ಯನನ್ನು ತಿರಸ್ಕರಿಸಿದುದರಿಂದ ಆ ಇಂದ್ರನ ಪೌರುಷವೇ ನಷ್ಟವಾಯಿತು. ಅಲ್ಲಿ ನಿಂತಿರುವ ದೇವೇಂದ್ರನು ಕಾಮನ ಸಹವಾಸದೋಷದಿಂದ ಕೆಟ್ಟುಹೋದನು.

೨೮. ಕಠಿಣವಾದ ಶಾಪದಿಂದ ಅತಿದುಃಖವನ್ನು ಅನುಭವಿಸಿದನು. ಆದರೂ ಅವನಿಗೆ ಬುದ್ಧಿ ಬಂದಿಲ್ಲ. ಧರ್ಮಚಾರಿಣಿಯಾದ ಕೃಕಲನ ಹೆಂಡತಿಯನ್ನು ಈ ಕಾಮಿಯಾದ ಇಂದ್ರನು ಅಪಹರಿಸುವುದಕ್ಕೆ ಉದ್ಯುಕ್ತನಾಗಿದ್ದಾನೆ

೨೯. ಈ ಕಾಮನು ಇಂದ್ರನೊಡನೆ ಹೋಗದಂತೆ ಮಾಡು. ಎಲೈ ಧರ್ಮರಾಜನೇ ನೀನು ಬುದ್ಧಿವಂತರಲ್ಲಿ ಶ್ರೇಷ್ಠನು. ನಿನಗೆ ಆ ಶಕ್ತಿಯಿದೆ. ಎನ್ನಲು,

೩೦. ಧರ್ಮರಾಜನು ಹೇಳಿದನು—ಈ ಇಂದ್ರನ ತೇಜಸ್ಸನ್ನು ಕಡಿಮೆ ಮಾಡುತ್ತೇನೆ. ಮನ್ಮಥನಿಗೂ ಮರಣವನ್ನುಂಟುಮಾಡುತ್ತೇನೆ. ಈಗಲೇ ಅವರು ನಾಶವಾಗುವ ಉಪಾಯವನ್ನು ಕಂಡುಹಿಡಿದಿದ್ದೇನೆ.

೩೧. ಈ ಮಹಾಪ್ರಾಜ್ಞೆಯು ಹಕ್ಕಿಯ ರೂಪವನ್ನು ಹೊಂದಿ ಅಲ್ಲಿಗೆ ಹೋಗಲಿ. ಗಂಡನ ಆಗಮನವನ್ನು ಆಕೆಗೆ ತಿಳಿಸಲಿ.

ಶಕುನಸ್ಯ ಪ್ರಭಾವೇನ ಭರ್ತುರ್ಶಾಗಮನೇನ ಚ ।
ಹೃಷ್ಟಾ ಪುಷ್ಟಾಽಭವಿಷ್ಯತ್ಸಾ ಸ್ಥಿರಚಿತ್ತಾ ನ ಸಂಶಯಃ ॥ ೩೨ ॥

ಪ್ರಜ್ಞಾ ಚ ಪ್ರೇಷಿತಾ ತೇನ ಗತಾ ಸಾ ಸುಕಲಾಗೃಹಂ ।
ಪ್ರಕುರ್ವತೀ ಮಹಚ್ಛಬ್ದಂ ಹೃಷ್ಟಂ ದೈವಜ್ಞಮೇವ ಚ ॥ ೩೩ ॥

ಪೂಜಿತಾ ಮಾನಿತಾ ಪುಣ್ಯಾ ಧೂಪಗಂಧಾದಿಭಿಸ್ತಥಾ ।
ಬ್ರಾಹ್ಮಣಂ ಪೃಚ್ಛತೀ ಜ್ಞಾನಂ ಕದೈಷ್ಯತಿ ಪತಿರ್ಮಮ ॥ ೩೪ ॥

॥ ಬ್ರಾಹ್ಮಣ ಉವಾಚ ॥

ಭರ್ತುರ್ಶಾಗಮನಂ ಭದ್ರೇ ತವೈವಂ ವದತಿ ಧ್ರುವಂ ।
ದಿನಾನಾಂ ಸಪ್ತಕಾತ್ಪೂರ್ವಮಾಗಮಿಷ್ಯತಿ ನಾನ್ಯಥಾ ॥ ೩೫ ॥

---

೩೨. ಹಕ್ಕಿಯ ಆ ಮಾತಿನ ಪ್ರಭಾವದಿಂದಲೂ, ಗಂಡನು ಬರುವುದರಿಂದಲೂ, ಆಕೆಯು ಸಂತೋಷಗೊಂಡು ಹೃಷ್ಟಪುಷ್ಟಳಾಗಿ ಸ್ಥಿರಮನಸ್ಸುಳ್ಳವಳಾಗುತ್ತಾಳೆ. ಸಂಶಯವಿಲ್ಲ. ಎಂದು ಹೇಳಿ,

೩೩. ಆ ಸತ್ಯನು ಪ್ರಜ್ಞೆಯನ್ನು ಕಳುಹಿಸಲು ಅವಳು ಸುಕಲೆಯ ಮನೆಗೆ ಹೋದಳು. ಅಲ್ಲಿ ಹಕ್ಕಿಯ ರೂಪವನ್ನು ತಾಳಿ ಸಂತೋಷಗೊಂಡು ಅದೃಷ್ಟ ದ್ಯೋತಕವಾದ ಮಹಾಶಬ್ದವನ್ನು ಮಾಡಿತು.

೩೪. ಇದನ್ನು ಕೇಳಿ ಆಕೆಯು ಆ ಹಕ್ಕಿಯನ್ನು ಗಂಧಾದಿಗಳಿಂದ ಪೂಜಿಸಿ, ಗೌರವಿಸಿದಳು. ಜ್ಯೋತಿಷ್ಕನಾದ ಬ್ರಾಹ್ಮಣನನ್ನು ಕರೆದು, ನನ್ನ ಗಂಡನು ಯಾವಾಗ ಬರುವನು ಎಂದು ಕೇಳಿದಳು.

೩೫. ಬ್ರಾಹ್ಮಣನು ಹೇಳಿದನು—ನಿನ್ನ ಗಂಡನ ಬರುವಿಕೆಯನ್ನು ಈ ಪಕ್ಷಿಯು ಹೇಳುತ್ತದೆ, ಇದು ನಿಜ. ಆದರೆ ನಿನ್ನ ಗಂಡನು ಒಂದುವಾರದ ಮೇಲೆ ಬರುತ್ತಾನೆ. ಸಂಶಯಪಡಬೇಕಾಗಿಲ್ಲ ಎಂದನು..

ಇತ್ಯೇವಮಾಕರ್ಣ್ಯ ಸುಮಂಗಳಂ ವಚಃ
ಪ್ರಹರ್ಷಯುಕ್ತಾ ಸಹಸಾ ಬಭೂವ ।
ಧರ್ಮಜ್ಞಮೇಕಂ ಸುಗುಣಂ ಚ ಕಾಂತಂ
ಕೃತಪ್ರತಿಷ್ಠಂ ಹಿ ಸಮಾಗತಂ ತಂ　　　　॥ ೩೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಷಟ್ಪಂಚಾಶತ್ತಮೋಽಧ್ಯಾಯಃ

---

೩೬. ಈ ರೀತಿಯಾದ ಮಂಗಳಕರವಾದ ಮಾತನ್ನು ಕೇಳಿ ಆಕೆಯು ಸಂತೋಷಗೊಂಡಳು. ಧರ್ಮಜ್ಞನಾದ, ಯೋಗ್ಯತೆಯನ್ನು ಪಡೆದ ತನ್ನ ಕಾಂತನು ಬಂದನೆಂದೇ ತಿಳಿದು ಹರ್ಷಿತಳಾದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ 'ಭೂಮಿಖಂಡೇ ಸಪ್ತಪಂಚಾಶತ್ತಮೋಽಧ್ಯಾಯಃ

---

॥ ವಿಷ್ಣುರುವಾಚ ॥

ಕ್ರೀಡಾ ಸತೀರೂಪಧರಾ ಸುಭೂತ್ವಾ
ಗೇಹೇ ಗತಾ ಚಾರುಪತಿವ್ರತಾಯಾಃ ।
ತಾಮಾಗತಾಂ ಸಂಮುಖಂ ರೂಪಯುಕ್ತಾಂ
ಸಾ ಸಾದರಂ ವಾಕ್ಯಮುವಾಚ ಧನ್ಯಾ ॥ ೧ ॥

ವಾಕ್ಯೈಸ್ಸುಪುಣ್ಯೈಃ ಪರಿಪೂಜಿತಾ ಸಾ
ಉವಾಚ ಕ್ರೀಡಾ ಸುಕಲಾಂ ವಿಹಸ್ಯ ।
ಮಾಯಾನುಗಂ ವಿಶ್ವವಿಮೋಹನಂ ಸತೀ
ಪ್ರತ್ಯುತ್ತರಂ ಸತ್ಯಪ್ರಮೇಯಯುಕ್ತಂ ॥ ೨ ॥

---

## ಐವತ್ತೇಳನೆಯ ಅಧ್ಯಾಯವು

೧. ವಿಷ್ಣುವು ಹೇಳಿದನು--ಇತ್ತ ರತಿಯು ಹೆಂಗಸಿನ ರೂಪವನ್ನು ತಾಳಿ ಆ ಪತಿವ್ರತೆಯ ಮನೆಗೆ ಹೋದಳು. ಹಾಗೆ ಬಂದ ಆ ಸುಂದರಿಯನ್ನು ಸುಕಲೆಯು ನೋಡಿ ನೀನು ಯಾರಮ್ಮ ಎಂದು ಆದರದಿಂದ ಮಾತನಾಡಿಸಿದಳು.

೨. ಮನೆಗೆ ಬಂದಮೇಲೆ ನಾಲ್ಕಾರು ಒಳ್ಳೆಯ ಕುಶಲ ಪ್ರಶ್ನೆಗಳಾದನಂತರ ಆ ರತಿಯು ಸುಕಲೆಯನ್ನು ನೋಡಿ ನಗುತ್ತ, ಮಾಯಾರೂಪವಾದ ಮತ್ತು ವಿಶ್ವಕ್ಕೆಲ್ಲಾ ವಿಮೋಹಕವಾದ, ಸತ್ಯದಂತೆ ತೋರುವ ಮಾತನ್ನಾಡಿದಳು.

ಮಮಾಪಿ ಭರ್ತಾ ಕೃಕಲೋ ಗುಣಜ್ಞಃ
ಧೀರಸ್ಸುವಿದ್ವಾನ್ ಮಹಿಮಾಪ್ರಯುಕ್ತಃ ।
ತ್ಯಕ್ತ್ವಾ ಗತಃ ಪುಣ್ಯತರಃ ಸುಪುಣ್ಯಾಂ
ಮಾನೇವ ನಾಥಃ ಶೃಣು ಪುಣ್ಯಕೀರ್ತಿಃ ॥ ೩ ॥

ವಾಕ್ಯೈಸ್ಸುಪುಣ್ಯೈಸ್ಸುಕಲಾಸುಯುಕ್ತೈಃ
ಪರಿಷ್ವಜೇನ್ಮೇ ಸುಕಲಾತ್ಮನಾ ಕೈಃ ।
ಆಕರ್ಣ್ಯ ಸರ್ವಂ ಸುಕಲಾ ತದುಕ್ತಂ
ಸಾ ಶುದ್ಧಭಾವಂ ಚ ಪ್ರಭಾಷಯೇತ್ತಾಂ ॥ ೪ ॥

ಕಸ್ಮಾದ್ಗತಸ್ಸುಂದರಿ ನಾಥ ತೇऽದ್ಯ
ವಿಹಾಯ ತ್ವಾಂ ರೂಪವತೀಂ ಚ ಸಾಧ್ವೀಂ ।
ಆಖ್ಯಾತು ಸರ್ವಂ ಭವತೀ ಸ್ವಭರ್ತುಃ
ಸಖೀಸ್ವರೂಪಾ ಗೃಹಮಾಗತಾ ಮೇ ॥ ೫ ॥

---

೩-೪. ಇದನ್ನು ಕೇಳಿ ಸುಕಲೆಯು—ನನ್ನ ಗಂಡನು ಕೃಕಲನು. ಆತನು ಮಹಾ ಗುಣವಂತನು, ಧೀರನು, ವಿದ್ವಾಂಸನು, ಮಹಾ ಮಹಿಮೆಯುಳ್ಳವನು. ಕಾರ್ಯಾಂತರದಿಂದ ನನ್ನನ್ನು ಬಿಟ್ಟುಬಿಟ್ಟು'ಹೊರಟುಹೋಗಿದ್ದಾನೆ, ಅವನು ಹಿಂತಿರುಗಿ ಬಂದು ನನ್ನನ್ನು ಆಲಂಗಿಸಿ, ಪ್ರೀತಿಯುಕ್ತವಾದ ಮಾತುಗಳನ್ನು ಆಡಿ ನನ್ನನ್ನು ಸಂತೋಷಗೊಳಿಸುವನು. ಎಂದು ಮುಂತಾಗಿ ಸುಕಲೆಯು ಒಳ್ಳೆಯ ಚಾಟು ಮಾತುಗಳಿಂದ ಆ ರತಿಯನ್ನು ಮಾತನಾಡಿಸುತ್ತಲಿದ್ದಳು.

೫. ಇದನ್ನು ಕೇಳಿ ರತಿಯು ನಿನ್ನ ಗಂಡನು ಇಂತಹ ಸುಂದರಿಯಾದ ಸಾಧ್ವೀಮಣಿಯನ್ನು ಬಿಟ್ಟು ಏಕೆ ಹೋದನು? ನಿನ್ನ ಮನೆಗೆ ಬಂದಿರುವ ನಾನು ನಿನ್ನ ಆಪ್ತ ಸಖಿಯೆಂದು ತಿಳಿದು ನಿನ್ನ ಗಂಡನ ವಿಷಯವೆಲ್ಲವನ್ನೂ ನನಗೆ ತಿಳಿಸು. ಎನ್ನಲು,

ಕ್ರೀಡಾ ಬಭಾಷೇ ಶೃಣು ಸತ್ಯಮೇತ
ಚ್ಚಾರಿತ್ರಜಾತಂ ಮಮ ಭರ್ತುರಸ್ಯ ।
ಅಹಂ ಪ್ರಿಯೇ ತಸ್ಯ ಸದೈವ ಯುಕ್ತಾ
ಯದಿಚ್ಛತೇ ತಂ ಪರಿಸಾಧಯಾಮಿ ॥ ೬ ॥

ಕರ್ಮಸ್ವಪುಣ್ಯಂ ವಚನಂ ಸ್ವಭರ್ತುರ್
ಧ್ಯಾನೋಪಯುಕ್ತಾ ಸಕಲಂ ಕರೋಮಿ ।
ಏಕಾಂತಶೀಲಸ್ಯ ಗುಣೈಕಧಾಮ್ನಃ
ಸುಭಾಷಿತಂ ಕಾಂತಮಿಹೈವ ದೇವಿ ॥ ೭ ॥

ಮಮ ಪೂರ್ವವಿಪಾಕೋಽಯಂ ಸಂಪ್ರತ್ಯೇವಂ ಪ್ರವರ್ತತೇ ।
ಯತಸ್ತ್ಯಕ್ತ್ವಾ ಗತೋ ಭರ್ತಾ ಮಾಮೇವಂ ಮಂದಭಾಗಿನೀಂ ॥ ೮ ॥

ಸಖೇ ನ ಧಾರಯೇ ಜೀವಂ ಸ್ವಕೀಯಂ ಕಾಯಮೇವ ಚ ।
ಪತ್ಯಾ ವಿನಾ ಕಥಂ ನಾರ್ಯಃ ಸುಜೀವಂತಿ ಚ ನಿರ್ಘೃಣಾಃ ॥ ೯ ॥

---

೬. ಕ್ರೀಡೆಯು ಹೇಳಿದ ಆ ಮಾತಿಗೆ ಆ ಸುಕಲೆಯು ನನ್ನ ಗಂಡನು ಸತ್ಯವಂತನು ಸದಾಭಾವನಿಷ್ಠನು. ನಾನು ಅವನಿಗೆ ಯಾವಾಗಲೂ ಪ್ರೀತಿಪಾತ್ರಳು. ಅವನು ಹೇಳಿದುದನ್ನೆಲ್ಲಾ ಮಾಡಿಕೊಡುತ್ತೇನೆ.

೭. ಆ ನಾಥನು ಮನಸ್ಸಿನಲ್ಲಿ ಮಾಡಿಕೊಂಡರೆ ಸಾಕು. ನಾನು ಅದನ್ನು ತಿಳಿದುಕೊಂಡು ಎಲ್ಲವನ್ನೂ ಮಾಡುತ್ತೇನೆ. ಆತನು ಗುಣಿಯು. ಅವನಾಡುವ ಏಕಾಂತದಮಾತೇ ನನಗೆ ಹಿತವು.

೮. ಆ ರೀತಿಯಾದ ಗಂಡನು ಮಂದಭಾಗ್ಯಳಾದ ನನ್ನನ್ನು ಬಿಟ್ಟು ಹೋದ ನೆಂದರೆ ಅದು ನನ್ನ ಪೂರ್ವ ಜನ್ಮದ ಪಾಪಶೇಷವಲ್ಲದೆ ಬೇರೆಯಲ್ಲ. ಆ ಪಾಪಕರ್ಮವು ಈಗ ಫಲಕೊಡುತ್ತದೆ.

೯. ಎಲೌ ಸಖಿಯೆ, ನನ್ನ ಈ ಪ್ರಾಣ ಉಳಿಯುವುದಿಲ್ಲ. ನಾನು ಈ ದೇಹ ವನ್ನು ಧರಿಸಲಾರೆ. ಹೆಂಗಸರು ಗಂಡನಿಲ್ಲದಿದ್ದರೆ ಸುಖವಾಗಿ ಜೀವಿಸುವುದು ಹೇಗೆ?

ರೂಪಸೌಭಾಗ್ಯ ಶೃಂಗಾರಸುಖಂ ಸಂಪತ್ತಿರೇವ ಚ ।
ನಾರೀಣಾಂ ಹಿ ಮಹಾಭಾಗೇ ಭರ್ತಾ ಶಾಸ್ತ್ರೇಷು ಗೀಯತೇ ॥ ೧೦ ॥

ತಚ್ಚ ಸರ್ವಂ ಸಮಾಕರ್ಣ್ಯ ಯದುಕ್ತಂ ಕ್ರೀಡಯಾ ತದಾ ।
ಸತ್ಯಭಾವಂ ವಿದಿತ್ವಾಸ್ಯಾಃ ಸರ್ವಂ ಸಂಭಾಷಿತಂ ತಥಾ ॥ ೧೧ ॥

ವಿಷಣ್ಣಾ ಸಾ ಮಹಾಭಾಗಾ ಸುಕಲಾ ಪತಿದೇವತಾ ।
ತಾಮುವಾಚ ತತಸ್ಸರ್ವಮಾತ್ಮಚೇಷ್ಟಾನುಗಂ ವಚಃ ॥ ೧೨ ॥

ಸಮಾಸೇನ ಸಮಾಖ್ಯಾತಂ ಪೂರ್ವವೃತ್ತಾಂತಮಾತ್ಮನಃ ।
ಯಥಾ ಭರ್ತಾ ಗತೋ ಯಾತ್ರಾಂ ಪುಣ್ಯಸಾಧನತತ್ಪರಃ ॥ ೧೩ ॥

ಆತ್ಮದುಃಖಂ ಸುಖಂ ಚೋಕ್ತ್ವಾ ವಿರರಾಮ ಮನಸ್ವಿನೀ ।
ಬೋಧಿತಾ ಕ್ರೀಡಯಾ ಸಾ ತು ಸಮಾಶ್ವಾಸ್ಯ ಪತಿವ್ರತಾ ॥ ೧೪ ॥

---

೧೦. ರೂಪ, ಸೌಭಾಗ್ಯ, ಶೃಂಗಾರ, ಸುಖ, ಸಂಪತ್ತು ಇವೆಲ್ಲವೂ ಹೆಂಗಸರಿಗೆ ಗಂಡನೇ ಎಂಬದಾಗಿ ಶಾಸ್ತ್ರಗಳಲ್ಲಿ ಹೇಳಿದೆ ಎಂದಳು.

೧೧. ಕ್ರೀಡೆಯು ಅದೆಲ್ಲವನ್ನೂ ಕೇಳಿ ಈಕೆಯ ಸತ್ಯಬುದ್ಧಿಯನ್ನು ತಿಳಿದು ಕೊಂಡಳು. ವಿಷಯವೆಲ್ಲವನ್ನೂ ಗ್ರಹಿಸಿದಳು.

೧೨. ಹೀಗೆ ಹೇಳಿ ಪತಿವ್ರತೆಯಾದ ಆ ಸುಕಲೆಯು ಗಂಡನನ್ನು ನೆನೆದು ದುಃಖಿತಳಾದಳು ಮತ್ತು ತಾನು ಮಾಡುವ ಕೆಲಸಗಳಿಗೆ ಅನುಸಾರವಾದ ಮಾತ ನ್ನಾಡಿದಳು.

೧೩-೧೪. ತೀರ್ಥಯಾತ್ರಾಸಕ್ತನಾಗಿ ಗಂಡನು ಹೋದ ರೀತಿಯನ್ನೂ, ತನ್ನ ಪೂರ್ವ ವೃತ್ತಾಂತವನ್ನೂ ಸಂಗ್ರಹವಾಗಿ ಆಕೆಗೆ ತಿಳಿಸಿ ತನ್ನ ಸುಖದುಃಖಗಳನ್ನು ಹೇಳಿಕೊಂಡು ನಿಟ್ಟುಸಿರುಬಿಡುತ್ತಾ ದುಃಖಗೊಂಡಳು. ಕ್ರೀಡೆಯು ಆಕೆಯನ್ನು ಸಮಾಧಾನಪಡಿಸಿ ಪೂರ್ವ ಸ್ಥಿತಿಗೆ ತಂದಳು.

॥ ಸೂತ ಉವಾಚ ॥

ಏಕದಾ ತು ತಯಾ ಪ್ರೋಕ್ತಂ ಕ್ರೀಡಯಾ ಸುಕಲಾಂ ಪ್ರತಿ ।
ಸಖಿ ಪಶ್ಯ ವನಂ ಸೌಮ್ಯಂ ದಿವ್ಯೈರ್ವೃಕ್ಷೈರಲಂಕೃತಂ ॥ ೧೫ ॥

ತತ್ರ ತೀರ್ಥಂ ಪರಂ ಪುಣ್ಯಮಸ್ತಿ ಪಾತಕನಾಶನಂ ।
ನಾನಾವಲ್ಲೀವಿತಾನೈಶ್ಚ ಸುಪುಣ್ಯೈಃ ಪರಿಶೋಭಿತಂ ॥ ೧೬ ॥

ಆವಾಭ್ಯಾಮಪಿ ಗಂತವ್ಯಂ ಪುಣ್ಯಹೇತೋರ್ವರಾನನೇ ।
ಸಮಾಕರ್ಣ್ಯ ತಯಾ ಸಾರ್ಧಂ ಸುಕಲಾ ಮಾಯಯಾ ತದಾ ॥ ೧೭ ॥

ಪ್ರವಿವೇಶ ವನಂ ದಿವ್ಯಂ ನಂದನೋಪಮಮೇವ ಸಾ ।
ಸರ್ವರ್ತುಕುಸುಮೋಪೇತಂ ಕೋಕಿಲಾಶತನಾದಿತಂ ॥ ೧೮ ॥

ಗೀಯಮಾನಂ ಸುಮಧುರೈರ್ನಾದೈರ್ಮಧುಕರೈರಪಿ ।
ಕೂಜದ್ಭಿಃ ಪಕ್ಷಿಭಿಃ ಪುಣ್ಯೈಃ ಪುಣ್ಯಧ್ವನಿಸಮಾಕುಲಂ ॥ ೧೯ ॥

ಚಂದನಾದಿಸುವೃಕ್ಷೈಶ್ಚ ಸೌರಭ್ಯೈಶ್ಚ ವಿರಾಜಿತಂ ।
ಸರ್ವಭಾವೈಸ್ಸುಸಂಪೂರ್ಣಂ ಮಾಧವ್ಯಾ ಮಾಧವೇನ ವೈ ॥ ೨೦ ॥

---

೧೫. ಸೂತನು ಹೇಳಿದನು—ಹೀಗಿರುವಲ್ಲಿ ಒಂದು ಸಾರಿ ಆ ಕ್ರೀಡೆಯು, ಸುಕಲೆಯನ್ನು ಕುರಿತು ಎಲೈ ಸಖಿಯೇ, ಈ ವನವನ್ನು ನೋಡು ಎಷ್ಟು ರಮ್ಯ ವಾಗಿದೆ. ಮನೋಹರವಾದ ಮರಗಳಿಂದ ಅಲಂಕೃತವಾಗಿವೆ.

೧೬. ಅಲ್ಲಿ ಅನೇಕವಾದ ಬಳ್ಳಿಗಳಿಂದ ಚಪ್ಪರದಂತಿರುವ ಲತಾಗೃಹಗಳಿಂದ ಶೋಭಿಸುತ್ತಲಿರುವ, ಪಾಪನಾಶಕವಾದ ಒಂದು ತೀರ್ಥವಿದೆ. ನಾವಿಬ್ಬರೂ ಅಂತಹ ಪವಿತ್ರವಾದ ಸ್ಥಳಕ್ಕೆ ವಿಹಾರಾರ್ಥವಾಗಿ ಹೋಗೋಣ ಎಂದಳು.

೧೭. ಹಾಗೆಯೇ ಆಗಲೆಂದು ಆ ಸುಕಲೆಯು ಮಾಯಾವತಿಯಾದ ಕ್ರೀಡೆ ಯೊಡನೆ ನಂದನವನದಂತೆ ದಿವ್ಯವಾದ ಆ ವನಕ್ಕೆ ಹೋದಳು.

೧೮-೨೦. ಆ ದಿವ್ಯವನವಾದರೋ ಈ ಸುಕಲೆಯ ಬುದ್ಧಿಯನ್ನು ಚಂಚಲ ಗೊಳಿಸುವ ಸಲುವಾಗಿಯೇ ಮನ್ಮಥನಿಂದ ರಚಿಸಲ್ಪಟ್ಟಿದ್ದಿತು. ಆದುದರಿಂದ ಅದರ ಸೊಬಗನ್ನು ಕೇಳಬೇಕೇ? ಅಲ್ಲಿರುವ ವೃಕ್ಷಗಳು ಸಮಸ್ತ ಋತುಗಳ ಪುಷ್ಪಗಳಿಂದ

ಚರಿತಂ ಮೋಹನಾಯೈವ ಸುಕಲಾಯಾಶ್ಚ ಕಾರಣಾತ್ ।
ತಯಾ ಸಾರ್ಧಂ ಪ್ರವಿಷ್ಟಾ ಸಾ ತದ್ವನಂ ಸರ್ವಭಾವನಂ ॥ ೨೧ ॥

ದದರ್ಶ ಸೌಖ್ಯದಂ ಪುಣ್ಯಂ ಮಾಯಾಭಾವಂ ನ ವಿಂದತಿ ।
ಪಶ್ಯಮಾನಾ ವನಂ ದಿವ್ಯಂ ತಯಾ ಸಹ ಜನೇಶ್ವರ ॥ ೨೨ ॥

ಸಕೌತುಕಾನ್ಯನೇಕಾನಿ ದೈವಯುಕ್ತಾನಿ ತಾನಿ ಸಾ ।
ತಯಾ ರತ್ಯಾ ಸುಸಂಯುಕ್ತಃ ಕಾಮಶ್ಶಕ್ರಸಮಾಗತಃ ॥ ೨೩ ॥

ಸರ್ವಭೋಗಪತಿರ್ಭೂತ್ವಾ ಕಾಮಲೀಲಾಸಮಾಕುಲಃ ।
ಕಾಮದೇವಂ ಸಮಾಭಾಷ್ಯ ಏಷಾ ಸಾ ಸುಕಲಾಽಽಗತಾ ॥ ೨೪ ॥

ಪ್ರಹರಸ್ವ ಮಹಾಭಾಗಾಂ ಕ್ರೀಡಾಯಾಃ ಪುರತಃಸ್ಥಿತಾಂ ।
ಮಾಯಾಂ ಕೃತ್ವಾ ಸಮಾನೀತಾಂ ಕ್ರೀಡಯಾ ತವ ಸನ್ನಿಧೌ ।
ಪೌರುಷಂ ದರ್ಶಯಾದ್ಯೈವ ಯದ್ಯಸ್ತಿ ಕುರು ನಿಶ್ಚಿತಂ ॥ ೨೫ ॥

---

ಅಲಂಕೃತವಾಗಿದ್ದವು. ದುಂಬಿಗಳ ಝೇಂಕಾರಧ್ವನಿಯು, ಪಂಚಮಸ್ವರದಿಂದ ಧ್ವನಿಗೈಯ್ಯುತ್ತಿರುವ ಕೋಗಿಲೆಗಳ ಕುಹೂರವವು, ಚಂದನ ವೃಕ್ಷಗಳ ಘಮಘಮಿಸುತ್ತಿರುವ ಪರಿಮಳದ ಸುವಾಸನೆಯು, ಮಧುರವಾಗಿ ಗಾನಮಾಡುತ್ತಿರುವ ಪಕ್ಷಿಗಳ ಕಿಲಕಿಲಧ್ವನಿಯು ಇವುಗಳಿಂದ ಆ ವನವು ಅತಿರಮ್ಯವಾಗಿ, ನೋಡುವವರ ಮನಸ್ಸನ್ನು ಸೂರೆಗೊಳ್ಳುತ್ತಿತ್ತು.

೨೧. ಸರ್ವವಿಷಯದಲ್ಲೂ ಪೂರ್ತಿಯಾಗಿ ಕಂಗೊಳಿಸುತ್ತಿರುವ ಆ ವನವನ್ನು ಕ್ರೀಡೆಯೊಡನೆ ಹೊಕ್ಕಳು. ಆದರೆ ಅದರ ಮಾಯಾಭಾವವನ್ನು ಮಾತ್ರ ತಿಳಿಯಲಿಲ್ಲ.

೨೨-೨೩. ಹೀಗೆ ಆ ಕ್ರೀಡೆಯೊಡನೆ ಆಶ್ಚರ್ಯದಿಂದ ದೇವನಿರ್ಮಿತವಾದ ಆ ವನವನ್ನು ನೋಡುತ್ತಿರುವಲ್ಲಿ ಆ ರತಿಯೊಡಗೂಡಿ ಕಾಮನೂ, ಇಂದ್ರನೂ, ಅಲ್ಲಿಗೆ ಬಂದರು.

೨೪-೨೫. ಸ್ವರಭೋಗಗಳನ್ನೂ ಅನುಭವಿಸುತ್ತಾ ಕಾಮಲೀಲೆಗಳಿಂದ ಕೂಡಿದ ಆ ಇಂದ್ರನು ಕಾಮನನ್ನು ಕುರಿತು ಇಗೋ ಆ ಸುಕಲೆಯು ಬಂದಿದ್ದಾಳೆ. ಕ್ರೀಡೆಯು ಮಾಯೆಯನ್ನು ತಾಳಿ ಅವಳನ್ನು ನಿನ್ನೆದುರಿಗೆ ಕರೆತಂದಿದ್ದಾಳೆ. ಕ್ರೀಡೆಯ ಮುಂದುಗಡೆ ಬರುತ್ತಿರುವ ಆಕೆಯನ್ನು ನಿನ್ನ ಪುಷ್ಪಬಾಣದಿಂದ ಹೊಡೆ. ನೀನು ಧೈರ್ಯವಂತನಾಗಿದ್ದರೆ ಎಚ್ಚೆ, ನಿನ್ನ ಪೌರುಷವನ್ನು ತೋರಿಸು ಎಂದನು.

॥ ಕಾಮ ಉವಾಚ ॥

ಆತ್ಮರೂಪಂ ದರ್ಶಯಸ್ವ ಚತುರಂ ಲೀಲಯಾನ್ವಿತಂ ।
ಯೇನಾಹಂ ಪ್ರಹರೇ ತ್ವೇನಾಂ ಪಂಚಬಾಣೈಸ್ಸಹಸ್ರದೃಕ್ ॥ ೨೬ ॥

॥ ಇಂದ್ರ ಉವಾಚ ॥

ಕ್ವಾಸ್ತೇ ಸುಪೌರುಷಂ ಮೂಢ ಯೇನ ಲೋಕಂ ವಿತನ್ವಿತಂ ।
ಮಮಾಧಾರಪರೋ ಭೂತ್ವಾ ಯೋದ್ಧುಮಿಚ್ಛಸಿ ಸಾಂಪ್ರತಂ ॥ ೨೭ ॥

॥ ಕಾಮ ಉವಾಚ ॥

ತೇನಾಪಿ ದೇವದೇವೇನ ಮಹಾದೇವೇನ ಶೂಲಿನಾ ।
ಪೂರ್ವಮೇವ ಹತಂ ರೂಪಂ ಮಮ ಕಾಯೋ ನ ವಿದ್ಯತೇ ॥ ೨೮ ॥

ಇಚ್ಛಾಮ್ಯಹಂ ಯದಾ ನಾರೀಂ ಹಂತುಂ ಶೃಣುಷ್ವ ಸಾಂಪ್ರತಂ ।
ಪುಂಸಃ ಕಾಯಂ ಸಮಾಶ್ರಿತ್ಯ ಹ್ಯಾತ್ಮರೂಪಂ ಪ್ರದರ್ಶಯೇ ॥ ೨೯ ॥

ಪುಮಾಂಸಂ ವಾ ಸಹಸ್ರಾಕ್ಷ ನಾರ್ಯಾಃ ಕಾಯಂ ಸಮಾಶ್ರಯೇ ।
ಪೂರ್ವಂ ದೃಷ್ಟ್ವಾ ಯದಾ ನಾರೀಂ ತಾಮೇವ ಪರಿಚಿಂತಯೇತ್ ॥ ೩೦ ॥

---

೨೬. ಕಾಮನು ಹೇಳಿದನು—ಲೀಲೆಯಿಂದ ಕೂಡಿರುವ ಮನೋಹರವಾದ ನಿನ್ನ ಸುಂದರಾಕಾರವನ್ನು ಆಕೆಗೆ ತೋರಿಸು. ಆಗ ನಾನು ಪಂಚಬಾಣಗಳಿಂದ ಆಕೆಯನ್ನು ಪ್ರಹರಿಸುತ್ತೇನೆ ಎನ್ನಲು,

೨೭. ಇಂದ್ರನು ಹೇಳಿದನು—ಎಲೈ, ಮೂಢನೇ, ಲೋಕದ ಜನರನ್ನೆಲ್ಲಾ ಮೋಹಗೊಳಿಸಿದ ಆ ನಿನ್ನ ಪೌರುಷವೆಲ್ಲಿದೆ? ಈಗ ನನ್ನನ್ನೇ ಆಧಾರವಾಗಿಟ್ಟು ಕೊಂಡು ಯುದ್ಧಮಾಡಬೇಕೆನ್ನುವೆಯಲ್ಲ?

೨೮. ಆ ದೇವದೇವನಾದ ಶಂಭುವು ಪೂರ್ವದಲ್ಲೇ ನನ್ನ ದೇಹವನ್ನು ನಾಶ ಮಾಡಿದನು. ನನಗೆ ಶರೀರವೇ ಇಲ್ಲವಲ್ಲ?

೨೯. ಕಾಮನು ಹೇಳಿದನು—ಅಯ್ಯಾ ಕೇಳು. ನಾನು ಹೆಂಗಸನ್ನು ಬಾಣ ದಿಂದ ಹೊಡೆಯಬೇಕಾಗಿ ಬಂದಾಗ ಗಂಡಸರ ದೇಹವನ್ನಾಶ್ರಯಿಸಿ ನನ್ನ ರೂಪವನ್ನು ತೋರಿಸಿ ಕೊಳ್ಳುತ್ತೇನೆ.

೩೦. ಗಂಡಸನ್ನು ಹೊಡೆಯಬೇಕಾದ್ದಲ್ಲಿ ಹೆಂಗಸಿನ ದೇಹವನ್ನು ಆಶ್ರಯಿ ಸುತ್ತೇನೆ.

**ಚಿಂತ್ಯಮಾನಸ್ಯ ಪುಂಸಸ್ತು ನಾರೀರೂಪಂ ಪುನಃ ಪುನಃ ।**
**ಅದೃಷ್ಟಂ ತತ್ಸಮಾಶ್ರಿತ್ಯ ಪುಂಸಮುನ್ಮಾದಯಾಮ್ಯಹಂ ॥ ೩೧ ॥**

**ತಥಾಪ್ಯುನ್ಮಾದಯಾಮ್ಯೇವ ನಾರ್ಯಾಗಮನಸಂಶಯಃ ।**
**ಸಂಸ್ಮರಣಾತ್ ಸ್ಮರೋ ನಾಮ ಮಮ ಜಾತಂ ಸುರೇಶ್ವರ ॥ ೩೨ ॥**

**ತಾದೃಶೋಽತಾದೃಶೋ ರಂಗವಸ್ತುರೂಪಂ ಸಮಾಶ್ರಯೇ ।**
**ಆತ್ಮತೇಜಃಪ್ರಕಾಶೇನ ಬಾಧ್ಯಬಾಧಕತಾಂ ವ್ರಜೇತ್ ॥ ೩೩ ॥**

**ನಾರೀರೂಪಂ ಸಮಾಶ್ರಿತ್ಯ ಧೀರಂ ಪುರುಷಂ ಪ್ರಮೋಹಯೇತ್ ।**
**ಪುರುಷಂ ತು ಸಮಾಶ್ರಿತ್ಯ ಭಾವಯಾಮಿ ಸುಯೋಷಿತಂ ॥ ೩೪ ॥**

**ರೂಪಹೀನೋಽಸ್ಮಿ ಹೇ ಇಂದ್ರ ಅಸ್ಮದ್ರೂಪಂ ಸಮಾಶ್ರಯೇತ್ ।**
**ತವ ರೂಪಂ ಸಮಾಶ್ರಿತ್ಯ ತಾಂ ಸಾಧಯೇ ಯಥೇಪ್ಸಿತಾಂ ॥ ೩೫ ॥**

---

೩೧. ಆ ನಾರೀ ರೂಪವನ್ನು ಚಿಂತಿಸುತ್ತಿರುವ ಗಂಡಸಿಗೆ ಆ ಹೆಂಗಸನ್ನು ಕಾಣದಂತೆ ಮಾಡಿ ಅದೇ ಚಿಂತೆಯಿಂದ ಆತನು ಹುಚ್ಚನಾಗುವಂತೆ ಮಾಡುತ್ತೇನೆ.

೩೨. ಅದೇ ರೀತಿ ಹೆಂಗಸನ್ನು ಆಶ್ರಯಿಸಿ, ಅವಳಿಗೆ ಸುಂದರ ಪುರುಷನನ್ನು ತೋರಿಸಿ ಅವನಲ್ಲಿ ಆಸಕ್ತಿಯುಂಟಾಗುವಂತೆ ಮಾಡಿ ಬಳಿಕ ಆ ಹೆಂಗಸನ್ನು ಹುಚ್ಚಳನ್ನಾಗಿ ಮಾಡುತ್ತೇನೆ. ಈ ರೀತಿ ಪ್ರಿಯ ವಸ್ತುವನ್ನು ಚೆನ್ನಾಗಿ ಸ್ಮರಣೆಮಾಡುವುದರಿಂದ ಸ್ಮರನೆಂದು ನನಗೆ ಹೆಸರಾಯಿತು.

೩೩-೩೪. ನಾನು ಒಂದು ವಸ್ತುವನ್ನು ಆಶ್ರಯಿಸುವುದಲ್ಲದೆ ಅದಕ್ಕೆ ವ್ಯತಿರಿಕ್ತವಾದ ಪದಾರ್ಥವನ್ನೂ ಆಶ್ರಯಿಸುತ್ತೇನೆ. ನನ್ನ ತೇಜಸ್ಸು ಎಲ್ಲಿದೆಯೋ ಅದು ಬಾಧಕವಾಗಿಯೂ ಮತ್ತೊಂದು ಬಾಧ್ಯವಾಗಿಯೂ ಆಗುತ್ತದೆ. ಬಾಧಕವೆಂದರೆ ತೊಂದರೆಪಡಿಸುವುದು. ಬಾಧ್ಯವೆಂದರೆ ತೊಂದರೆ ಹೊಂದುವುದು, ಎಂದರೆ, ಹೆಂಗಸಿನ ರೂಪಹೊಂದಿ ಧೀರನಾದ ಗಂಡಸನ್ನೂ, ಗಂಡಸನ್ನು ಹೊಂದಿ ಪತಿವ್ರತೆಯಾದ ಹೆಂಗಸನ್ನು ಸ್ವಾಧೀನಪಡಿಸಿಕೊಳ್ಳುತ್ತೇನೆ.

೩೫. ಎಲೈ ಇಂದ್ರನೇ, ನಾನು ಆಕಾರವಿಲ್ಲದವನು. ಆದ್ದರಿಂದ ನನಗೆ ಬೇರೊಂದು ಆಕಾರವು ಆವಶ್ಯಕವು. ನಿನ್ನ ಆಕಾರವನ್ನು ಹೊಂದಿ ಎಂದರೆ ನಿನ್ನ ಆಕಾರದಲ್ಲಿ ಅವಳಿಗೆ ಕಾಮವಿಕಾರವುಂಟಾಗುವಂತೆ ಮಾಡಿ ಅವಳ ಚಿತ್ತಸ್ಥೈರ್ಯವನ್ನು ನಾಶಮಾಡುತ್ತೇನೆ.

ಏವಮುಕ್ತ್ವಾ ಸ ದೇವೇಂದ್ರಂ ಕಾಯಂ ತಸ್ಯ ಮಹಾತ್ಮನಃ ।
ಸಖಾಸೌ ಮಾಧವಸ್ಯಾಪಿ ಹ್ಯಾಶ್ರಿತ್ಯ ಕುಸುಮಾಯುಧಃ ॥ ೩೬ ॥

ತಾಮೇವ ಹಂತುಂ ಕುಸುಮಾಯುಧೋಽಪಿ
ಸಾಧ್ವೀಂ ಸುಪುಣ್ಯಾಂ ಕೃಕಲಸ್ಯ ಭಾರ್ಯಾಂ ।
ಸಮುತ್ಸುಕಸ್ತಿಷ್ಠತಿ ಬಾಣಪಾಣಿ
ರ್ಲಕ್ಷ್ಯಂ ತು ತಸ್ಯಾ ನಯನಂ ವಿಲೋಕ್ಯ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಸಪ್ತಪಂಚಾಶತ್ತಮೋಧ್ಯಾಯಃ

---

೩೬. ಹೀಗೆಂದು ಹೇಳಿ, ವಸಂತಸಖನಾದ ಆ ಕುಸಮಾಯುಧನು (ಮನ್ಮಥನು) ಇಂದ್ರನ ದೇಹವನ್ನು ಆಶ್ರಯಿಸಿದನು.

೩೭. ಆ ಕುಸುಮಾಯುಧನು ಇಂದ್ರನ ಶರೀರವನ್ನು ಆಶ್ರಯಿಸಿ ಆ ಕೃಕಲನ ಹೆಂಡತಿಯನ್ನು ಬಾಣದಿಂದ ಹೊಡೆಯಲು ಬಾಣಪಾಣಿಯಾಗಿ, ಆಕೆಯ ಕಣ್ಣನ್ನು ಗುರಿಯಾಗಿಟ್ಟುಕೊಂಡು ಅದನ್ನೇ ನೋಡುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಪಂಚಾಶತ್ತಮೋಽಧ್ಯಾಯಃ

---

॥ ವಿಷ್ಣುರುವಾಚ ॥

ಕ್ರೀಡಾಪ್ರಯುಕ್ತಾ ಸುವನಂ ಪ್ರವಿಷ್ಟಾ
ವೈಶ್ಯಸ್ಯ ಭಾರ್ಯಾ ಸುಕಲಾ ಚ ತನ್ವೀ ।
ದದರ್ಶ ಸರ್ವಂ ಗಹನಂ ಮನೋಜ್ಞಂ
ತಾಮೇವ ಪಪ್ರಚ್ಛ ಸಖೀಂ ಸತೀ ಸಾ ॥ ೧ ॥

ಅರಣ್ಯಮೇತತ್ಪ್ರವರಂ ಸುಪುಣ್ಯಂ
ದಿವ್ಯಂ ಸಖಿ ಕಸ್ಯ ಮನೋಭಿರಾಮಂ ।
ಸಿದ್ಧಂ ಸುಕಾಮ್ಯೈಃ ಪ್ರವರೈಃ ಸಮಸ್ತೈ
ರ್ಮನೋಭವಾರಾಮಸಮಾನಕಲ್ಪಂ ॥ ೨ ॥

---

## ಐವತ್ತೆಂಟನೆಯ ಅಧ್ಯಾಯವು

೧-೨. ಇತ್ತ ಆ ವೈಶ್ಯನ ಹೆಂಡತಿಯು ಕ್ರೀಡೆಯಿಂದ ಪ್ರೇರಿತಳಾಗಿ ಆ ಕಾಡಿಗೆ ಹೋದಳು. ಅಲ್ಲಿ ಮನೋಹರವಾದ ಆ ವನವನ್ನು ನೋಡುತ್ತಾ ಸಖಿಯನ್ನು ಕುರಿತು ಈ ಅರಣ್ಯವು ಪುಣ್ಯಪ್ರದವಾದುದು. ನೋಡುವುದಕ್ಕೆ ಬಹು ಚೆನ್ನಾಗಿದೆ. ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಿದೆ. ಮನಸ್ಸಿಗೆ ಇಷ್ಟವಾದ ಎಲ್ಲಾ ಪದಾರ್ಥಗಳಿಂದಲೂ ತುಂಬಿದೆ. ಮನ್ಮಥನ ಉದ್ಯಾನವನದಂತಿರುವ ಈ ವನವು ಯಾರದಮ್ಮ, ಎಂದಳು.

॥ ಕ್ರೀಡೋವಾಚ ॥

ಏತದ್ವನಂ ದಿವ್ಯಗುಣೈಃ ಪ್ರಯುಕ್ತಂ
ಸಿದ್ಧಸ್ವಭಾವೈಃ ಪರಿಭಾವನೇನ
ಪುಷ್ಪಾಕುಲಂ ಕಾಮಫಲೋಪಯುಕ್ತಂ
ವಿಪಶ್ಯ ಸಖ್ಯಂ ಮಕರಧ್ವಜಸ್ಯ ॥ ೩ ॥

ಏವಂ ವಾಕ್ಯಂ ತತಃ ಶ್ರುತ್ವಾ ಹರ್ಷೇಣ ಮಹತಾನ್ವಿತಾ ।
ಸಮಾಲೋಕ್ಯ ಮಹದ್ವೃತ್ತಂ ಕಾಮಸ್ಯ ಚ ದುರಾತ್ಮನಃ ॥ ೪ ॥

ವಾಯುನಾ ನೀಯಮಾನಂ ತಂ ಸಮಾಘ್ರಾತಿ ನ ಸೌರಭಂ ।
ವಾತಿ ವಾಯುಸ್ಸ್ವಭಾವೇನ ಸೌರಭೇಣ ಸಮನ್ವಿತಃ ॥ ೫ ॥

ತದ್ಘ್ರಾಣೋ ವಿಶತೇ ನಾಶಂ ಯಥಾ ತಥಾ ಸುಲೀಲಯಾ ।
ಸಾ ಗಂಧಂ ನೈವ ಗೃಹ್ಣಾತಿ ಪುಷ್ಪಾಣಾಂ ಚ ವರಾನನಾ ॥ ೬ ॥

ನ ಚಾಸ್ವಾದಯತೇ ತತ್ರ ಫಲಾನಾಂ ವಾ ರಸಂ ಸತೀ ।
ಸ-ಸಖಾ ಕಾಮದೇವಸ್ಯ ರಮಮಾಣೋ ವಿಲಜ್ಜಿತಃ ॥ ೭ ॥

---

೩. ಕ್ರೀಡೆಯು ಹೇಳಿದಳು—ಎಲೌ ಸಖಿಯೇ, ಈ ದಿವ್ಯವಾದ ಸ್ವಭಾವ ಸಿದ್ಧವಾದ ಪುಷ್ಪಗಳಿಂದ ಅಲಂಕೃತವಾದ ಈ ವನವು ಕಾಮನದು ನೋಡು ಎಂದಳು.

೪. ಈ ವನವು ದುಷ್ಟನಾದ ಕಾಮನದೆಂದು ಕೇಳಿದ ಕೂಡಲೆ, ಇದುವರೆಗೂ ಹರ್ಷದಿಂದಿದ್ದ ಸುಕಲೆಯು ಆ ವನದ ಸೊಬಗಿನಲ್ಲಿ ಆಸಕ್ತಿಯಿಲ್ಲದವಳಾದಳು.

೫-೬. ಅಲ್ಲಿ ವಾಯುವು ಸುರಭಿಯ ಸುಗಂಧದಿಂದ ಮೆಲ್ಲನೆ ಬೀಸುತ್ತಿದ್ದರೂ ಅದರ ಸ್ಪರ್ಶವು ಆಕೆಗೆ ಬೇಡವಾಯಿತು. ಕಾಮನು ಪ್ರಯೋಗಿಸಿದ ಈ ಮಂದ ಮಾರುತವೆಂಬ ಬಾಣವು ಇವಳ ವಿಚಾರದಲ್ಲಿ ನಿರರ್ಥಕವಾಯಿತು.

೭. ಫಲಗಳ ರಸವನ್ನೂ ಆಕೆಯು ರುಚಿನೋಡಲಿಲ್ಲ. ಇದನ್ನು ನೋಡಿ ಕಾಮನ ಸಖನಾದ ಮಕರಂದನು,

ಲಜ್ಜಿತಃ ಪ್ರಾಂಗ್ಮುಖೋ ಭೂತ್ವಾ ಭೂಪಾಲವಚನಚ್ಛಲೈಃ ।
ಫಲೇಭ್ಯಸ್ತು ಸುಪಕ್ವೇಭ್ಯಃ ಪುಷ್ಪಮಂಜರಿಭ್ಯಸ್ತತಃ ।
ವಿರೂಪಾಶ್ಚಾಪತದ್ಭೂಮೌ ರುದತ್ಯೇಷ ತಯಾ ಜಿತಃ ॥ ೮ ॥

ಮಕರಂದಸ್ಸುದೀನಾತ್ಮಾ ಫಲಾದ್ಭುವಿ ಗತಃ ಪುನಃ ।
ಭಕ್ಷ್ಯತೇ ಮಕ್ಷಿಕಾಭಿಶ್ಚ ಯಥಾ ಮೂರ್ಖವಚಸ್ತಥಾ ॥ ೯ ॥

ಮಕ್ಷಿಕಾಭಕ್ಷ್ಯಮಾಣಸ್ತು ಪ್ರವಾಹೇಣೈವ ಯಾತಿ ಸಃ ।
ಮಂದಂ ಮಂದಂ ಪ್ರಯಾತ್ಯೇವ ತಂ ಹಸಂತಿ ಚ ಪಕ್ಷಿಣಃ ॥ ೧೦ ॥

ನಾನಾರುತೈಃ ಪ್ರಚಲಂತಿ ಸುಖಮಾನಂದನಿರ್ಭರಾಃ ।
ಪ್ರೀತ್ಯಾ ಶಕುನಯಸ್ತತ್ರ ವನಮಧ್ಯನಗಸ್ಥಿತಾಃ
ಸುಕಲಯಾ ಜಿತೋ ಹ್ಯೇಷ ನಿಮ್ನಂ ಪಂಥಾನಮಾಸ್ಥಿತಃ । ॥ ೧೧ ॥

ಪ್ರೀತ್ಯಾ ಸಮೇತಾ ರತಿಃ ಕಾಮಭಾರ್ಯಾ
ಶ್ರುತ್ವಾಽಬ್ರವೀತ್ತಾಂ ಸುಕಲಾಂ ವಿಹಸ್ಯ ।
ಸ್ವಸ್ತ್ಯಸ್ತು ತೇ ಸ್ವಾಗತಮೇವ ಭದ್ರೇ-
ರಮಸ್ವ ಪ್ರೀತ್ಯಾ ತ್ವನಯಾ ಚ ರತ್ಯಾ ॥ ೧೨ ॥

---

೮. ಬೇರೆ ಮಾತಿನ ನೆವದಿಂದ ಲಜ್ಜಿತನಾದನು. ಹಣ್ಣುಗಳು, ಹೂಗಳು, ನೆಲಕ್ಕೆ ಬಿದ್ದು ವ್ಯರ್ಥವಾಗುತ್ತಿದ್ದುದನ್ನು ನೋಡಿ ನನ್ನ ಕಾರ್ಯವು ನಿಷ್ಫಲವಾಯಿತಲ್ಲಾ ಎಂದು ಲಜ್ಜೆಗೊಂಡು ದುಃಖಿಸಿದನು.

೯-೧೧. ದಿವ್ಯ ಫಲಗಳ ಮಕರಂದ ರಸವನ್ನು ಕೇಳುವವರೇ ಇಲ್ಲ. ಅದು ಮೂರ್ಖರ ಮಾತಿನಂತೆ ಯಾರಿಗೂ ಬೇಡವಾಗಿ ನೊಣಗಳಿಗೆ ಮಾತ್ರ ಆಹಾರವಾಗಿದ್ದಿತು. ನೆಲದ ಮೇಲೆ ಬಿದ್ದು ವ್ಯರ್ಥವಾಗಿ ಹರಿದು ಹೋಗುತ್ತಿರುವ ಆ ಮಕರಂದರಸವನ್ನು ನೋಡಿ ಆ ವನದಲ್ಲಿದ್ದ ಪಕ್ಷಿಗಳು ಕಲಕಲ ಧ್ವನಿಯನ್ನು ಮಾಡುತ್ತಾ ಹಾಸ್ಯಮಾಡುವಂತಿದ್ದವು. ಇದನ್ನೆಲ್ಲಾ ನೋಡಿ ಮಕರಂದನು ಈ ಸುಕಲೆಯಿಂದ ತಾನು ಪರಾಜಿತನಾದೆನೆಂದು ತಿಳಿದು ಲಜ್ಜೆಯಿಂದ ತಗ್ಗಾದ ಪ್ರದೇಶಕ್ಕೆ ಹರಿದುಹೋಗಿ ಅವಿತುಕೊಂಡಂತೆ ತೋರಿದನು.

೧೨. ಆಗ ಕಾಮನ ಹೆಂಡತಿಯಾದ ರತಿಯು ಇದನ್ನು ನೋಡಿ ಸುಕಲೆಯನ್ನು ಹಾಸ್ಯಮಾಡುತ್ತ, ಅಮ್ಮ ನಿನಗೆ ಮಂಗಳವಾಗಲಿ. ಸುಸ್ವಾಗತ. ರತಿಯೊಡನೆ ಪ್ರೀತಿಯಿಂದ ಇಲ್ಲಿ ಸಂಚರಿಸು. ಎಂದು

ವದಂತ್ಯೌ ತೌ ಸ್ತ್ರಿಯೋ ದೃಷ್ಟ್ವಾ ಶ್ರುತ್ವೋವಾಚ ಸುಭಾಷಿತಂ ।
ರತಿಂ ಪ್ರತಿ ಗೃಹೀತ್ವಾ ಮೇ ಗತೋ ಭರ್ತಾ ಮಹಾಮತಿಃ ॥ ೧೩ ॥

ಯತ್ರ ಮೇ ತಿಷ್ಠತೇ ಭರ್ತಾ ತತ್ರಾಹಂ ಪತಿಸಂಯುತಾ ।
ತತ್ರ ಕಾಮಶ್ಚ ಮೇ ಪ್ರೀತಿರಯಂ ಕಾಯೋ ನಿರಾಶ್ರಯಃ ॥ ೧೪ ॥

ದ್ವೇ ಅಪ್ಯುಕ್ತಂ ಸಮಾಕರ್ಣ್ಯ ರತಿಪ್ರೀತೀ ವಿಲಜ್ಜಿತೇ ।
ವ್ರೀಡಮಾನೇ ಗತೇ ತೇ ದ್ವೇ ಯತ್ರ ಕಾಮೋ ಮಹಾಬಲಃ ॥ ೧೫ ॥

ಊಚತುಸ್ತಂ ಮಹಾವೀರಮಿಂದ್ರಕಾಯಸಮಾಶ್ರಿತಂ ।
ಚಾಪಮಾಕರ್ಷಮಾಣಂ ತಂ ನೇತ್ರಲಕ್ಷ್ಯಂ ಮಹಾಬಲಂ ॥ ೧೬ ॥

ದುರ್ಜಯೇಯಂ ಮಹಾಪ್ರಾಜ್ಞ ತ್ಯಜ ಪೌರುಷಮಾತ್ಮನಃ ।
ಪತಿಕಾಮಾ ಮಹಾಭಾಗಾ ಪತಿವ್ರತಾ ಸದೈವ ಸಾ ॥ ೧೭ ॥

---

೧೩. ರತಿಯೂ, ಕ್ರೀಡೆಯೂ ಈ ರೀತಿ ಹೇಳುವುದನ್ನು ಕೇಳಿ ಆ ಸುಕಲೆಯು ನನ್ನ ಗಂಡನು ರತಿಯನ್ನು ತನ್ನ ಜೊತೆಯಲ್ಲಿಯೇ ತೆಗೆದುಕೊಂಡು ಹೋಗಿರುವನು.

೧೪-೧೫. ನನ್ನ ಗಂಡನಿರುವ ಜಾಗದಲ್ಲಿ ಮಾತ್ರ ನಾನು ರತಿಯಿಂದ ಕೂಡಿರುತ್ತೇನೆ. ಅಲ್ಲಿಯೇ ಕಾಮನು ರತಿಯುಕ್ತನಾಗಿರುತ್ತಾನೆ. ಪತಿಯಿಲ್ಲದ್ದರಿಂದ ಈ ದೇಹವು ಇಲ್ಲಿ ಕಾಮವಿಕಾರವಿಲ್ಲದೆ ನಿರಾಶ್ರಯವಾಗಿರುವುದು ಎಂದು ಆಕೆ ಹೇಳಿದುದನ್ನು ರತಿಪ್ರೀತಿಗಳಿಬ್ಬರೂ ಕೇಳಿ ಲಜ್ಜೆಗೊಂಡು ಕಾಮನಿದ್ದಲ್ಲಿಗೆ ಹೋದರು.

೧೬-೧೭. ಇಂದ್ರನ ದೇಹವನ್ನಾಶ್ರಯಿಸಿ ನೇತ್ರಗಳನ್ನು ಗುರಿಯನ್ನಾಗಿ ಮಾಡಿಕೊಂಡು ಅಲ್ಲಿ ಧನಸ್ಸನ್ನು ಎಳೆಯುತ್ತಿರುವ ಆ ಕಾಮನನ್ನು ನೋಡಿ, ಈ ಸುಕಲೆಯು ದುರ್ಜಯಳು. ನಿನ್ನ ಪೌರುಷವನ್ನು ಬಿಡು. ಈಕೆಯು ಪತಿಯನ್ನೇ ಯಾವಾಗಲೂ ಅಪೇಕ್ಷಿಸುವ ಪತಿವ್ರತೆಯು ಎಂದರು.

॥ ಕಾಮ ಉವಾಚ ॥

**ಅನಯಾಲೋಕ್ಯತೇ ರೂಪಮಿಂದ್ರಸ್ಯಾಪಿ ಮಹಾತ್ಮನಃ ।**
**ಯದಿ ದೇವಿ ತದಾ ಚಾಹಂ ಹನಿಷ್ಯಾಮಿ ನ ಸಂಶಯಃ ॥ ೧೮ ॥**

**ಅಥ ವೇಷಧರೋ ದೇವೋ ಮಹಾರೂಪಸ್ಸುರಾಧಿಪಃ ।**
**ಯಸ್ಯಾಮನುಗತಸ್ತೂರ್ಣಂ ಪರಯಾ ಲೀಲಯಾ ತದಾ ॥ ೧೯ ॥**

**ಸರ್ವಭೋಗಸಮಾಕೀರ್ಣಃ ಸರ್ವಾಭರಣಶೋಭಿತಃ ।**
**ದಿವ್ಯಮಾಲಾಂಬರಧರೋ ದಿವ್ಯಗಂಧಾನುಲೇಪನಃ ॥ ೨೦ ॥**

**ತಯಾ ರತ್ಯಾ ಸಮಾಯಾತೋ ಯತ್ರಾಸ್ತೇ ಪತಿದೇವತಾ ।**
**ಪ್ರತ್ಯುವಾಚ ಮಹಾಭಾಗಾಂ ಸುಕಲಾಂ ಸತ್ಯಚಾರಿಣೀಂ ॥ ೨೧ ॥**

**ಪೂರ್ವಂ ದೂತೀ ಸಮುಕ್ತಂ ತೇ ಪ್ರೀತಿಸ್ತು ಪ್ರಹಿತಾ ಮಯಾ ।**
**ಕಸ್ಮಾನ್ನ ಮನ್ಯಸೇ ಭದ್ರೇ ಭಜ ಮಾಂ ತ್ವಮಿಹಾಗತಂ ॥ ೨೨ ॥**

---

೧೮. ಕಾಮನು ಹೇಳಿದನು—ಇವಳು ಇಂದ್ರನ ಮನೋಹರವಾದ ಈ ರೂಪವನ್ನು ನೋಡಿದ್ದೇ ಆದರೆ ಆಗ ನಾನು ಖಂಡಿತವಾಗಿಯೂ ಆಕೆಯನ್ನು ಮೋಹಗೊಳಿಸುತ್ತೇನೆ ಎನ್ನಲು,

೧೯-೨೦. ಉತ್ತಮವಾದ ದೇಹವನ್ನು ಧರಿಸಿರುವ ದೇವೇಂದ್ರನು ತಾನು ಆಸಕ್ತನಾಗಿದ್ದ ಸುಕಲೆಯನ್ನು ಅನುಸರಿಸುತ್ತಾ. ಹಾವಭಾವವಿಲಾಸವ್ಯೆಯಾರ ಮೊದಲಾದ ಕಾಮಚೇಷ್ಟೆಗಳಿಂದಲೂ, ಸರ್ವಾಭರಣಗಳಿಂದಲೂ ಶೋಭಿತನಾಗಿ ದಿವ್ಯವಾದ ಮಾಲೆಗಳನ್ನು ಹಾಕಿಕೊಂಡು ಗಂಧವನ್ನು ಪೂಸಿಕೊಂಡು ರತಿಯೊಡನೆ ಆ ಪತಿವ್ರತೆಯಿರುವ ಸ್ಥಳಕ್ಕೆ ಬಂದನು.

೨೧-೨೨. ಆತನು ಸುಕಲೆಯನ್ನು ಕುರಿತು ಎಲೈ ಪುಣ್ಯಾತ್ಮಳೇ, ಮೊದಲೇ ದೂತಿಯ ಮುಖಾಂತರ ನನ್ನ ಪ್ರೀತಿಯನ್ನು ನಿನಗೆ ತಿಳಿಯಪಡಿಸಿದ್ದೆನಷ್ಟೆ? ಅದನ್ನೇತಕ್ಕೆ ಮನಸ್ಸಿಗೆ ತಂದುಕೊಳ್ಳಲಿಲ್ಲ? ಎಲೌ ಮಂಗಳಾಂಗಿ, ಇಗೋ ನಾನೇ ನಿನ್ನಲ್ಲಿಗೆ ಬಂದಿದ್ದೇನೆ. ನನ್ನನ್ನು ಕೂಡಿ ಸುಖಿಸು ಎಂದನು.

॥ ಸುಕಲೋವಾಚ ॥

ರಕ್ಷಾಯುಕ್ತಾಸ್ಮಿ ಭದ್ರಂ ತೇ ಭರ್ತುಃ ಪುತ್ರೈರ್ಮಹಾತ್ಮಭಿಃ ।
ಏಕಾಕಿನೀ ಸಹಾಯೈಶ್ಚ ನೈವ ಕಸ್ಯ ಭಯಂ ಮಮ ॥ ೨೩ ॥

ಶೂರೈಶ್ಚ ಪುರುಷಾಕಾರೈಃ ಸರ್ವತ್ರ ಪರಿರಕ್ಷಿತಾ ।
ನಾತಿಪ್ರಸ್ತಾವಯೋ ವಕ್ತುಂ ವ್ಯಗ್ರಾ ಕರ್ಮಣಿ ತಸ್ಯ ಚ ॥ ೨೪ ॥

ಯಾವತ್ ಪ್ರಸ್ಪಂದತೇ ನೇತ್ರಂ ತಾವತ್ಕಾಲಂ ಮಹಾಮತೇ ।
ಭವಾನ್ನ ಲಜ್ಜತೆ ಕಸ್ಮಾದ್ರಮಮಾಣೋ ಮಯಾ ಸಹ ।
ಭರ್ವಾ ಕೋ ಹಿ ಸಮಾಯಾತೋ ನಿರ್ಭಯೋ ಮರಣಾದಪಿ ॥ ೨೫ ॥

॥ ಇಂದ್ರ ಉವಾಚ ॥

ತ್ವಾಮೇವಂ ಹಿ ಪ್ರಪಶ್ಯಾಮಿ ವನಮಧ್ಯೇ ಸಮಾಗತಾಂ ।
ಸಮಾಖ್ಯಾತಾಸ್ತ್ವಯಾ ಶೂರಾ ಭರ್ತುಶ್ಚ ತನಯಾಃ ಪುನಃ ।
ಕಥಂ ಪಶ್ಯಾಮ್ಯಹಂ ತಾವದ್ದರ್ಶಯಸ್ವ ಮಮಾಗ್ರತಃ ॥ ೨೬ ॥

---

೨೩. ಸುಕಲೆಯು ಹೇಳಿದಳು—ಅಯ್ಯಾ, ನನ್ನನ್ನು ನನ್ನ ಗಂಡನ ಮಕ್ಕಳು ಗಳಾದ ಮಹಾತ್ಮರು ಕಾದುಕೊಂಡಿದ್ದಾರೆ. ನಾನು ಒಬ್ಬಳೇ ಇದ್ದರೂ ಸಹಾಯವು ನನಗಿರುವುದರಿಂದ ಯಾರ ಭಯವೂ ನನಗಿಲ್ಲ. ಶೂರರಾದ ಪುರುಷರ ಆಕಾರವುಳ್ಳ ಅವರು ಎಲ್ಲಾ ರೀತಿಯಿಂದಲೂ ನನ್ನನ್ನು ರಕ್ಷಿಸುತ್ತಿರುತ್ತಾರೆ.

೨೪. ಆ ಪತಿಯ ಕರ್ಮದಲ್ಲಿ ಆಸಕ್ತಳಾಗಿರುವ ನನಗೆ ನಿನ್ನೊಡನೆ ಹೆಚ್ಚು ಮಾತಾಡಲು ಸಮಯವಿಲ್ಲ. ರೆಪ್ಪೆ ಮುಚ್ಚಿ ಬಿಡುವವರೆಗೂ ನಿನಗೆ ಅವಕಾಶ. ಅಷ್ಟರ ಒಳಗೆ ಮಾತನಾಡಿ ಹೊರಟುಹೋಗು.

೨೫. ಪತಿವ್ರತೆಯಾದ ನನ್ನೊಡನೆ ಸರಸಸಲ್ಲಾಪಗಳನ್ನೂ, ಪ್ರೀತಿಯ ಮಾತುಗಳನ್ನೂ ಆಡಲು ನಿನಗೆ ನಾಚಿಕೆಯಾಗುವುದಿಲ್ಲವೇ? ನೀನಾರು? ಮೃತ್ಯು ವಿಗೂ ಹೆದರದೆ ನನ್ನ ಬಳಿಗೆ ಬಂದಿರುವೆಯಲ್ಲಾ? ಎಂದಳು.

೨೬. ಇಂದ್ರನು ಹೇಳಿದನು—ಕಾಡಿನ ಮಧ್ಯದಲ್ಲಿ ಬಂದಿರುವ ಈ ನಿನ್ನೊಬ್ಬ ಳನ್ನೇ ನೋಡುತ್ತಿದ್ದೇನೆ. ಈ ವನದ ಮಧ್ಯದಲ್ಲಿ ನೀನೊಬ್ಬಳೇ ನನಗೆ ಕಾಣಿಸುತ್ತೀಯೆ. ನಿನ್ನ ಗಂಡನ ಮಕ್ಕಳೆಂದೂ, ಶೂರರೆಂದೂ, ಅವರು ಕಾಪಾಡು ವರೆಂದೂ ಹೇಳಿದೆಯಲ್ಲ? ಅವರೆಲ್ಲಿರುವರು? ನನಗೆ ತೋರಿಸು ಎನ್ನಲು,

॥ ಸುಕಲೋವಾಚ ॥

ನಿಜಗೃಹಮುಪವರ್ಗಸ್ಯಾಧಿಪತ್ಯೇ ನಿವೇಶ್ಯ
ಧೃತಿಮತಿಗತಿಬುದ್ಧ್ಯಾಖ್ಯೈಸ್ತು ಸನ್ನ್ಯಸ್ಯ ಸತ್ಯಂ ।
ಅಚಲಸಕಲಧರ್ಮೋ ನಿತ್ಯಯುಕ್ತೋ ಮಹಾತ್ಮಾ
ಶಮದಮಸಹಧರ್ಮಾತ್ಮಾ ಸದಾ ಮಾಂ ಜುಗೋಪ ॥ ೨೭ ॥

ಮಾಮೇವಂ ಪರಿರಕ್ಷತೇ ದಮಗುಣೈಸ್ತೈಸ್ತೈಸ್ಸುಧರ್ಮಃ ಸದಾ ।
ಸತ್ಯಂ ಪಶ್ಯ ಸಮಾಗತಂ ಮಮ ಪುರಃ ಶಾಂತಿಕ್ಷಮಾಭ್ಯಾಂ ಯುತಂ ।
ಸತ್ಯಾಖ್ಯಸ್ತು ಮಹಾಬಲಃ ಪೃಥುಯಶಾ ಯೋ ಮಾಂ ನಮುಂಚೇತ್ಕದಾ ।
ಬದ್ಧ್ವಾ ಮಾಂ ದೃಢಬಂಧನೈಃ ಸುನಿಯತಂ ಪುಣ್ಯಾತ್ಮನೇವಂ ಗತಃ ॥ ೨೮ ॥

ರಕ್ಷಾಯುಕ್ತಾಃ ಕೃತಾಸ್ಸರ್ವೇ ಸತ್ಯಾರ್ಥಾಶ್ಶೃಣು ಸಾಂಪ್ರತಂ ।
ಧರ್ಮಲೋಭಾತಿಗಾಸ್ಸರ್ವೇ ದಮಬುದ್ಧಿಪರಾಕ್ರಮಾಃ ॥ ೨೯ ॥

---

೨೭. ಸುಕಲೆಯು ಹೇಳಿದಳು—ಮೋಕ್ಷದ ಅಧಿಪತ್ಯದಲ್ಲಿ ನನ್ನ ದೇಹರೂಪವಾದ ಮನೆಯನ್ನು ಇಟ್ಟು ಅಲ್ಲಿ ಧೈರ್ಯ, ಮತಿ, ಗತಿ, ಬುದ್ಧಿಯೆಂಬವರೊಡನೆ ಸತ್ಯವನ್ನೂ, ಅದರಲ್ಲಿ ಕೂಡಿಸಿ ಚಲಿಸದ ಸಮಸ್ತ ಧರ್ಮಗಳುಳ್ಳ ಮಹಾತ್ಮನಾದ ಧರ್ಮನು ಶಮದಮಯೊಡನೆ ನನ್ನನ್ನು ಸದಾ ಕಾಪಾಡುತ್ತಿದ್ದಾನೆ. ಎಂದರೆ ನಾನು ಧರ್ಮವನ್ನೇ ಸ್ಥಿರವಾಗಿ ಹಿಡಿದಿದ್ದೇನೆ. ಅದು ಚಲಿಸದಂತೆ ಧೈರ್ಯ, ಬುದ್ಧಿ, ವಿಮರ್ಶನೆಗಳೂ ಇಂದ್ರಿಯ ನಿಗ್ರಹವೂ ನನಗೆ ಇದೆ ಎಂದು ಭಾವವು.

೨೮. ಆ ಸುಧರ್ಮನು ಯಾವಾಗಲೂ ನನ್ನನ್ನು ದಮಾಗುಣದಿಂದ ಕಾಪಾಡುತ್ತಾನೆ. ಶಾಂತಿಕ್ಷಮೆಗಳೊಡನೆ ನಿನ್ನೆದುರಿಗೆ ಬಂದಿರುವ ಸತ್ಯನನ್ನು ನೋಡು ಸತ್ಯನು ಬಹು ಕೀರ್ತಿವಂತ. ಮಹಾಬಲಿಷ್ಠ. ನನ್ನನ್ನು ಯಾವಾಗಲೂ ಬಿಡುವುದಿಲ್ಲ. ಆ ಸತ್ಯನೇ ನನ್ನನ್ನು ಬಲವಾದ ಕಟ್ಟುಗಳಿಂದ ಕಟ್ಟಿ ಪುಣ್ಯಾತ್ಮನಾಗಿ ಬಂದುಬಿಟ್ಟಿದ್ದಾನೆ. ಎಂದರೆ ಶಮದಮಗಳಿಂದ ಕೂಡಿದ ಧರ್ಮವನ್ನು ನಾನು ಆಚರಿಸುತ್ತೇನೆ. ಸತ್ಯನನ್ನು ಬಿಡುವುದಿಲ್ಲ. ಆ ಸತ್ಯಕ್ಕೆ ಬೆಂಬಲವಾದ ಶಾಂತಿ ಕ್ಷಮೆಗಳು ನನ್ನಲ್ಲಿವೆ. ಈ ರೀತಿಯಾದ ಧರ್ಮವಿದ್ದರೆ ಪುಣ್ಯವೆಂಬುದು ತಾನಾಗಿ ಬರುತ್ತದೆಂದು ತಾತ್ಪರ್ಯವು.

೨೯. ಧರ್ಮವೆಂಬ ಗುಣದಲ್ಲಿ ಆಸಕ್ತರಾದ ದಮ, ಬುದ್ಧಿ, ಪರಾಕ್ರಮಗಳೂ ಸತ್ಯನೂ ನನ್ನನ್ನು ಈಗ ಕಾಪಾಡುತ್ತಿದ್ದಾರೆ ಕೇಳು.

**ಮಾಮೇವಂ ಹಿ ಪರೀಕ್ಷಂತೇ ಕಿಂ ಮಾಂ ಪ್ರಾರ್ಥಯಸೇ ಬಲಾತ್ ।**
**ಕೋ ಭವಾನ್ನಿರ್ಭಯೋ ಭೂತ್ವಾ ದೂತ್ಯಾ ಸಾರ್ಥಂ ಸಮಾಗತಃ ॥ ೩೦ ॥**

**ಸತ್ಯಧರ್ಮಮುಖಾಃ ಪುತ್ರಾ ಜ್ಞಾನಾದ್ಯಾಃ ಪ್ರಬಲಾಃ ಸುತಾಃ ।**
**ಮಮ ಭರ್ತುಸ್ಸಹಾಯಾಶ್ಚ ತೇ ಮಾಂ ರಕ್ಷಂತಿ ವೈ ಸದಾ ॥ ೩೧ ॥**

**ಅಹಂ ರಕ್ಷಾಪರಾ ನಿತ್ಯಂ ದಮಶಾಂತಿಪರಾಯಣಾ ।**
**ನ ಮಾಂ ಜೇತುಂ ಸಮರ್ಥಶ್ಚ ಅಪಿ ಸಾಕ್ಷಾಚ್ಛಚೀಪತಿಃ ॥ ೩೨ ॥**

**ಯದಿ ವಾ ಮನ್ಮಥೋ ವಾಪಿ ಸಮಾಗಚ್ಛತಿ ವೀರ್ಯವಾನ್ ।**
**ದಂಶಿತಾಹಂ ಸದಾ ಸತ್ಯಮತ್ಯಾ ಕಷ್ಟೇನ ಸರ್ವದಾ ॥ ೩೩ ॥**

**ನಿರರ್ಥಕಾಸ್ತಸ್ಯ ಬಾಣಾ ಭವಿಷ್ಯಂತಿ ನ ಸಂಶಯಃ ।**
**ತ್ವಾಮೇವಂ ಹಿ ಹನಿಷ್ಯಂತಿ ಧರ್ಮಾದ್ಯಾಸ್ತೇ ಮಹಾಬಲಾಃ ॥ ೩೪ ॥**

---

೩೦. ಅವರು ನನ್ನನ್ನು ಎಲ್ಲಾ ಕಡೆಯಲ್ಲೂ ಜಾಗರೂಕತೆಯಿಂದ ನೋಡಿ ಕೊಳ್ಳುತ್ತಿದ್ದಾರೆ. ನನ್ನನ್ನು ಏಕೆ ಬಲಾತ್ಕರಿಸುತ್ತಾ ಪ್ರಾರ್ಥಿಸುತ್ತೀಯೆ? ಭಯ ವಿಲ್ಲದೆ ದೂತಿಯೊಡನೆ ಬಂದಿರುವ ನೀನಾರು?

೩೧. ಸತ್ಯ, ಧರ್ಮರು ಮುಂದಾಗಿರುವ ಜ್ಞಾನಾದಿಗಳು ನನ್ನ ಗಂಡನ ಮಕ್ಕಳು. ಅವರು ನನ್ನ ಗಂಡನಿಗೆ ಸಹಾಯಕರಾಗಿ ನನ್ನನ್ನು ಯಾವಾಗಲೂ ಕಾಪಾಡುತ್ತಾರೆ.

೩೨. ಆದುದರಿಂದ ನಾನು ಯಾವಾಗಲೂ ರಕ್ಷಣೆಯಿಂದ ಕೂಡಿದ್ದೇನೆ, ದಮ ಶಾಂತಿಗಳಲ್ಲಿ ಆಸಕ್ತಳಾಗಿದ್ದೇನೆ. ಪ್ರತ್ಯಕ್ಷವಾಗಿ ಇಂದ್ರನೇ ಬಂದರೂ ನನ್ನನ್ನು ಜಯಿಸಲು ಸಮರ್ಥನಾಗಲಾರನು.

೩೩. ವೀರನಾದ ಮನ್ಮಥನು ಕೂಡ ನನ್ನನ್ನು ಜಯಿಸಲಾರ. ಸತ್ಯ, ಬುದ್ಧಿ ಇವರುಗಳು ಪ್ರಯಾಸದಿಂದ ನನಗೆ ಉಕ್ಕಿನ ಕವಚಗಳನ್ನು ತೊಡಿಸಿ ಯುದ್ಧದಲ್ಲಿ ನಿಪುಣರನ್ನಾಗಿ ಮಾಡಿದ್ದಾರೆ.

೩೪ ನನ್ನ ವಿಷಯದಲ್ಲಿ ಆ ಮನ್ಮಥನ ಬಾಣಗಳು ಪ್ರಯೋಜನವಿಲ್ಲದೆ ಹೋಗುತ್ತವೆ. ಸಂಶಯವಿಲ್ಲ. ಪರಂತು ಬಲಿಷ್ಠರಾದ ಧರ್ಮಾದಿಗಳು ದುಷ್ಕಾರ್ಯ ದಲ್ಲಿ ಆಸಕ್ತನಾದ ನಿನ್ನನ್ನೇ ಹೊಡೆಯುತ್ತಾರೆ. ಆದುದರಿಂದ,

**ದೂರಂ ಗಚ್ಛ ಪಲಾಯಸ್ವ ಮಾsತ್ರ ತಿಷ್ಠ ಮಮಾಗ್ರತಃ ।**
**ವಾರ್ಯಮಾಣೋ ಯದಾ ತಿಷ್ಠೇರ್ಭಸ್ಮೀಭೂತೋ ಭವಿಷ್ಯಸಿ ॥ ೩೫ ॥**

**ಭರ್ತ್ರಾ ವಿನಾ ನಿರೀಕ್ಷೇತ ಮಮ ರೂಪಂ ಯದಾ ಭವಾನ್ ।**
**ಯಥಾ ದಾರು ದಹೇದ್ವಹ್ನಿಸ್ತಥಾ ಧಕ್ಷ್ಯಾಮಿ ನಾನ್ಯಥಾ ॥ ೩೬ ॥**

**ಏವಮುಕ್ತಸ್ಸಹಸ್ರಾಕ್ಷೋ ಮನ್ಮಥಂ ಪ್ರಾಹ ಸಮ್ಮುಖಂ ।**
**ಪಶ್ಯ ಪೌರುಷಮೇತಾಸಾಂ ಯುಧ್ಯಸ್ವ ನಿಜಪೌರುಷೈಃ ॥ ೩೭ ॥**

**ಯಥಾಗತಾಸ್ತಥಾ ಸರ್ವೇ ಮಹಾಶಾಪಭಯಾತುರಾಃ ।**
**ಸ್ವಂ ಸ್ವಂ ಸ್ಥಾನಂ ಮಹಾರಾಜ ಇಂದ್ರಾದ್ಯಾಃ ಪ್ರಯಯುಸ್ತದಾ ॥ ೩೮ ॥**

**ಗತೇಷು ತೇಷು ಸರ್ವೇಷು ಸುಕಲಾ ಸಾ ಪತಿವ್ರತಾ ।**
**ಸ್ವಗೃಹಂ ಪುಣ್ಯಸಂಯುಕ್ತಾ ಪತಿಧ್ಯಾನೇನ ಚಾಗತಾ ॥ ೩೯ ॥**

---

೩೫. ತಪ್ಪಿಸಿಕೊಂಡು ದೂರ ಓಡಿಹೋಗು. ನನ್ನ ಎದುರಿನಲ್ಲಿ ನಿಲ್ಲಬೇಡ. ಬೇಡವೆಂದರೂ ನೀನು ನಿಂತರೆ ಭಸ್ಮವಾಗಿ ಹೋಗುತ್ತೀಯೆ.

೩೬. ನೀನು ನನ್ನ ಗಂಡನಿಲ್ಲದಿರುವಾಗ ನನ್ನ ರೂಪವನ್ನು ನೋಡಿದರೆ, ಬೆಂಕಿಯು ಸೌದೆಯನ್ನು ಸುಡುವಂತೆ ನಿನ್ನನ್ನು ಸುಟ್ಟುಬಿಡುತ್ತೇನೆ.

೩೭. ಆಕೆಯು ಇಂದ್ರನಿಗೆ ಹೀಗೆ ಹೇಳಲು ಇಂದ್ರನು ಎದುರಿಗಿರುವ ಮನ್ಮಥನನ್ನು ನೋಡಿ ಇವರ ಪೌರುಷವನ್ನು ನೋಡು. ನಿನ್ನ ಪೌರುಷದಿಂದ ಯುದ್ಧ ಮಾಡು ಎಂದನು.

೩೮. ಆಗ ಎಲ್ಲರೂ ಶಾಪದ ಹೆದರಿಕೆಯಿಂದ ಕೂಡಿ, ಬಂದಂತೆಯೇ ಇಂದ್ರನೊಡನೆ ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು.

೩೯. ಅವರೆಲ್ಲರೂ ಹೊರಟು ಹೋದಮೇಲೆ ಪತಿವ್ರತೆಯಾದ ಸುಕಲೆಯು ಪತಿಯನ್ನೇ ಧ್ಯಾನಮಾಡುತ್ತಾ ಮನೆಗೆ ಹೋದಳು.

**ಸ್ವಗೃಹಂ ಪುಣ್ಯಸಂಯುಕ್ತಂ ಸರ್ವತೀರ್ಥಮಯಂ ತದಾ ।**
**ಸರ್ವಯಜ್ಞಮಯಂ ರಾಜನ್ ಸಂಪ್ರಾಪ್ತಾ ಪತಿದೇವತಾ ॥ ೪೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಸುಕಲಾಚರಿತೇ ಅಷ್ಟಪಂಚಾಶತ್ತಮೋಽಧ್ಯಾಯಃ**

---

೪೦. ಆ ಪತಿವ್ರತಾಶಿರೋಮಣಿಯು ವಾಸಮಾಡುವ ಗೃಹವಾದರೋ ಪರಮ ಪವಿತ್ರವಾದುದು. ಸಮಸ್ತ ತೀರ್ಥಗಳೂ, ಯಜ್ಞಗಳೂ ಆ ಮನೆಯಲ್ಲಿ ನೆಲಸಿರುವವು. ಇಂತಹ ಪುಣ್ಯಕರವಾದ ತನ್ನ ಮನೆಗೆ ಆ ಸುಕಲೆಯು ಹಿಂತಿರುಗಿ ಬಂದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಐವತ್ತೆಂಟನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕೋನಷಷ್ಟಿತಮೋಽಧ್ಯಾಯಃ

---

॥ ವಿಷ್ಣುರುವಾಚ ॥

ಕೃಕಲಸ್ಸರ್ವತೀರ್ಥಾನಿ ಸಾಧಯಿತ್ವಾ ಗೃಹಂ ಪ್ರತಿ ।
ಪ್ರಸ್ಥಿತಸ್ಸಾರ್ಥವಾಹೇನ ಮಹಾನಂದಸಮನ್ವಿತಃ ॥ ೧ ॥

ಏವಂ ಚಿಂತಯತೇ ನಿತ್ಯಂ ಸಂಸಾರಸ್ಸಫಲೋ ಮಮ ।
ಸ್ವರ್ಗಂ ಪ್ರಯಾನ್ತಿ ತೇ ಸರ್ವೇ ಪಿತರೋ ಮಮ ನಾನ್ಯಥಾ ॥ ೨ ॥

ತಾವತ್ಪ್ರತ್ಯಕ್ಷರೂಪೇಣ ಬಧ್ವಾ ತಸ್ಯ ಪಿತಾಮಹಾನ್ ।
ಪುರತಸ್ತಸ್ಯ ಸಂಬ್ರೂತೇ ನ ಹಿ ತೇ ಪುಣ್ಯಮುತ್ತಮಂ ॥ ೩ ॥

ದಿವ್ಯರೂಪೋ ಮಹಾಕಾಯಃ ಕೃಕಲಂ ವಾಕ್ಯಮಬ್ರವೀತ್ ।
ತೀರ್ಥಯಾತ್ರಾಫಲಂ ನಾಸ್ತಿ ಶ್ರಮಏವ ವೃಥಾ ಕೃತಃ ॥ ೪ ॥

---

## ಐವತ್ತೊಂಭತ್ತನೆಯ ಅಧ್ಯಾಯವು

೧-೨. ವಿಷ್ಣುವು ಹೇಳುತ್ತಾನೆ—ತೀರ್ಥಯಾತ್ರೆಗೆ ಹೋಗಿದ್ದ ಕೃಕಲನು ಸರ್ವತೀರ್ಥಗಳನ್ನೂ ಸೇವಿಸಿ ಬಹು ಸಂತೋಷಗೊಂಡು, ನನ್ನ ಸಂಸಾರವು ಸಫಲವಾಯಿತು. ನನ್ನ ಪಿತೃಗಳೆಲ್ಲರೂ ಸ್ವರ್ಗಕ್ಕೆ ಹೋಗುತ್ತಾರೆ. ಎಂದು ನಿತ್ಯವೂ ಯೋಚಿಸುತ್ತಾ ತನ್ನ ಜೊತೆಯ ವರ್ತಕರೊಡನೆ ಮನೆಗೆ ಹಿಂತಿರುಗಿ ಬರಲು ಹೊರಟನು.

೩-೭.—ಅಷ್ಟರೊಳಗೆ ದಿವ್ಯರೂಪಧಾರಿಯಾದ, ದೀರ್ಘಾಕಾರನಾದ ಒಬ್ಬ ಪುರುಷನು ಅವನ ಪಿತಾಮಹಾದಿಗಳನ್ನು ಕೈಕಾಲುಕಟ್ಟಿ ಪ್ರತ್ಯಕ್ಷವಾಗಿ ತಂದು ನಿನಗೆ ಉತ್ತಮವಾದ ಪುಣ್ಯವಿಲ್ಲ. ನಿನಗೆ ತೀರ್ಥಯಾತ್ರೆಯ ಫಲವೂ ಇಲ್ಲ. ಸುಮ್ಮನೆ

ಸ್ವಯಂ ಸಂತೋಷಮಾಯಾತಿ ನ ಹಿ ತೇ ಪುಣ್ಯಮುತ್ತಮಂ ।
ಏವಂ ಶ್ರುತ್ವಾ ತದಾ ವೈಶ್ಯಃ ಕೃಕಲೋ ದುಃಖಪೀಡಿತಃ ॥ ೫ ॥

ಭವಾನ್ಕೋವಾ ವದಸ್ಯೇವಂ ಕಸ್ಮಾದ್ವೃದ್ಧಃ ಪಿತಾಮಹಃ ।
ಕೇನ ದೋಷಪ್ರಭಾವೇನ ತನ್ಮೇ ತ್ವಂ ಕಾರಣಂ ವದ ॥ ೬ ॥

ಕಸ್ಮಾತ್ತೀರ್ಥಫಲಂ ನಾಸ್ತಿ ಮಮ ಯಾತ್ರಾ ಕಥಂ ನ ಹಿ ।
ಸರ್ವಮೇವಂ ಸಮಾಚಕ್ಷ್ವ ಯದಿ ಜಾನಾಸಿ ಸಂಸ್ಫುಟಂ ॥ ೭ ॥

॥ ಧರ್ಮ ಉವಾಚ ॥

ವಿನೀತಾಂ ವಿಮಲಾಂ ಪುಣ್ಯಾಂ ಭಾರ್ಯಾಂ ತ್ಯಕ್ತ್ವಾ ಪ್ರಯಾತಿ ಯಃ ।
ತಸ್ಯ ಪುಣ್ಯತಮಂ ಸರ್ವಂ ವೃಥಾ ಭವತಿ ನಾನ್ಯಥಾ ॥ ೮ ॥

ಧರ್ಮಾಚಾರಪರಾಂ ಪುಣ್ಯಾಂ ಸಾಧುವ್ರತಪರಾಯಣಾಂ ।
ಪತಿವ್ರತಪರಾಂ ಭಾರ್ಯಾಂ ಸುಗುಣಾಂ ಪುಣ್ಯವತ್ಸಲಾಂ ॥ ೯ ॥

ತಾಮೇವಾಪಿ ಪರಿತ್ಯಜ್ಯ ಧರ್ಮಕಾರ್ಯಂ ಪ್ರಯಾತಿ ಯಃ ।
ವೃಥಾ ತಸ್ಯ ಕೃತಸ್ಸರ್ವೋ ಧರ್ಮೋ ಭವತಿ ನಾನ್ಯಥಾ ॥ ೧೦ ॥

---

ಶ್ರಮಪಟ್ಟೆ ಅಷ್ಟೆ. ನೀನೇನೋ ಸಂತೋಷಪಡಬಹುದು. ಆದರೆ ನಿನಗೆ ಆ ಪುಣ್ಯ ವಿಲ್ಲ ಎಂದ ಹೇಳಲು. ಈ ಮಾತನ್ನು ಕೇಳಿ ವೈಶ್ಯನಾದ ಕೃಕಲನು ದುಃಖಗೊಂಡು ನೀನಾರು? ಹೀಗೇಕೆ ಹೇಳುವೆ? ನನ್ನ ಪಿತಾಮಹನನ್ನು ಏತಕ್ಕೋಸ್ಕರ ಕಟ್ಟಿದ್ದೀಯೆ? ಅದು ಯಾವ ದೋಷದಿಂದ? ಅದರ ಕಾರಣವನ್ನು ನನಗೆ ಹೇಳು. ಮತ್ತು ನನಗೆ ತೀರ್ಥಯಾತ್ರೆ ಫಲವೇಕಿಲ್ಲ? ನೀನು ತಿಳಿದಿದ್ದರೆ ಇವೆಲ್ಲವನ್ನೂ ವ್ಯಕ್ತವಾಗಿ ಹೇಳು ಎಂದನು.

೮. ಧರ್ಮನು ಹೇಳಿದನು.—ಎಲೈ ಕೃಕಲನೇ ಕೇಳು. ನಮ್ರಳೂ, ಸಾಧ್ವಿಯೂ, ಪುಣ್ಯವತಿಯೂ ಆದ ಹೆಂಡತಿಯನ್ನು ಬಿಟ್ಟು ಯಾವನು ಹೋಗುತ್ತಾನೋ ಅವನು ಮಾಡುವ ಪುಣ್ಯಗಳೆಲ್ಲವೂ ವ್ಯರ್ಥವಾಗುತ್ತವೆ.

೯-೧೦. ಧರ್ಮಾಚಾರಳೂ, ಸಾಧ್ವಿಯೂ, ಪತಿವ್ರತೆಯೂ, ಗುಣವತಿಯೂ, ಆದ ಹೆಂಡತಿಯನ್ನು ಬಿಟ್ಟು ತಾನೊಬ್ಬನೇ ತೀರ್ಥಯಾತ್ರಾದಿಗಳಿಗೆ ಹೋದರೆ ಅಂಥವನು ಮಾಡುವ ಧರ್ಮವೆಲ್ಲವೂ ವ್ಯರ್ಥವಾಗುತ್ತದೆ. ಇದು ಸತ್ಯವು.

ಸರ್ವಾಚಾರಪರಾ ಧನ್ಯಾ ಧರ್ಮಸಾಧನತತ್ಪರಾ ।
ಸತೀವ್ರತರತಾ ನಿತ್ಯಂ ಸರ್ವಜ್ಞಾ ಜ್ಞಾನವತ್ಸಲಾ ॥ ೧೧ ॥

ಏವಂಗುಣಾ ಭವೇದ್ಭಾರ್ಯಾ ಯಸ್ಯ ಪುಣ್ಯಾ ಮಹಾಸತೀ ।
ತಸ್ಯ ಗೇಹೇ ಸದಾ ದೇವಾಸ್ತಿಷ್ಠಂತಿ ಚ ಮಹೌಜಸಃ ॥ ೧೨ ॥

ಪಿತರೋ ಗೇಹಮಧ್ಯಸ್ಥಾ ಯಶೋ ವಾಂಛಂತಿ ತಸ್ಯ ಚ ।
ಗಂಗಾದ್ಯಾಸ್ಸರಿತಃ ಪುಣ್ಯಾಸ್ಸಾಗರಾಸ್ತತ್ರ ನಾನ್ಯಥಾ ॥ ೧೩ ॥

ಪುಣ್ಯಾ ಸತೀ ಯಸ್ಯ ಗೇಹೇ ವರ್ತತೇ ಸತ್ಯತತ್ಪರಾ ।
ತತ್ರ ಯಜ್ಞಾಶ್ಚ ಗಾವಶ್ಚ ಋಷಯಸ್ತತ್ರ ನಾನ್ಯಥಾ ॥ ೧೪ ॥

ತತ್ರ ಸರ್ವಾಣಿ ತೀರ್ಥಾನಿ ಪುಣ್ಯಾನಿ ವಿವಿಧಾನಿ ಚ ।
ಭಾರ್ಯಾಯೋಗೇನ ತಿಷ್ಠಂತಿ ಸರ್ವಾಣ್ಯೇತಾನಿ ನಾನ್ಯಥಾ ॥ ೧೫ ॥

---

೧೧-೧೨. ಸತ್ಯಾಚಾರಪರಳೂ, ಧನ್ಯಳೂ, ಧರ್ಮಾಭಿಮಾನಿಯೂ, ಪತಿವ್ರತೆಯೂ, ಸರ್ವಜ್ಞಳೂ, ಆದ ಹೆಂಡತಿ ಯಾವನಿಗಿದ್ದಾಳೆಯೋ ಅವನ ಮನೆಯಲ್ಲಿ ಉತ್ಕೃಷ್ಟವಾದ ದೇವತೆಗಳೆಲ್ಲರೂ ಸದಾ ವಾಸವಾಗಿರುತ್ತಾರೆ.

೧೩. ಅವನ ಮನೆಯಲ್ಲಿ ಪಿತೃದೇವತೆಗಳಿದ್ದುಕೊಂಡು ಅವನಿಗೆ ಯಶಸ್ಸುಗಳನ್ನು ಕೋರುತ್ತಾರೆ. ಗಂಗಾದಿ ಪುಣ್ಯನದಿಗಳೂ, ಪವಿತ್ರವಾದ ಸಮುದ್ರಗಳೂ, ಅವನ ಮನೆಯಲ್ಲಿರುತ್ತವೆ.

೧೪. ಪುಣ್ಯವತಿಯಾದ ಹೆಂಡತಿಯು ಯಾವನ ಮನೆಯಲ್ಲಿರುತ್ತಾಳೋ ಅಲ್ಲಿ ಯಜ್ಞಗಳೂ, ದೇವತೆಗಳೂ, ಗೋವುಗಳೂ, (ಧರ್ಮವೂ) ಋಷಿಗಳೂ, ಇರುತ್ತಾರೆ.

೧೫. ಇಂತಹ ಗುಣವತಿಯಾದ ಪತ್ನಿಯ ಸಾಂನಿಧ್ಯದಿಂದ ಅಲ್ಲಿ ಸರ್ವತೀರ್ಥಗಳೂ ಪ್ರತ್ಯಕ್ಷವಾಗಿರುತ್ತವೆ.

ಪುಣ್ಯಭಾರ್ಯಾಪ್ರಯೋಗೇಣ ಸುಗಾರ್ಹಸ್ಥ್ಯಂ ಪ್ರಜಾಯತೇ ।
ಗಾರ್ಹಸ್ಥ್ಯಾತ್ಪರಮೋ ಧರ್ಮೋ ದ್ವಿತೀಯೋ ನಾಸ್ತಿ ಭೂತಲೇ ॥ ೧೬ ॥

ಗೃಹಸ್ಥಸ್ಯ ಗೃಹಃ ಪುಣ್ಯಃ ಸತ್ಯಪುಣ್ಯ ಸಮನ್ವಿತಃ ।
ಸರ್ವತೀರ್ಥಮಯೋ ನೈಶ್ಯ ಸರ್ವದೇವಸಮನ್ವಿತಃ ॥ ೧೭ ॥

ಗಾರ್ಹಸ್ಥಂ ಚ ಸಮಾಶ್ರಿತ್ಯ ಸರ್ವೇ ಜೀವಂತಿ ತತ್ತ್ವತಃ ।
ತಾದೃಶಂ ನೈವ ಪಶ್ಯಾಮಿ ಹ್ಯನ್ಯಮಾಶ್ರಮಮುತ್ತಮಂ ॥ ೧೮ ॥

ಮಂತ್ರಾಗ್ನಿಹೋತ್ರಂ ದೇವಾಶ್ಚ ಸರ್ವೇ ಧರ್ಮಾಸ್ಸನಾತನಾಃ ।
ದಾನಾಚಾರಾಃ ಪ್ರವರ್ತಂತೇ ಯಸ್ಯ ಪ್ರಂಸಶ್ಚ ನೈ ಗೃಹೇ ॥ ೧೯ ॥

ಏವಂ ಯೋ ಭಾರ್ಯಯಾ ಹೀನಸ್ತಸ್ಯ ಗೇಹಂ ವನಾಯತೇ ।
ಯಜ್ಞಾಶ್ಚೈವ ನ ಸಿಧ್ಯಂತಿ ದಾನಾನಿ ವಿವಿಧಾನಿ ಚ ॥ ೨೦ ॥

ಭಾರ್ಯಾಹೀನಸ್ಯ ಪುಂಸೋಽಪಿ ನ ಸಿಧ್ಯನ್ತಿ ಮಹಾವ್ರತಂ ।
ಧರ್ಮಕಾರ್ಯಾಣಿ ಸರ್ವಾಣಿ ಪುಣ್ಯಾನಿ ವಿವಿಧಾನಿ ಚ ॥ ೨೧ ॥

ನಾಸ್ತಿ ಭಾರ್ಯಾಸಮಂ ತೀರ್ಥಂ ಧರ್ಮಸಾಧನಹೇತವೇ ।
ಶೃಣುಷ್ವ ತ್ವಂ ಗೃಹಸ್ಥಸ್ಯ ನಾನ್ಯೋ ಧರ್ಮೋ ಜಗತ್ತ್ರಯೇ ॥ ೨೨ ॥

---

೧೬-೧೮. ಪುಣ್ಯವತಿಯಾದ ಹೆಂಡತಿಯ ಸಂಬಂಧದಿಂದಲೇ ಒಳ್ಳೆಯ ಗೃಹಸ್ಥತನವುಂಟಾಗುತ್ತದೆ. ಗೃಹಸ್ಥತನಕ್ಕಿಂತ ಶ್ರೇಷ್ಠವಾದ ಮತ್ತೊಂದು ಧರ್ಮವು ಲೋಕದಲ್ಲಿಲ್ಲ. ಏಕೆಂದರೆ ಗೃಹಸ್ಥನನ್ನೇ ಆಶ್ರಯಿಸಿಕೊಂಡು ಎಲ್ಲರೂ ಜೀವಿಸುತ್ತಾರೆ. ಇದು ಲೋಕಾನುಭವವು. ಅಂತಹ ಉತ್ತಮವಾದ ಮತ್ತೊಂದು ಆಶ್ರಮವನ್ನು ನಾನು ನೋಡಿಲ್ಲ.

೧೯. ಆ ಮನೆಯಲ್ಲಿ ಮಂತ್ರ, ಪಠನ, ಅಗ್ನಿಹೋತ್ರ, ದೇವತಾರಾಧನೆ, ದಾನಧರ್ಮಗಳೂ, ಆಚಾರಗಳೂ, ಸದಾ ನಡೆಯುತ್ತಿರುತ್ತವೆ.

೨೦-೨೧. ಹೆಂಡತಿಯಿಲ್ಲದವನ ಮನೆಯು ಕಾಡಿನಂತಿರುತ್ತದೆ. ಯಜ್ಞಗಳೂ, ದಾನಗಳೂ ಆತನಿಗೆ ಸಿದ್ಧಿಸುವುದಿಲ್ಲ. ಹೆಂಡತಿಯಿಲ್ಲದವನಿಗೆ ವ್ರತಗಳೂ ಕೂಡ ಸಿದ್ಧಿಸುವುದಿಲ್ಲ. ಧರ್ಮಕಾರ್ಯಗಳಾಗಲಿ ಫಲವನ್ನು ಕೊಡುವುದಿಲ್ಲ.

೨೨. ತೀರ್ಥಯಾತ್ರೆ ಮಾಡುವವನಿಗೆ ಹೆಂಡತಿಗಿಂತ ಬೇರೆ ತೀರ್ಥ ಬೇಕಿಲ್ಲ. ಆದುದರಿಂದ ಕೇಳಯ್ಯಾ! ಕೃಕಲನೇ, ಗೃಹಸ್ಥನಿಗೆ ಇದಕ್ಕಿಂತ ಮೂರು ಲೋಕದಲ್ಲೂ ಬೇರೆ ಧರ್ಮವಿಲ್ಲ.

ಯತ್ರ ಭಾರ್ಯಾ ಗೃಹಂ ತತ್ರ ಪುರುಷಸ್ಯಾಪಿ ನಾನ್ಯಥಾ ।
ಗ್ರಾಮೇ ವಾಪ್ಯಥವಾರಣ್ಯೇ ಸರ್ವಧರ್ಮಸ್ಯ ಸಾಧನಂ ॥ ೨೩ ॥

ನಾಸ್ತಿ ಭಾರ್ಯಾಸಮಂ ತೀರ್ಥಂ ನಾಸ್ತಿ ಭಾರ್ಯಾಸಮಂ ಸುಖಂ ।
ನಾಸ್ತಿ ಭಾರ್ಯಾಸಮಂ ಪುಣ್ಯಂ ತಾರಣಾಯ ಹಿತಾಯಚ ॥ ೨೪ ॥

ಧರ್ಮಯುಕ್ತಾಂ ಸತೀಂ ಭಾರ್ಯಾಂ ತ್ಯಕ್ತ್ವಾ ಯಾತಿ ನರಾಧಮಃ ।
ಗೃಹಧರ್ಮಂ ಪರಿತ್ಯಜ್ಯ ಕ್ವಾಸ್ತೇ ಧರ್ಮಸ್ಯ ತೇ ಫಲಂ ॥ ೨೫ ॥

ತಯಾ ವಿನಾ ಯದಾ ತೀರ್ಥೇ ಶ್ರಾದ್ಧಂ ದಾನಂ ಕೃತಂ ತ್ವಯಾ ।
ತೇನ ದೋಷೇಣ ವೈ ಬದ್ಧಾಸ್ತವ ಪೂರ್ವಪಿತಾಮಹಾಃ ॥ ೨೬ ॥

ಭವಾಂಶ್ಚೌರಸ್ತ್ವಮೀ ಚೌರಾ ಯೈಶ್ಚ ಭುಕ್ತಂ ಚ ಲೋಲುಪೈಃ ।
ತ್ವಯಾ ದತ್ತಸ್ಯ ಶ್ರಾದ್ಧಸ್ಯ ಅನ್ನಮೇವಂ ತಯಾ ವಿನಾ ॥ ೨೭ ॥

---

೨೩-೨೪. ಹೆಂಡತಿಯಿರುವಲ್ಲಿಯೇ ಗೃಹಸ್ಥನ ಮನೆಯು ಬೇರೆಯಿಲ್ಲ. ಊರಿನಲ್ಲಾಗಲಿ, ಕಾಡಿನಲ್ಲಾಗಲಿ ತೀರ್ಥ, ಸುಖ, ಪುಣ್ಯ, ಇವುಗಳು ಹೆಂಡತಿಯನ್ನು ಬಿಟ್ಟು ಮತ್ತೊಂದಿಲ್ಲ. ಅದೇಹಿತವು, ಸ್ವರ್ಗಪ್ರದವಾದುದು.

೨೫. ಧರ್ಮದಲ್ಲಾಸಕ್ತಳಾದ, ಸತಿಯಾದ, ಹೆಂಡತಿಯನ್ನು ಬಿಟ್ಟು ಹೋಗುವ ಅಯೋಗ್ಯನು ಗೃಹಸ್ಥಧರ್ಮವನ್ನು ಬಿಟ್ಟಂತೆಯೇ ಆಯಿತು. ಅವನ ಧರ್ಮಕ್ಕೆ ಫಲವೆಲ್ಲಿಂದ ಬಂದೀತು ?

೨೬. ಅಂತಹ ಸುಗುಣೆಯಾದ ಹೆಂಡತಿಯನ್ನು ಬಿಟ್ಟು ನೀನೊಬ್ಬನೇ ತೀರ್ಥದಲ್ಲಿ ಶ್ರಾದ್ಧದಾನಗಳನ್ನು ಮಾಡಿರುವೆ. ಆ ದೋಷದಿಂದ ನಿನ್ನ ಪೂರ್ವದ ಪಿತೃಗಳು ಬದ್ಧರಾಗಿದ್ದಾರೆ.

೨೭. ದಾನಾದಿಗಳನ್ನು ಕೊಟ್ಟ ನೀನೂ ಕಳ್ಳನು. ಸಂತೋಷದಿಂದ ಅವುಗಳನ್ನು ಸ್ವೀಕರಿಸಿದವರೂ ಕಳ್ಳರೇ. ಅವಳಿಲ್ಲದೆ ನೀನು ದಾನಮಾಡಿದ ಶ್ರಾದ್ಧವೂ ಈರೀತಿ ನಿಷ್ಫಲವು.

ಸುಪುತ್ರಶ್ರದ್ಧಯೋಪೇತಃ ಶ್ರಾದ್ಧದಾನಂ ದದಾತಿ ಯಃ ।
ಭಾರ್ಯಾವಕ್ತ್ರೇನ ಪಿಂಡೇನ ತಸ್ಯ ಪುಣ್ಯಂ ವದಾಮ್ಯಹಂ ॥ ೨೮ ॥

ಯಥಾಮೃತಸ್ಯ ಪಾನೇನ ಪಿತೄಣಾಂ ತೃಪ್ತಿರ್ಜಾಯತೇ ।
ಪಿತೄಣಾಂ ನಾತ್ರ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ॥ ೨೯ ॥

ಗಾರ್ಹಸ್ಥ್ಯಸ್ಯ ಚ ಧರ್ಮಸ್ಯ ಭಾರ್ಯಾ ಭವತಿ ಸ್ವಾಮಿನೀ ।
ತ್ವಯೈವ ತಾಂ ವಿನಾ ಮೂಢ ಚೌರಕರ್ಮ ಕೃತಂ ವೃಥಾ ॥ ೩೦ ॥

ಅಮೀ ಪಿತಾಮಹಾಶ್ಚಾರಾ ಯೈಶ್ಚ ಭುಕ್ತಂ ತಯಾ ವಿನಾ ।
ಭಾರ್ಯಾ ಪಚತಿ ಚೈವಾನ್ನಂ ಸ್ವಹಸ್ತೇನಾಮೃತೋಪಮಂ ॥ ೩೧ ॥

ತದನ್ನಮೇವ ಭುಂಜಂತಿ ಪಿತರೋ ಹೃಷ್ಟಮಾನಸಾಃ ।
ತೇನೈವ ತೃಪ್ತಿಮಾಯಾಂತಿ ಸಂತುಷ್ಟಾಶ್ಚ ಭವಂತಿ ತೇ ॥ ೩೨ ॥

---

೨೮. ಹೆಂಡತಿಯು ಮಾಡಿಕೊಟ್ಟ ಪಿಂಡವನ್ನು ಯಾವ ಯೋಗ್ಯನಾದ ಮನುಷ್ಯನು ಶ್ರಾದ್ಧದಲ್ಲಿ ದಾನಮಾಡುವನೋ ಅವನ ಪುಣ್ಯವನ್ನು ಹೇಳುವೆನು ಕೇಳು.

೨೯. ಅಮೃತಪಾನಮಾಡಿದರೆ ಪಿತೃಗಳಿಗೆ ಯಾವ ರೀತಿಯಾದ ತೃಪ್ತಿಯುಂಟಾಗುತ್ತದೆಯೋ ಅದೇ ರೀತಿಯಾದ ತೃಪ್ತಿಯು ಅವನ ಪಿತೃಗಳಿಗುಂಟಾಗುತ್ತದೆ. ಸಂದೇಹವಿಲ್ಲ.

೩೦. ಗೃಹಸ್ಥನಿಗೆ ಹೆಂಡತಿಯು ಧರ್ಮರೂಪಳು. ಅವಳಿಲ್ಲದಿದ್ದರೆ ಧರ್ಮವಿಲ್ಲ. ಅವಳಿಲ್ಲದೆ ನೀನು ಶ್ರಾದ್ಧಾದಿಗಳನ್ನು ಮಾಡಿದುದರಿಂದ ಕಳ್ಳತನ ಮಾಡಿದ ಹಾಗಾಯಿತು. ಭೋಜನಮಾಡಿದ ವಿಪ್ರರೂ ಕಳ್ಳರೇ ಆದರು. ಏಕೆಂದರೆ ಈ ಕಾರ್ಯದಿಂದ ಯಾರಿಗೂ ಏನೂ ಪ್ರಯೋಜನವಿಲ್ಲ.

೩೧-೩೨. ಹೆಂಡತಿಯು ಅಮೃತಕ್ಕೆ ಸಮಾನವಾದ ಅನ್ನವನ್ನು ಪಾಕ ಮಾಡುವಳು. ಆ ಅನ್ನವನ್ನೇ ಪಿತೃಗಳು ಸಂತೋಷದಿಂದ ತಿನ್ನುವರು. ಆದ್ದರಿಂದಲೇ ಅವರು ತೃಪ್ತಿಹೊಂದಿ ಸಂತೋಷಪಡುತ್ತಾರೆ. ಆದ್ದರಿಂದ ಹೆಂಡತಿಯಿಲ್ಲದೆ ಗಂಡಸರಿಗೆ ಧರ್ಮವು ಸಿದ್ಧಿಸುವುದಿಲ್ಲ.

**ತಸ್ಮಾದ್ಭಾರ್ಯಾಂ ವಿನಾ ಧರ್ಮಃ ಪುರುಷಾಣಾಂ ನ ಸಿದ್ಧ್ಯತಿ ।
ನಾಸ್ತಿ ಭಾರ್ಯಾಸಮಂ ತೀರ್ಥಂ ಸುಪುಂಸಾಂ ಗತಿದಾಯಕಂ ।
ಭಾರ್ಯಾಂ ವಿನಾ ಹಿ ಯೋ ಧರ್ಮಃ ಸ ಏವ ವಿಫಲೋ ಭವೇತ್ ॥ ೩೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಏಕೋನಷಷ್ಟಿತಮೋಽಧ್ಯಾಯಃ**

---

೩೩. ಯೋಗ್ಯರಾದವರಿಗೆ ಉತ್ತಮಗತಿ ಕೊಡುವ ಭಾರ್ಯಾ ತೀರ್ಥಕ್ಕೆ ಸಮವಾದುದು ಮತ್ತೊಂದಿಲ್ಲ. ಹೆಂಡತಿಯಿಲ್ಲದೆ ಆಚರಿಸುವ ಧರ್ಮವು ಫಲಿಸುವುದಿಲ್ಲ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಷ್ಟಿತಮೋಽಧ್ಯಾಯಃ

॥ ಕೃಕಲ ಉವಾಚ ॥

**ಕಥಂ ಮೇ ಜಾಯತೇ ಸಿದ್ಧಿಃ ಕಥಂ ಪಿತೃವಿಮೋಚನಂ ।**
**ತನ್ಮೇ ಸುವಿಸ್ತರೇಣಾಪಿ ಧರ್ಮರಾಜ ವದಾಧುನಾ ॥ ೧ ॥**

॥ ಧರ್ಮರಾಜ ಉವಾಚ ॥

**ಗಚ್ಛ ಗೇಹಂ ಮಹಾಭಾಗ ತ್ವಾಂ ವಿನಾ ದುಃಖಿತಾಭವತ್ ।**
**ಸಂಬೋಧಯ ತ್ವಂ ಸುಕಲಾಂ ಸುಪುಣ್ಯಾಂ ಧರ್ಮಚಾರಿಣೀಂ ।**
**ಶ್ರಾದ್ಧದಾನಂ ಗೃಹಂ ಗತ್ವಾ ತಸ್ಯಾ ಹಸ್ತೇನ ವೈ ಕುರು ॥ ೨ ॥**

**ಸ್ಮೃತ್ವಾ ಪುಣ್ಯಾನಿ ತೀರ್ಥಾನಿ ಪೂಜಯ ತ್ವಂ ಸುರೋತ್ತಮಾನ್ ।**
**ತೀರ್ಥಯಾತ್ರಾಕೃತಾ ಸಿದ್ಧಿಸ್ತವ ಚೈವ ಭವಿಷ್ಯತಿ ॥ ೩ ॥**

---

## ಅರವತ್ತನೆಯ ಅಧ್ಯಾಯವು

೧. ಕೃಕಲನು ಕೇಳಿದನು—ನನಗೆ ಆ ಧರ್ಮದ ಸಿದ್ಧಿಯು ಹೇಗೆ ಉಂಟಾಗುತ್ತದೆ? ಪಿತೃಗಳ ವಿಮೋಚನವೂ ಕೂಡ ಹೇಗಾಗುತ್ತದೆ? ಎಲೈ ಧರ್ಮರಾಜನೇ ಅದನ್ನು ನನಗೆ ವಿಸ್ತಾರವಾಗಿ ಹೇಳು ಎನ್ನಲು,

೨-೩. ಧರ್ಮರಾಜನು ಹೇಳಿದನು—ಎಲೈ ಮಹಾನುಭವನೇ ನೀನು ಈಗ ಮನೆಗೆ ಹೋಗು. ನೀನಿಲ್ಲದುದರಿಂದ ಆಕೆ ದುಃಖಗೊಂಡಿದ್ದಾಳೆ. ಹೋಗಿ ಆಕೆಯನ್ನು ಮಾತನಾಡಿಸಿ ಸಮಾಧಾನಪಡಿಸು. ಆ ಪುಣ್ಯವತಿಯು ನಿನ್ನನ್ನೇ ಎದುರು ನೋಡುತ್ತಿದ್ದಾಳೆ. ಶ್ರಾದ್ಧವನ್ನು, ಆಕೆಯು ಕೈಮುಟ್ಟಿ ಮಾಡುವ ಪರಿಕರ್ಯಗಳಿಂದ ಮಾಡು. ಮತ್ತು ಪುಣ್ಯತೀರ್ಥಗಳನ್ನು ಸ್ಮರಿಸಿಕೊಂಡು ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸು. ಆಗ ನಿನಗೆ ತೀರ್ಥಯಾತ್ರೆಯ ಫಲವು ಬರುತ್ತದೆ.

**ಭಾರ್ಯಾಂ ವಿನಾ ಹಿ ಯೋ ಲೋಕೇ ಧರ್ಮಂ ಸಾಧಿತುಮಿಚ್ಛತಿ ।**
**ವಿಲೋಪ್ಯ ಧರ್ಮಂ ಗಾರ್ಹಸ್ಥ್ಯಮೇಕಾಕೀ ವಿಚರೇದ್ವನಂ ।**
**ವಿಫಲೋ ಜಾಯತೇ ಲೋಕೇ ನಾನ್ನಮಶ್ನಂತಿ ದೇವತಾಃ　　　॥ ೪ ॥**

**ಯಜ್ಞಾಸ್ಸಿದ್ಧಿಂ ನ ಚಾಯಾಂತಿ ಗೃಹಿಣೀರಹಿತೇ ಗೃಹೇ ।**
**ಸ ಏಕಾಕೀ ಸಮರ್ಥೋ ನ ಧರ್ಮಾರ್ಥಸಾಧನಾಯ ಚ　　　॥ ೫ ॥**

**॥ ವಿಷ್ಣುರುವಾಚ ॥**

**ಏವಮುಕ್ತ್ವಾ ಗತೋ ಧರ್ಮೋ ಯಥಾಯಾತಸ್ತಥಾ ಪುನಃ ।**
**ಕೃಕಲೋಽಪಿ ಸ ಧರ್ಮಾತ್ಮಾ ಸ್ವಗೃಹಂ ಪ್ರತಿ ಪ್ರಸ್ಥಿತಃ　　　॥ ೬ ॥**

**ಸ್ವಗೃಹಂ ಪ್ರಾಪ್ಯ ಮೇಧಾವೀ ದೃಷ್ಟ್ವಾ ತಾಂ ಚ ಪತಿವ್ರತಾಂ ।**
**ಸಾರ್ಥವಾಹೇನ ತೇನಾಪಿ ಮುಮುದೇ ಚಾಂತರಾತ್ಮನಾ　　　॥ ೭ ॥**

**ತಯಾ ಸಮಾಗತಂ ದೃಷ್ಟ್ವಾ ಭರ್ತಾರಂ ಧರ್ಮಕೋವಿದಂ ।**
**ಕೃತಂ ಸುಮಂಗಲಂ ಕರ್ಮ ಭರ್ತುರಾಗಮನೇ ತದಾ　　　॥ ೮ ॥**

---

೪. ಹೆಂಡತಿಯಿಲ್ಲದೆ ಧರ್ಮವನ್ನು ಮಾಡಲು ಲೋಕದಲ್ಲಿ ಅಪೇಕ್ಷಿಸುವವನು ಗೃಹಸ್ಥ ಧರ್ಮವನ್ನು ಲೋಪಮಾಡಿಕೊಂಡು ಕಾಡಿನಲ್ಲಿ ಒಬ್ಬನೇ ಸಂಚರಿಸಿದಂತಾಗುವುದು. ಅವನು ಮಾಡಿದುದೆಲ್ಲವೂ ಫಲವಿಲ್ಲದ್ದಾಗುವುದು. ದೇವತೆಗಳೂ ಸಹ ಅವನ ಅನ್ನವನ್ನು ತಿನ್ನುವುದಿಲ್ಲ.

೫. ಹೆಂಡತಿ ಇಲ್ಲದ ಮನೆಯಲ್ಲಿ ಯಜ್ಞಗಳು ಸಿದ್ಧಿಹೊಂದುವುದಿಲ್ಲ. ಧರ್ಮಾರ್ಥಗಳನ್ನು ಸಾಧಿಸಲು ಅವನೊಬ್ಬನೇ ಸಮರ್ಥನಾಗಲಾರನು.

೬-೭. ವಿಷ್ಣುವು ಹೇಳಿದನು—ಧರ್ಮನು ಹೀಗೆಂದು ಹೇಳಿ ಬಂದಂತೆಯೇ ಹೊರಟುಹೋದನು. ಕೃಕಲನೂ ಕೂಡ ಅಲ್ಲಿಂದ ಹೊರಟು ತನ್ನ ಮನೆಗೆ ಹೋಗಿ ಆ ಪತಿವ್ರತೆಯನ್ನು ನೋಡಿ ಮನಸ್ಸಿನಲ್ಲಿ ಸಂತೋಷಗೊಂಡನು.

೮. ಆಕೆಯು ಧರ್ಮಿಷ್ಠನಾದ ತನ್ನ ಗಂಡನು ಬಂದುದನ್ನು ತಿಳಿದು, ಅವನ ಆಗಮನದಲ್ಲಿ ಆಗಬೇಕಾದ ಮಂಗಳ ಕರ್ಮಗಳನ್ನು ನಡೆಸಿದಳು. ಬಳಿಕ ಆ ಪುಣ್ಯಾತ್ಮನು ಧರ್ಮರಾಯನು ಮಾಡಿದ ಕೆಲಸಗಳನ್ನು ಹೇಳಲು,

ಸಮಾಚಷ್ಟೇ ಸ ಧರ್ಮಾತ್ಮಾ ಧರ್ಮಸ್ಯಾಪಿ ವಿಚೇಷ್ಟಿತಂ ।
ಸಮಾಕರ್ಣ್ಯ ಮಹಾಭಾಗಾ ಭರ್ತುರ್ವಾಕ್ಯಂ ಮುದಾವಹಂ ।
ಧರ್ಮವಾಕ್ಯಂ ಪ್ರಶಸ್ಯಾಥ ಅನುಮೇನೇ ಚ ತಂ ತಥಾ ॥ ೯ ॥

ಅಥಾಸೌ ಕೃಕಲಶ್ಚಾಪಿ ತಯಾ ಸಾರ್ಧಂ ಸುಪುಣ್ಯಕಂ ।
ಚಕಾರ ಶ್ರದ್ಧಯಾ ಶ್ರಾದ್ಧಂ ದೇವಪೂಜಾಂ ಗೃಹೇ ಸ್ಥಿತಃ ॥ ೧೦ ॥

ಪಿತರೋ ದೇವಗಂಧರ್ವಾ ವಿಮಾನೈಶ್ಚ ಸಮಾಗತಾಃ ।
ತುಷ್ಟುವುಸ್ತೌ ಮಹಾತ್ಮಾನೌ ದಂಪತೀ ಮುನಯಸ್ತಥಾ ॥ ೧೧ ॥

ಅಹಂ ಚಾಪಿ ತಥಾ ಬ್ರಹ್ಮಾ ದೇವ್ಯಾ ಯುಕ್ತೋ ಮಹೇಶ್ವರಃ ।
ಸರ್ವೇ ದೇವಾ ಸ್ಸಗಂಧರ್ವಾಸ್ತಸ್ಯಾಸ್ಸತ್ಯೇನ ತೋಷಿತಾಃ ॥ ೧೨ ॥

ಊಚುಸ್ತೌ ತು ಮಹಾತ್ಮಾನೌ ಧರ್ಮಜ್ಞೌ ಸತ್ಯಪಂಡಿತೌ ।
ಭಾರ್ಯಯಾ ಸಹ ಭದ್ರಂ ತೇ ವರಂ ವರಯ ಸುವ್ರತ ॥ ೧೩ ॥

---

೯-೧೦. ಆಕೆಯ ಸಂತೋಷವನ್ನುಂಟುಮಾಡುವ ಗಂಡನ ಆ ಮಾತನ್ನು ಕೇಳಿ ಧರ್ಮರಾಯನನ್ನು ಹೊಗಳಿ, ಆ ರೀತಿ ಮಾಡಲು ಅನುಮತಿಸಿದಳು. ಅದರಂತೆ ಕೃಕಲನೂ ಕೂಡ, ಅವಳೊಡನೆ ಶ್ರಾದ್ಧಾದಿಗಳನ್ನೂ ದೇವಪೂಜೆಯನ್ನೂ ಮನೆಯಲ್ಲಿಯೇ ಮಾಡಿದನು.

೧೧. ಅಲ್ಲಿಗೆ ಪಿತೃಗಳು, ದೇವತೆಗಳು, ಗಂಧರ್ವರು, ಮುನಿಗಳು, ಆ ಮಹಾತ್ಮರಾದ ದಂಪತಿಗಳನ್ನು ಹೊಗಳಿದರು.

೧೨. ವಿಷ್ಣುವಾದ ನಾನು, ಬ್ರಹ್ಮನು, ಪಾರ್ವತೀಪರಮೇಶ್ವರರು, ದೇವತೆಗಳೂ, ಗಂಧರ್ವಾದಿಯಾಗಿ ಎಲ್ಲರೂ ಆಕೆಯ ಸತ್ಯದಿಂದ ಸಂತೋಷಿಸಿದೆವು.

೧೩. ಅನಂತರ ನಾವೆಲ್ಲರೂ ಹೋಗಿ ಎಲೈ ಸುವ್ರತನಾದ ಕೃಕಲನೇ, ಹೆಂಡತಿಯೊಡನೆ ಕೂಡಿದ ನಿನಗೆ ಮಂಗಳವಾಗಲಿ. ನಿಮ್ಮ ಸತ್ಯಕ್ಕೆ ಮೆಚ್ಚಿದ್ದೇವೆ. ಬೇಕಾದ ವರವನ್ನು ಕೇಳಿರಿ ಎಂದೆವು.

॥ ಕೃಕಲ ಉವಾಚ ॥

ಕಸ್ಯ ಪುಣ್ಯಸ್ಯ ಸಂಗೇನ ತಪಸಶ್ಚ ಸುರೋತ್ತಮಾಃ ।
ಸಭಾರ್ಯಾಯ ವರಂ ದಾತುಂ ಭವಂತೋ ಹಿ ಸಮಾಗತಾಃ ॥ ೧೪ ॥

॥ ಇಂದ್ರ ಉವಾಚ ॥

ಏಷಾ ಸತೀ ಮಹಾಭಾಗಾ ಸುಕಲಾ ಚಾರುಮಂಗಲಾ ।
ಅಸ್ಯಾಸ್ಸತ್ಯೇನ ತುಷ್ಟಾಸ್ಸ್ಮ ದಾತುಕಾಮಾ ವರಂ ತವ ॥ ೧೫ ॥

ಸಮಾಸೇನ ತು ಸಂಪ್ರೋಕ್ತಂ ಸರ್ವವೃತ್ತಾಂತಮೇವ ಚ ।
ತಸ್ಯಾಶ್ಚರಿತಮಾಹಾತ್ಮ್ಯಂಶ್ರುತ್ವಾ ಭರ್ತ್ರಾ ಸ ಹರ್ಷಿತಃ ॥ ೧೬ ॥

ತಯಾ ಸಹ ಸ ಧರ್ಮಾತ್ಮಾ ಹರ್ಷವ್ಯಾಕುಲಲೋಚನಃ ।
ನನಾಮ ದೇವತಾಸ್ಸರ್ವಾ ದಂಡವಚ್ಚ ಪುನಃ ಪುನಃ ॥ ೧೭ ॥

ಯಾಸ್ತು ತುಷ್ಟಿಂ ಮಹಾಭಾಗಾಸ್ತ್ರಯೋ ದೇವಾಸ್ಸನಾತನಾಃ ।
ಅನ್ಯೇ ಚ ಋಷಯಃ ಪುಣ್ಯಾಃ ಕೃಪಾಂ ಕೃತ್ವಾ ಮಮೋಪರಿ ॥ ೧೮ ॥

---

೧೪. ಕೃಕಲನು ಹೇಳಿದನು—ಎಲೈ ದೇವತೆಗಳೇ, ನೀವು ನನಗೆ ವರವನ್ನು ಕೊಡುತ್ತೇವೆಂದು ಹೇಳಿದಿರಷ್ಟೆ? ಅಂತಹ ವರವನ್ನು ಪಡೆಯಲು ನಾನು ಮಾಡಿದ ಪುಣ್ಯವಾವುದು? ಯಾವ ತಪಸ್ಸನ್ನು ಮಾಡಿ ನಿಮ್ಮನ್ನು ಮೆಚ್ಚಿಸಿರುವೆನು? ಇದನ್ನು ಹೇಳಬೇಕೆನಲು,

೧೫. ಇಂದ್ರನು ಹೇಳಿದನು—ಈ ಸುಕಲೆಯು. ಮಂಗಳೆಯು, ಪತಿವ್ರತೆಯು, ಈಕೆಯು ಸತ್ಯದಿಂದ ಸಂತುಷ್ಟರಾಗಿ ವರಕೊಡಲು ನಾವು ಬಂದಿದ್ದೇವೆ.

೧೬. ಇಂದ್ರನು ಆಕೆಯ ವಿಷಯವನ್ನು ಸಂಗ್ರಹವಾಗಿ ಹೇಳಿದನು. ಅದನ್ನು ಕೇಳಿ ಗಂಡನು ಸಂತೋಷಗೊಂಡನು.

೧೭. ಅದರಿಂದುಂಟಾದ ಸಂತೋಷದಿಂದ ಆತನ ಕಣ್ಣಿನಲ್ಲಿ ಆನಂದ ಬಾಷ್ಪಗಳು ತುಂಬಿದವು. ಆಗ ಆ ದಂಪತಿಗಳಬ್ಬರೂ ದೇವತೆಗಳಿಗೆ ದಂಡ ಪ್ರಮಾಣಮಾಡಿ ಕೈಮುಗಿದುಕೊಂಡು,—

೧೮-೨೦. ತ್ರಿಮೂರ್ತಿಗಳೂ, ಮಿಕ್ಕದೇವತೆಗಳೂ, ಋಷಿಗಳೂ ನನ್ನ ಮೇಲೆ ಕೃಪೆಮಾಡಿ ಸಂತೋಷಗೊಳ್ಳಿರಿ. ಪ್ರತಿ ಜನ್ಮದಲ್ಲಿಯೂ ನಾನು ದೇವತೆಗಳ ಮೇಲೆ ಹೀಗೆಯೇ ಭಕ್ತಿಯಿಟ್ಟಿರುವೆನು. ಧರ್ಮದಲ್ಲಿಯೂ ಸತ್ಯದಲ್ಲಿಯೂ, ತಮ್ಮ ಅನು

ಜನ್ಮಜನ್ಮನಿ ದೇವಾನಾಂ ಭಕ್ತಿಮೇವಂ ಕರೋಮ್ಯಹಂ ।
ಧರ್ಮೇ ಸತ್ಯೇ ರತಿಸ್ಸ್ಯಾನ್ಮೇ ಭವತಾಂ ಹಿ ಪ್ರಸಾದತಃ ॥ ೧೯ ॥

ಪಶ್ಚಾದ್ಧಿ ವೈಷ್ಣವಂ ಲೋಕಂ ಸಭಾರ್ಯಸ್ಸಪಿತಾಮಹಃ ।
ಗನ್ತುಮಿಚ್ಛಾಮ್ಯಹಂ ದೇವಾ ಯದಿ ತುಷ್ಟಾ ಮಹೌಜಸಃ ॥ ೨೦ ॥

ದೇವಾ ಊಚುಃ ॥

ಏವಮಸ್ತು ಮಹಾಭಾಗ ಸರ್ವಂ ತವ ಭವಿಷ್ಯತಿ ।
ಸುಕಲೇಯಂ ಮಹಾಪುಣ್ಯಾ ತವ ಪತ್ನೀ ಯಶಸ್ವಿನೀ ॥ ೨೧ ॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪುಷ್ಪವೃಷ್ಟಿಂ ತಾಂ ತಯೋರುಪರಿ ಭೂಪತೇ ।
ಚಕ್ರುರ್ಜಗುಃ ಪುಣ್ಯಗೀತಂ ಲಲಿತಂ ಮಧುರಂ ತತಃ ॥ ೨೨ ॥

ಗಂಧರ್ವಾ ಗೀತತತ್ತ್ವಜ್ಞಾ ನನೃತುಶ್ಚಾಪ್ಸರೋಗಣಾಃ ।
ತತೋ ದೇವಾಸ್ಸಗಂಧರ್ವಾಃ ಸ್ವಂ ಸ್ವಂ ಸ್ಥಾನಂ ನೃಪೋತ್ತಮ ॥ ೨೩ ॥

ವರಂ ದತ್ತ್ವಾ ಪ್ರಜಗ್ಮುಸ್ತೇ ಸ್ತೂಯಮಾನಾಃ ಪತಿವ್ರತಾಂ ।
ನಾರೀತೀರ್ಥಂ ಸಮಾಖ್ಯಾತಮನ್ಯತ್ಕಿಂ ಪ್ರವದಾಮಿ ತೇ ॥ ೨೪ ॥

---

ಗ್ರಹದಿಂದ ಆಸೆಯುಂಟಾಗಲಿ. ಎಲೈ ದೇವತೆಗಳೇ, ನೀವು ಸಂತೋಷಗೊಂಡರೆ ಆ ಮೇಲೆ ಹೆಂಡತಿ, ಪಿತಾಮಹರೊಡನೆ ವೈಷ್ಣವ ಲೋಕವನ್ನು ಹೊಂದಲಿಚ್ಛಿಸುತ್ತೇನೆ. ಎಂದು ಹೇಳಿದನು.

೨೧. ದೇವತೆಗಳು ಹೇಳಿದರು— ನಿನ್ನ ಪತ್ನಿಯಾದ ಈ ಸುಕಲೆಯು ಮಹಾ ಪುಣ್ಯವತಿಯಾದುದರಿಂದ ನಿನಗೆ ಎಲ್ಲವೂ ಲಭಿಸುತ್ತವೆ. ಹಾಗೆಯೇ ಆಗಲಿ ಎಂದರು.

೨೨-೨೪. ವಿಷ್ಣುವು ಹೇಳಿದನು—ಹೀಗೆಂದು ಹೇಳಿ ಅವರಿಬ್ಬರಮೇಲೂ ಪುಷ್ಪವೃಷ್ಟಿಯನ್ನು ಮಾಡಿದರು. ಒಳ್ಳೆಯ ಮಾತುಗಳಿಂದ ಹೊಗಳಿದರು. ಮಧುರ ವಾದ ಮಾತುಗಳನ್ನಾಡಿದರು. ಗಂಧರ್ವರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತನಮಾಡಿದರು. ಆ ಮೇಲೆ ಮಿಕ್ಕ ದೇವತೆಗಳೂಕೂಡ ವರವನ್ನು ಕೊಟ್ಟು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಈರೀತಿ ನಾರೀಯೆಂಬ ತೀರ್ಥವನ್ನು ಹೇಳಿದ ದಾಯಿತು. ಈಗ ಇನ್ನೇನನ್ನು ಹೇಳಲಿ?

ಏತತ್ತೇ ಸರ್ವಮಾಖ್ಯಾತಂ ಪುಣ್ಯಾಖ್ಯಾನಮನುತ್ತಮಂ ।
ಯಶ್ಶೃಣೋತಿ ನರೋ ರಾಜನ್ ಸರ್ವಪಾಪೈಃ ಪ್ರಮುಚ್ಯತೇ ॥ ೨೫ ॥

ಶ್ರದ್ಧಯಾ ಶೃಣುಯಾನ್ನಾರೀ ಸುಕಲಾಖ್ಯಾನಮುತ್ತಮಂ ।
ಸೌಭಾಗ್ಯೇನ ಸುಸತ್ಯೇನ ಪುತ್ರಪೌತ್ರೈಶ್ಚ ಯುಜ್ಯತೇ ॥ ೨೬ ॥

ಮೋದತೇ ಧನಧಾನ್ಯೈಶ್ಚ ಸಹ ಭರ್ತ್ರಾ ಸುಖೀ ಭವೇತ್ ।
ಪತಿವ್ರತಾ ಭವೇತ್ಸಾ ಚ ಜನ್ಮಜನ್ಮನಿ ನಾನ್ಯಥಾ ॥ ೨೭ ॥

ಬ್ರಾಹ್ಮಣೋ ವೇದವಿದ್ಭೂಯಾತ್ಕ್ಷತ್ರಿಯೋ ವಿಜಯೀ ಭವೇತ್ ।
ಧನಧಾನ್ಯಂ ಭವೇತ್ತಸ್ಯ ವೈಶ್ಯಗೇಹೇ ನ ಸಂಶಯಃ ॥ ೨೮ ॥

ಧರ್ಮಜ್ಞೋ ಜಾಯತೇ ರಾಜನ್ ಸದಾಚಾರಸ್ಸುಖೀ ಭವೇತ್ ।
ಶೂದ್ರಸ್ಸುಖಮವಾಪ್ನೋತಿ ಪುತ್ರಪೌತ್ರೈಃ ಪ್ರವರ್ಧತೇ ।
ವಿಪುಲಾ ಜಾಯತೇ ಲಕ್ಷ್ಮೀರ್ಧನಧಾನ್ಯೈರಲಂಕೃತಃ ॥ ೨೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಸುಕಲಾಚರಿತೇ ಷಷ್ಟಿತಮೋಽಧ್ಯಾಯಃ

---

೨೫. ಈ ಪುಣ್ಯವಾದ ಕಥೆಯನ್ನು ಹೇಳಿದ್ದೇನೆ. ಇದನ್ನು ಕೇಳಿದರೆ ಸರ್ವ ಪಾಪಗಳೂ ಹೋಗುತ್ತವೆ.

೨೬-೨೭. ಸ್ತ್ರೀಯರು ಈ ಸುಕಲಾದೇವಿಯ ದಿವ್ಯ ಚರಿತ್ರೆಯನ್ನು ಶ್ರವಣ ಮಾಡಿದರೆ, ಸೌಭಾಗ್ಯ ಸತ್ಯ, ಪುತ್ರಪೌತ್ರಾದಿ ಸಂತಾನ, ಧನಧಾನ್ಯ ಸಮೃದ್ಧಿ ಇವುಗಳುಂಟಾಗುವುದಲ್ಲದೆ ಅವರು ಪ್ರತಿ ಜನ್ಮದಲ್ಲಿಯೂ ಪತಿವ್ರತೆಯರಾಗಿ ತಮ್ಮ ಗಂಡಂದಿರೊಡನೆ ಸುಖಿಸುತ್ತಾರೆ. ಇದು ನಿಶ್ಚಯವು.

೨೮-೨೯. ಬ್ರಾಹ್ಮಣನು ಕೇಳಿದರೆ ವೇದವನ್ನು ತಿಳಿದವನಾಗುವನು. ಕ್ಷತ್ರಿಯನು ವಿಜಯಿಯಾಗುವನು. ವೈಶ್ಯನು ಧನಧಾನ್ಯಭರಿತನೂ ಧರ್ಮಜ್ಞನೂ, ಸದಾಚಾರಶೀಲನೂ ಆಗುತ್ತಾನೆ. ಶೂದ್ರನು ಸುಖವನ್ನೂ ಪುತ್ರಪೌತ್ರಾದಿ ಸಂತಾನವನ್ನೂ ಹೊಂದುವುದಲ್ಲದೆ ಅವನು ಧನಧಾನ್ಯ ಸಮೃದ್ಧಿಯನ್ನೂ, ವಿಪುಲ ಸಂಪತ್ತನ್ನೂ ಪಡೆದು ಸುಖಿಸುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ
ಅರವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕಷಷ್ಟಿತಮೋಽಧ್ಯಾಯಃ

॥ ವೇನ ಉವಾಚ ॥

ಭಾರ್ಯಾತೀರ್ಥಂ ಸಮಾಖ್ಯಾತಂ ಸರ್ವತೀರ್ಥೋತ್ತಮೋತ್ತಮಂ ।
ಪಿತೃತೀರ್ಥಂ ಸಮಾಖ್ಯಾಹಿ ಪುತ್ರಾಣಾಂ ತಾರಣಂ ಪರಂ ॥ ೧ ॥

॥ ವಿಷ್ಣುರುವಾಚ ॥

ಕುರುಕ್ಷೇತ್ರೇ ಮಹಾಪುಣ್ಯೇ ಕುಂಡಲೋ ನಾಮ ಭೂಸುರಃ ।
ಸುಕರ್ಮಾ ನಾಮ ಸತ್ಪುತ್ರಃ ಕುಂಡಲಸ್ಯ ಮಹಾತ್ಮನಃ ॥ ೨ ॥

ಗುರೂ ತಸ್ಯ ಮಹಾವೃದ್ಧೌ ಧರ್ಮಜ್ಞೌ ಶಾಸ್ತ್ರಕಾರಿಣಾ ।
ದ್ವಾವೇತೌ ತೌ ಮಹಾಪ್ರಾಜ್ಞೌ ಜರಯಾ ಪರಿಪೀಡಿತೌ ॥ ೩ ॥

---

## ಅರವತ್ತೊಂದನೆಯ ಅಧ್ಯಾಯವು

೧. ವೇನನು ಹೇಳಿದನು––ಸರ್ವತೀರ್ಥಗಳಿಗೂ ಉತ್ತಮವಾದ ಭಾರ್ಯಾತೀರ್ಥವನ್ನು ಹೇಳಿದೆ. ಪುತ್ರರಿಗೆ ಉತ್ತಮಗತಿದಾಯಕವಾದ ಪಿತೃತೀರ್ಥವನ್ನು ಹೇಳು.

೨. ವಿಷ್ಣುವು ಹೇಳಿದನು—ಮಹಾ ಪುಣ್ಯಪ್ರದವಾದ ಕುರುಕ್ಷೇತ್ರದಲ್ಲಿ ಕುಂಡಲನೆಂಬ ಒಬ್ಬ ಬ್ರಾಹ್ಮಣನಿದ್ದನು ಆ ಮಹಾತ್ಮನಿಗೆ ಸುಕರ್ಮನೆಂಬ ಒಬ್ಬ ಒಳ್ಳೆಯ ಮಗನಿದ್ದನು.

೩. ಆ ಸುಕರ್ಮನ ತಾಯಿತಂದೆಗಳು ಮುದುಕರು. ಧರ್ಮವನ್ನು ತಿಳಿದವರು. ಶಾಸ್ತ್ರವನ್ನು ರಚಿಸಬಲ್ಲವರು. ಹೀಗಿರಲು ಅವರಿಬ್ಬರೂ ಮುಪ್ಪಿನಿಂದ ಬಹುವಾಗಿ ಪೀಡಿತರಾದರು.

ತಯೋಶ್ಶುಶ್ರೂಷಣಂ ಚಕ್ರೇ ಭಕ್ತ್ಯಾ ಚ ಪರಯಾ ತತಃ ।
ಧರ್ಮಜ್ಞೋ ಭಾವಸಂಯುಕ್ತೋ ಹ್ಯಹನಿರ್ಶಮರಿಂದಮ ॥ ೪ ॥

ತಸ್ಮಾದ್ವೇದಾನಧೀತೇ ಸ ಪಿತುಃ ಶಾಸ್ತ್ರಾಣ್ಯನೇಕಶಃ ।
ಸರ್ವಾಚಾರಪರೋ ದಾಂತಃ ಸತ್ಯವಾನ್ ಜ್ಞಾನವತ್ಸಲಃ ॥ ೫ ॥

ಅಂಗಸಂವಾಹನಂ ಚಕ್ರೇ ಗುರ್ವೋಶ್ಚ ಸ್ವಯಮೇವ ಸಃ ।
ಪಾದಪ್ರಕ್ಷಾಳನಂ ಚೈವ ಸ್ನಾನಭೋಜನಕಾಂ ಕ್ರಿಯಾಂ ॥ ೬ ॥

ಭಕ್ತ್ಯಾಚೈವ ಸ್ವಭಾವೇನ ಸತತಂ ತನ್ಮಯೋ ಭವೇತ್ ।
ಮಾತಾಪಿತ್ರೋಶ್ಚ ರಾಜೇಂದ್ರ ಉಪಚರ್ಯಾಂ ಕರೋತಿ ಸಃ ॥ ೭ ॥

॥ ಸೂತ ಉವಾಚ ॥

ತದ್ವರ್ತಮಾನಕಾಲೇ ತು ಬಭೂವ ನೃಪಸತ್ತಮ ।
ಪಿಪ್ಪಲೋ ನಾಮ ವೈ ವಿಪ್ರಃ ಕಶ್ಯಪಸ್ಯ ಕುಲೋದ್ಭವಃ ॥ ೮ ॥

---

೪. ಧರ್ಮವನ್ನು ಬಲ್ಲ ಈ ಸುಕರ್ಮನು ಯಾವಾಗಲೂ ಒಳ್ಳೆಯ ಅಭಿಪ್ರಾಯದಿಂದಲೂ ಹೆಚ್ಚಾದ ಭಕ್ತಿಯಿಂದಲೂ, ಅವರನ್ನು ಶುಶ್ರೂಷೆ ಮಾಡುತ್ತಿದ್ದನು.

೫. ಆ ತಂದೆಯಿಂದ ವೇದಗಳನ್ನು ಶಾಸ್ತ್ರಗಳನ್ನು ಕಲಿಯುತ್ತಲಿದ್ದನು. ಆಚಾರಶೀಲನಾಗಿಯೂ ಸತ್ಯವಂತನಾಗಿಯೂ' ಜ್ಞಾನಿಯಾಗಿಯೂ ಇದ್ದನು.

೬. ಅವರಿಗೆ ಕೈಕಾಲು ಒತ್ತುವುದು, ಕಾಲು ತೊಳೆಯುವುದು, ಸ್ನಾನ ಭೋಜನಗಳನ್ನು ಮಾಡಿಸುವುದು ಇವೇ ಮುಂತಾದ ಕೆಲಸಗಳನ್ನು ತಾನೇ ಮಾಡಿಸುತ್ತಿದ್ದನು.

೭. ಸ್ವಭಾವವಾದ ಭಕ್ತಿಯಿಂದ ಅವನು ಅವರ ಸೇವೆಯಲ್ಲಿಯೇ ಲೀನನಾಗಿದ್ದನು. ಈ ರೀತಿ ಅವನು ತಾಯಿತಂದೆಗಳ ಶುಶ್ರೂಷೆಮಾಡುತ್ತಿದ್ದನು.

೮. ಸೂತರು ಹೇಳಿದರು—ಅದೇ ಕಾಲದಲ್ಲಿ ಕಾಶ್ಯಪರ ವಂಶದಲ್ಲಿ ಹುಟ್ಟಿದ ಪಿಪ್ಪಲನೆಂಬ ಒಬ್ಬ ಬ್ರಾಹ್ಮಣನಿದ್ದನು.

ಧರ್ಮಕರ್ಮಾ ಮಹಾಭಾಗ ಜಿತಾತ್ಮಾ ಜಿತವಿಗ್ರಹಃ ।
ದಮಶೌಚಸಮೋಪೇತಃ ಕಾಮಕ್ರೋಧವಿವರ್ಜಿತಃ ॥ ೯ ॥

ದಶಾರಣ್ಯೇ ಗತೋ ಧೀಮಾನ್ ಜ್ಞಾನಶಾನ್ತಿಪರಾಯಣಃ ।
ಸರ್ವೇಂದ್ರಿಯಾಣಿ ಸಂಯಮ್ಯ ತಪಸ್ತೇಪೇ ಮಹಾಮನಾಃ ॥ ೧೦ ॥

ತಪಃಪ್ರಭಾವತಸ್ತಸ್ಯ ಜಂತವೋ ಗತವಿಗ್ರಹಾಃ ।
ವಸಂತಿ ಸುಮುಗೇ ತತ್ರ ಏಕೋದರಗತಾ ಇವ ॥ ೧೧ ॥

ತತ್ತಪಸ್ತಸ್ಯ ಮುನಯೋ ದೃಷ್ಟ್ವಾ ವಿಸ್ಮಯಮಾಯಯುಃ ।
ನೇದೃಶಂ ಕೇನಚಿತ್ತಪ್ತಂ ಯಥಾಸೌ ತಪ್ಯತೇ ಮುನಿಃ ॥ ೧೨ ॥

ದೇವಾಶ್ಚ ಇಂದ್ರಪ್ರಮುಖಾಃ ಪರಂ ವಿಸ್ಮಯಮಾಯಯುಃ ।
ಅಹೋ ಅಸ್ಯ ತಪಸ್ತೀವ್ರಂ ಶಮಶ್ಚೇಂದ್ರಿಯಸಂಯಮಃ ॥ ೧೩ ॥

---

೯-೧೦. ಅವನು ಧರ್ಮಿಷ್ಠನು, ಜಿತೇಂದ್ರಿಯನು, ದಮಶೌಚಗಳಿಂದ ಕೂಡಿದವನು. ಕಾಮಕ್ರೋಧಗಳಿಲ್ಲದವನು. ಜ್ಞಾನಶಾನ್ತಿಗಳಿಂದ ಕೂಡಿದ ಆತನು ದಶಾರಣ್ಯವೆಂಬ ವನಕ್ಕೆ ಹೋಗಿ ಸರ್ವೇಂದ್ರಿಯಗಳನ್ನು ನಿಗ್ರಹಿಸಿ ತಪಸ್ಸು ಮಾಡುತ್ತಿದ್ದನು.

೧೧. ಅವನ ತಪಃ ಪ್ರಭಾವದಿಂದ ಪ್ರಾಣಿಗಳು ರೋಗರಹಿತದಾದವು. ಅಣ್ಣಗಿಮ್ಮಂದಿರಂತೆ ಅಲ್ಲ ಸ್ನೇಹವಾಗಿ ವಾಸಮಾಡುತ್ತಿದ್ದುವು.

೧೨. ಅವನ ಆ ರೀತಿಯಾದ ತಪಸ್ಸನ್ನು ಋಷಿಗಳು ನೋಡಿ ಆಶ್ಚರ್ಯ ಹೊಂದಿದರು. ಇವನು ಮಾಡುವಂತೆ ಯಾರೂ ಕೂಡ ತಪಸ್ಸು ಮಾಲಿಲ್ಲವೆಂದು ಕೊಂಡರು.

೧೩. ಇಂದ್ರನೇ ಮೊದಲಾದ ದೇವತೆಗಳಗಿ ಬಹು ಆಶ್ಚರ್ಯಪಟ್ಟರು. ಇವನ ತೀವ್ರವಾದ ತಪಸ್ಸೂ ಶ್ರಮವೂ, ಇಂದ್ರಿಯ ನಿಗ್ರಹವೂ ಆಶ್ಚರ್ಯವಾದುವೆಂದರು.

ನಿರ್ವಿಕಾರೋ ನಿರುದ್ವೇಗಃ ಕಾಮಕ್ರೋಧವಿವರ್ಜಿತಃ ।
ಶೀತವಾತಾತಪಸಹೋ ಧರಾಧರ ಇವ ಸ್ಥಿತಃ ॥ ೧೪ ॥

ವಿಷಯೇ ವಿಮುಖೋ ಧೀರೋ ಮನಸೋಽತೀತಸಂಗ್ರಹಃ ।
ನ ಶೃಣೋತಿ ಯಥಾ ಶಬ್ದಂ ಕಸ್ಯಚಿದ್ದ್ವಿಜಸತ್ತಮಃ ॥ ೧೫ ॥

ಸಂಸ್ಥಾನಂ ತಾದೃಶಂ ಗತ್ವಾ ಸ್ಥಿತ್ವಾ ಏಕಾಗ್ರಮಾನಸಃ ।
ಬಹ್ಮಧ್ಯಾನಮಯೋ ಭೂತ್ವಾ ಸಾನಂದಮುಖಪಂಕಜಃ ॥ ೧೬ ॥

ಅಶ್ಮಕಾಷ್ಠ ಇವಾತ್ಯರ್ಥಂ ನಿಶ್ಚೇಷ್ಟೋ ಗಿರಿವತ್ಸ್ಥಿತಃ ।
ಸ್ಥಾಣುವದ್ದೃಶ್ಯತೇ ಚಾಸೌ ಸುಸ್ಥಿರೋ ಧರ್ಮವತ್ಸಲಃ ॥ ೧೭ ॥

ತಪಃಕ್ಲಿಷ್ಟಶರೀರೋಽತಿಶ್ರದ್ಧಾವಾನನಸೂಯಕಃ ।
ಏವಂ ವರ್ಷಸಹಸ್ರೈಕಂ ಸಂಜಾತಂ ತಸ್ಯ ಧೀಮತಃ ॥ ೧೮ ॥

---

೧೪. ಇವನು ನಿರ್ವಿಕಾರನಾಗಿದ್ದಾನೆ. ಉದ್ವೇಗವೆಂಬುದೇ ಇವನಿಗಿಲ್ಲ. ಕಾಮ ಕ್ರೋಧಗಳಿಲ್ಲವೇ ಇಲ್ಲ. ಶೀತ ವಾತ, ಬಿಸಿಲು ಇವುಗಳನ್ನು ಸಹಿಸುವನು. ಅದರಿಂದ ಬೆಟ್ಟದಂತೆ ಸ್ಥಿರವಾಗಿರುವನು.

೧೫. ವಿಷಯಸುಖಗಳಲ್ಲಿ ವಿಮುಖನಾಗಿ ಧೀರಬುದ್ಧಿಯಿಂದ, ಮನಸ್ಸಿಗೂ ಅತೀತವಾದುದನ್ನು ಸಂಗ್ರಹಿಸುತ್ತಿದ್ದನು. ಒಂದು ಶಬ್ದವನ್ನೂ ಕೂಡ ಕೇಳುತ್ತ ಲಿರಲಿಲ್ಲ.

೧೬-೧೭. ಅಂತಹ ಶಬ್ದ ಕಿವಿಗೆ ಬೀಳದ ಜಾಗಕ್ಕೆ ಹೋಗಿ ಏಕಾಗ್ರಮನಸ್ಸಿನಿಂದಿದ್ದು ಬ್ರಹ್ಮಧ್ಯಾನಮಾಡುತ್ತಾ ಆನಂದವುಳ್ಳವನಾಗಿ ಕಲ್ಲುಕಟ್ಟಿಗೆಗಳಂತೆ ನಿಶ್ಚೇಷ್ಟನಾಗಿರುತ್ತಿದ್ದನು. ಹೀಗೆ ತಪಸ್ಸು ಮಾಡುತ್ತಿದ್ದಾಗ ಧರ್ಮವತ್ಸಲನಾದ ಈತನು ಸ್ಥಿರನಾಗಿ ಮೋಟು ಮರದಂತೆ ಕಾಣುತ್ತಿದ್ದನು.

೧೮. ಮತ್ತು ಈತನು ತುಂಬಾ ಶ್ರದ್ಧೆಯುಳ್ಳವನಾಗಿದ್ದನು. ಅಸೂಯೆಯನ್ನು ಬಿಟ್ಟಿದ್ದನು. ತಪಸ್ಸಿನಿಂದ ನಶಿಸಿದ ಶರೀರವುಳ್ಳವನಾಗಿದ್ದನು. ಈ ರೀತಿಯಾಗಿ ಆ ಪುಣ್ಯಾತ್ಮನು ತಪಸ್ಸು ಮಾಡುತ್ತಿರುವಾಗ ಒಂದು ಸಾವಿರ ವರ್ಷಗಳು ಕಳೆದವು.

ಪಿಪೀಲಿಕಾಭಿರ್ಬಹ್ವೀಭಿಃ ಕೃತಂ ಮೃದ್ಭಾರಸಂಚಯಂ ।
ತಸ್ಯೋಪರಿ ಮಹಾಕಾಯಂ ವಲ್ಮೀಕಾನಾಂ ಚ ಮಂದಿರಂ ॥ ೧೯ ॥

ವಲ್ಮೀಕೋದರಮಧ್ಯಸ್ಥೋ ಜಡೀಭೂತ ಇವ ಸ್ಥಿತಃ ।
ಸ ಏವಂ ಪಿಪ್ಪಲೋ ವಿಪ್ರಸ್ತಪ್ಯತೇ ಸುಮಹತ್ತಪಃ ॥ ೨೦ ॥

ಕೃಷ್ಣಸರ್ಪೈಸ್ತು ಸರ್ವತ್ರ ವೇಷ್ಟಿತೋ ದ್ವಿಜಸತ್ತಮಃ ।
ತಮುಗ್ರತೇಜಸಂ ವಿಪ್ರಂ ದಶಂತಿ ಸ್ಮ ವಿಷೋಲ್ಬಣಾಃ ॥ ೨೧ ॥

ಸಂಪ್ರಾಪ್ಯ ಗಾತ್ರಾಣಿ ವಿಷಂ ತ್ವಚಂ ತಸ್ಯ ನ ಭೇದಯೇತ್ ।
ತೇಜಸಾ ತಸ್ಯ ವಿಪ್ರಸ್ಯ ನಾಗಾಶ್ಶಾನ್ತಿಮಥಾಗಮನ್ ॥ ೨೨ ॥

ತಸ್ಯ ಕಾಯಾತ್ಸಮುದ್ಭೂತಾ ಅರ್ಚಿಷೋ ದೀಪ್ತತೇಜಸಃ ।
ನಾನಾರೂಪಾಸ್ಸುಬಹುಶೋ ದೃಶ್ಯಂತೇ ಚ ಪೃಥಕ್ಪೃಥಕ್ ॥ ೨೩ ॥

---

೧೯-೨೦. ಗೆದ್ದಲು ಹುಳುಗಳು ಅವನ ಸುತ್ತಲೂ ಗೂಡುಕಟ್ಟಿದುವು. ಅವನ ಮೇಲೆ ಹುತ್ತದ ಕೋವೆಗಳಾದುವು. ಆ ಹುತ್ತದ ಮಧ್ಯದಲ್ಲಿ ಜಡನಾಗಿ ಈತನಿರುವನು. ಈರೀತಿಯಾಗಿ ಪಿಪ್ಪಲನು ಉಗ್ರವಾದ ತಪಸ್ಸನ್ನು ಮಾಡುತ್ತಲಿದ್ದನು.

೨೧. ಅವನನ್ನು ಸುತ್ತಲೂ ಕೃಷ್ಣಸರ್ಪಗಳು ಸುತ್ತಿಕೊಂಡಿರುತ್ತಿದ್ದವು. ಆ ತೇಜಸ್ವಿಯಾದ ಬ್ರಾಹ್ಮಣನನ್ನು ಉಗ್ರವಿಷಗಳಿಂದ ಆ ಸರ್ಪಗಳು ಕಡಿಯುವುವು.

೨೨. ಆದರೂ ಆ ವಿಷಗಳು ಅವನ ಚರ್ಮವನ್ನೇ ಭೇದಿಸಲಾಗುತ್ತಿರಲಿಲ್ಲ. ಅವನ ತೇಜಸ್ಸಿನಿಂದ ಆ ಹಾವುಗಳು ತಮ್ಮಷ್ಟಕ್ಕೆ ತಾವು ಸುಮ್ಮನಾಗುತ್ತಿದ್ದುವು.

೨೩. ಅವನ ದೇಹದಿಂದ ಹೊರಟ ಕಾಂತಿಮತ್ತಾದ ಜ್ವಾಲೆಗಳು ನಾನಾಬಗೆಯಾಗಿ ಬೇರೆ ಬೇರೆ ಕಾಣುತ್ತಿದ್ದುವು.

**ಯಥಾ ವಹ್ನೇಃ ಪ್ರದೃಶ್ಯತೇ ತಥೈವ ಚ ನೃಪೋತ್ತಮ ।**
**ಯಥಾ ಮೇಘೋದರೇ ಸೂರ್ಯಃ ಪ್ರವಿಷ್ಟೋ ಭಾತಿ ರಶ್ಮಿಭಿಃ ॥ ೨೪ ॥**

**ಸರ್ಪಾ ದಂಶಂತಿ ವಿಪ್ರಂ ತಂ ಸಕ್ರೋಧಾ ದಶನೈರಪಿ ।**
**ನ ಭಿಂದಂತಿ ದಂಷ್ಟ್ರಾಗ್ರಾಶ್ಚರ್ಮ ಭಿತ್ವಾ ನೃಪೋತ್ತಮ ॥ ೨೫ ॥**

**ಏವಂ ವರ್ಷಸಹಸ್ರೈಕಂ ತಪ ಆಚರತಸ್ತತಃ ।**
**ಗತಂ ಚ ರಾಜರಾಜೇಂದ್ರ ಮುನೇಸ್ತಸ್ಯಮಹಾತ್ಮನಃ ॥ ೨೬ ॥**

**ತ್ರಿಕಾಲಂ ಸಾಧ್ಯಮಾನಸ್ಯ ಲೀಲಾತಪವಧಾನ್ವಿತಂ ।**
**ಗತಂ ಕಾಲಂ ಮಹಾರಾಜ ಪಿಪ್ಪಲಸ್ಯ ಮಹಾತ್ಮನಃ ॥ ೨೭ ॥**

**ತದ್ವಚ್ಚ ವಾಯುಭಕ್ಷಂ ಚ ಕೃತಂ ತೇನ ಮಹಾತ್ಮನಾ ।**
**ತ್ರೀಣಿ ವರ್ಷಸಹಸ್ರಾಣಿ ಗತ್ವಾನ್ಯೇವಂ ಚ ಭೂಪತೇ ॥ ೨೮ ॥**

---

೨೪. ಬೆಂಕಿಯ ಜ್ವಾಲೆಗಳು ಕಾಣುತ್ತಿದ್ದಂತೆ ಈತನ ತೇಜಸ್ಸು ಕಾಣುತ್ತಿತ್ತು. ಮೇಘದ ಮಧ್ಯದಲ್ಲಿರುವ ಸೂರ್ಯನು ಕಾಂತಿಗಳಿಂದ ಪ್ರಕಾಶಿಸುವಂತೆ ಹುತ್ತದಲ್ಲಿ ಅಡಗಿರುವ ಈ ವಿಪ್ರನು ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು.

೨೫. ಸರ್ಪಗಳು ಆತನನ್ನು ಕೋಪಗೊಂಡು ಕಚ್ಚಿದರೂ ಆತನ ಚರ್ಮವನ್ನು ಭೇದಿಸಲಾಗುತ್ತಿರಲಿಲ್ಲ.

೨೬. ಈರೀತಿ ತಪಸ್ಸುಮಾಡುತ್ತಿರುವ ಆತನಿಗೆ ಒಂದು ಸಾವಿರ ವರ್ಷಗಳು ಕಳೆದುವು.

೨೭-೨೮. ತ್ರಿಕಾಲದಲ್ಲೂ ಲೀಲೆಯಿಂದಲೇ ಸುಖವಾಗಿ ತಪಸ್ಸುಮಾಡುತ್ತಿರುವ ಈತನಿಗೆ ಬಹುಕಾಲವು ಕಳೆಯಿತು. ಅನಂತರ ಆಹಾರವನ್ನು ತ್ಯಜಿಸಿ, ಕೇವಲ ವಾಯುವನ್ನೇ ಸೇವಿಸುತ್ತ ತಪಸ್ಸು ಮಾಡುತ್ತಿದ್ದನು. ಈರೀತಿ ಮತ್ತೆ ಮೂರು ಸಾವಿರ ವರ್ಷಗಳು ಕಳೆದವು.

ತಸ್ಯ ಮೂರ್ಧ್ನಿ ತತೋ ದೇವೈಃ ಪುಷ್ಪವೃಷ್ಟಿಃ ಕೃತಾ ಪುರಾ ।
ಬ್ರಹ್ಮಜ್ಞೋಽಸಿ ಮಹಾಭಾಗ ಧರ್ಮಜ್ಞೋಽಸಿ ನ ಸಂಶಯಃ ।
ಸರ್ವಜ್ಞಾನಮಯೋಽಸಿ ತ್ವಂ ಸಂಜಾತಸ್ತ್ವೇನ ಕರ್ಮಣಾ ॥ ೨೯ ॥

ಯಂ ಯಂ ತ್ವಂ ವಾಂಛಸೇ ಕಾಮಂ ತಂ ತಂ ಪ್ರಾಪ್ಸ್ಯಸಿ ನಾನ್ಯಥಾ ।
ಸರ್ವಕಾಮಮಯೀ ಸಿದ್ಧಿಃ ಸ್ವತ ಏವ ಭವಿಷ್ಯತಿ ॥ ೩೦ ॥

ಸಮಾಕರ್ಣ್ಯ ತತೋ ವಾಕ್ಯಂ ಪಿಪ್ಪಲೋಽಪಿ ಮಹಾಮನಾಃ ।
ಪ್ರಣಮ್ಯ ದೇವತಾಸ್ಸರ್ವಾ ಭಕ್ತ್ಯಾ ನಮಿತಕಂಧರಃ ॥ ೩೧ ॥

ಹರ್ಷೇಣ ಮಹತಾವಿಷ್ಟೋ ದೇವಾನ್ ಪ್ರತ್ಯುವಾಚ ಹ ।
ಇದಂ ಚೈವ ಜಗತ್ಸರ್ವಂ ಮಮ ವಶ್ಯಂ ಯಥಾ ಭವೇತ್ ॥ ೩೨ ॥

ತಥಾ ಕುರುಧ್ವಂ ಭೋ ದೇವಾ ವಿದ್ಯಾಧರೋ ಭವಾಮ್ಯಹಂ ।
ಏವಮುಕ್ತ್ವಾ ಸ ಮೇಧಾವೀ ವಿರರಾಮ ನೃಪೋತ್ತಮ ॥ ೩೩ ॥

---

೨೯. ಹೀಗೆ ತಪಸ್ಸುಮಾಡುತ್ತಲಿರುವ ಈತನ ತಲೆಯಮೇಲೆ ದೇವತೆಗಳು ಸಂತೋಷಗೊಂಡು ಪುಷ್ಪವೃಷ್ಟಿಯನ್ನು ಸುರಿಸಿದರು. ಅನಂತರ ದೇವತೆಗಳು ಅವನನ್ನು ಕುರಿತು ಎಲೈ ಮಹಾನುಭವನೇ, ನೀನು ಬ್ರಹ್ಮಜ್ಞನೂ, ಧರ್ಮಜ್ಞನೂ, ಸರ್ವಜ್ಞನೂ ಸಹ ಆಗಿದ್ದೀಯೆ. ಇದರಲ್ಲಿ ಸಂಶಯವಿಲ್ಲಾ.

೩೦. ನೀನು ಏನೇನನ್ನು ಅಪೇಕ್ಷಿಸುತ್ತೀಯೋ ಅವೆಲ್ಲವೂ ನಿನಗೆ ಲಭಿಸುತ್ತವೆ. ಸರ್ವ ಇಷ್ಟವನ್ನೂ ಕೊಡುವ ತಪಸ್ಸಿದ್ಧಿಯು ನಿನಗುಂಟಾಗಿದೆ ಎನಲು,

೩೧-೩೩. ಪಿಪ್ಪಲನು ಆ ಮಾತನ್ನು ಕೇಳಿ ದೇವತೆಗಳನ್ನು ಭಕ್ತಿಯಿಂದ ನಮಸ್ಕರಿಸಿ, ನಮ್ರತೆಯಿಂದ ತಲೆತಗ್ಗಿಸಿಕೊಂಡು ನಿಂತು, ಬಹು ಸಂತೋಷಗೊಂಡವನಾಗಿ ದೇವತೆಗಳನ್ನು ಕುರಿತು ಎಲೈ ದೇವತೆಗಳಿರಾ, ಈ ಜಗತ್ತೆಲ್ಲವೂ ನನ್ನ ವಶವಾಗುವಂತೆ ಮಾಡಿಕೊಡಿ. ನಾನು ವಿದ್ಯಾಧರನಾಗಬೇಕೆಂದು ಹೇಳಿದನು.

**ಏವಮುಸ್ತ್ವಿತಿ ತೇ ಪ್ರೋಚುರ್ದ್ವಿಜಶ್ರೇಷ್ಠಂ ಸುರಾಸ್ತದಾ ।**
**ದತ್ವಾ ವರಂ ಮಹಾಭಾಗ ಜಗ್ಮುಸ್ತಸ್ಮೈ ಮಹಾತ್ಮನೇ ॥ ೩೪ ॥**

**ಗತೇಷು ತೇಷು ದೇವೇಷು ಪಿಪ್ಪಲೋ ದ್ವಿಜಸತ್ತಮಃ ।**
**ಬ್ರಹ್ಮಣ್ಯಂ ಸಾಧಯೇನ್ನಿತ್ಯಂ ವಿಶ್ವವಶ್ಯಂ ಪ್ರಚಿಂತಯೇತ್ ॥ ೩೫ ॥**

**ತದಾಪ್ರಭೃತಿ ರಾಜೇಂದ್ರ ಪಿಪ್ಪಲೋ ದ್ವಿಜಸತ್ತಮಃ ।**
**ವಿದ್ಯಾಧರಪದಂ ಲಬ್ಧ್ವಾ ಕಾಮಗಾಮೀ ಮಹೀಯತೇ ॥ ೩೬ ॥**

**ಏವಂ ಸ ಪಿಪ್ಪಲೋ ವಿಪ್ರೋ ವಿದ್ಯಾಧರಪದಂ ಗತಃ ।**
**ಸಂಜಾತೋ ದೇವಲೋಕೇಶಃ ಸರ್ವವಿದ್ಯಾವಿಶಾರದಃ ॥ ೩೭ ॥**

**ಏಕದಾ ತು ಮಹಾತೇಜಾಃ ಪಿಪ್ಪಲಃ ಪರಿಚಿಂತಯೇತ್ ।**
**ವಿಶ್ವಂ ವಶ್ಯಂ ಭವೇತ್ಸರ್ವಂ ಮಮ ದತ್ತೋ ವರೋತ್ತಮಃ ॥ ೩೮ ॥**

**ತದರ್ಥಂ ಪ್ರತ್ಯಯಂ ಕರ್ತುಮುದ್ಯತೋ ದ್ವಿಜಸತ್ತಮಃ ।**
**ಯಂ ಯಂ ಚಿಂತಯತೇ ವಶ್ಯಂ ತಂ ತಂ ಹಿ ವಶಮಾನಯೇತ್ ॥ ೩೯ ॥**

---

೩೪. ಆ ಬ್ರಾಹ್ಮಣನನ್ನು ಕುರಿತು ಆ ದೇವತೆಗಳು ಹಾಗೆಯೇ ಆಗಲೆಂದು ಹೇಳಿ ವರವನ್ನುಕೊಟ್ಟು ಹೊರಟುಹೋದರು.

೩೫. ಆ ದೇವತೆಗಳು ಹೋಗಲು ಆ ಪಿಪ್ಪಲನು ಬ್ರಾಹ್ಮಣ್ಯವನ್ನು ಸಾಧಿಸುತ್ತಾ ಪ್ರಪಂಚವು ತನ್ನ ವಶವಾಗುವುದನ್ನು ಚಿಂತಿಸುತ್ತಿದ್ದನು.

೩೬. ಅದು ಮೊದಲು ಪಿಪ್ಪಲನು ವಿದ್ಯಾಧರನಾಗಿ ಇಚ್ಛೆಬಂದಂತೆ ಸಂಚರಿಸುತ್ತಾ ಸುಖವಾಗಿದ್ದನು.

೩೭. ಹೀಗೆ ಆ ಪಿಪ್ಪಲನು ವಿದ್ಯಾಧರಪದವಿಯನ್ನು ಹೊಂದಿ ಸರ್ವವಿದಾ ವಿಶಾರದನಾಗಿ ಸಮಸ್ತ ಲೋಕಕ್ಕೂ ಒಡೆಯನಾದನು.

೩೮. ಒಂದುಸಾರಿ ಮಹಾತೇಜಸ್ಸಿನಿಂದ ಗರ್ವಿತನಾಗಿ ಈ ಪಿಪ್ಪಲನು—ಪ್ರಪಂಚವೇ ನನಗೆ ಸ್ವಾಧೀನವಾಗಿರುತ್ತದೆ. ನನಗೆ ದೇವರು ಆ ರೀತಿ ವರವನ್ನು ಕೊಟ್ಟಿದ್ದಾನೆ. ಎಂದು ಯೋಚಿಸಿ,

೩೯. ಅದನ್ನು ನಿರ್ಧರಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಅನಂತರ ಯಾವು ಯಾವುದನ್ನು ಮನದಲ್ಲಿ ಚಿಂತಿಸುವನೋ ಅವನ್ನೆಲ್ಲಾ ವಶಮಾಡಿಕೊಳ್ಳುತ್ತಿದ್ದನು.

ಏವಂ ತತ್ಪ್ರತ್ಯಯಂ ಜ್ಞಾತ್ವಾ ಮನಸಾ ಪರಿಕಲ್ಪಿತಂ ।
ದ್ವಿತೀಯೋ ನಾಸ್ತಿ ವೈ ಲೋಕೇ ಮತ್ಸಮಃ ಪುರುಷೋತ್ತಮಃ ॥ ೪೦ ॥

॥ ಸೂತ ಉವಾಚ ॥

ಏವಂ ಹಿ ಚಿಂತ್ಯಮಾನಸ್ಯ ಪಿಪ್ಪಲಸ್ಯ ಮಹಾತ್ಮನಃ ।
ಜ್ಞಾತ್ವಾ ಮಾನಸಿಕಂ ಭಾವಂ ಸಾರಸಸ್ತಮುವಾಚ ಹ ॥ ೪೧ ॥

ಸರಸ್ತೀರಗತೋ ರಾಜನ್ ಸುಸ್ವರಂ ವ್ಯಂಜನಾನ್ವಿತಂ ।
ಸ್ವನಂ ಸೌಷ್ಠವಸಂಯುಕ್ತಮುಕ್ತವಾನ್ಪಿಪ್ಪಲಂ ಪ್ರತಿ ॥ ೪೨ ॥

ಕಸ್ಮಾದುದ್ವಹಸೇ ಗರ್ವಮೇವಂ ತ್ವಂ ಪರಮಾತ್ಮಕಂ ।
ಸರ್ವವಶ್ಯಾತ್ಮಕೀಂ ಸಿದ್ಧಿಂ ನಾಹಂ ಮನ್ಯೇ ತವೈವ ಹಿ ॥ ೪೩ ॥

ವಶ್ಯಾವಶ್ಯಮಿದಂ ಕರ್ಮ ಅರ್ವಾಚೀನಂ ಪ್ರಶಸ್ಯತೇ ।
ಪರಾಚೀನಂ ನ ಜಾನಾಸಿ ಪಿಪ್ಪಲ ತ್ವಂ ಹಿ ಮೂಢಧೀಃ ॥ ೪೪ ॥

ವರ್ಷಾಣಾಂ ತು ಸಹಸ್ರಾಣಿ ಯಾವತ್ತ್ರೀಣಿ ತ್ವಯಾ ತಪಃ ।
ಸಮಾಚೀರ್ಣಂ ತತೋ ಗರ್ವಂ ಭವಾನ್ ಮೂಢ ಇಹಾಗತಃ ॥ ೪೫ ॥

---

೪೦. ಈ ರೀತಿ ಆ ನಂಬಿಕೆಯನ್ನು ತಿಳಿದುಕೊಂಡು ನನ್ನ ಸಮಾನನಾದ ಮನುಷ್ಯನು ಲೋಕದಲ್ಲೇ ಇಲ್ಲವೆಂದು ಮನಸ್ಸಿನಲ್ಲಿ ಅಹಂಕಾರಪಟ್ಟುಕೊಂಡನು.

೪೧-೪೩. ಹೀಗೆ ಮಹಾತ್ಮನಾದ ಪಿಪ್ಪಲನು ಯೋಚಿಸುತ್ತಿರುವುದನ್ನು ತಿಳಿದು ಸರೋವರದ ತೀರದಲ್ಲಿದ್ದ ಒಂದು ಸಾರಸ ಪಕ್ಷಿಯು ಅವನನ್ನು ಕುರಿತು, ಒಳ್ಳೆಯ ಸ್ವರದಿಂದ ತಿಳಿಯುವಂತೆ ಓ ಪಿಪ್ಪಲನೇ, ಸರ್ವವನ್ನೂ ವಶಮಾಡಿಕೊಳ್ಳುವ ಶಕ್ತಿಯು ನನಗೊಬ್ಬನಿಗೇ ಇದೆ ಎಂಬ ಸ್ವಾಭಿಮಾನವನ್ನು ಏಕೆ ಹೊಂದಿದ್ದೀಯೆ? ಅದು ನಿನಗೊಬ್ಬನಿಗೇ ಇಲ್ಲ.

೪೪. ವಶ್ಯಾವಶ್ಯವೆಂಬ ಕೆಲಸವು ಈಗಿನಕಾಲದ್ದು ಅಷ್ಟೆ! ಎಲೈ ಪಿಪ್ಪಲನೇ ನೀನು ದಡ್ಡನು ಹಿಂದಿನದನ್ನು ತಿಳಿಯಲಾರೆಯಷ್ಟೆ?

೪೫. ನೀನು ಮೂರು ಸಾವಿರ ವರ್ಷಗಳು ತಪಸ್ಸು ಮಾಡಿದೆಯಾದರೂ, ನೀನು ದಡ್ಡನಾಗಿಯೇ ಇಲ್ಲಿಗೆ ಬಂದಿದ್ದೀಯೆ.

**ಕುಂಡಲಸ್ಯ ಸುತೋ ಧೀರಃ ಸುಕರ್ಮಾ ನಾಮ ಯಸ್ಸುಧೀಃ ।**
**ವಶ್ಯಾವಶ್ಯಂ ಜಗತ್ಸರ್ವಂ ತಸ್ಯಾಸೀಚ್ಛೃಣು ಸಾಂಪ್ರತಂ ॥ ೪೬ ॥**

**ಅರ್ವಾಚೀನಂ ಪರಾಚೀನಂ ಸ ವೈ ಜಾನಾತಿ ಬುದ್ಧಿಮಾನ್ ।**
**ಲೋಕೇ ನಾಸ್ತಿ ಮಹಾಜ್ಞಾನೀ ತತ್ಸಮಶ್ಶೃಣು ಪಿಪ್ಪಲ ॥ ೪೭ ॥**

**ನ ದತ್ತಂ ತೇನ ವೈ ದಾನಂ ನ ಧ್ಯಾನಂ ಪರಿಚಿಂತಿತಂ ।**
**ಹುತಯಜ್ಞಾದಿಕಂ ಕರ್ಮ ನ ಕೃತಂ ತೇನ ವೈ ಕದಾ ॥ ೪೮ ॥**

**ನ ಗತಸ್ತೀರ್ಥಯಾತ್ರಾಯಾಂ ಸದ್ಗುರೂಪಾಸನಂ ನ ಚ ।**
**ನೋ ಕದಾ ಕೃತವಾನ್ವಿಪ್ರ ಧರ್ಮಸೇವಾರ್ಥಮುತ್ತಮಂ ॥ ೪೯ ॥**

**ಸ್ವಚ್ಛಂದಚಾರೀ ಜ್ಞಾನಾತ್ಮಾ ಪಿತೃಮಾತೃಸುಹೃತ್ಸದಾ ।**
**ವೇದಾಧ್ಯಯನಸಂಪನ್ನಃ ಸರ್ವಶಾಸ್ತ್ರಾರ್ಥಕೋವಿದಃ ॥ ೫೦ ॥**

---

೪೬. ಕುಂಡಲನ ಮಗನಾದ ಸುಕರ್ಮನೆಂಬುವನೊಬ್ಬನಿದ್ದಾನೆ. ಅವನು ಮಹಾ ಬುದ್ಧಿವಂತನು. ಅವನಿಗೆ ಈ ಪ್ರಪಂಚವೆಲ್ಲವೂ ವಶ್ಯವಾಗಿದೆ.

೪೭. ಅದಲ್ಲದೆ ಅವನು ಹಿಂದಿನ ಮುಂದಿನ ವಿಷಯಗಳನ್ನೆಲ್ಲಾ ಬಲ್ಲನು. ಅವನಂತಹ ಮಹಾಜ್ಞಾನಿಯು ಲೋಕದಲ್ಲಿ ಮತ್ತೊಬ್ಬನಿಲ್ಲ.

೪೮. ಅವನು ದಾನಮಾಡಲಿಲ್ಲ, ಧ್ಯಾನಮಾಡಲಿಲ್ಲ. ಯಜ್ಞಾದಿಗಳನ್ನೂ ಮಾಡಲಿಲ್ಲ.

೪೯. ತೀರ್ಥಯಾತ್ರೆ ಸದ್ಗುರೂಪಾಸನೆ ಇವುಗಳನ್ನೂ ಮಾಡಲಿಲ್ಲ. ಧರ್ಮ ಸೇವೆಯನ್ನಂತೂ ಮಾಡಲೇ ಇಲ್ಲ.

೫೦. ಇಷ್ಟಬಂದಂತೆ ಸಂಚರಿಸುತ್ತಾನೆ. ಜ್ಞಾನೀ, ತಂದೆತಾಯಿಗಳೇ ಆತನ ಸ್ನೇಹಿತರು. ವೇದಾಧ್ಯಯನ ಮಾಡಿರುವನು. ಶಾಸ್ತ್ರಗಳಲ್ಲಿ ಪಂಡಿತನಾದವನು.

ಯಾದೃಶಂ ತಸ್ಯ ವೈ ಜ್ಞಾನಂ ಬಾಲಸ್ಯಾಪಿ ಸುಕರ್ಮಣಃ ।
ತಾದೃಶಂ ನಾಸ್ತಿ ತೇ ಜ್ಞಾನಂ ವೃಥಾ ತ್ವಂ ಗರ್ವಮುದ್ವಹೇಃ ॥ ೫೧ ॥

॥ ಪಿಪ್ಪಲ ಉವಾಚ ॥

ಕೋ ಭವಾನ್ಪಕ್ಷಿರೂಪೇಣ ಮಾಮೇವಂ ಪರಿಕುತ್ಸಯೇತ್ ।
ಕಸ್ಮಾನ್ನಿಂದಸಿ ಮೇ ಜ್ಞಾನಂ ಪರಾಚೀನಂ ತು ಕೀದೃಶಂ ॥ ೫೨ ॥

ತನ್ಮೇ ವಿಸ್ತರತೋ ಬ್ರೂಹಿ ತ್ವಯಿ ಜ್ಞಾನಂ ಕಥಂ ಭವೇತ್ ।
ಅರ್ವಾಚೀನಗತಿಂ ಸರ್ವಾಂ ಪರಾಚೀನಸ್ಯ ಸಾಂಪ್ರತಂ ॥ ೫೩ ॥

ವದ ತ್ವಮಂಡಜಶ್ರೇಷ್ಠ ಜ್ಞಾನಪೂರ್ವಂ ಸುವಿಸ್ತರಂ ।
ಕಿಂ ವಾ ಬ್ರಹ್ಮಾ ಚ ವಿಷ್ಣುಶ್ಚ ಕಿಂ ವಾ ರುದ್ರೋ ಭವಿಷ್ಯಸಿ ॥ ೫೪ ॥

॥ ಸಾರಸ ಉವಾಚ ॥

ನಾಸ್ತಿ ತೇ ತಪಸೋ ಭಾವಃ ಫಲಂ ನಾಸ್ತಿ ಶ್ರುತಸ್ಯ ವಾ ।
ಯತ್ತ್ವಯಾ ಪರಿತಪ್ತಸ್ಯ ತಪಸಶ್ಚ ಫಲಂ ಶೃಣು ॥ ೫೫ ॥

---

೫೧. ಹುಡುಗನಾದರೂ ಆ ಸುಕರ್ಮನಿಗಿರುವ ಜ್ಞಾನವು ನಿನಗಿಲ್ಲ. ಹೀಗಿದ್ದರೂ ವ್ಯರ್ಥವಾಗಿ ಗರ್ವಪಡುವಿಯಲ್ಲ? ಎಂದಿತು.

೫೨. ಪಿಪ್ಪಲನು ಹೇಳಿದನು—ಪಕ್ಷಿವೇಷದಿಂದ ನನ್ನನ್ನಿಂತು ತಿರಸ್ಕರಿಸುವ ನೀನಾರು? ಏತಕ್ಕೋಸ್ಕರ ನನ್ನ ಜ್ಞಾನವನ್ನು ನಿಂದಿಸುತ್ತೀಯೆ? ಪರಾಚೀನ ಜ್ಞಾನವೆಂಥಾದ್ದು?

೫೩. ನಿನಗೆ ಆ ಜ್ಞಾನವು ಹೇಗೆ ಬಂದಿತು? ಅರ್ವಾಚೀನ ಪರಾಚೀನ ಜ್ಞಾನಗಳ ಸ್ವರೂಪವೆಂಥಾದ್ದು? ದಯವಿಟ್ಟು ಹೇಳು.

೫೪. ಎಲೈ ಪಕ್ಷಿಶ್ರೇಷ್ಠನೇ ಆ ಜ್ಞಾನವನ್ನೆಲ್ಲಾ ವಿಸ್ತಾರವಾಗಿ ಹೇಳು. ನೀನು ಬ್ರಹ್ಮನೋ? ವಿಷ್ಣುವೋ? ಶಿವನೋ? ನೀನಾರು? ಎಂದು ಕೇಳಿದನು.

೫೫. ಸಾರಸವು ಹೇಳಿತು—ಎಲೈ ಪಿಪ್ಪಲನೇ, ನಿನಗೆ ತಪಸ್ಸಿನ ಫಲವಾಗಲೀ ವೇದಾದಿಗಳನ್ನು ಓದಿದ ಫಲವಾಗಲೀ ಇಲ್ಲ.

**ಕುಂಡಲಸ್ಯಾಪಿ ಪುತ್ರಸ್ಯ ಬಾಲಸ್ಯಾಪಿ ಯಥಾ ಗುಣಃ ।**
**ತಥಾ ತೇ ನಾಸ್ತಿ ವೈ ಜ್ಞಾನಂ ಪರಾಚೀನಸ್ಯ ತತ್ಪದಂ ॥ ೫೬ ॥**

**ಇತೋ ಗತ್ವಾಪಿ ಪೃಚ್ಛ ತ್ವಂ ಮಮ ರೂಪಂ ದ್ವಿಜೋತ್ತಮ ।**
**ಸ ವದಿಷ್ಯತಿ ಧರ್ಮಾತ್ಮಾ ಸರ್ವಜ್ಞಾನಂ ತನ್ವೈವ ಹಿ ॥ ೫೭ ॥**

**॥ ವಿಷ್ಣುರುವಾಚ ॥**

**ಏವಮಾಕರ್ಣ್ಯ ತತ್ಸರ್ವಂ ಸಾರಸೇನ ಪ್ರಭಾಷಿತಂ ।**
**ತಂ ಜಗಾಮ ಸ ವೇಗೇನ ಬ್ರಹ್ಮಾತ್ಮಾನಂ ನೃಪೋತ್ತಮಃ ॥ ೫೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಏಕಷಷ್ಟಿತಮೋಽಧ್ಯಾಯಃ**

---

೫೬-೫೭. ಕುಂಡಲನ ಮಗನಾದ ಸುಕರ್ಮನು ಬಾಲನಾದರೂ ಅವನಿಗಿರುವಷ್ಟು ಪರಾಚೀನಜ್ಞಾನವು ನಿನಗಿಲ್ಲ. ಆದುದರಿಂದ ಇಲ್ಲಿಂದ ನೀನು ಅಲ್ಲಿಗೆ ಹೋಗಿ ನನ್ನ ರೂಪವನ್ನು ಕೇಳು. ಆ ಧರ್ಮಾತ್ಮನು ಸರ್ವಜ್ಞಾನವನ್ನೂ ನಿನಗೆ ಹೇಳುತ್ತಾನೆ. ಎಂದಿತು.

೫೮. ವಿಷ್ಣುವು ಹೇಳಿದನು—ಸಾರಸ ಪಕ್ಷಿಯು ಹೇಳಿದ ಆ ವಿಷಯವೆಲ್ಲವನ್ನೂ ಕೇಳಿ ಒಡನೆಯೇ ಆ ಪಿಪ್ಪಲನು ಬ್ರಹ್ಮಜ್ಞಾನಿಯಾದ ಸುಕರ್ಮನ ಬಳಿಗೆ ಹೋದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವಿಷಷ್ಟಿತಮೋಽಧ್ಯಾಯಃ

---

**ಕುಂಡಲಸ್ಯಾಶ್ರಮಂ ಗತ್ವಾ ಸತ್ಯಧರ್ಮಸಮಾಕುಲಂ ।**
**ಸುಕರ್ಮಾಣಂ ತತೋ ದೃಷ್ಟ್ವಾ ಪಿತೃಮಾತೃಪರಾಯಣಂ ॥ ೧ ॥**

**ಶುಶ್ರೂಷನ್ತಂ ಮಹಾತ್ಮಾನಂ ಗುರೂ ಸತ್ಯಪರಾಕ್ರಮಂ ।**
**ಮಹಾರೂಪಂ ಮಹಾತೇಜಂ ಮಹಾಜ್ಞಾನಸಮಾಕುಲಂ ॥ ೨ ॥**

**ಮಾತಾಪಿತ್ರೋಸ್ತು ಪಾದಾಂತ ಉಪವಿಷ್ಟಂ ನೃಪೋತ್ತಮ ।**
**ಮಹಾಭಕ್ತ್ಯಾನ್ವಿತಂ ಶಾನ್ತಂ ಸರ್ವಜ್ಞಾನಮಹಾನಿಧಿಂ ॥ ೩ ॥**

**ಕುಂಡಲಸ್ಯಾಪಿ ಪುತ್ರೇಣ ಸುಕರ್ಮಣಾ ಮಹಾತ್ಮನಾ ।**
**ಆಗತಂ ಪಿಪ್ಪಲಂ ದೃಷ್ಟ್ವಾ ದ್ವಾರದೇಶೇ ಮಹಾಮತಿಂ ॥ ೪ ॥**

**ಆಸನಾತ್ತೂರ್ಣಮುತ್ಥಾಯ ಅಭ್ಯುತ್ಥಾನಂ ಕೃತಂ ಪುನಃ ।**
**ಆಗಚ್ಛಸ್ವ ಮಹಾಭಾಗ ವಿದ್ಯಾಧರ ಮಹಾಮತೇ ॥ ೫ ॥**

---

## ಅರವತ್ತೆರಡನೆಯ ಅಧ್ಯಾಯವು

೧. ಆ ಪಿಪ್ಪಲನು ಸತ್ಯಧರ್ಮಗಳಿಂದ ಕೂಡಿರುವ ಕುಂಡಲನ ಆಶ್ರಮಕ್ಕೆ ಹೋಗಿ, ಅಲ್ಲಿ ತಾಯಿತಂದೆಗಳ ಸೇವೆಯಲ್ಲಾಸಕ್ತನಾದ ಸುಕರ್ಮನನ್ನು ನೋಡಿದನು.

೨-೩. ಸತ್ಯವಂತನೂ, ಮಹಾತೇಜಸ್ವಿಯೂ, ಮಹಾಜ್ಞಾನಿಯೂ ಆದ ಆ ಸುಕರ್ಮನು ತನ್ನ ತಂದೆತಾಯಿಗಳ ಕಾಲಿನ ಬಳಿಯಲ್ಲಿ ಕುಳಿತು ಅವರನ್ನು ಮಹಾ ಭಕ್ತಿಯಿಂದ ಶುಶ್ರೂಷೆಮಾಡುತ್ತಿದ್ದನು.

೪-೫. ಪಿಪ್ಪಲನು ಬಾಗಿಲಿಗೆ ಬಂದುದನ್ನು ನೋಡಿ ಕುಂಡಲನ ಮಗನಾದ ಸುಕರ್ಮನೂ ಕೂಡ ಪೀಠದಿಂದ ಬೇಗನೆದ್ದು, ಎಲೈ ಮಹಾಮತಿಯಾದ ವಿದ್ಯಾಧರನೇ ಬಾ ಎಂಬುದಾಗಿ ಸ್ವಾಗತಿಸಿ ಅವನನ್ನು ಒಳಕ್ಕೆ ಕರೆದುಕೊಂಡುಹೋಗಿ,

ಆಸನಂ ಪಾದ್ಯಮರ್ಘ್ಯಂ ಚ ದದೌ ತಸ್ಮೈ ಮಹಾತ್ಮನೇ ।
ನಿರ್ವಿಘ್ನೋಽಸಿ ಮಹಾಪ್ರಾಜ್ಞ ಕುಶಲೇನಾಪಿ ವರ್ತಸೇ ॥ ೬ ॥

ನಿರಾಮಯಂ ಚ ಪಪ್ರಚ್ಛ ಪಿಪ್ಪಲಂ ಚ ಸಮಾಗತಂ ।
ಯಸ್ಮಾದಾಗಮನಂ ತೇಽತ್ರ ತತ್ಸರ್ವಂ ಪ್ರವದಾಮ್ಯಹಂ ॥ ೭ ॥

ವರ್ಷಾಣಾಂ ಹಿ ಸಹಸ್ರಾಣಿ ಯಾವತ್ತ್ರೀಣಿ ತ್ವಯಾ ತಪಃ ।
ತಪ್ತಮೇವ ಮಹಾಭಾಗ ಸುರೇಭ್ಯಃ ಪ್ರಾಪ್ತವಾನ್ವರಂ ॥ ೮ ॥

ವಶ್ಯತ್ವಂ ಚ ತ್ವಯಾ ಪ್ರಾಪ್ತಂ ಕಾಮಚಾರಸ್ತಥೈವ ಚ ।
ತೇನ ಮತ್ತೋ ನ ಜಾನಾಸಿ ಗರ್ವ ಉದ್ವಹಿತಸ್ತ್ವಯಾ ॥ ೯ ॥

ದೃಷ್ಟ್ವಾ ತೇ ಚೇಷ್ಟಿತಂ ಸರ್ವಂ ಸಾರಸೇನ ಮಹಾತ್ಮನಾ ।
ಮಮಾಭಿಧಾನಂ ಕಥಿತಂ ಮಮ ಜ್ಞಾನಮನುತ್ತಮಂ ॥ ೧೦ ॥

---

೬. ಆಸನ, ಪಾದ್ಯ, ಅರ್ಘ್ಯಗಳನ್ನು ಕೊಟ್ಟು ಸತ್ಕರಿಸಿ, ನಿನ್ನ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿದೆಯೇ ? ನಿನಗೆ ಕುಶಲವೇ ? ರೋಗಬಾಧೆಯೇನೂ ಇಲ್ಲವೇ ? ಎಂದು ಕುಶಲ ಪ್ರಶ್ನೆ ಮಾಡಿದನು.

೭-೮. ಬಳಿಕ ಅವನನ್ನು ಕುರಿತು ನೀನು ಇಲ್ಲಿಗೆ ಬಂದ ವಿಷಯವೆಲ್ಲವನ್ನೂ ಹೇಳುತ್ತೇನೆ. ಮೂರು ಸಾವಿರ ವರ್ಷಗಳವರೆಗೂ ನೀನು ತಪಸ್ಸನ್ನು ಮಾಡಿ ದೇವತೆಗಳಿಂದ ವರವನ್ನು ಪಡೆದಿದ್ದೀಯೆ.

೯. ಮೂರು ಲೋಕವನ್ನೂ ವಶಮಾಡಿಕೊಳ್ಳುವಶಕ್ತಿಯನ್ನು ಹೊಂದಿದ್ದೀಯೆ. ಇಷ್ಟಬಂದಂತೆ ಸಂಚಾರಮಾಡುವ ಸಾಮರ್ಥ್ಯವೂ ನಿನಗೆ ವರದಿಂದ ಪ್ರಾಪ್ತವಾಗಿದೆ. ಅದರಿಂದ ಕೊಬ್ಬಿ ವಿವೇಕಶೂನ್ಯನಾಗಿದ್ದೀ. ಅಹಂಕಾರದಿಂದ ಮೆರೆಯುತ್ತಿರುವೆ.

೧೦. ನಿನ್ನ ಈ ರೀತಿಯಾದ ನಡತೆಗಳನ್ನು ನೋಡಿ ಮಹಾತ್ಮನಾದ ಸಾರಸನು ನನ್ನ ಹೆಸರನ್ನು ಹೇಳಿ ನನ್ನ ಉತ್ತಮವಾದ ಜ್ಞಾನವನ್ನು ಹೇಳಿದನು. ಎನ್ನಲು,

॥ ಪಿಪ್ಪಲ ಉವಾಚ ॥

ಯೋಽಪ್ಯಸೌ ಸಾರಸೋ ವಿಪ್ರ ಸರಸ್ತೀರೇ ಪ್ರಯುಕ್ತವಾನ್ ।
ಸರ್ವಜ್ಞಾನಂ ವದೇನ್ಮಾಂ ಹಿ ಸ ಚ ಕಃ ಪ್ರಭುರೀಶ್ವರಃ ॥ ೧೧ ॥

॥ ಸುಕರ್ಮೋವಾಚ ॥

ಭವನ್ತಮುಕ್ತವಾನ್ಯೋ ವೈ ಸರಸ್ತೀರೇ ತು ಸಾರಸಃ ।
ಬ್ರಾಹ್ಮಣಂ ತಂ ಮಹಾತ್ಮಾನಂ ವಿದ್ಧಿ ತ್ವಂ ಪರಮೇಶ್ವರಂ ॥ ೧೨ ॥

ವಿಷ್ಣುರುವಾಚ ॥

ಅನ್ಯತ್ಕಿಂ ಪೃಚ್ಛಸೇ ವಿಪ್ರ ಬ್ರೂಹಿ ತಚ್ಚ ವದಾಮ್ಯಹಂ ।
ಏವಮುಕ್ತಸ್ಸ ಧರ್ಮಾತ್ಮಾ ಸುಕರ್ಮಾಣಮುವಾಚ ಹ ॥ ೧೩ ॥

ಪಿಪ್ಪಲ ಉವಾಚ ॥

ತ್ವಯಿ ವಶ್ಯಂ ಜಗತ್ಸರ್ವಮಿತಿ ಶುಶ್ರುಮ ಭೂತಳೇ ।
ತಸ್ಮೇ ತ್ವಂ ಕೌತುಕಂ ವಿಪ್ರ ಪ್ರದರ್ಶಯ ಪ್ರಯತ್ನತಃ ॥ ೧೪ ॥

ಪಶ್ಯ ಕೌತುಕಮೇವಾತ್ರ ವಶ್ಯಾವಶ್ಯಸ್ಯ ಕಾರಣಂ ।
ತಮುವಾಚ ಸ ಧರ್ಮಾತ್ಮಾ ಸುಕರ್ಮಾ ಪಿಪ್ಪಲಂ ಪ್ರತಿ ॥ ೧೫ ॥

---

೧೧. ಪಿಪ್ಪಲನು ಹೇಳಿದನು—ಆ ಸಾರಸನಾರು? ಅವನು ಸರಸ್ತೀರದಲ್ಲಿರಲು ಕಾರಣವೇನು? ನನ್ನನ್ನು ಕುರಿತು ಸರ್ವಜ್ಞಾನವನ್ನು ಹೇಳಿದನಲ್ಲಾ ಆ ಪ್ರಭುವು ಯಾರು?

೧೨. ಸುಕರ್ಮನು ಹೇಳುತ್ತಾನೆ—ನಿನಗೆ ಸರೋವರದ ತೀರದಲ್ಲಿ ವಿಷಯಗಳನ್ನು ಹೇಳಿದವನು ಬ್ರಾಹ್ಮಣರೂಪನಾದ ಪರಮೇಶ್ವರನೆಂದೇ ತಿಳಿ. ಅವನು ಮತ್ತಾರೂ ಅಲ್ಲ. ಇನ್ನೇನು ಕೇಳುತ್ತೀಯೋ ಕೇಳು. ಅದನ್ನೂ ಹೇಳುತ್ತೇನೆ ಎಂದನು.

೧೩-೧೪. ವಿಷ್ಣುವು ಹೇಳಿದನು—ಹೀಗೆ ಹೇಳಿದುದನ್ನು ಕೇಳಿ ಪಿಪ್ಪಲನು ಸುಕರ್ಮನನ್ನು ಕುರಿತು ಎಲೈ ಸುಕರ್ಮನೇ ಪ್ರಪಂಚವು ನಿನಗೆ ವಶ್ಯವಾಗಿದೆಯೆಂದು ಕೇಳಿದ್ದೇನೆ. ಆ ವಿಷಯದಲ್ಲಿ ನನಗೆ ಆಶ್ಚರ್ಯವಾಗಿದೆ. ಆ ಆಶ್ಚರ್ಯವನ್ನು ತೋರಿಸು ಎನ್ನಲು,

೧೫-೧೬. ವಶ್ಯಾವಶ್ಯಕ್ಕೆ ಕಾರಣವಾದ ಕೌತುಕವನ್ನು ನೋಡು, ತೋರಿಸುತ್ತೇನೆ ಎಂದು ಸುಕರ್ಮನು ಪಿಪ್ಪಲನಿಗೆ ಹೇಳಿ, ಬಳಿಕ ಪಿಪ್ಪಲನಿಗೆ ನಂಬಿಕೆಯ

ಅಥ ಸಸ್ಮಾರ ವೈ ದೇವಾನ್ ಸುಕರ್ಮಾ ಪ್ರತ್ಯಯಾಯ ವೈ ।
ಇಂದ್ರಾದ್ಯಾಂಲ್ಲೋಕಪಾಲಾಂಶ್ಚ ದೇವಾಂಶ್ಚಾಗ್ನಿಪುರೋಗಮಾನ್ ।
ಸಮಾಗತಾಸ್ಸಮಾಹೂತಾ ನಾಗ ವಿದ್ಯಾಧರಾಸ್ತಥಾ ॥ ೧೬ ॥

ಸುಕರ್ಮಾಣಂ ತತಃ ಪ್ರೋಚುಸ್ತೇ ಸರ್ವೇಽಪಿ ಸಮಾಗತಾಃ ।
ಕಸ್ಮಾತ್ಸ್ಮೃತಾಸ್ತ್ವಯಾ ವಿಪ್ರ ಭವಾಂಸ್ತತ್ಕಾರಣಂ ವದ ॥ ೧೭ ॥

॥ ಸುಕರ್ಮೋವಾಚ ॥

ಅಯಂ ಮೇ ಹ್ಯತಿಥಿಃ ಪ್ರಾಪ್ತೋ ವಿದ್ಯಾಧರೋ ಹಿ ಪಿಪ್ಪಲಃ ।
ಮಾಮೇವಂ ಭಾಷತೇ ಪ್ರಾಜ್ಞೋ ವಿಶ್ವವಶ್ಯಸ್ಯ ಕಾರಣಂ ॥ ೧೮ ॥

ಪ್ರತ್ಯಯಾರ್ಥಂ ಸಮಾಹೂತಾ ಅಸ್ಯೈವ ಚ ಮಹಾತ್ಮನಃ
ಸ್ವಂ ಸ್ವಂ ಸ್ಥಾನಂ ಪ್ರಗಚ್ಛಧ್ವಮಿತ್ಯುವಾಚ ಸುರಾನ್ಪ್ರತಿ ॥ ೧೯ ॥

ತಮೂಚು ಸ್ತೇ ತತೋ ದೇವಾಃ ಸುಕರ್ಮಾಣಂ ಮಹಾಮತಿಂ ।
ಅಸ್ಮಾಕಂ ದರ್ಶನಂ ವಿಪ್ರ ವಿಫಲಂ ನೈವ ಜಾಯತೇ ॥ ೨೦ ॥

---

ನ್ನಟುಮಾಡಲು ಆ ಸುಕರ್ಮನು ದೇವತೆಗಳನ್ನೂ, ಇಂದ್ರಾದಿಲೋಕಪಾಲರನ್ನೂ, ನಾಗ ವಿದ್ಯಾಧರರನ್ನೂ, ಸ್ಮರಿಸಿದನು. ಆ ಕೂಡಲೇ ಅವರೆಲ್ಲರೂ ಅಲ್ಲಿಗೆ ಬಂದರು.

೧೭. ಹಾಗೆ ಸ್ಮರಿಸಲು ಬಂದ ಅವರೆಲ್ಲರೂ ನಮ್ಮನ್ನೇಕೆ ಸ್ಮರಿಸಿದೆ? ಅದರ ಕಾರಣವನ್ನು ಹೇಳು. ಎಂದು ಸುಕರ್ಮನನ್ನು ಕೇಳಿದರು.

೧೮. ಸುಕರ್ಮನು ಹೇಳಿದನು—ವಿದ್ಯಾಧರನಾದ ಪಿಪ್ಪಲನೆಂಬುವನು ಅತಿಥಿಯಾಗಿ ಬಂದಿದ್ದಾನೆ. ನನ್ನನ್ನು ವಿಶ್ವವಶ್ಯಕ್ಕೆ ಕಾರಣವೇನೆಂದು ಕೇಳುತ್ತಾನೆ.

೧೯. ಈ ಮಹಾನುಭಾವನ ನಂಬಿಕೆಗೋಸ್ಕರ ನಿಮ್ಮನ್ನು ಕರೆದೆನು. ಅಷ್ಟೇ ಹೊರತು ಇನ್ನೇನೂ ಕೆಲಸವಿಲ್ಲ. ಇನ್ನು ಮೇಲೆ ನಿಮ್ಮ ನಿಮ್ಮ ಜಾಗಕ್ಕೆ ಹೋಗಿರಿ ಎಂದು ಆ ದೇವತೆಗಳನ್ನು ಕುರಿತು ಹೇಳಿದನು.

೨೦-೨೧. ಅನಂತರ ದೇವತೆಗಳು ಆ ಸುಕರ್ಮನನ್ನು ಕುರಿತು ನಮ್ಮ ದರ್ಶನವು ಯಾರಿಗೂ ವಿಫಲವಾಗುವುದಿಲ್ಲ ಎಂದರೆ ನಮ್ಮನ್ನು ಕರೆದವರಿಗೆ ನಾವು

ವರಂ ವರಯ ಭದ್ರಂ ತೇ ಮನಸಾ ಯುದ್ಧಿ ರೋಚತೇ ।
ತತ್ಪ್ರದದೋ ನ ಸಂದೇಹಸ್ತ್ವೇವಮೂಚುಃ ಸುರೋತ್ತಮಾಃ ॥ ೨೦ ॥

ಭಕ್ತ್ಯಾ ಪ್ರಣಮ್ಯ ತಾನ್ದೇವಾನ್ವರಂ ಬ್ರೂತೇ ದ್ವಿಜೋತ್ತಮಃ ।
ಅಚಲಾಂ ದತ್ತ ದೇವೇಂದ್ರಾಃ ಸುಭಕ್ತಿಂ ಭಾವಸಂಯುತಾಂ ।
ಮಾತಾಪಿತ್ರೋಶ್ಚ ಮೇ ನಿತ್ಯಮೇತದ್ವರಮನುತ್ತಮಂ ॥ ೨೨ ॥

ಪಿತಾ ಮೇ ವೈಷ್ಣವಂ ಲೋಕಂ ಪ್ರಯಾತ್ವೇತದ್ವರೋತ್ತಮಂ ।
ತದ್ವನ್ಮಾತಾ ಚ ದೇವೇಶಾ ವರಮನ್ಯಂ ನ ಯಾಚಯೇ ॥ ೨೩ ॥

॥ ದೇವಾ ಊಚುಃ ॥

ಪಿತೃಭಕ್ತೋಽಸಿ ವಿಪ್ರೇಂದ್ರ ಸುಭಕ್ತಿಸ್ತೇ ಭವತ್ವಿಹ ।
ಸುಕರ್ಮನ್ ಶ್ರೂಯತಾಂ ವಾಕ್ಯಂ ಪ್ರೀತ್ಯಾ ಯುಕ್ತಾಸ್ಸದೈವ ತೇ ॥ ೨೪ ॥

ಏವಮುಕ್ತ್ವಾ ಗತಾ ದೇವಾಃ ಸ್ವರ್ಲೋಕಂ ನೃಪನಂದನ ।
ಸುಕರ್ಮಣೈವಮಾಶ್ಚರ್ಯಂ ತಸ್ಯಾಗ್ರೇ ಪರಿದರ್ಶಿತಂ ॥ ೨೫ ॥

---

ಪ್ರತಿಫಲವನ್ನುಂಟುಮಾಡಿಯೇ ಹೋಗುವೆವು. ಆದುದರಿಂದ ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೋ ಅದನ್ನು ಕೊಡುತ್ತೇವೆ. ಸಂದೇಹವಿಲ್ಲ ಎಂದು ಹೇಳಿದರು.

೨೨-೨೩. ಆಗ ಅವನು ಭಕ್ತಿಯಿಂದ ಅವರನ್ನು ನಮಸ್ಕರಿಸಿ, ತಾಯಿತಂದೆಗಳಲ್ಲಿ ತನಗೆ ಅಚಲವಾದ ಭಕ್ತಿ ಉಂಟಾಗಬೇಕು. ನನ್ನ ತಾಯಿತಂದೆಗಳು ಉತ್ತಮವಾದ ವಿಷ್ಣುಲೋಕವನ್ನು ಹೊಂದಲಿ. ಇದೇ ನನಗೆ ಬೇಕಾದ ವರವು. ಬೇರೆಯದು ಬೇಡ, ಎಂದು ಕೇಳಿಕೊಂಡನು.

೨೪. ದೇವತೆಗಳು ಹೇಳಿದರು—ನೀನು ಪಿತೃಭಕ್ತನಾಗಿದ್ದೀಯೆ. ನಿನಗೆ ಒಳ್ಳೆಯ ಭಕ್ತಿಯಿರಲಿ. ಯಾವಾಗಲೂ ನಿನ್ನಲ್ಲಿ ಪ್ರೀತಿಯಿಂದಿದ್ದೇವೆ.

೨೫. ಹೀಗೆಂದು ಹೇಳಿ ದೇವತೆಗಳು ಸ್ವರ್ಗಲೋಕಕ್ಕೆ ಹೋದರು. ಸುಕರ್ಮನು ಹೀಗೆ ಪಿಪ್ಪಲನೆದುರಿಗೆ ಆಶ್ಚರ್ಯವನ್ನು ತೋರಿಸಿದನು.

ದೃಷ್ಟಂ ತು ಪಿಪ್ಪಲೇನಾಪಿ ಕೌತುಕಂ ಮಹದದ್ಭುತಂ ।
ತಮುವಾಚ ಸ ಧರ್ಮಾತ್ಮಾ ಪಿಪ್ಪಲಃ ಕುಂಡಲಾತ್ಮಜಂ ॥ ೨೬ ॥

ಅರ್ವಾಚೀನಂ ತ್ವಿದಂ ರೂಪಂ ಪರಾಚೀನಂ ತು ಕೀದೃಶಂ ।
ಪ್ರಭಾವಮುಭಯೋಶ್ಚೈವ ವದಸ್ವ ವದತಾಂ ವರ ॥ ೨೭ ॥

॥ ಸುಕರ್ಮೋವಾಚ ॥

ಅರ್ವಾಚೀನಸ್ವರೂಪಸ್ಯ ಲಿಂಗಮೇವ ವದಾಮಿ ತೇ ।
ಯೇನ ಲೋಕಾಃ ಪ್ರಮೋಹ್ಯಂತ ಇಂದ್ರಾದ್ಯಾಸ್ಸಚರಾಚರಾಃ ॥ ೨೮ ॥

ಅಯಮೇಷ ಜಗನ್ನಾಥಃ ಸರ್ವಗೋ ವ್ಯಾಪಕಃ ಪರಃ ।
ಅಸ್ಯ ರೂಪಂ ನ ದೃಷ್ಟಂ ಹಿ ಕೇನಾಪ್ಯೇವ ಹಿ ಯೋಗಿನಾ ॥ ೨೯ ॥

ಶ್ರುತಿರೇವ ವದತ್ಯೇವಂ ನ ವಕ್ತುಂ ಶಕ್ಯತೇಽ ಪಿ ಸಃ ।
ಅಪಾದೋ ಹ್ಯಕರೋಽ ನಾಸೋ ಹ್ಯಕರ್ಣೋ ಮುಖವರ್ಜಿತಃ ॥ ೩೦ ॥

ಸರ್ವಂ ಪಶ್ಯತಿ ವೈ ಕರ್ಮ ಕೃತಂ ತ್ರೈಲೋಕ್ಯವಾಸಿನಾಂ ।
ತೇಷಾಮುಕ್ತಮಕರ್ಣಶ್ಚ ಸ ಶೃಣೋತಿ ಸುಶಾಂತಿದಃ ॥ ೩೧ ॥

---

೨೬-೨೭. ಪಿಪ್ಪಲನು ಸುಕರ್ಮನನ್ನು ಕುರಿತು ಇದು ಅರ್ವಾಚೀನವಾದ ರೂಪವಾಯಿತು. ಪ್ರಾಚೀನವಾದ ರೂಪವೆಂತಿರುವುದು? ಎರಡರ ಪ್ರಭಾವವೂ ಹೇಗಿದೆ ಎಂಬುದನ್ನು ದಯವಿಟ್ಟು ತಿಳಿಸು. ಎನ್ನಲು,

೨೮-೨೯. ಸುಕರ್ಮನು ಹೇಳಿದನು—ಅರ್ವಾಚೀನದ ರೂಪದ ಗುರುತನ್ನು ಹೇಳುತ್ತೇನೆ. ಅದು ಇಂದ್ರಾದಿಗಳನ್ನೂ ಲೋಕಗಳನ್ನೂ ಮೋಹಗೊಳಿಸುತ್ತದೆ. ಅರ್ವಾಚೀನವೆಂಬ ವಸ್ತುವೇ ಜಗನ್ನಾಥನು. ಸರ್ವವ್ಯಾಪಿಯು. ಉತ್ತಮನು. ಇವನ ರೂಪವನ್ನು ಯಾವ ಯೋಗಿಯೂ ನೋಡಿಲ್ಲ. ಶ್ರುತಿಯೇ ಹಾಗೆಂದು ಹೇಳುತ್ತದೆ. ಅದೂ ಕೂಡ ಪೂರ್ತಿಯಾಗಿ ಹೇಳಲಾರದು.

೩೦-೩೧. ಇವನಿಗೆ ಕೈಯಿಲ್ಲ, ಕಾಲಿಲ್ಲ, ಮೂಗಿಲ್ಲ, ಕಿವಿಮುಖಗಳಿಲ್ಲ. ಆದರೂ ಮೂರು ಲೋಕದವರೂ ಮಾಡಿದ ಕೆಲಸಗಳನ್ನು ನೋಡುತ್ತಾನೆ. ಅವರು ಹೇಳಿದುದನ್ನು ಕಿವಿಯಿಲ್ಲದಿದ್ದರೂ, ಕೇಳುತ್ತಾನೆ. ನಡೆಯಿಲ್ಲದಿದ್ದರೂ ನಡೆಯುತ್ತಾನೆ.

ಗತಿಹೀನೋ ವ್ರಜೇತ್ಸೋऽಪಿ ಸರ್ವತ್ರ ಪರಿದೃಶ್ಯತೇ ।
ಪಾಣಿಹೀನಃ ಪಾದಹೀನಃ ಕುರುತೇ ಚ ಪ್ರಧಾವತಿ ॥ ೩೨ ॥

ಸರ್ವತ್ರ ದೃಶ್ಯತೇ ವಿಶ್ವವ್ಯಾಪಕಃ ಪಾದವರ್ಜಿತಃ ।
ಯಂ ವ ಪಶ್ಯಂತಿ ದೇವೇಂದ್ರಾ ಮುನಯಸ್ತತ್ತ್ವದರ್ಶಿನಃ ।
ಸ ಚ ಪಶ್ಯತಿ ತಾನ್ಸರ್ವಾನ್ ಸತ್ಯಾಸತ್ಯಪದೇ ಸ್ಥಿತಃ ॥ ೩೩ ॥

ವ್ಯಾಪಕಂ ವಿಮಲಂ ಸಿದ್ಧಂ ಸಿದ್ಧಿದಂ ಸರ್ವನಾಯಕಂ ।
ಯಂ ಜಾನಾತಿ ಮಹಾಯೋಗೀ ವ್ಯಾಸೋ ಧರ್ಮಾರ್ಥಕೋವಿದಃ ॥ ೩೪ ॥

ತೇಜೋಮೂರ್ತಿಸ್ಸ ಚಾಕಾಶಮೇಕವರ್ಣಮನನ್ತಕಂ ।
ವ್ಯಾಸಶ್ಚೈವ ವಿಜಾನಾತಿ ಮಾರ್ಕಂಡೇಯಶ್ಚ ತತ್ಪದಂ ॥ ೩೫ ॥

ಪರಾಚೀನಂ ಪ್ರವಕ್ಷ್ಯಾಮಿ ಶೃಣುಷ್ವೈಕಾಗ್ರಮಾನಸಃ ।
ಯದಾಹೃತ್ಯ ಸ ಭೂತಾತ್ಮಾ ಸ್ವಯಮೇವ ಪ್ರಜಾಪತಿಃ ॥ ೩೬ ॥

ಅಪ್ಸು ಶಯ್ಯಾಂ ಸಮಾಶ್ರಿತ್ಯ ಶೇಷಭೋಗಾಸ್ಥಿತಃ ಪ್ರಭುಃ ।
ತಮಾಶ್ರಿತ್ಯ ಸ್ವಪಿತ್ಯೇಕೋ ಬಹುಕಾಲಂ ಜನಾರ್ದನಃ ॥ ೩೭ ॥

---

ಎಲ್ಲೆಲ್ಲೂ ಕಾಣುತ್ತಿರುತ್ತಾನೆ. ಕೈಕಾಲುಗಳಿಲ್ಲದಿದ್ದರೂ ಕೆಲಸಮಾಡುತ್ತಾನೆ. ಓಡಾಡುತ್ತಾನೆ. ಕಾಲಿಲ್ಲದಿದ್ದರೂ ಎಲಾ ಕಡೆಯಲ್ಲೂ ವ್ಯಾಪಿಸಿಕೊಂಡು ಕಾಣುತ್ತಿರುತ್ತಾನೆ.

೩೩. ಯಾವನನ್ನು ದೇವೇಂದ್ರನೂ ಮುನಿಗಳೂ ನೋಡಲಾರರೋ ಅವನು ಸತ್ಯಾಸತ್ಯಗಳನ್ನು ತಿಳಿಯುತ್ತಾ ಅವರೆಲ್ಲರನ್ನೂ ನೋಡುತ್ತಾನೆ.

೩೪. ವ್ಯಾಪಕನೂ, ಪರಿಶುದ್ಧನೂ, ಸಿದ್ಧನಾದವನೂ, ಸಿದ್ಧಿಯನ್ನು ಕೊಡುವವನೂ, ಸರ್ವನಾಯಕನೂ, ಆದ ಆತನನ್ನು ಧರ್ಮಜ್ಞಾನಿಯಾದ ವ್ಯಾಸನೊಬ್ಬನು ಮಾತ್ರ ತಿಳಿದಿದ್ದಾನೆ.

೩೫. ಅವನು ತೇಜೋಮೂರ್ತಿಯು, ಅವನೇ ಆಕಾಶವು, ಒಂದೇ ಬಣ್ಣವುಳ್ಳವನು. ಆದರೂ ಬಹುರೂಪನು. ಇವನನ್ನು ವ್ಯಾಸನು ತಿಳಿದಿದ್ದಾನೆ. ಇವನಿರುವ ಜಾಗವನ್ನು ಮಾರ್ಕಂಡೇಯನು ಬಲ್ಲನು.

೩೬-೩೭. ಇನ್ನು ಪರಾಚೀನವನ್ನು ಹೇಳುತ್ತೇನೆ ಕೇಳು. ಯಾವ ಸ್ವಾಮಿಯು ಎಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡು, ಶೇಷನನ್ನು ಹಾಸಿಗೆ ಮಾಡಿಕೊಂಡು ನೀರಿನಲ್ಲಿ ಮಲಗಿರುವನೋ ಅವನೇ ಸ್ವಾಮಿಯಾದ ಜನಾರ್ದನನು.

ಜಲಾಂಧಕಾರಸಂತಪ್ತೋ ಮಾರ್ಕಂಡೇಯೋ ಮಹಾಮುನಿಃ ।
ಸ್ಥಾನಮಿಚ್ಛನ್ಸ ಯೋಗಾತ್ಮಾ ನಿರ್ವಿಣ್ಣೋ ಭ್ರಮಣೇನ ಸಃ ॥ ೩೮ ॥

ಭ್ರಮಮಾಣಸ್ಸ ದದೃಶೇ ಶೇಷಪರ್ಯಂಕಶಾಯಿನಂ ।
ಸೂರ್ಯಕೋಟಿಪ್ರತೀಕಾಶಂ ದಿವ್ಯಾಭರಣಭೂಷಿತಂ ॥ ೩೯ ॥

ದಿವ್ಯಮಾಲ್ಯಾಂಬರಧರಂ ಸರ್ವವ್ಯಾಪಿನಮೀಶ್ವರಂ ।
ಯೋಗನಿದ್ರಾಂ ಗತಂ ಕಾಂತಂ ಶಂಖಚಕ್ರಗದಾಧರಂ ॥ ೪೦ ॥

ಏಕಾ ನಾರೀ ಮಹಾಕಾಯಾ ಕೃಷ್ಣಾಂಜನಚಯೋಪಮಾ ।
ದಂಷ್ಟ್ರಾಕರಾಳವದನಾ ಭೀಮರೂಪಾ ದ್ವಿಜೋತ್ತಮ ॥ ೪೧ ॥

ತಯೋಕ್ತೋಽಸೌ ಮುನಿಶ್ರೇಷ್ಠೋ ಮಾ ಭೈರಿತಿ ಮಹಾಮುನಿಃ ।
ಪದ್ಮಪತ್ರಂ ಸುವಿಸ್ತೀರ್ಣಂ ಪಂಚಯೋಜನಮಾಯತಂ ॥ ೪೨ ॥

ತಸ್ಮಿನ್ಪತ್ರೇ ಮಹಾದೇವ್ಯಾ ಮಾರ್ಕಂಡೇಯೋ ಮಹಾಮುನಿಃ ।
ಸನ್ನಿವೇಶ್ಯ ಸುಖೇನಾಪಿ ನಾಸ್ತ್ಯತ್ರ ಚ ಭಯಂ ತವ ॥ ೪೩ ॥

---

೩೮-೪೦. ನೀರು ಕತ್ತಲೆಗಳಿಂದ ತೊಂದರೆಪಟ್ಟು ಆ ಮುನಿಯಾದ ಮಾರ್ಕಂಡೇಯನು ಒಂದು ಜಾಗವನ್ನು ಹುಡುಕುತ್ತಾ ದುಃಖದಿಂದ ಸುತ್ತುತ್ತಿದ್ದು, ಕೊನೆಗೆ ಶೇಷನ ಮೇಲೆ ಮಲಗಿರುವ, ಕೋಟಿಸೂರ್ಯರಂತೆ ಪ್ರಕಾಶಕನಾದ, ದಿವ್ಯಾಭರಣಗಳನ್ನು ಧರಿಸಿಕೊಂಡಿರುವ, ಮಾಲೆಗಳನ್ನು ಹಾಕಿಕೊಂಡಿರುವ, ಸರ್ವವ್ಯಾಪಿಯಾದ, ಯೋಗನಿದ್ರೆಯನ್ನು ಹೊಂದಿರುವ, ಶಂಖಚಕ್ರಗದಾಧರನನ್ನು ನೋಡಿದನು.

೪೧. ಅಲ್ಲಿ ಕಪ್ಪುಬಣ್ಣದ ಕೋರೆದಾಡೆಗಳಿಂದ ಭಯಂಕರವಾದ ಒಂದು ಸ್ತ್ರೀರೂಪವನ್ನು ಕಂಡನು. ಅವಳು ಇವನನ್ನು ನೋಡಿ ಹೆದರಬೇಡವೆಂದು ಹೇಳಿದಳು.

೪೨-೪೩. ಐದು ಯೋಜನ ವಿಸ್ತಾರವುಳ್ಳ ಒಂದು ಕಮಲದ ಪತ್ರವು ಅಲ್ಲಿತ್ತು. ಆ ಪತ್ರವನ್ನು ಆ ಶಕ್ತಿಯು ಮಾರ್ಕಂಡೇಯನಿಗೆ ತೋರಿಸಿ, ನಿನಗೆ ಇಲ್ಲಿ ಭಯವಿಲ್ಲ. ಕೂತುಕೋ ಎಂದಿತು.

ತಾಮುವಾಚ ಸ ಯೋಗೀನ್ದ್ರಃ ಕಾ ತ್ವಂ ಭವಸಿ ಭಾಮಿನಿ ।
ಪೃಷ್ಟೈವಂ ಮುನಿನಾ ದೇವೀ ಸಾದರಂ ಪ್ರಾಹ ಭೂಸುರಂ ॥ ೪೪ ॥

ನಾಗಭೋಗಸ್ಯ ಪರ್ಯಂಕೇ ಯಶ್ಶಯೀತ ಸ ಕೇಶವಃ ।
ಅಸ್ಯಾಹಂ ವೈಷ್ಣವೀ ಶಕ್ತಿಃ ಕಾಳರಾತ್ರಿರಿಹ ದ್ವಿಜ ॥ ೪೫ ॥

ಮಾಮೇವಂ ವಿದ್ಧಿ ವಿಪ್ರೇಂದ್ರ ಸರ್ವಮಾಯಾಸಮನ್ವಿತಾಂ ।
ಮಹಾಮಾಯಾ ಪುರಾಣೇಷು ಜಗನ್ಮೋಹಾಯ ಕೀರ್ತಿತಾ ॥ ೪೬ ॥

ಇತ್ಯುಕ್ತ್ವಾ ಸಾ ಗತಾ ದೇವೀ ಅನ್ತರ್ಧಾನಂ ಹಿ ಪಿಪ್ಪಲ ।
ತಸ್ಯಾಂ ದೇವ್ಯಾಂ ಗತಾಯಾಂ ತು ಮಾರ್ಕಣ್ಡೇಯೋ ಹ್ಯಪಶ್ಯತ ॥ ೪೭ ॥

ತಸ್ಯ ನಾಭ್ಯಾಂ ಸಮುತ್ಪನ್ನಂ ಪಂಕಜಂ ಹಾಟಕಪ್ರಭಂ ।
ತಸ್ಮಾಜ್ಜಜ್ಞೇ ಮಹಾತೇಜಾ ಬ್ರಹ್ಮಾ ಲೋಕಪಿತಾಮಹಃ ॥ ೪೮ ॥

ತಸ್ಮಾದ್ಧಿ ಜಜ್ಞಿರೇ ಲೋಕಾಃ ಸರ್ವೇ ಸ್ಥಾವರಜಂಗಮಾಃ ।
ಇಂದ್ರಾದ್ಯಾ ಲೋಕಪಾಲಾಶ್ಚ ದೇವಾಶ್ಚಾಗ್ನಿಪುರೋಗಮಾಃ ॥ ೪೯ ॥

---

೪೪. ಅಮ್ಮಾ ನೀನಾರು? ಎಂದು ಆಕೆಯನ್ನು ಮಾರ್ಕಂಡೇಯನು ಕೇಳಿದನು.

೪೫. ಹೀಗೆ ಅವನು ಕೇಳುತ್ತಲೂ ಆದರೊಡನೆ ಆಕೆಯು ಹೇಳಿದಳು. ನಾಗಭೋಗದಲ್ಲಿ ಮಲಗಿರುವ ಕೇಶವನ ವೈಷ್ಣವಶಕ್ತಿಯೇ ನಾನು. ನನ್ನ ಹೆಸರು ಕಾಳರಾತ್ರಿಯು.

೪೬. ಎಲೈ ಬ್ರಾಹ್ಮಣನೇ! ನನ್ನನ್ನು ಸರ್ವಮಾಯೆಯೆಂದು ತಿಳಿ. ಪುರಾಣಗಳಲ್ಲಿ, ನನ್ನನ್ನೇ ಜಗತ್ತನ್ನು ಅಜ್ಞಾನದಲ್ಲಿ ಕೆಡಹುವ ಮಹಾಮಾಯೆಯೆನ್ನುತ್ತಾರೆ.

೪೭. ಈರೀತಿ ಹೇಳಿ ಆ ದೇವಿಯು ಅಂತರ್ಧಾನಳಾದಳು. ಆ ದೇವಿಯು ಹೊರಟುಹೋದ ಮೇಲೆ, ಆ ಸ್ವಾಮಿಯ ನಾಭಿಯಲ್ಲಿ ಹುಟ್ಟಿರುವ ಚಿನ್ನದ ಬಣ್ಣದ ಕಮಲವನ್ನು ಕಂಡನು.

೪೮-೪೯. ಆ ಕಮಲದಿಂದ ಲೋಕಪಿತಾಮಹನಾದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನಿಂದ ಚರಾಚರಗಳೆಲ್ಲವೂ ಹುಟ್ಟಿದುವು. ಇಂದ್ರಾದಿಲೋಕಪಾಲಕರೂ ದೇವತೆಗಳೂ ಅವನಿಂದಲೇ ಹುಟ್ಟಿದವು.

ಅರ್ವಾಚೀನಂ ಸ್ವರೂಪಂ ತು ದರ್ಶಿತಂ ಹಿ ಮಯಾ ನೃಪ ।
ಅರ್ವಾಚೀನಶ್ಶರೀರೋಽಯಂ ಪರಾಚೀನೋ ನಿರಾಶ್ರಯಃ ॥ ೫೦ ॥

ಯದಾ ಸ ದರ್ಶಯೇತ್ಕಾಯಂ ಕಾಯರೂಪಾ ಭವಂತಿ ತೇ ।
ಅರ್ವಾಚೀನಾಸ್ತತಸ್ಸರ್ವೇ ಬ್ರಹ್ಮಾದ್ಯಾಃ ಪಿಪ್ಪಲಾಖಿಲಾಃ ॥ ೫೧ ॥

ಅರ್ವಾಚೀನಾ ಅಮೀ ಲೋಕಾ ಯೇ ಭವಂತಿ ಜಗತ್ತ್ರಯೇ ।
ಪರಾಚೀನಸ್ಸ ವಿಶ್ವಾತ್ಮಾ ಯಂ ಪ್ರಪಶ್ಯಂತಿ ಯೋಗಿನಃ ॥ ೫೨ ॥

ಮೋಕ್ಷರೂಪಂ ಪದಂ ಸ್ಥಾನಂ ಪರಬ್ರಹ್ಮಸ್ವರೂಪಕಂ ।
ಅವ್ಯಕ್ತಮಕ್ಷರಂ ಹಂಸಂ ಶುದ್ಧಂ ಸಿದ್ಧಿಸಮನ್ವಿತಂ ॥ ೫೩ ॥

ಪರಾಚೀನಸ್ಯ ಯದ್ವೃತ್ತಂ ವಿದ್ಯಾಧರ ತವಾಗ್ರತಃ ।
ಸರ್ವಮೇವ ಸಮಾಖ್ಯಾತಮನ್ಯತ್ಕಿಂ ತೇ ವದಾಮ್ಯಹಂ ॥ ೫೪ ॥

---

೫೦. ಈರೀತಿ ಅರ್ವಾಚೀನವಾದ ಸ್ವರೂಪವನ್ನು ನಾನು ನಿನಗೆ ತೋರಿಸಿದೆನು. ಇದೇ ಅರ್ವಾಚೀನ ಶರೀರವೆಂಬುದು. ಪರಾಚೀನವೆಂಬ ದೇಹಕ್ಕೆ ಆಶ್ರಯವಿಲ್ಲ.

೫೧. ಅವನು ದೇಹವನ್ನು ತೋರಿಸಬೇಕೆಂದು ಇಷ್ಟಪಟ್ಟಾಗ, ಆ ಪರಾಚೀನ ಗಳು ದೇಹಸ್ವರೂಪವಾಗಿ ಅರ್ವಾಚೀನಗಳಾಗಿ ದೇಹಸ್ವರೂಪದಿಂದ ಕಾಣುತ್ತವೆ. ಆ ಅರ್ವಾಚೀನಗಳೇ ಬ್ರಹ್ಮಾದಿಯಾದ ಎಲ್ಲವೂ ಆಗಿವೆ.

೫೨. ಲೋಕತ್ರಯದ ಈ ಪ್ರಾಣಿಗಳೆಲ್ಲಾ ಅರ್ವಾಚೀನಗಳು. ಪರಾಚೀನ ವೆಂಬುದು ವಿಶ್ವರೂಪವಾದುದು. ಯೋಗಿಗಳಿಗೆ ಮಾತ್ರ ತಿಳಿಯುತ್ತದೆ.

೫೩. ಅದೇ ಮೋಕ್ಷರೂಪವಾದ ಉತ್ತಮ ಸ್ಥಾನವು. ಪರಬ್ರಹ್ಮಸ್ವರೂಪ ವಾದುದು. ವ್ಯಕ್ತವಿಲ್ಲದ್ದು, ನಾಶರಹಿತವಾದುದು. ಹಂಸವೆಂಬ ಹೆಸರುಳ್ಳದ್ದು, ಸರ್ವಸಿದ್ಧಿಯಿಂದಲೂ ಕೂಡಿರುವುದು.

೫೪. ಎಲೈ ವಿದ್ಯಾಧರನೇ, ಪರಾಚೀನದ ವಿಷಯವನ್ನು ನಿನಗೆ ಹೇಳಿದೆನು. ಇನ್ನೇನು ಹೇಳಬೇಕು? ಕೇಳು, ಹೇಳುತ್ತೇನೆ.

॥ ವಿದ್ಯಾಧರ ಉವಾಚ ॥

ಕಸ್ಮಾದೇತನ್ಮಹಾಜ್ಞಾನಮುದ್ಭೂತಂ ತವ ಸುವ್ರತ ।
ಅರ್ವಾಚೀನಗತಿಂ ವಿದ್ವಾನ್ ಪರಾಚೀನಗತಿಂ ತಥಾ ॥ ೫೫ ॥

ತ್ರೈಲೋಕ್ಯಸ್ಯ ಪರಂ ಜ್ಞಾನಂ ತ್ವಯ್ಯೇವಂ ಪರಿವರ್ತತೇ ।
ತಪಸೋ ನೈವ ಪಶ್ಯಾಮಿ ಪರಾಂ ನಿಷ್ಠಾಂ ಹಿ ಸುವ್ರತ ।
ಸ್ವಪ್ರಭಾವಂ ವದಸ್ವೈವಂ ಕೇನ ಜ್ಞಾನಂ ತವಾಖಿಲಂ ॥ ೫೬ ॥

॥ ಸುಕರ್ಮೋವಾಚ ॥

ಏತದೇವ ನ ಜಾನಾಮಿ ನ ಕೃತಂ ಕಾಯಶೋಷಣಂ ।
ಯಜನಂ ಯಾಜನಂ ಧರ್ಮಂ ನ ಜ್ಞಾನಂ ತೀರ್ಥಸಾಧನಂ ॥ ೫೭ ॥

ನ ಮಯಾ ಸಾಧಿತಂ ಚಾನ್ಯತ್ ಪುಣ್ಯಂ ಕಿಂಚಿತ್ಸುಕರ್ಮಜಂ ।
ಸ್ಫುಟಮೇಕಂ ಪ್ರಜಾನಾಮಿ ಪಿತೃಮಾತೃಪ್ರಪೂಜನಂ ॥ ೫೮ ॥

---

೫೫. ವಿದ್ಯಾಧರನು ಹೇಳಿದನು—ಎಲೈ ಪುಣ್ಯಾತ್ಮನೇ, ನಿನಗೆ ಈ ಮಹಾ ಜ್ಞಾನವು ಹೇಗೆ ಹುಟ್ಟಿತು? ಅರ್ವಾಚೀನಪರಾಚೀನಗತಿಗಳನ್ನೂ, ತ್ರೈಲೋಕ್ಯ ಜ್ಞಾನವನ್ನೂ, ನೀನು ಹೇಗೆ ತಿಳಿದಿರುವೆ? ಅವು ನಿನ್ನಲ್ಲಿವೆಯಲ್ಲ?

೫೬. ನಿನ್ನಲ್ಲಿ ತಪಸ್ಸನ್ನೂ ಕಾಣೆ, ಯಾವ ಅತಿಶಯವೂ ಇಲ್ಲ. ಯಾವುದರಿಂದ ನಿನಗೆ ಈ ಜ್ಞಾನಗಳೆಲ್ಲಾ ಬಂದುವು? ನಿನ್ನ ಪ್ರಭಾವವನ್ನು ನನಗೆ ತಿಳಿಸು ಎಂದನು.

೫೭-೫೮. ಸುಕರ್ಮನು ಹೇಳಿದನು—ಅದೇ ನನಗೆ ಗೊತ್ತಿಲ್ಲ. ನಾನು ದೇಹಕಾರ್ಶ್ಯವನ್ನು ಹೊಂದಿದವನೇ ಅಲ್ಲ. ಯಜ್ಞಾದಿಗಳನ್ನು ಮಾಡಿಸುವುದಾಗಲೀ ಮಾಡುವುದಾಗಲೀ ಇಲ್ಲ. ಬೇರೆ ಯಾವ ಬಗೆಯಾದ ಪುಣ್ಯಪ್ರದವಾದ ಕೆಲಸಗಳನ್ನೂ ಮಾಡಿಲ್ಲ. ಆದರೆ ತಾಯಿತಂದೆಗಳ ಶುಶ್ರೂಷೆಯೊಂದನ್ನು ಚೆನ್ನಾಗಿ ಬಲ್ಲೆ.

ಉಭಯೋಸ್ತು ಸ್ವಹಸ್ತೇನ ಮಾತಾಪಿತ್ರೋಶ್ಚ ಪಿಪ್ಪಲ ।
ಪಾದಪ್ರಕ್ಷಾಳನಂ ಪುಣ್ಯಂ ಸ್ವಯಮೇವ ಕರೋಮ್ಯಹಂ ॥ ೫೯ ॥

ಅಂಗಸಂವಾಹನಂ ಸ್ನಾನಂ ಭೋಜನಾದಿಕಮೇವ ಚ ।
ತ್ರಿಕಾಲೋಪಾಸನಂ ಭೀತಃ ಸಾಧಯಾಮಿ ದಿನೇದಿನೇ ॥ ೬೦ ॥

ಪಾದೋದಕಂ ತಯೋಶ್ಚೈವ ಮಾತಾಪಿತ್ರೋರ್ದಿನೇದಿನೇ ।
ಭಕ್ತ್ಯಾ ಭಾವೇನ ವಿಂದಾಮಿ ಪೂಜಯಾಮಿ ಸ್ವಭಾವತಃ ॥ ೬೧ ॥

ಗುರೂ ಮೇ ಜೀವಮಾನೌ ತೌ ಯಾವತ್ಕಾಲಂ ಹಿ ಪಿಪ್ಪಲ ।
ತಾವತ್ಕಾಲಂ ತು ಮೇ ಲಾಭೋ ಹ್ಯತುಲಶ್ಚ ಪ್ರಜಾಯತೇ ॥ ೬೨ ॥

ತ್ರಿಕಾಲಂ ಪೂಜಯಾಮ್ಯೇತೌ ಭಾವಶುದ್ಧೇನ ಚೇತಸಾ ।
ಸ್ವಚ್ಛಂದಲೀಲಾಸಂಚಾರೀ ವರ್ತಾಮ್ಯೇವಂ ಹಿ ಪಿಪ್ಪಲ ॥ ೬೩ ॥

---

೫೯. ತಾಯಿತಂದೆಗಳ ಪಾದಪ್ರಕ್ಷಾಳನವು ಪುಣ್ಯಪ್ರದವಾದುದು. ಅದನ್ನು ನಾನೇ ಸ್ವತಃ ಮಾಡುತ್ತೇನೆ.

೬೦. ಅವರ ಕೈಕಾಲು ಅಮುಕುವುದು, ಊಟಮಾಡಿಸುವುದು, ಇವುಗಳನ್ನೂ, ತ್ರಿಕಾಲದ ಸಂಧ್ಯಾವಂದನಾದಿಗಳನ್ನೂ ಪ್ರತಿದಿನವೂ ನಾನೇ ಮಾಡಿಸುತ್ತೇನೆ.

೬೧. ತಾಯಿತಂದೆಯರ ಪಾದೋದಕವನ್ನೂ ಪ್ರತಿದಿನವೂ ಭಕ್ತಿಯಿಂದ ತೆಗೆದುಕೊಳ್ಳುತ್ತೇನೆ. ಭಕ್ತಿಯಿಂದ ಪೂಜೆಮಾಡುತ್ತೇನೆ.

೬೨. ನನ್ನ ಮಾತಾಪಿತೃಗಳಾದ ಗುರುಗಳು ಎಲ್ಲಿಯವರೆಗೆ ಬದುಕಿರುತ್ತಾರೆಯೋ ಅಲ್ಲಿಯವರೆಗೆ ನನಗೆ ಬಹುವಾದ ಲಾಭವಿದೆ.

೬೩. ಶುದ್ಧವಾದ ಭಾವದಿಂದ ತ್ರಿಕಾಲದಲ್ಲೂ ಅವರನ್ನು ಪೂಜಿಸುತ್ತೇನೆ. ಈರೀತಿ ಸ್ವಚ್ಛಂದವಾಗಿದ್ದೇನೆ.

ಕಿಂ ಮೇ ಚಾನ್ಯೇನ ತಪಸಾ ಕಿಂ ಮೇ ಕಾಯಸ್ಯ ಶೋಷಣೈಃ ।
ಕಿಂ ಮೇ ಸುತೀರ್ಥಯಾತ್ರಾಭಿರನ್ಯೈಃ ಪುಣ್ಯೈಶ್ಚ ಸಾಂಪ್ರತಂ ॥ ೬೪ ॥

ಮಖಾನಾಮೇವ ಸರ್ವೇಷಾಂ ಯತ್ಫಲಂ ಪ್ರಾಪ್ಯತೇ ಬುಧೈಃ ।
ತತ್ಫಲಂ ತು ಮಯಾ ದೃಷ್ಟಂ ಪಿತೃಶುಶ್ರೂಷಣಾದಪಿ ॥ ೬೫ ॥

ಮಾತುಶ್ಶುಶ್ರೂಷಣಂ ತದ್ವತ್ಪುತ್ರಾಣಾಂ ಗತಿದಾಯಕಂ ।
ಸರ್ವಧರ್ಮಸ್ಯ ಸರ್ವಸ್ವಂ ಸಾರಭೂತಂ ಜಗತ್ತ್ರಯೇ ॥ ೬೬ ॥

ಪುತ್ರಸ್ಯ ಜಾಯತೇ ಲೋಕೋ ಮಾತುಃ ಶುಶ್ರೂಷಣಾದಪಿ ।
ಪಿತುಶ್ಶುಶ್ರೂಷಣೇ ತದ್ವನ್ಮಹತ್ಪುಣ್ಯಂ ಪ್ರಜಾಯತೇ ॥ ೬೭ ॥

ತತ್ರ ಗಂಗಾ ಗಯಾ ತೀರ್ಥಂ ತತ್ರ ಪುಷ್ಕರಮೇವ ಚ ।
ಯತ್ರ ಮಾತಾ ಪಿತಾ ತಿಷ್ಠೇತ್ಪುತ್ರಸ್ಯಾಪಿ ನ ಸಂಶಯಃ ॥ ೬೮ ॥

---

೬೪. ನನಗೆ ಬೇರೆ ತಪಸ್ಸಿನಿಂದ ಉಪಯೋಗವೇನು? ದೇಹಕ್ಲೇಶಕರಗಳಾದ ತಪಸ್ಸು ತಾನೆ ಏತಕ್ಕೆ? ತೀರ್ಥಯಾತ್ರೆ, ಮಿಕ್ಕ ಪುಣ್ಯಪ್ರದವಾದ ಕೆಲಸಗಳು ತಾನೆ ನನಗೇತಕ್ಕೆ?

೬೫. ಯಾಗಗಳಿಂದ ಯಾವರೀತಿಯಾದ ಪುಣ್ಯಬರುತ್ತದೆಯೋ ಅದೇ ಪುಣ್ಯವು ಪಿತೃಶುಶ್ರೂಷೆಯಿಂದ ಬರುತ್ತದೆಂದು ನಾನು ತಿಳಿದಿದ್ದೇನೆ.

೬೬. ಹಾಗೆಯೇ ತಾಯಿಯ ಸೇವೆಯೂ ಮಕ್ಕಳಿಗೆ ಗತಿಯನ್ನು ಕೊಡುತ್ತದೆ. ಇವು ಮೂರು ಲೋಕದಲ್ಲೂ ಸರ್ವಧರ್ಮದ ಸಾರಗಳು.

೬೭. ಸ್ವರ್ಗವು ಮಾತೃಶುಶ್ರೂಷೆಯಿಂದ ಬರುತ್ತದೆ. ತಂದೆಯ ಶುಶ್ರೂಷೆಯಿಂದಲೂ ಮಹಾ ಪುಣ್ಯವು ಬರುತ್ತದೆ.

೬೮. ಎಲ್ಲಿ ತಾಯಿತಂದೆಯರಿರುವರೋ ಅದೇ ಮಗನಿಗೆ ಗಂಗಾ, ಯಮುನೆ ಪುಷ್ಕರಾದಿ ಸರ್ವತೀರ್ಥಗಳೂ ಆಗಿವೆ.

**ಅನ್ಯಾನಿ ತತ್ರ ತೀರ್ಥಾನಿ ಪುಣ್ಯಾನಿ ವಿವಿಧಾನಿ ಚ ।**
**ಭಜಂತೇ ತಾನಿ ಪುತ್ರಸ್ಯ ಪಿತೃಶುಶ್ರೂಷಣಾದಪಿ　　॥ ೬೯ ॥**

**ಪಿತುಃ ಶುಶ್ರೂಷಣಾತ್ತಸ್ಯ ದಾನಸ್ಯ ತಪಸಃ ಫಲಂ ।**
**ಸತ್ಪುತ್ರಸ್ಯ ಭವೇದ್ವಿಪ್ರ ನಾನ್ಯತ್ಕರ್ಮ ಸಮಾಶ್ರಯೇತ್　　॥ ೭೦ ॥**

**ಪಿತೃಶುಶ್ರೂಷಣಾತ್ಪುಣ್ಯಂ ಪುತ್ರಃ ಪ್ರಾಪ್ನೋತ್ಯನುತ್ತಮಂ ।**
**ಸುಕರ್ಮಣಸ್ತು ಸರ್ವತ್ರ ಇಹ ಚೈವ ಪರತ್ರ ಚ　　॥ ೭೧ ॥**

**ಜೀವಮಾನೌ ಗುರೂ ಏತೌ ಸ್ವಮಾತಾಪಿತರೌ ತಥಾ ।**
**ಶುಶ್ರೂಷತೇ ಸುತೋ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು　　॥ ೭೨ ॥**

**ದೇವಾಸ್ತಸ್ಯಾಪಿ ತುಷ್ಯಂತಿ ಋಷಯಃ ಪುಣ್ಯವತ್ಸಲಾಃ ।**
**ತ್ರಯೋ ಲೋಕಾಶ್ಚ ತುಷ್ಯಂತಿ ಪಿತುಶ್ಶುಶ್ರೂಷಣಾದಿಹ　　॥ ೭೩ ॥**

---

೬೯. ಪಿತೃಶುಶ್ರೂಷಣೆಯಿಂದ ಜಗತ್ತಿನ ತೀರ್ಥಗಳೆಲ್ಲಾ ಮಗನಿಗೆ ಲಭಿಸುತ್ತದೆ.

೭೦. ಪಿತೃಶುಶ್ರೂಷಣೆಯಿಂದ ಮಹಾದಾನಗಳ ಫಲವು ಬರುತ್ತದೆ. ಅವನು ಬೇರೆ ಕರ್ಮಗಳನ್ನು ಆಶ್ರಯಿಸಬೇಕಾಗಿಲ್ಲ.

೭೧. ಪಿತೃಶುಶ್ರೂಷೆಯಿಂದ ಮಗನು ಬಹಳವಾದ ಪುಣ್ಯವನ್ನು ಹೊಂದುತ್ತಾನೆ. ಆದುದರಿಂದ ಸುಕರ್ಮನಿಗೆ ಇಹಪರಗಳೆರಡರಲ್ಲೂ ಪುಣ್ಯವುಂಟು.

೭೨. ತಾಯಿತಂದೆಗಳು ಜೀವಂತರಾಗಿದ್ದು ಅವರನ್ನು ಶುಶ್ರೂಷಿಸುತ್ತಿದ್ದರೆ, ಅವನಿಗೆ ಉಂಟಾಗುವ ಫಲವನ್ನು ಹೇಳುವೆನು, ಕೇಳು.

೭೩. ಅವನ ವಿಷಯದಲ್ಲಿ ದೇವತೆಗಳೂ, ಋಷಿಗಳೂ, ಮುನಿಗಳೂ, ಸಂತೋಷಗೊಳ್ಳುತ್ತಾರೆ. ಮೂರು ಲೋಕಗಳೂ ಕೂಡ ಪಿತೃಶುಶ್ರೂಷೆಯಿಂದ ಸಂತೋಷಗೊಳ್ಳುತ್ತವೆ.

ಮಾತಾಪಿತ್ರೋಸ್ತು ಯಃ ಪಾದೌ ನಿತ್ಯಂ ಪ್ರಕ್ಷಾಳಯೇತ್ಸುತಃ ।
ತಸ್ಯ ಭಾಗೀರಥೀಸ್ನಾನಮಹನ್ಯಹನಿ ಜಾಯತೇ ॥ ೭೪ ॥

ಪುಣ್ಯೈರ್ಮೃಷ್ಟಾನ್ನಪಾನೈರ್ಯಃ ಪಿತರಂ ಮಾತರಂ ತಥಾ ।
ಭಕ್ತ್ಯಾ ಭೋಜಯತೇ ನಿತ್ಯಂ ತಸ್ಯ ಪುಣ್ಯಂ ವದಾಮ್ಯಹಂ ॥ ೭೫ ॥

ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪುತ್ರಸ್ಯ ಜಾಯತೇ ।
ತಾಂಬೂಲೈಶ್ಛಾದನೈಶ್ಚೈವ ಪಾನೈಶ್ಚಾಶನಕೈಸ್ತಥಾ ॥ ೭೬ ॥

ಭಕ್ತ್ಯಾ ಚಾನ್ನೇನ ಪುಣ್ಯೇನ ಗುರೂ ಯೇನಾಭಿಪೂಜಿತೌ ।
ಸರ್ವಜ್ಞಾನೀ ಭವೇತ್ಸೋಽಪಿ ಯಶಃ ಕೀರ್ತಿಮವಾಪ್ನುಯಾತ್ ॥ ೭೭ ॥

ಮಾತರಂ ಪಿತರಂ ದೃಷ್ಟ್ವಾ ಹರ್ಷಾತ್ಸಂಭಾಷತೇ ಸುತಃ ।
ನಿಧಯಸ್ತಸ್ಯ ಸಂತುಷ್ಟಾ ನಿತ್ಯಂ ಗೇಹೇ ವಸಂತಿ ಚ ।
ಬದ್ಧಾಸ್ಸೌಹೃದಮಾಯಾಂತಿ ಪುತ್ರಸ್ಯ ಸುಖದಾಸ್ಸದಾ ॥ ೭೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಮಾತಾಪಿತೃತೀರ್ಥಮಹಾತ್ಮ್ಯೇ ದ್ವಿಷಷ್ಟಿತಮೋಽಧ್ಯಾಯಃ

---

೭೪. ನಿತ್ಯವೂ ತಾಯಿತಂದೆಯರ ಕಾಲುತೊಳೆದು ಪ್ರೋಕ್ಷಿಸಿಕೊಂಡರೆ, ಅದು ನಿತ್ಯವೂ ಭಾಗೀರಥಿ ಸ್ನಾನದಂತೆ ಪುಣ್ಯವನ್ನು ಕೊಡುತ್ತದೆ.

೭೫. ಮೃಷ್ಟಾನ್ನದಿಂದ ತಂದೆತಾಯಿಗಳನ್ನು ತೃಪ್ತಿಪಡಿಸಿದರೆ ಅವನಿಗೆ ಬರುವ ಪುಣ್ಯವನ್ನು ಹೇಳುತ್ತೇನೆ, ಕೇಳು.

೭೬-೭೭. ಅವನಿಗೆ ಅಶ್ವಮೇಧಯಾಗಮಾಡಿದ ಪುಣ್ಯವು ಬರುತ್ತದೆ. ತಾಂಬೂಲ, ಹೊದ್ದಿಕೆ, ಪಾನ, ಭೋಜನಗಳನ್ನು ಭಕ್ತಿಯಿಂದ ಮಾಡಿಸಿದರೆ ಸರ್ವಜ್ಞಾನಿಯಾಗಿ ಕೀರ್ತಿಯನ್ನು ಹೊಂದುತ್ತಾನೆ.

೭೮. ತಾಯಿತಂದೆಗಳನ್ನು ಸಂತೋಷದಿಂದ ಮಾತನಾಡಿಸಿದರೆ ನಿಧಿಗಳು ಸಂತೋಷಗೊಂಡು ಅವನ ಮನೆಯಲ್ಲಿ ವಾಸಿಸುತ್ತವೆ. ಮನೆಯಲ್ಲಿ ಎಲ್ಲರೂ ಅವನಿಗೆ ಸ್ನೇಹಿತರಾಗಿ ಯಾವಾಗಲೂ ಸುಖವನ್ನೇ ಉಂಟುಮಾಡುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಿಷಷ್ಟಿತಮೋऽಧ್ಯಾಯಃ

॥ ಸುಕರ್ಮೋವಾಚ ॥

ತಯೋಶ್ಚಾಪಿ ದ್ವಿಜಶ್ರೇಷ್ಠ ಮಾತಾಪಿತ್ರೋಶ್ಚ ಸ್ನಾತಯೋಃ ।
ಪುತ್ರಸ್ಯಾಪಿ ಹಿ ಸರ್ವಾಂಗೇ ಪತಂತ್ಯಂಬುಕಣಾ ಯದಾ ।
ಸರ್ವತೀರ್ಥಸಮಂ ಸ್ನಾನಂ ಪುತ್ರಸ್ಯಾಪಿ ಪ್ರಜಾಯತೇ ॥ ೧ ॥

ಪತಿತಂ ಕ್ಷುಧಿತಂ ವೃದ್ಧಮಶಕ್ತಂ ಸರ್ವಕರ್ಮಸು ।
ವ್ಯಾಧಿತಂ ಕುಷ್ಠಿನಂ ತಾತಂ ಮಾತರಂ ಚ ತಥಾವಿಧಂ ॥ ೨ ॥

ಉಪಾಚರತಿ ಯಃ ಪುತ್ರಸ್ತಸ್ಯ ಪುಣ್ಯಂ ವದಾಮ್ಯಹಂ ।
ವಿಷ್ಣುಸ್ತಸ್ಯ ಪ್ರಸನ್ನಾತ್ಮಾ ಜಾಯತೇ ನಾತ್ರ ಸಂಶಯಃ ॥ ೩ ॥

---

## ಅರವತ್ತಮೂರನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು— ತಾಯಿತಂದೆಗಳು ಸ್ನಾನಮಾಡುವಾಗ ಅವರ ನೀರಿನ ಕಣಗಳು ಮೇಲೆ ಬಿದ್ದರೆ ಆ ಮಗನಿಗೆ ಸರ್ವತೀರ್ಥಸ್ನಾನವಾದಂತಾಗುತ್ತದೆ.

೨. ಪತಿತರು, ಹಸಿದವರು, ವೃದ್ಧರು, ಅಶಕ್ತರು, ರೋಗಿಗಳು, ಕುಷ್ಠಿಗಳು, ಆಗಿದ್ದರೂ ಇಂಥಾ ತಾಯಿತಂದೆಗಳನ್ನು ಶುಶ್ರೂಷೆಮಾಡುವ ಮಗನ ಪುಣ್ಯವನ್ನು ಹೇಳುತ್ತೇನೆ ಕೇಳು.

೩. ಅವನಿಗೆ ವಿಷ್ಣುವು ಪ್ರಸನ್ನನಾಗಿ ಆಗುತ್ತಾನೆ. ಸಂಶಯವಿಲ್ಲಾ. ಯೋಗಿಗಳಿಗೂ ಸಿಕ್ಕದ ವೈಷ್ಣವ ಲೋಕವನ್ನು ಹೊಂದುತ್ತಾನೆ.

ಪ್ರಯಾತಿ ವೈಷ್ಣವಂ ಲೋಕಂ ಯದಪ್ರಾಪ್ಯಂ ಹಿ ಯೋಗಿಭಿಃ ।
ಪಿತರೌ ವಿಕಲೌ ದೀನೌ ವೃದ್ಧೌ ದುಃಖಿತಮಾನಸೌ ॥ ೪ ॥

ಮಹಾಗದೇನ ಸಂತಪ್ತೌ ಪರಿತ್ಯಜತಿ ಪಾಪಧೀಃ ।
ಸ ಪುತ್ರೋ ನರಕಂ ಯಾತಿ ದಾರುಣಂ ಕೃಮಿಸಂಕುಲಂ ॥ ೫ ॥

ವೃದ್ಧಾಭ್ಯಾಂ ಯಸ್ಸಮಾಹೂತೋ ಗುರುಭ್ಯಾಮಿಹ ಸಾಂಪ್ರತಂ ।
ನ ಪ್ರಯಾತಿ ಸುತೋ ಭೂತ್ವಾ ತಸ್ಯ ಪಾಪಂ ವದಾಮ್ಯಹಂ ॥ ೬ ॥

ವಿಷ್ಠಾಶೀ ಜಾಯತೇ ಮೂಢೋಽಮೇಧ್ಯಭೋಜೀ ನ ಸಂಶಯಃ ।
ಯಾವಜ್ಜನ್ಮಸಹಸ್ರಂತು ಪುನಃ ಶ್ವಾನೋಽಭಿಜಾಯತೇ ॥ ೭ ॥

ಪುತ್ರಗೇಹೇ ಸ್ಥಿತೌ ಮಾತಾಪಿತರೌ ವೃದ್ಧಕೌ ತಥಾ ।
ಸ್ವಯಂ ತಾಭ್ಯಾಂ ವಿನಾ ಭುಕ್ತ್ವಾ ಪ್ರಥಮಂ ಜಾಯತೇ ಘೃಣಿಃ ॥ ೮ ॥

ಮೂತ್ರಂ ವಿಷ್ಠಾಂ ಚ ಭುಂಜೀತ ಯಾವಜ್ಜನ್ಮಸಹಸ್ರಕಂ ।
ಕೃಷ್ಣಸರ್ಪೋ ಭವೇತ್ಪಾಪೀ ಯಾವಜ್ಜನ್ಮಶತತ್ರಯಂ ॥ ೯ ॥

---

೪-೫. ಶೋಚ್ಯರೂ, ವೃದ್ಧರೂ, ದುಃಖಿತರೂ, ರೋಗಿಗಳೂ ಆದ ತಾಯಿ ತಂದೆಗಳನ್ನು ಸೇವಿಸದೆ ಉದಾಸೀನ ಮಾಡುವ ಪಾಪಿಯಾದ ಮಗನು ಕ್ರೂರವಾದ ನರಕವನ್ನು ಹೊಂದುತ್ತಾನೆ.

೬. ವೃದ್ಧರಾದ ಮಾತಾಪಿತೃಗಳು ಕೂಗಿದರೆ ಯಾವನು ಹೋಗುವುದಿಲ್ಲವೋ ಅವನಿಗೆ ಬರುವ ಪಾಪವನ್ನು ಹೇಳುತ್ತೇನೆ ಕೇಳು.

೭. ಅವನು ಅಮೇಧ್ಯವನ್ನು ತಿನ್ನುವ ಹುಳುವಾಗಿ ಅದರಲ್ಲೇ ಹುಟ್ಟುತ್ತಾನೆ, ಸಾವಿರ ಜನ್ಮ ಕಳೆಯುವ ಪರ್ಯಂತವೂ ನಾಯಾಗಿ ಹುಟ್ಟುತ್ತಾನೆ.

೮-೯. ಮನೆಯಲ್ಲಿ ತಾಯಿತಂದೆಗಳಿದ್ದರೂ ಅವರನ್ನು ಬಿಟ್ಟು ಊಟಮಾಡಿದರೆ ಅಂತಹ ಮಗನು ಮೊದಲು ಹಂದಿಯಾಗಿ ಹುಟ್ಟುತ್ತಾನೆ. ಸಾವಿರ ಜನ್ಮಗಳವರೆಗೂ ಮಲಮೂತ್ರಗಳನ್ನು ತಿನ್ನುತ್ತಾನೆ. ಆ ಮೇಲೆ ಮುನ್ನೂರ ಜನ್ಮಗಳವರೆಗೆ ಕೃಷ್ಣ ಸರ್ಪವಾಗಿ ಹುಟ್ಟುತ್ತಾನೆ.

**ಮಾತರಂ ಪಿತರಂ ವೃದ್ಧಮವಜ್ಞಾಯ ಪ್ರವರ್ತತೇ ।**
**ಗೃಧ್ರೋಽಪಿ ಜಾಯತೇ ದುಷ್ಟೋ ಜನ್ಮಕೋಟಿಶತೈರಪಿ ॥ ೧೦ ॥**

**ಪಿತರೌ ಕುತ್ಸತೇ ಪುತ್ರಃ ಕಟುಕೈರ್ವಚನೈರಪಿ ।**
**ಸ ಚ ಪಾಪೀ ಭವೇದ್ವ್ಯಾಘ್ರಃ ಪಶ್ಚಾದ್ದುಃಖೀ ಪ್ರಜಾಯತೇ ॥ ೧೧ ॥**

**ಮಾತರಂ ಪಿತರಂ ಪುತ್ರೋ ನ ನಮಸ್ಯತಿ ಪಾಪಧೀಃ ।**
**ಕುಂಭೀಪಾಕೇ ವಸೇತ್ತಾವದ್ಯಾವದ್ಯುಗಸಹಸ್ರಕಂ ॥ ೧೨ ॥**

**ನಾಸ್ತಿ ಮಾತುಃ ಪರಂ ತೀರ್ಥಂ ಪುತ್ರಾಣಾಂ ಚ ಪಿತುಸ್ತಥಾ ।**
**ನಾರಾಯಣಸಮಾವೇತಾವಿಹ ಚೈವ ಪರತ್ರ ಚ ॥ ೧೩ ॥**

**ತಸ್ಮಾದಹಂ ಮಹಾಪ್ರಾಜ್ಞ ಪಿತೃದೇವಂ ಪ್ರಪೂಜಯೇ ।**
**ಮಾತರಂಚ ತಥಾ ನಿತ್ಯಂ ಯಥಾಯೋಗಂ ಯಥಾಹಿತಂ ॥ ೧೪ ॥**

---

೧೦. ಯಾವನು ತಂದೆತಾಯಿಗಳನ್ನು ಅವಮಾನಪಡಿಸುತ್ತಾನೋ ಅವನು ನೂರುಕೋಟಿ ಜನ್ಮಪರ್ಯಂತರವೂ ಹದ್ದಾಗಿ ಹುಟ್ಟುತ್ತಾನೆ.

೧೧. ಅವರನ್ನು ಕೆಟ್ಟಮಾತುಗಳಿಂದ ನಿಂದಿಸಿದರೆ ಅವನು ಹುಲಿಯಾಗಿ ಹುಟ್ಟಿ ಆ ಮೇಲೂ ದುಃಖಿಯಾಗಿ ಹುಟ್ಟುತ್ತಾನೆ.

೧೨. ಅವರಿಗೆ ನಮಸ್ಕರಿಸದಿದ್ದರೆ ಸಾವಿರವರ್ಷಗಳು ಕುಂಭೀಪಾಕವೆಂಬ ನರಕದಲ್ಲಿ ವಾಸಮಾಡುತ್ತಾನೆ.

೧೩. ತಾಯಿತಂದೆಯರಿಗೆ ಸಮವಾದ ಉತ್ತಮ ಪದಾರ್ಥವಿಲ್ಲ. ಇಹಪರಗಳೆರಡಕ್ಕೂ ಸಹ ಅವರು ನಾರಾಯಣಸಮರು.

೧೪. ಆದುದರಿಂದಲೇ ನಾನು ಮಾತಾಪಿತೃಗಳನ್ನು ಸಾಧ್ಯವಾದಷ್ಟುಮಟ್ಟಿಗೆ ಪೂಜಿಸುತ್ತೇನೆ.

ಪಿತೃಮಾತೃಪ್ರಸಾದೇನ ಸಂಜಾತಂ ಜ್ಞಾನಮುತ್ತಮಂ ।
ತ್ರೈಲೋಕ್ಯಂ ಸಕಲಂ ವಿಪ್ರ ಸಂಪ್ರಾಪ್ತಂ ವಶ್ಯತಾಂ ಮಮ ॥ ೧೫ ॥

ಅರ್ವಾಚೀನಂ ಪರಂ ಜ್ಞಾನಂ ಪಿತುಶ್ಚಾಸ್ಯ ಪ್ರಸಾದತಃ ।
ಪರಾಚೀನಂ ಚ ವಿಪ್ರೇಂದ್ರ ವಾಸುದೇವಸ್ವರೂಪಕಂ ॥ ೧೬ ॥

ಸರ್ವಜ್ಞಾನಂ ಚ ಸಂಭೂತಂ ಪಿತೃಮಾತೃಪ್ರಸಾದತಃ ।
ಕೋ ನ ಪೂಜಯತೇ ವಿದ್ವಾನ್ ಪಿತರಂ ಮಾತರಂ ತಥಾ ॥ ೧೭ ॥

ಸಾಂಗೋಪಾಂಗೈರಧೀತೈಸ್ತೈಃ ಶ್ರುತಿಶಾಸ್ತ್ರಸಮನ್ವಿತೈಃ ।
ವೇದೈರಪಿ ಚ ಕಿಂ ವಿಪ್ರ ಪಿತಾ ಯೇನ ನ ಪೂಜಿತಃ ॥ ೧೮ ॥

ಮಾತಾ ನ ಪೂಜಿತಾ ಯೇನ ತಸ್ಯ ವೇದಾ ನಿರರ್ಥಕಾಃ ।
ಯಜ್ಞೈಶ್ಚ ತಪಸಾ ವಿಪ್ರ ಕಿಂ ದಾನೈಃ ಕಿಂ ಚ ಪೂಜನೈಃ ॥ ೧೯ ॥

ಪ್ರಯಾತಿ ತಸ್ಯ ವೈಫಲ್ಯಂ ನ ಮಾತಾ ಯೇನ ಪೂಜಿತಾ ।
ನ ಪಿತಾ ಪೂಜಿತೋ ಯೇನ ಜೀವಮಾನೋ ಗೃಹೇ ಸ್ಥಿತಃ ॥ ೨೦ ॥

---

೧೫. ಆ ತಂದೆತಾಯಿಯವರ ಪ್ರಸಾದದಿಂದಲೇ ಉತ್ತಮವಾದ ಜ್ಞಾನವನ್ನು ಹೊಂದಿದೆನು. ಅದರಿಂದಲೇ ಮೂರು ಲೋಕಗಳೂ ನನಗೆ ವಶವಾಗಿವೆ.

೧೬-೧೭. ಪ್ರಪಂಚಸ್ವರೂಪವಾದ ಅರ್ವಾಚೀನಜ್ಞಾನವೂ, ವಾಸುದೇವ ಸ್ವರೂಪವಾದ ಪರಾಚೀನಜ್ಞಾನವೂ ಮಾತಾಪಿತೃಗಳ ಅನುಗ್ರಹದಿಂದಲೇ ಬಂದಿರುವುದು. ಆದ್ದರಿಂದ ಜ್ಞಾನಿಯಾದ ಯಾವನು ತಾನೇ ಮಾತಾಪಿತೃಗಳನ್ನು ಪೂಜಿಸುವುದಿಲ್ಲ?

೧೮. ಯಾವನು ತಂದೆಯನ್ನು ಪೂಜಿಸುವದಿಲ್ಲವೋ ಅವನು ಸಾಂಗೋಪಾಂಗವಾಗಿ ವೇದವನ್ನು ಓದಿದರೆ ತಾನೇ ಏನು ಪ್ರಯೋಜನ?

೧೯. ಯಾವನು ತಾಯಿಯನ್ನು ಪೂಜಿಸುವುದಿಲ್ಲವೋ ಅವನಿಗೆ ಯಜ್ಞಗಳೂ ತಪಸ್ಸುಗಳೂ, ದಾನವೂ, ಪೂಜೆಯೂ, ನಿರರ್ಥಕವು.

೨೦ ತಾಯಿಯನ್ನು ಪೂಜಿಸದಿದ್ದರೆ ಇವೆಲ್ಲವೂ ವಿಫಲವಾಗುತ್ತವೆ. ಹಾಗೆಯೇ ಜೀವಂತನಾದ ತಂದೆಯು ಮನೆಯಲ್ಲಿದ್ದಾಗ ಅವನನ್ನು ಪೂಜಿಸದಿದ್ದರೆ ಎಲ್ಲವೂ ವಿಫಲವಾಗುತ್ತದೆ.

ಏಷ ಪುತ್ರಸ್ಯ ವೈ ಧರ್ಮಸ್ತಥಾ ತೀರ್ಥಂ ನರೇಷ್ವಿಹ ।
ಏಷ ಪುತ್ರಸ್ಯ ವೈ ಮೋಕ್ಷಸ್ತಥಾ ಜನ್ಮಫಲಂ ಶುಭಂ ॥ ೨೧ ॥

ಏಷ ಪುತ್ರಸ್ಯ ವೈ ಯಜ್ಞೋ ದಾನಮೇವ ನ ಸಂಶಯಃ ।
ಪಿತರಂ ಪೂಜಯೇನ್ನಿತ್ಯಂ ಭಕ್ತ್ಯಾ ಭಾವೇನ ತತ್ಪರಃ ।
ತಸ್ಯ ಜ್ಞಾನಂ ಸಮಸ್ತಂ ಸ್ಯಾದ್ಯದುಕ್ತಂ ಪೂರ್ವಮೇವ ಹಿ ॥ ೨೨ ॥

ದಾನಸ್ಯಾಪಿ ಫಲಂ ಲಬ್ಧಂ ತೀರ್ಥಸ್ಯಾಪಿ ನ ಸಂಶಯಃ ।
ಯಜ್ಞಸ್ಯಾಪಿ ಫಲಂ ತೇನ ಯೇನ ಮಾತಾಪ್ಯುಪಾಸಿತಾಂ ॥ ೨೩ ॥

ಪಿತಾ ಚ ಯೇನ ವೈ ಭಕ್ತ್ಯಾ ನಿತ್ಯಮೇವಾಪ್ಯುಪಾಸಿತಃ ।
ತಸ್ಯ ಸರ್ವಾ ವಿಪ್ರ ಸಿದ್ಧಾ ಯಜ್ಞಾದ್ಯಾಃ ಪುಣ್ಯದಾಃ ಕ್ರಿಯಾಃ ॥ ೨೪ ॥

ಏತದರ್ಥೇ ಮಯಾ ಜ್ಞಾತಂ ಧರ್ಮಶಾಸ್ತ್ರಂ ಶ್ರುತಂ ಪುರಾ ।
ಪಿತೃಭಕ್ತಿಪರೋ ನಿತ್ಯಂ ಭವೇತ್ಪುತ್ರೋ ಹಿ ಪಿಪ್ಪಲ ॥ ೨೫ ॥

---

೨೧. ಗುರುಸೇವೆ ಮಾಡುವುದು ಮಗನಿಗೆ ಮೊದಲನೆಯ ಧರ್ಮವು. ಮನುಷ್ಯರಿಗೆ ಅದೇ ತೀರ್ಥವು, ಇದೇ ಮಗನಿಗೆ ಮೋಕ್ಷವು, ಜನ್ಮಸಾಫಲ್ಯವು, ಶುಭವು. ಇದೇ ಮಗನಿಗೆ ಯಜ್ಞವು, ದಾನವು. ಮೋಕ್ಷವೂ ಕೂಡ ಪಿತೃಸೇವೆಯೇ. ಇದರಲ್ಲಿ ಸಂಶಯವೇನಿದೆ?

೨೨. ತಾಯಿ ತಂದೆಗಳನ್ನು ನಿತ್ಯವೂ ಭಕ್ತಿಯಿಂದಾರಾಧಿಸುವುದೇ ಸಮಸ್ತ ಜ್ಞಾನಪ್ರದವು ಎಂದು ಮೊದಲೇ ಹೇಳಿದ್ದೇನೆ.

೨೩. ತಾಯಿಯನ್ನೇ ಪೂಜಿಸಿದರೆ ದಾನ, ತೀರ್ಥ, ಯಜ್ಞಗಳ ಫಲವು ಲಭಿಸುತ್ತದೆ ಇದು ನ್ಯಾಯವು

೨೪. ತಂದೆಯನ್ನು ನಿತ್ಯವೂ ಸೇವಿಸಿದರೆ ಅವನಿಗೆ ಯಜ್ಞವೇ ಮುಂತಾದ ಪುಣ್ಯಕ್ರಿಯೆಗಳು ಸಿದ್ಧಿಸುತ್ತವೆ.

೨೫. ಇದರಿಂದಲೇ ಎಲ್ಲಾ ಶಾಸ್ತ್ರಗಳೂ ನನಗೆ ತಿಳಿದಿವೆ. ಆದ್ದರಿಂದ ಮಗನು ಪಿತೃಗಳಲ್ಲಿ ಭಕ್ತಿಯುಳ್ಳವನಾಗಿರಬೇಕು. ತಂದೆಯು ಸಂತೋಷಗೊಂಡದ್ದರಿಂದಲೇ ಮದುವು ಸುಖವನ್ನು ಹೊಂದಿದನು.

**ತುಷ್ಟೇ ಪಿತರಿ ಸಂಪ್ರಾಪ್ತೋ ಯದುರಾಜಃ ಪುರಾ ಸುಖಂ ।**
**ರುಷ್ಟೇ ಪಿತರಿ ಚ ಪ್ರಾಪ್ತಂ ಮಹತ್ಪಾಪಂ ಪುರಾ ಶೃಣು ।**
**ಗುರುಣಾ ಪೌರವೇಣಾಪಿ ಪಿತ್ರಾ ಶಪ್ತೇನ ಭೂತಲೇ ॥ ೨೬ ॥**

**ಏವಂ ಜ್ಞಾತ್ವಾ ಮಯಾ ಸಮ್ಯಗ್ಧ್ಯಾನೇತೌ ಸಮುಪಾಸಿತೌ ।**
**ಏತಯೋಶ್ಚ ಪ್ರಸಾದೇನ ಪ್ರಾಪ್ತಂ ಫಲಮನುತ್ತಮಂ ॥ ೨೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ತ್ರಿಷಷ್ಟಿತಮೋಽಧ್ಯಾಯಃ**

---

೨೬. ತಂದೆಯು ಕೋಪಗೊಂಡರೆ ಮಹಾಪಾಪ ಸಂಭವಿಸುತ್ತದೆಂದು ತಿಳಿ. ಪೌರವನು ತಂದೆಯ ಕೋಪಕ್ಕೆ ಗುರಿಯಾಗಿ, ಶಾಪಹೊಂದಿ ಅನೇಕ ಕಷ್ಟಗಳನ್ನು ಹೊಂದಿದನು.

೨೭. ಇದನ್ನು ನಾನು ತಿಳಿದೇ ಆ ಇಬ್ಬರನ್ನೂ ಸೇವಿಸಿ ಅವರ ಪ್ರಸಾದದಿಂದಲೇ ಈ ರೀತಿಯಾದ ಫಲವನ್ನು ಹೊಂದಿದೆನು. ಎಂದು ಮಾತಾಪಿತೃಗಳ ಶುಶ್ರೂಷೆ ಯಿಂದುಂಟಾಗುವ ಫಲಗಳನ್ನು ವಿವರಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ
## ಚತುಃಷಷ್ಟಿತಮೋಽಧ್ಯಾಯಃ

॥ ಪಿಪ್ಪಲ ಉವಾಚ ॥

ಪಿತು: ಪ್ರಸಾದಭಾವಾದ್ವೈ ಯದುನಾ ಸುಖಮುತ್ತಮಂ ।
ಕಥಂ ಪ್ರಾಪ್ತಂ ಸುಭುಕ್ತಂ ಚ ತನ್ಮೇ ವಿಸ್ತರತೋ ವದ ॥ ೧ ॥

ಕಸ್ಮಾತ್ಪಾಪ ಪ್ರಭಾವಂ ಚ ಪುತ್ರೇಣ ತು ದ್ವಿಜೋತ್ತಮ ।
ತತ್ಸರ್ವಂ ವಿಸ್ತರೇಣಾಪಿ ವದ ಮೇ ಕುಂಡಲಾತ್ಮಜ ॥ ೨ ॥

॥ ಸುಕರ್ಮೋವಾಚ ॥

ಶ್ರೂಯತಾಮಭಿಧಾಸ್ಯಾಮಿ ಚರಿತ್ರಂ ಪಾಪನಾಶನಂ ।
ನಹುಷಸ್ಯ ಸುಪುಣ್ಯಸ್ಯ ಯಯಾತೇಶ್ಚ ಮಹಾತ್ಮನಃ ॥ ೩ ॥

---

## ಅರವತ್ತನಾಲ್ಕನೆಯ ಅಧ್ಯಾಯವು

೧. ಪಿಪ್ಪಲನು ಹೇಳಿದನು—ಎಲೈ ಸುಕರ್ಮನೇ, ತಂದೆಯ ಅನುಗ್ರಹದಿಂದ ಯದುವು ಉತ್ತಮವಾದ ಸುಖವನ್ನು ಹೊಂದಿದನೆಂದು ಹೇಳಿದೆಯಲ್ಲವೆ, ಆ ವಿಚಾರವನ್ನು ನನಗೆ ವಿಸ್ತಾರವಾಗಿ ಹೇಳು,

೨. ಆ ಮಗನು ಯಾವುದರಿಂದ ಪ್ರಭಾವವನ್ನು ಹೊಂದಿದನು? ಅವೆಲ್ಲವನ್ನೂ ಸಹ ವಿಸ್ತಾರವಾಗಿ ತಿಳಿಸು ಎಂದನು.

೩. ಸುಕರ್ಮನು ಹೇಳಿದನು—ಎಲೈ ಪಿಪ್ಪಲನೇ, ಕೇಳು, ನಹುಷನ ಮತ್ತು ಯಯಾತಿಯ ಪಾಪನಾಶಕವಾದ ಚರಿತ್ರೆಯನ್ನು ಹೇಳುತ್ತೇನೆ ಕೇಳು.

ಸೋಮವಂಶಾತ್ಪ್ರಸೂತೋ ವೈ ನಹುಷೋ ಮೇದಿನೀಪತಿಃ ।
ದಾನಧರ್ಮಾನನೇಕಾಂಶ್ಚ ಸ ಚಕಾರಾತುಲಾನಪಿ ॥ ೪ ॥

ಶತಂ ಚೈವಾಶ್ವಮೇಧಾನಾಮಿಯಾಜ ನೃಪಸತ್ತಮಃ ।
ವಾಜಪೇಯಶತಂ ಚಾಪಿ ಅನ್ಯಾನ್ಯಜ್ಞಾನನೇಕಶಃ ॥ ೫ ॥

ಆತ್ಮಪುಣ್ಯಪ್ರಭಾವೇನ ಐಂದ್ರಂ ಲೋಕಮವಾಪ ಸಃ ।
ಪುತ್ರಂ ಧರ್ಮಗುಣೋಪೇತಂ ಪ್ರಜಾಪಾಲಂ ವಿಧಾಯ ಸಃ ॥ ೬ ॥

ಯಯಾತಿಂ ಸತ್ಯಸಂಪನ್ನಂ ಧರ್ಮವೀರ್ಯಂ ಮಹಾಮತಿಂ ।
ಐಂದ್ರಂ ಪದಂ ಗತೋ ರಾಜ ಯಸ್ಯ ಪುತ್ರಃ ಪರಂತಪಃ ॥ ೭ ॥

ಯಯಾತಿಸ್ಸತ್ಯಸಂಪನ್ನಃ ಪ್ರಜಾ ಧರ್ಮೇಣ ಪಾಲಯೇತ್ ।
ಸ್ವಯಮೇವ ಪ್ರಪಶ್ಯೇದ್ಯಃ ಪ್ರಜಾಕರ್ಮಾಣಿ ತಾನ್ಯಪಿ ॥ ೮ ॥

ಇಯಾಜ ಯಜ್ಞಾನ್ ಧರ್ಮಾತ್ಮಾ ಶ್ರುತ್ವಾ ಧರ್ಮಮನುತ್ತಮಂ ।
ಯಜ್ಞತೀರ್ಥಾದಿಕಂ ಸರ್ವಂ ದಾನಪುಣ್ಯಂ ಚಕಾರ ಸಃ ।
ರಾಜ್ಯಂ ಚಕಾರ ಮೇಧಾವೀ ಕ್ಷತ್ರ ಧರ್ಮೇಣ ಪಾಲಯನ್ ॥ ೯ ॥

---

೪-೭. ನಹುಷನು ಸೋಮವಂಶದಲ್ಲಿ ಹುಟ್ಟಿದನು. ದಾನಧರ್ಮವನ್ನು ಬಹುವಾಗಿ ಮಾಡಿದನು. ನೂರು ಅಶ್ವಮೇಧಗಳನ್ನೂ ನೂರು ವಾಜಪೇಯಗಳನ್ನೂ ಇನ್ನು ಅನೇಕ ಯಜ್ಞಗಳನ್ನೂ ಮಾಡಿ ತನ್ನ ಪುಣ್ಯಪ್ರಭಾವದಿಂದ ಇಂದ್ರಲೋಕವನ್ನು ಹೊಂದಿದನು. ಧರ್ಮಿಷ್ಠನೂ ಸತ್ಯವಂತನೂ, ಧಾರ್ಮಿಕನೂ, ಬುದ್ಧಿವಂತನೂ, ಆದ ಯಯಾತಿಯೆಂಬ ಮಗನನ್ನು ರಾಜನನ್ನಾಗಿ ಮಾಡಿ, ಆ ನಹುಷನು ಇಂದ್ರಪದವನ್ನು ಹೊಂದಿದನು.

೮. ಸತ್ಯಸಂಧನಾದ ಆ ಯಯಾತಿಯು ಪ್ರಜೆಗಳನ್ನು ಸತ್ಯದಿಂದ ಕಾಪಾಡಿದನು. ಆತನು ತಾನಾಗಿಯೇ ಪ್ರಜೆಗಳ ಕೆಲಸಗಳನ್ನು ನೋಡುತ್ತಿದ್ದನು.

೯. ಧರ್ಮವನ್ನು ತಿಳಿದು ಯಜ್ಞಗಳೆಲ್ಲವನ್ನೂ ಮಾಡಿದನು. ದಾನಗಳನ್ನೂ, ತೀರ್ಥಗಳ ಸಂಚಾರವನ್ನೂ ಮಾಡುತ್ತಾ ಕ್ಷತ್ರಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದನು.

**ಯಾವದಶೀತಿಸಹಸ್ರಾಣಿ ವರ್ಷಾಣಿ ನೃಪನಂದನಃ।**
**ತಾವತ್ಕಾಲಂ ಗತಂ ತತ್ರ ಯಯಾತೇಸ್ತು ಮಹಾತ್ಮನಃ ॥ ೧೦ ॥**

**ತಸ್ಯ ಪುತ್ರಾಶ್ಚ ಚತ್ವಾರಸ್ತದ್ವೀರ್ಯಬಲವಿಕ್ರಮಾಃ ।**
**ತೇಷಾಂ ನಾಮಾನಿ ವಕ್ಷ್ಯಾಮಿ ಶೃಣುಷ್ವೈಕಾಗ್ರಮಾನಸಃ ॥ ೧೧ ॥**

**ತಸ್ಯಾಸೀಜ್ಜ್ಯೇಷ್ಠಪುತ್ರಸ್ತು ರುರುರ್ನಾಮ ಮಹಾಬಲಃ ।**
**ಪುರುರ್ನಾಮ ದ್ವಿತೀಯೋಽಭೂತ್ತೃತೀಯಃ ಕುರುರೇವ ಚ ।**
**ಯದುಶ್ಚಾಪಿ ಸ ಧರ್ಮಾತ್ಮಾ ಚತುರ್ಥೋ ನೃಪನಂದನ ॥ ೧೨ ॥**

**ಏವಂ ಚತ್ವಾರಃ ಪುತ್ರಾಶ್ಚ ಯಯಾತೇಽಸ್ತು ಮಹಾತ್ಮನಃ ।**
**ತೇಜಸಾ ಪೌರುಷೇಣಾಪಿ ಪಿತೃತುಲ್ಯಪರಾಕ್ರಮಾಃ ॥ ೧೩ ॥**

**ಏವಂ ರಾಜ್ಯಂ ಕೃತಂ ತೇನ ಧರ್ಮೇಣಾಪಿ ಯಯಾತಿನಾ ।**
**ಯಶಃ ಕೀರ್ತಿಶ್ಚ ತಸ್ಯಾಪಿ ತ್ರೈಲೋಕ್ಯೇ ಪ್ರಚುರಾಭವತ್ ॥ ೧೪ ॥**

---

೧೦. ಈರೀತಿ ರಾಜ್ಯಭಾರವನ್ನು ಮಾಡುತ್ತಿರುವಲ್ಲಿ ಎಂಭತ್ತು ಸಾವಿರ ವರ್ಷಗಳು ಕಳೆದವು.

೧೧-೧೩. ಅವನಿಗೆ ಪರಾಕ್ರಮಶಾಲಿಗಳಾದ ನಾಲ್ವರು ಮಕ್ಕಳು. ಅವರ ಹೆಸರನ್ನು ಹೇಳುತ್ತೇನೆ. ಮೊದಲನೆಯವನು ರುರು. ಎರಡನೆಯವನು ಪುರು. ಮೂರನೆಯವನು ಕುರು. ನಾಲ್ಕನೆಯವನು ಯದು. ಈರೀತಿ ಯಯಾತಿಗೆ ನಾಲ್ವರು ಮಕ್ಕಳಾದರು. ಅವರೆಲ್ಲರೂ ಶಕ್ತಿಯಿಂದಲೂ ಪರಾಕ್ರಮದಿಂದಲೂ ತಂದೆಗೆ ಸಮವಾಗಿದ್ದರು.

೧೪. ಹೀಗೆ ಯಯಾತಿಯು ಧರ್ಮದಿಂದ ರಾಜ್ಯಭಾರಮಾಡುತ್ತ ಯಶಸ್ಸು ಕೀರ್ತಿಗಳನ್ನು ಮೂರುಲೋಕದಲ್ಲಿಯೂ ಪ್ರಸಿದ್ಧಿಯಾಗುವಂತೆ ಮಾಡಿದನು.

॥ ವಿಷ್ಣುರುವಾಚ ॥

ಏಕದಾ ತು ದ್ವಿಜಶ್ರೇಷ್ಠೋ ನಾರದೋ ಬ್ರಹ್ಮನಂದನಃ ।
ಇಂದ್ರಲೋಕಂ ಗತೋ ದ್ರಷ್ಟುಂ ದೇವದೇವಂ ಪುರಂದರಂ ॥ ೧೫ ॥

ಸಹಸ್ರಾಕ್ಷಸ್ತತೋಽಪಶ್ಯದ್ಧುತಾಶನಸಮಪ್ರಭಂ ।
ದೇವೋ ವಿಪ್ರಂ ಸಮಾಯಾಂತಂ ಸರ್ವಜ್ಞಂ ಜ್ಞಾನಪಂಡಿತಂ ॥ ೧೬ ॥

ಪೂಜಿತಂ ಮಧುಪರ್ಕಾದ್ಯೈರ್ಭಕ್ತ್ಯಾ ನಮಿತಕಂಧರಃ ।
ನಿವೇಶ್ಯ ಸ್ವಾಸನೇ ಪುಣ್ಯೇ ತಂ ಪಪ್ರಚ್ಛ ಮಹಾಮುನಿಂ ॥ ೧೭ ॥

॥ ಇಂದ್ರ ಉವಾಚ ॥

ಕಸ್ಮಾದಾಗಮನಂ ಲೋಕಾತ್ಕಿಮರ್ಥಮಿಹ ಚಾಗತಃ ।
ಕಿಂ ತೇಽದ್ಯ ಸುಪ್ರಿಯಂ ವಿಪ್ರ ಕರೋಮ್ಯಥ ಮಹಾಮತೇ ॥ ೧೮ ॥

॥ ನಾರದ ಉವಾಚ ॥

ದೇವರಾಜ ಕೃತಂ ಸರ್ವಂ ಭಕ್ತ್ಯಾ ಯಚ್ಚ ಪ್ರಭಾಷಿತಂ ।
ಸಂತುಷ್ಟೋಽಸ್ಮಿ ಮಹಾಪ್ರಾಜ್ಞ ಪ್ರತ್ಯುತ್ತರಂ ವದಾಮ್ಯಹಂ ॥ ೧೯ ॥

---

೧೫. ವಿಷ್ಣುವು ಹೇಳಿದನು--ಬ್ರಾಹ್ಮಣೋತ್ತಮನಾದ ನಾರದನು ಒಂದು ಸಾರಿ ಇಂದ್ರನನ್ನು ನೋಡಲು ಇಂದ್ರಲೋಕಕ್ಕೆ ಹೋಗಲು,

೧೬-೧೭. ಅಗ್ನಿಯಂತೆ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವ, ಸರ್ವಜ್ಞನಾದ ಈ ನಾರದಮುನಿಯನ್ನು ಇಂದ್ರನು ನೋಡಿ, ಅವನನ್ನು ಮಧುಪರ್ಕಾದಿಗಳಿಂದ ಪೂಜಿಸಿ, ಭಕ್ತಿಯಿಂದ ತನ್ನ ಆಸನದಲ್ಲಿ ಕೂರಿಸಿ, ಈರೀತಿಯಾಗಿ ಕೇಳಿದನು.

೧೮. ಇಂದ್ರನು ಹೇಳಿದನು—ಎಲೈ ಜ್ಞಾನಿಯಾದ ನಾರದನೇ, ಈಗ ನೀನು ಯಾವ ಲೋಕದಿಂದ ಬಂದೆ? ಬಂದ ಕಾರ್ಯನಿಮಿತ್ತವೇನು? ನಿನಗೆ ನನ್ನಿಂದೇ ನಾಗಬೇಕು? ಇದೆಲ್ಲವನ್ನೂ ದಯವಿಟ್ಟು ಹೇಳಬೇಕೆನಲು,

೧೯. ನಾರದನು ಹೇಳಿದನು—ಎಲೈ ದೇವರಾಜನೇ, ಭಕ್ತಿಯಿಂದ ಮಾತ ನಾಡಿಸಿದುದರಿಂದಲೇ ಎಲ್ಲವನ್ನೂ ಮಾಡಿದಂತಾಯಿತು. ನಿನ್ನ ಉಪಚಾರಗಳಿಂದ ನಾನು ತೃಪ್ತನಾಗಿದ್ದೇನೆ. ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ, ಕೇಳು.

ಮಹೀಲೋಕಾತ್ತು ಸಂಪ್ರಾಪ್ತಃ ಸಾಂಪ್ರತಂ ತವ ಮಂದಿರಂ ।
ತ್ವಾಮನ್ವೇಷ್ಟುಂ ಸಮಾಯಾತೋ ದೃಷ್ಟ್ವಾ ನಾಹುಷಮುತ್ತಮಂ ॥ ೨೦ ॥

॥ ಇಂದ್ರ ಉವಾಚ ॥

ಸತ್ಯಧರ್ಮೇಣ ಕೋ ರಾಜಾ ಪ್ರಜಾಃ ಪಾಲಯತೇ ಸದಾ ।
ಸರ್ವಧರ್ಮಸಮಾಯುಕ್ತಃ ಶ್ರುತವಾನ್ ಜ್ಞಾನವಾನ್ಗುಣೀ ॥ ೨೧ ॥

ಪೃಥಿವ್ಯಾಮಸ್ತಿ ಕೋ ರಾಜಾ ದೇವಜ್ಞೋ ಬ್ರಾಹ್ಮಣಪ್ರಿಯಃ ।
ಬ್ರಹ್ಮಣ್ಯೋ ವೇದವಿಚ್ಛೂರೋ ದಾತಾ ಯಜ್ವಾ ಸುಭಕ್ತಿಮಾನ್ ॥ ೨೨ ॥

॥ ನಾರದ ಉವಾಚ ॥

ಏಭಿರ್ಗುಣೈಸ್ತು ಸಂಯುಕ್ತೋ ನಹುಷಸ್ಯಾತ್ಮಜೋ ಬಲೀ ।
ಯಸ್ಯ ಸತ್ಯೇನ ವೀರ್ಯೇಣ ಸರ್ವೇ ಲೋಕಾಃ ಪ್ರತಿಷ್ಠಿತಾಃ ॥ ೨೩ ॥

ಭವಾದೃಶೋ ಹಿ ಭೂಲೋಕೇ ಯಯಾತಿರ್ನಹುಷಾತ್ಮಜಃ ।
ಭವಾನ್ಸ್ವರ್ಗೇ ಸ ಚೈವಾಸ್ತಿ ಭೂತಲೇ ಭೂತಿವರ್ಧನಃ ॥ ೨೪ ॥

---

೨೦. ಭೂಲೋಕದಿಂದ ನಿನ್ನ ಲೋಕಕ್ಕೆ ಈಗ ಬಂದೆನು. ಅಲ್ಲಿ ನಹುಷನ ಮಗನಾದ ಯಯಾತಿಯನ್ನು ನೋಡಿ ನಿನ್ನಲ್ಲಿಗೆ ಬಂದಿದ್ದೇನೆ ಎಂದನು.

೨೧-೨೨. ಇಂದ್ರನು ಹೇಳಿದನು :—ಎಲೈ ವಿಪ್ರವರ್ಯನೇ? ಸತ್ಯ ಧರ್ಮಗಳಿಂದ ಕೂಡಿ ಪ್ರಜೆಗಳನ್ನು ಭೂಮಿಯಲ್ಲಿ ಪಾಲಿಸುವ ರಾಜನಾವನಿದ್ದಾನೆ? ಜ್ಞಾನಿ, ಗುಣಿ, ಬ್ರಾಹ್ಮಣಪ್ರಿಯ, ವೇದವಿತ್, ಶೂರ, ಯಾಗಶೀಲ ಈ ಗುಣಗಳುಳ್ಳ ರಾಜನು ಭೂಮಿಯಲ್ಲಿ ಈಗ ಇರುವನೇ? ಇದ್ದರೆ ಅವನಾರು? ಎಂದನು.

೨೩. ನಾರದನು ಹೇಳಿದನು—ನೀನು ಹೇಳಿದ ಎಲ್ಲಾ ಗುಣಗಳಿಂದಲೂ ನಹುಷನ ಮಗನಾದ ಯಯಾತಿಯು ಕೂಡಿದ್ದಾನೆ. ಅವನ ಸತ್ಯ ಮತ್ತು ಪರಾಕ್ರಮದಿಂದಲೇ ಎಲ್ಲಾ ಲೋಕಗಳೂ ನಿಂತಿವೆ.

೨೪. ಅವನು ನಿನ್ನಂತೆಯೇ ಇರುವನು. ನೀನು ಸ್ವರ್ಗಕ್ಕೆ ಹೇಗೆ ಇಂದ್ರನೋ ಅವನು ಭೂಲೋಕಕ್ಕೆ ಹಾಗೆ ಇಂದ್ರನು. ನೀನು ಸ್ವರ್ಗದಲ್ಲಿದ್ದೀಯೆ, ಅವನು ಭೂಮಿಯಲ್ಲಿದ್ದಾನೆ. ಅಷ್ಟೇ ಭೇದ.

ಪಿತುಃ ಶ್ರೇಷ್ಠೋ ಮಹಾರಾಜ ಹ್ಯಶ್ವಮೇಧಶತಂ ತಥಾ ।
ವಾಜಪೇಯಶತಂ ಚಕ್ರೇ ಯಯಾತಿಃ ಪೃಥಿವೀಪತಿಃ ॥ ೨೫ ॥

ದತ್ತಾನ್ಯನೇಕರೂಪಾಣಿ ದಾನಾನಿ ತೇನ ಭಕ್ತಿತಃ ।
ಗವಾಂ ಲಕ್ಷಸಹಸ್ರಾಣಿ ತಥಾ ಕೋಟಿಶತಾನಿ ಚ ॥ ೨೬ ॥

ಕೋಟಿಹೋಮಾಂಶ್ಚಕಾರಾಥ ಲಕ್ಷಹೋಮಾಂಸ್ತಥೈವ ಚ ।
ಭೂಮಿದಾನಾದಿಕಂ ದಾನಂ ಬ್ರಾಹ್ಮಣೇಭ್ಯೋಽದದಾಚ್ಚ ಸಃ ॥ ೨೭ ॥

ಸಾಂಗೋಪಾಂಗಃ ಸ್ವರೂಪೋ ಹಿ ಧರ್ಮಸ್ತೇನೈವ ಪಾಲಿತಃ ।
ಏವಂ ಗುಣೈಸ್ಸಮಾಯುಕ್ತೋ ಯಯಾತಿರ್ನಹುಷೋ ಭುವಿ ॥ ೨೮ ॥

ವರ್ಷಾಣಾಂ ತು ಸಹಸ್ರಾಣಿ ಹ್ಯಶೀತಿರ್ನೃಪನಂದನಃ ।
ರಾಜ್ಯಂ ಚಕಾರ ಸತ್ಯೇನ ಯಥಾವಿಧಿ ಭವಾನಿವ ॥ ೨೯ ॥

---

೨೫. ಅವನು ತಂದೆಗಿಂತಲೂ ಶ್ರೇಷ್ಠನಾಗಿದ್ದಾನೆ. ನೂರು ಅಶ್ವಮೇಧಗಳನ್ನೂ ನೂರು ವಾಜಪೇಯಗಳನ್ನೂ ಮಾಡಿದ್ದಾನೆ.

೨೬-೨೭. ಅವನು ಭೂದಾನವೇ ಮೊದಲಾದ ಅನೇಕ ವಿಧವಾದ ದಾನಗಳನ್ನು ಭಕ್ತಿಯಿಂದ ಮಾಡಿರುವನು. ಅನೇಕ ಕೋಟಿ ಗೋದಾನಗಳನ್ನೂ ಮಾಡಿರುವನು. ಅನೇಕ ಕೋಟಿ ಹೋಮಗಳನ್ನು ಮಾಡಿರುವನು. ಬ್ರಾಹ್ಮಣರಿಗೆ ಭೂದಾನವನ್ನೂ ಬಹುವಾಗಿ ಕೊಟ್ಟಿರುವನು.

೨೮. ಸಾಂಗೋಪಾಂಗವಾದ ಧರ್ಮವನ್ನು ಅವನೇ ಪಾಲಿಸುತ್ತಿರುವನು. ಆ ಯಯಾತಿಯು ಈ ರೀತಿಯಾದ ಗುಣಗಳಿಂದ ಕೂಡಿರುವನು.

೨೯. ಆತನು ನಿನ್ನಂತೆಯೇ ಸತ್ಯದಿಂದ ಎಂಭತ್ತು ಸಾವಿರ ವರ್ಷಗಳು ರಾಜ್ಯವಾಳಿದನು.

॥ ಸುಕರ್ಮೋವಾಚ ॥

ಏವಮಾಕರ್ಣ್ಯ ದೇವೇಂದ್ರೋ ನಾರದಾಚ್ಚ ಮುನೀಶ್ವರಾತ್ ।
ಸಮಾಲೋಚ್ಯ ಸ ಮೇಧಾವೀ ಸಂಭೀತೋ ಧರ್ಮಪಾಲನಾತ್ ॥ ೩೦ ॥

ಶತಯಜ್ಞಪ್ರಭಾವೇನ ನಹುಷೇಣ ಪುರಾ ಮಮ ।
ಐಂದ್ರಂ ಪದಂ ಗೃಹೀತಂ ಚ ದೇವರಾಜೋಽಭವತ್ತದಾ ॥ ೩೧ ॥

ಶಚೀಬುದ್ಧಿಪ್ರಭಾವೇನ ಪದಭ್ರಷ್ಟೋಽಪ್ಯಜಾಯತ ।
ತಾದೃಶೋಽಯಂ ಮಹಾರಾಜಃ ಪಿತೃತುಲ್ಯಪರಾಕ್ರಮಃ ।
ಲಕ್ಷ್ಯತೇ ನಾತ್ರ ಸಂದೇಹೋ ಪದಮೈಂದ್ರಮವಾಪ್ಸ್ಯತಿ ॥ ೩೨ ॥

ಯೇನ ಕೇನಾಪ್ಯುಪಾಯೇನ ತಂ ಭೂಪಂ ದಿವಮಾನಯೇ ।
ಇತ್ಯೇವಂ ಚಿಂತಯಾಮಾಸ ತಸ್ಮಾದ್ಭೀತಸ್ಸುರೇಶ್ವರಃ ॥ ೩೩ ॥

ಭೂಪಾಲಸ್ಯ ನರಶ್ರೇಷ್ಠ ಯಯಾತೇಸ್ಸ ಮಹದ್ಭಯಾತ್ ।
ತಮಾನೇತುಂ ತತೋ ದೂತಂ ಪ್ರೇಷಯಾಮಾಸ ದೇವರಾಟ್ ॥ ೩೪ ॥

ನಾಹುಷಾಯ ವಿಮಾನಂ ತು ಸರ್ವಜ್ಞಾನಸಮನ್ವಿತಃ ।
ಸಾರಥಿಂ ಮಾತಲಿಂ ಚೈವ ವಿಮಾನೇನ ಸಮನ್ವಿತಂ ॥ ೩೫ ॥

---

೩೦. ಸುಕರ್ಮನು ಹೇಳಿದನು—ಈರೀತಿ ನಾರದನು ಹೇಳಿದುದನ್ನು ಇಂದ್ರನು ಕೇಳಿ, ಧರ್ಮವನ್ನು ಅವನು ಪಾಲಿಸುತ್ತಿರುವುದರಿಂದ ತನ್ನ ಪದವಿಗೆ ಎಲ್ಲಿ ಚ್ಯುತಿ ಬರುವುದೋ ಎಂದು ಹೆದರಿದನು. ಮತ್ತು ಈ ರೀತಿ ಯೋಚಿಸಿದನು.

೩೧. ನೂರು ಯಜ್ಞಗಳ ಪ್ರಭಾವದಿಂದಲೇ ನಹುಷನು ಇಂದ್ರಪದವಿಯನ್ನು ಕಿತ್ತುಕೊಂಡು ದೇವರಾಜನಾದನು. ಆದರೆ ಪರಸ್ತ್ರೀಯಾದ ಶಚಿಯಲ್ಲಿ ಅನುರಕ್ತ ನಾಗಲು, ಶಚಿಯ ಬುದ್ಧಿಪ್ರಭಾವದಿಂದ ಪದಭ್ರಷ್ಟನಾದನು.

೩೨-೩೩. ಈತನೂ ಕೂಡ ತಂದೆಗೆ ಸಮಾನನಾದ ಪರಾಕ್ರಮಿಯಾಗಿ ಕಾಣುತ್ತಾನೆ. ನನ್ನ ಇಂದ್ರಪದವನ್ನು ಅಪಹರಿಸುತ್ತಾನೆ. ಹೀಗೆಂದು ಯೋಚಿಸಿ ಆ ಯಯಾತಿಯಿಂದ ಹೆದರಿದ ಇಂದ್ರನು ಹೇಗಾದರೂ ಮಾಡಿ ಆರಾಜನನ್ನು ಸ್ವರ್ಗಕ್ಕೆ ಕರೆಸುತ್ತೇನೆಂದು ಯೋಚಿಸಿದನು.

೩೪-೩೫. ಅದರಂತೆಯೇ ಮಾಡಲು ನಿಶ್ಚಯಿಸಿ, ಅವನನ್ನು ಕರೆತರಲು ದೂತನನ್ನು ಕಳುಹಿಸಬೇಕೆಂದು, ಆ ನಹುಷನ ಪುತ್ರನಾದ ಯಯಾತಿಗೆ ವಿಮಾನ ವನ್ನು ಕೊಟ್ಟು ಕರೆತರಲು ಮಾತಲಿಯನ್ನು ಕಳುಹಿಸಿದನು.

ಗತೋ ಹಿ ಮಾತಲಿಸ್ತತ್ರ ಯತ್ರಾಸೌ ನಹುಷಾತ್ಮಜಃ ।
ಪ್ರಹಿತಃ ಸುರರಾಜೇನ ಆನೇತುಂ ತಂ ಮಹಾಮತಿಂ ॥ ೩೬ ॥

ಸಭಾಯಾಂ ವರ್ತಮಾನಸ್ತು ಯಥಾ ಚೇಂದ್ರಃ ಪ್ರಭಾಸತೇ ।
ತಥಾ ಯಯಾತಿರ್ಧರ್ಮಾತ್ಮಾ ಸ್ವಸಭಾಯಾಂ ವಿರಾಜತೇ ॥ ೩೭ ॥

ತಮುವಾಚ ಮಹಾತ್ಮಾನಂ ರಾಜಾನಂ ಸತ್ಯಭೂಷಣಂ ।
ಸಾರಥಿರ್ದೇವರಾಜಸ್ಯ ಶೃಣು ರಾಜನ್ವಚೋ ಮಮ ॥ ೩೮ ॥

ಪ್ರಹಿತೋ ದೇವರಾಜೇನ ಸಕಾಶಂ ತವ ಸಾಂಪ್ರತಂ ।
ಯದ್ಬ್ರೂತೇ ದೇವರಾಜಸ್ತು ತತ್ಸರ್ವಂ ಸುಮನಾಃ ಕುರು ॥ ೩೯ ॥

ಆಗನ್ತವ್ಯಂ ತ್ವಯಾದ್ಯೈವ ಐಂದ್ರಂ ಲೋಕಂ ಹಿ ನಾನ್ಯಥಾ ।
ಪುತ್ರೇ ರಾಜ್ಯಂ ವಿಸೃಜ್ಯೈವ ಕೃತ್ವಾ ಚಾನ್ತ್ಯೇಷ್ಟಿಮಾತ್ಮನಃ ॥ ೪೦ ॥

---

೩೬. ಆ ಇಂದ್ರನಿಂದ ಕಳುಹಿಸಲ್ಪಟ್ಟ ಮಾತಲಿಯು ಯಯಾತಿಯಿರುವಲ್ಲಿಗೆ ಹೋಗಿ,

೩೭-೩೮. ಸುಧರ್ಮವೆಂಬ ದೇವಸಭೆಯಲ್ಲಿ ಇಂದ್ರನು ಪ್ರಕಾಶಿಸುವಂತೆ ಯಯಾತಿಯು ತನ್ನ ಸಭೆಯಲ್ಲಿ ಪ್ರಕಾಶಿಸುತ್ತಿರುವ ಸತ್ಯಸಂಧನಾದ ಯಯಾತಿ ಮಹಾರಾಜನನ್ನು ಕುರಿತು ಇಂತೆಂದನು.—ಎಲೈ ಮಹಾರಾಜನೇ, ನಾನು

೩೯. ದೇವರಾಜನಾದ ಇಂದ್ರನ ಸಾರಥಿಯು. ಅವನು ನಿನ್ನಬಳಿಗೆ ನನ್ನನ್ನು ಕಳುಹಿಸಿದ್ದಾನೆ. ಅವನು ಹೇಳಿರುವುದನ್ನು ಹೇಳುತ್ತೇನೆ ಕೇಳು. ಅದರಂತೆ ಮಾಡು.

೪೦. ನೀನು ರಾಜ್ಯವನ್ನು ಮಗನಲ್ಲಿಟ್ಟು ನಿನ್ನ ಉತ್ತರಕ್ರಿಯೆಗಳನ್ನು ಮಾಡಿಸಿಕೊಂಡು ಇಂದ್ರಲೋಕಕ್ಕೆ ಈಗಲೇ ಖಂಡಿತವಾಗಿಯೂ ಬರಬೇಕು.

**ಇಲೋ ರಾಜಾ ಮಹಾತೇಜಾ ವಸತೇ ನಹುಷಾತ್ಮಜ ।**
**ಪುರೂರವಾ ಮಹಾಬಾಹೋ ವಿಪ್ರಚಿತಿಃ ಪ್ರತಾಪವಾನ್ ॥ ೪೧ ॥**

**ಶಿಬಿರ್ವಸತಿ ತತ್ರೈವ ಮನುರಿಕ್ಷ್ವಾಕುಸತ್ತಮಃ ।**
**ಸಗರೋ ನಾಮ ಮೇಧಾವೀ ನಹುಷಶ್ಚ ಪಿತಾ ತವ ॥ ೪೨ ॥**

**ಕೃತವೀರ್ಯಃ ಕೃತಜ್ಞಶ್ಚ ಶಂತನುಶ್ಚ ಮಹಾಮನಾಃ ।**
**ಭರತೋ ಯುವನಾಶ್ವಶ್ಚ ಕಾರ್ತವೀರ್ಯೋ ನರೇಶ್ವರಃ ॥ ೪೩ ॥**

**ಯಜ್ಞಾನಾಹೃತ್ಯ ಬಹುಧಾ ಮೋದಂತೇ ದಿವಿ ಭೂಭೃತಃ ।**
**ಅನ್ಯೇ ಯೇ ಚಾಪಿ ರಾಜಾನೋ ಯಜ್ವಾನಃ ಸುಮಹಾಬಲಾಃ ।**
**ಸೇವ್ಯಂತೇ ದಿವಿ ಚೇಂದ್ರೇಣ ಮೋದಂತೆ ಚ ಸ್ವಕರ್ಮಣಾ ॥ ೪೪ ॥**

**ತ್ವಂ ಪುನಸ್ಸರ್ವಧರ್ಮೇಷು ಸಂಸ್ಥಿತಃ ಸಾಂಪ್ರತಂ ಭುವಿ ।**
**ಶಕ್ರೇಣ ಸಹ ಮೋದಸ್ವ ಸ್ವರ್ಗಲೋಕೇ ಮಹೀಪತೇ ॥ ೪೫ ॥**

**॥ ಯಯಾತಿರುವಾಚ ॥**

**ಕಿಂ ಮಯಾ ತತ್ಕೃತಂ ಕರ್ಮ ಯೇನ ಪ್ರಾರ್ಥಯತೇ ಭವಾನ್ ।**
**ಇಂದ್ರಸ್ಯ ದೇವರಾಜಸ್ಯ ತತ್ಸರ್ವಂ ಮೇ ವದಸ್ವ ಹ ॥ ೪೬ ॥**

---

೪೧-೪೩. ಇಲ, ಪುರೂರವ, ವಿಪ್ರಚಿತ್ತಿ, ಶಿಬಿ, ಮನು, ಸಗರ, ನಹುಷ ಕೃತವೀರ್ಯ, ಶಂತನು, ಭರತ, ಯುವನಾಶ್ವ, ಕಾರ್ತವೀರ್ಯ, ಮುಂತಾದ ರಾಜರೆಲ್ಲರೂ ಯಜ್ಞಗಳನ್ನು ಮಾಡಿ ಸ್ವರ್ಗದಲ್ಲಿ ಸುಖಿಸುತ್ತಿದ್ದಾರೆ.

೪೪. ಇನ್ನು ಉಳಿದರಾಜರೂ, ಯಾಗಮಾಡಿದವರೂ ಸಹ ಅಲ್ಲಿ ಸುಖಿಸುತ್ತಾ ಇಂದ್ರನಿಂದ ಸೇವಿಸಲ್ಪಡುತ್ತಿದಾರೆ.

೪೫. ನೀನಾದರೋ ಈಗ ಭೂಲೋಕದಲ್ಲಿ ಸರ್ವಧರ್ಮದಲ್ಲಿಯೂ ನಿರತನಾಗಿ ಇದ್ದೀಯೆ. ಇನ್ನು ಮೇಲೆ ಸ್ವರ್ಗಲೋಕದಲ್ಲಿ ಇಂದ್ರನೊಡನೆ ಸುಖಪಡು ಎಂದನು.

೪೬. ಯಯಾತಿಯು ಹೇಳಿದನು—ಎಲೈ ದೂತನೇ, ಇಂದ್ರನಿಗೆ ನಾನು ಮಾಡಿರುವ ಸತ್ಕಾರ್ಯಗಳೇನು? ಅವನು ನನ್ನನ್ನು ಸ್ವರ್ಗಕ್ಕೆ ಕರೆಯುವಂತಹ ಕೆಲಸವನ್ನೇನೂ ಮಾಡಿಲ್ಲವಲ್ಲ? ಹಾಗೇನಾದರೂ ಮಾಡಿದ್ದರೆ ಅದನ್ನು ದಯವಿಟ್ಟು ಹೇಳು ಎನ್ನಲು,

॥ ಮಾತಲಿರುವಾಚ ॥

ಯಾವಚ್ಛತಸಹಸ್ರಾಣಿ ವರ್ಷಾಣಿ ನೃಪನಂದನ ।
ದಾನಯಜ್ಞಾದಿಕಂ ಕರ್ಮ ತ್ವಯೈವ ಪರಿಸಾಧಿತಂ ॥ ೪೭ ॥

ದಿವಂ ಗಚ್ಛ ಮಹಾರಾಜ ಕರ್ಮಣಾ ತೇನ ಸಾಂಪ್ರತಂ ।
ಸಖ್ಯಂ ಚ ದೇವರಾಜೇನ ಗತ್ವಾ ಕುರು ಮಹಾಮತೇ ॥ ೪೮ ॥

ಪಂಚಾತ್ಮಕಶರೀರಸ್ಯ ಭೂಮೌ ತ್ಯಾಗಂ ಕುರುಷ್ವಹಿ ।
ದಿವ್ಯಂ ರೂಪಂ ಸಮಾಸ್ಥಾಯ ಭುಂಕ್ಷ್ವ ಭೋಗಾನ್ ಮನೋರಮಾನ್ ॥ ೪೯ ॥

ಯಥಾ ಯಥಾ ಕೃತಾ ಭೂಮೌ ಯಜ್ಞಾ ದಾನಂ ತಪಶ್ಚ ತೆ ।
ತಥಾ ತಥಾ ಸ್ವರ್ಗಭೋಗಾಃ ಪ್ರಾರ್ಥಯನ್ತೇ ನರೇಶ್ವರ ॥ ೫೦ ॥

॥ ಯಯಾತಿರುವಾಚ ॥

ಯೇನ ಕಾಯೇನ ಸಿದ್ಧ್ಯೇತ ಸುಕೃತಂ ದುಷ್ಕೃತರಂ ಭುವಿ ।
ಮಾತಲೇ ತತ್ಕಥಂ ತ್ಯಾಜ್ಯ ಗಚ್ಛೇಲ್ಲೋಕಮುಪಾರ್ಜಿತಂ ॥ ೫೧ ॥

---

೪೭ ಮಾತಲಿಯು ಹೇಳಿದನು—ಎಲೈ ರಾಜನೇ, ನೀನು ಒಂದು ಲಕ್ಷ ವರುಷಗಳವರೆಗೂ ದಾನ, ಯಜ್ಞಾದಿಗಳನ್ನು ಮಾಡಿ ಧರ್ಮವನ್ನು ಸಾಧಿಸಿದ್ದೀಯೆ.

೪೮. ಆ ಪುಣ್ಯಕರ್ಮದಿಂದ ನೀನು ಸ್ವರ್ಗಕ್ಕೆ ಹೋಗಲು ಅರ್ಹನಾಗಿರುವೆ. ಆದುದರಿಂದ ಅಲ್ಲಿ ಇಂದ್ರನೊಡನೆ ಸ್ನೇಹಮಾಡಿ ಕೊಂಡಿದ್ದು ಸುಖವಾಗಿರು.

೪೯. ಪಾಂಚಭೌತಿಕವಾದ ಶರೀರವನ್ನು ತ್ಯಾಗಮಾಡಿಬಿಡು. ದಿವ್ಯವಾದ ಉತ್ತಮಶರೀರವನ್ನು ಹೊಂದಿ ಮನೋಹರವಾದ ಭೋಗಗಳನ್ನು ಅನುಭವಿಸು.

೫೦. ನೀನು ಭೂಮಿಯಲ್ಲಿ ಯಜ್ಞ ದಾನಗಳನ್ನು ಮಾಡಿದ ಹಾಗೆಲ್ಲಾ ಸ್ವರ್ಗಭೋಗಗಳು ನಿನ್ನನ್ನು ಅಲ್ಲಿಗೆ ಬರಬೇಕೆಂದು ಪ್ರಾರ್ಥಿಸುತ್ತವೆ.

೫೧. ಯಯಾತಿಯು ಹೇಳಿದನು—ಯಾವ ಶರೀರದಿಂದ ಭೂಮಿಯಲ್ಲಿ ಪುಣ್ಯಪಾಪಗಳು ಸಿದ್ಧಿಸುತ್ತವೆಯೋ, ಪುಣ್ಯಪಾಪಕರ್ಮಗಳ ಸಾಧನಭೂತವಾದ ಅಂತಹ ಈ ಶರೀರವನ್ನು ಹೇಗೆ ಬಿಟ್ಟು ಅದರಿಂದ ಬಂದ ಲೋಕವನ್ನು ಹೊಂದಲಿ? ಎನ್ನಲು,

॥ ಮಾತಲಿರುವಾಚ ॥

ಯತ್ರೈವೋಽಪಾರ್ಜಿತಂ ಕಾಯಂ ಪಂಚಾತ್ಮಕಂ ಮೃತಂ ನೃಪ ।
ತತ್ರೈವ ತತ್ಪರಿತ್ಯಜ್ಯ ದಿವ್ಯೇನೈವ ವ್ರಜಂತಿ ತೇ ॥ ೫೨ ॥

ಈಶ್ವರಾ ಮಾನವಾಃ ಸರ್ವೇ ಪಾಪಪುಣ್ಯಪ್ರಸಾಧಕಾಃ ।
ತೇಽಪಿ ಕಾಯಂ ಪರಿತ್ಯಜ್ಯ ಅಥಃ ಸ್ವರ್ಗಂ ವ್ರಜಂತಿ ಚ ॥ ೫೩ ॥

॥ ಯಯಾತಿರುವಾಚ ॥

ಪಂಚಾತ್ಮಕೇನ ಕಾಯೇನ ಸುಕೃತಂ ದುಷ್ಕೃತಂ ನರಾಃ ।
ಉತ್ಪಾದ್ಯೈವ ಪ್ರಯಾಂತ್ಯೇವ ಅನ್ಯದ್ರೂಪಂ ಚ ಭೂತಲೇ ॥ ೫೪ ॥

ಕೋ ವಿಶೇಷೋ ಹಿ ಧರ್ಮಜ್ಞ ಭೂಮೌ ಕಾಯಂ ಪರಿತ್ಯಜೇತ್ ।
ಪಾಪಪುಣ್ಯಪ್ರಭಾವಾದ್ವೈ ಕಾಯಸ್ಯ ಪತನಂ ಭವೇತ್ ॥ ೫೫ ॥

ದೃಷ್ಟಾಂತೋ ದೃಶ್ಯತೇ ಸೂತ ಪ್ರತ್ಯಕ್ಷಂ ಮರ್ತ್ಯಮಂಡಲೇ ।
ವಿಶೇಷಂ ನೈವ ಪಶ್ಯಾಮಿ ಧರ್ಮಪುಣ್ಯಸ್ಯ ಚಾಽಧಿಕಂ ॥ ೫೬ ॥

---

೫೨. ಮಾತಲಿಯು ಹೇಳಿದನು—ಎಲ್ಲಿ ಪಂಚಭೂತಾತ್ಮಕವಾದ ಶರೀರವನ್ನು ಹೊಂದುತ್ತಾನೋ ಅಲ್ಲೇ ಅದನ್ನು ಬಿಟ್ಟು, ಉತ್ತಮ ದೇಹದಿಂದ ಎಲ್ಲರೂ ದಿವ್ಯ ಲೋಕವನ್ನು ಹೊಂದುತ್ತಾರೆ.

೫೩. ರಾಜರೇ ಮೊದಲಾದ ಮನುಷ್ಯರು ಪಾಪಪುಣ್ಯಗಳನ್ನು ಈ ಭೂಲೋಕದಲ್ಲಿ ಸಾಧಿಸಿಕೊಂಡು ಅವರು ಈ ಭೂಮಿಯಲ್ಲೇ ಆ ದೇಹವನ್ನು ಬಿಟ್ಟು ಸ್ವರ್ಗವನ್ನು ಹೊಂದುತ್ತಾರೆ.

೫೪. ಯಯಾತಿಯು ಹೇಳಿದನು— ಮನುಷ್ಯನು ಈ ಪಂಚಭೂತಾತ್ಮಕ ಶರೀರದಿಂದ ಪುಣ್ಯಪಾಪಗಳನ್ನು ಮಾಡಿಕೊಂಡು ಬೇರೆರೂಪದಿಂದ ಸ್ವರ್ಗಕ್ಕೆ ಹೋಗುತ್ತಾರೆ.

೫೫. ಪಾಪಪುಣ್ಯಗಳ ಪ್ರಭಾವದಿಂದ ದೇಹನಾಶವಾಗುತ್ತದೆ. ಭೂಮಿಯಲ್ಲಿ ದೇಹವನ್ನು ಬಿಟ್ಟು ಬೇರೆ ಶರೀರವನ್ನು ಹೊಂದುವುದರಿಂದ ವಿಶೇಷವೇನಿದೆ?

೫೬. ಎಲೈ ಸೂತನೇ, ಭೂಮಿಯಲ್ಲಿ ದೃಷ್ಟಾಂತಗಳು ಸಿಕ್ಕುತ್ತಲೇ ಇವೆ. ಧರ್ಮಕ್ಕೂ ಪುಣ್ಯಕ್ಕೂ ವಿಶೇಷವನ್ನೇನೂ ಕಾಣೆನು.

ಸತ್ಯಧರ್ಮಾದಿಕಂ ಪುಣ್ಯಂ ಯೇನ ಕಾಯೇನ ಮಾನವಃ ।
ಸಮರ್ಜಯತಿ ವೈ ಮರ್ತ್ಯಸ್ತಂ ಕಸ್ಮಾದ್ವಿಪ್ರಸರ್ಜಯೇತ್ ॥ ೫೭ ॥

ಆತ್ಮಾ ಕಾಯಶ್ಚ ದ್ವಾವೇತೌ ಮಿತ್ರರೂಪಾವುಭಾವಪಿ ।
ಕಾಯಂ ಮಿತ್ರಂ ಪರಿತ್ಯಜ್ಯ ಆತ್ಮಾ ಯಾತಿ ಸುನಿಶ್ಚಿತಂ ॥ ೫೮ ॥

॥ ಮಾತಲಿರುವಾಚ ॥

ಸತ್ಯಮುಕ್ತಂ ತ್ವಯಾ ರಾಜನ್ ಕಾಯಂ ತ್ಯಕ್ತ್ವಾ ಪ್ರಯಾತಿ ಸಃ ।
ಸಂಬಂಧೋ ನಾಸ್ತಿ ತೇನಾಪಿ ಸಮಂ ಕಾಯೇನ ಚಾತ್ಮನಃ ॥ ೫೯ ॥

ಯಸ್ಮಾತ್ಪಂಚಸ್ವರೂಪೋಽಯಂ ಸಂಧಿಜರ್ಜರಿತಸ್ತದಾ ।
ಜರಯಾ ಪೀಡ್ಯಮಾನಸ್ತು ಸ ಜೀವಂ ತ್ಯಕ್ತುಮಿಚ್ಛತಿ ॥ ೬೦ ॥

ಜರಾದೋಷಪ್ರಭಗ್ನೇ ಚ ತತ್ರಸ್ಥಾತುಂ ಸ ನೇಚ್ಛತಿ ।
ಆಕುಲವ್ಯಾಕುಲೋ ಭೂತ್ವಾ ಜೀವಂ ತ್ಯಕ್ತ್ವಾ ಪ್ರಯಾತಿ ಸಃ ॥ ೬೧ ॥

---

೫೭. ಸತ್ಯಧರ್ಮಾದಿಗಳಾದ ಪುಣ್ಯವನ್ನು ಮನುಜನು ಯಾವಶರೀರದಿಂದ ಸಂಪಾದಿಸುತ್ತಾನೋ ಅಂತಹ ಶರೀರವನ್ನು ಏಕೆ ವಿಸರ್ಜಿಸಬೇಕು ?

೫೮. ಆತ್ಮ ದೇಹಗಳೆರಡೂ ಕೂಡ ಮಿತ್ರಗಳು. ದೇಹವೆಂಬ ಮಿತ್ರನನ್ನು ಬಿಟ್ಟು ಆತ್ಮನು ಹೋಗುತ್ತಾನೆ ಇದು ನಿಶ್ಚಯವಲ್ಲವೇ ?

೫೯. ಮಾತಲಿಯು ಹೇಳಿದನು—ಎಲೈ ದೊರೆಯೇ, ನೀನು ಹೇಳಿದುದು ನಿಶ್ಚಯ. ದೇಹವನ್ನು ಬಿಟ್ಟು ಆತ್ಮನು ಹೊರಟು ಹೋಗುತ್ತಾನೆ. ದೇಹಕ್ಕೂ ಆತ್ಮಕ್ಕೂ ಸಂಬಂಧವಿಲ್ಲ.

೬೦. ಈ ದೇಹವು ಪಂಚಭೂತಾತ್ಮಕವಾದುದು. ಕೀಲುಗಳಲ್ಲಿ ಸಡಿಲವಾಗುವುದು. ಮುಪ್ಪಿನಿಂದ ಕೂಡಿಕೊಂಡು ನಾಶವಾಗುವುದು. ಆದುದರಿಂದ ಜೀವವು ಇದನ್ನು ಬಿಡಲು ಯೋಗ್ಯವಾದುದು.

೬೧. ಜರೆಯಿಂದ ದೂಷಿತವಾದ ಈ ಶರೀರದಲ್ಲಿ ಆ ಆತ್ಮನು ಇರಲು ಅಪೇಕ್ಷಿಸುವುದಿಲ್ಲ. ಬಹುವಾಗಿ ದುಃಖಪಟ್ಟುಕೊಂಡು ಈ ದೇಹವನ್ನು ಬಿಟ್ಟು ಹೋಗುತ್ತಾನೆ.

ಸತ್ಯೇನ ಧರ್ಮಪುಣ್ಯೈಶ್ಚ ನಾನ್ಯೈರ್ನಿಯಮಸಂಭವೈಃ ।
ಅಶ್ವಮೇಧಾದಿಭಿರ್ಯಜ್ಞೈಸ್ತೀರ್ಥೈಸ್ಸಂಯಮನೈಸ್ತಥಾ ॥ ೬೨ ॥

ಸುಕೃತೈಶ್ಚೈವ ಪುಣ್ಯೈಶ್ಚ ಜರಾ ನೈವ ಪ್ರಬಾಧತೇ ।
ಪಾತಕೈಶ್ಚ ಮಹಾರಾಜ ಪಚತೇ ಕಾಯಮೇವ ಸಾ ॥ ೬೩ ॥

॥ ಯಯಾತಿರುವಾಚ ॥

ಕಸ್ಮಾಜ್ಜರಾ ಸಮುತ್ಪನ್ನಾ ಕಸ್ಮಾತ್ಕಾಯಂ ಪ್ರಪೀಡಯೇತ್ ।
ಮಮ ವಿಸ್ತರತಸ್ಸೂತ ವಕ್ತುಮರ್ಹಸಿ ಸತ್ತಮ ॥ ೬೪ ॥

॥ ಮಾತಲಿರುವಾಚ ॥

ಹನ್ತ ತೇ ವರ್ಣಯಿಷ್ಯಾಮಿ ಜರಾಯಾಃ ಪರಿಕಾರಣಂ ।
ಯಸ್ಮಾಚ್ಚೈವಂ ಸಮುದ್ಭೂತಾ ಕಾಯಮಧ್ಯೇ ನೃಪೋತ್ತಮ ॥ ೬೫ ॥

ಪಂಚಭೂತಾತ್ಮಕಃ ಕಾಯೋ ವಿಷಯೈಃ ಪಂಚಭಿರ್ವೃತಃ ।
ಯಮಾತ್ಮಾ ತ್ಯಜತೇ ರಾಜನ್ ಸ ಕಾಯಃ ಪರಿಧಕ್ಷ್ಯತೇ ॥ ೬೬ ॥

---

೬೨-೬೩. ಸತ್ಯ, ದಾನ, ಪುಣ್ಯ, ಧರ್ಮ, ನಿಯಮ ಅಶ್ವಮೇಧಾದಿ ಯಜ್ಞ, ತೀರ್ಥಗಳು, ಈ ಪುಣ್ಯಾದಿಗಳಿಂದಲೂ ವಾರ್ಧಕ್ಯದಿಂದಲೂ ದೇಹವು ಬಾಧೆಪಡುವುದಿಲ್ಲ. ಪಾಪಗಳಿಂದ ಮಾತ್ರವೇ ತೊಂದರೆಪಡುತ್ತದೆ.

೬೪. ಯಯಾತಿಯು ಕೇಳಿದನು—ಜರೆಯು ಏಕೆ ಹುಟ್ಟಿತು ? ಅದು ಏತಕ್ಕೋಸ್ಕರ ದೇಹವನ್ನು ಪೀಡಿಸುತ್ತದೆ ? ನನಗೆ ಅದನ್ನು ವಿಸ್ತಾರವಾಗಿ ತಿಳಿಸು ಎನ್ನಲು,

೬೫. ಮಾತಲಿಯು ಹೇಳಿದನು—ಅಯ್ಯೋ! ಜರೆಯು ದೇಹಮಧ್ಯದಲ್ಲಿ ಹುಟ್ಟಲು ಕಾರಣವೇನೆಂಬುದನ್ನು ಹೇಳುತ್ತೇನೆ ಕೇಳು.

೬೬. ಪಂಚಭೂತಗಳಿಂದಲೂ, ಪಂಚೇಂದ್ರಿಯಗಳಿಂದಲೂ ಕೂಡಿದ ಯಾವ ಶರೀರವನ್ನು ಆತ್ಮನು ಬಿಡುತ್ತಾನೋ ಆ ದೇಹವು ಸುಡಲ್ಪಡುತ್ತದೆ.

ವಹ್ನಿನಾ ದೀಪ್ಯಮಾನಸ್ತು ಸರಸಃ ಪ್ರಜ್ವಲನ್ ನೃಪ ।
ತಸ್ಮಾದ್ವಿಜಾಯತೇ ಧೂಮೋ ಧೂಮಾನ್ಮೇಘಶ್ಚ ಜಾಯತೇ ॥ ೬೭ ॥

ಮೇಘಾತ್ಪ್ರವರ್ತತೇ ಚಾಂಭಸ್ತತಃ ಪೃಥ್ವೀ ಪ್ರಜಾಯತೇ ।
ಊರ್ಧ್ವಗಮಾಯಾತಿ ಸಾ ಪೃಥ್ವೀ ಯಥಾ ನಾರೀ ರಜಸ್ವಲಾ ॥ ೬೮ ॥

ತಸ್ಮಾತ್ಪ್ರಜಾಯತೇ ಗಂಧೋ ಗಂಧಾದ್ರಸೋ ನೃಪೋತ್ತಮ ।
ರಸಾತ್ಪ್ರಭವತೇ ಚಾನ್ನಮನ್ನಾಚ್ಛುಕ್ರಂ ನ ಸಂಶಯಃ ॥ ೬೯ ॥

ಶುಕ್ರಾದ್ಧಿ ಜಾಯತೇ ಕಾಯಃ ಕುರೂಪಃ ಕಾಯ ಏವ ಚ ।
ಯಥಾ ಪೃಥ್ವೀ ಸೃಜೇದ್ಗಂಧಾನ್ ರಸೈಶ್ಚರತಿ ಭೂತಲೇ ॥ ೭೦ ॥

ತಥಾ ಕಾಯಶ್ಚರೇನ್ನಿತ್ಯಂ ರಸಾಧಾರೋ ಹಿ ಸರ್ವಶಃ ।
ಗಂಧಶ್ಚ ಜಾಯತೇ ತಸ್ಮಾದ್ಗಂಧಾದ್ರಸೋ ಭವೇತ್ ಪುನಃ ॥ ೭೧ ॥

---

೬೭. ಬೆಂಕಿಯನ್ನು ಆದೇಹಕ್ಕೆ ಹಚ್ಚಿದಾಗ ರಸವಿದ್ದರೂ ಅದು ಉರಿಯುತ್ತದೆ. ಅದರಂತೆ ಇನ್ನೂ ಅನೇಕ ಪದಾರ್ಥಗಳು ಉರಿಯುತ್ತವೆ. ಅದರಿಂದ ಹೊಗೆಯು ಬರುತ್ತದೆ. ಆ ಹೊಗೆಯಿಂದ ಮೇಘವುಂಟಾಗುತ್ತದೆ.

೬೮. ಮೇಘದಿಂದ ನೀರುಂಟಾಗುತ್ತದೆ. ಅ ನೀರಿನಿಂದ ಭೂಮಿಯು ಹುಟ್ಟುತ್ತದೆ. ಮುಟ್ಟಾದ ಹೆಂಗಸರಿಗೆ ಹೇಗೆ ಅವಯವಗಳು ಹೊರಗೆ ಬರುತ್ತವೆಯೋ ಹಾಗೆ ನೀರಿನಿಂದ ಮೇಲಕ್ಕೆ ಭೂಮಿ ಹುಟ್ಟುತ್ತದೆ

೬೯. ಆ ಭೂಮಿಯಿಂದ ಗಂಧವು ಹುಟ್ಟುತ್ತದೆ. ಗಂಧಿಂದ ರಸವು ಹುಟ್ಟುತ್ತದೆ. ರಸದಿಂದ ಅನ್ನ, ಅನ್ನದಿಂದ ಶುಕ್ರವು ಉತ್ಪತ್ತಿಯಾಗುತ್ತದೆ.

೭೦. ಶುಕ್ರದಿಂದ ದೇಹೋತ್ಪತ್ತಿಯಾಗುತ್ತದೆ. ಆ ದೇಹವು ಭೂಮಿಯ ರೂಪವಾದುದು. ಪೃಥಿವಿಯು ಗಂಧವನ್ನು ಉತ್ಪತ್ತಿಮಾಡುವಂತೆಯೂ, ರಸಗಳಿಂದ ಚಲಿಸುವಂತೆಯೂ

೭೧. ರಸಾಧಾರವಾದ ದೇಹವೂ ಸಂಚರಿಸುತ್ತದೆ. ಆದರಿಂದ ಗಂಧ ಹುಟ್ಟುತ್ತದೆ. ಪುನಃ ಅದರಿಂದ ರಸ ಹುಟ್ಟುತ್ತದೆ ಇದೇ ಪರಿಪಾಟಿಯು.

**ತಸ್ಮಾಜ್ಜಜ್ಞೇ ಮಹಾವಹ್ನಿರ್ದೃಷ್ಟಾಂತಂ ಪಶ್ಯ ಭೂಪತೇ ।**
**ಯಥಾ ಕಾಷ್ಠಾದ್ಭವೇದ್ವಹ್ನಿಃ ಪುನಃ ಕಾಷ್ಠಂ ಪ್ರಕಾಶಯೇತ್ ॥ ೭೨ ॥**

**ಕಾಯಮಧ್ಯೇ ರಸಾದಗ್ನಿಸ್ತದ್ವದೇವ ಪ್ರಜಾಯತೇ ।**
**ತತ್ರ ಸಂಚರತೇ ನಿತ್ಯಂ ಕಾಯಂ ಪುಷ್ಣಾತಿ ಭೂಪತೇ ॥ ೭೩ ॥**

**ಯಾವದ್ರಸಸ್ಯ ಚಾಧಿಕ್ಯಂ ತಾವಜ್ಜೀವಃ ಪ್ರಶಾಂತಿಮಾನ್ ।**
**ಚರಿತ್ವಾ ತಾದೃಶಂ ವಹ್ನಿಃ ಕ್ಷುಧಾರೂಪೇಣ ವರ್ತತೇ ॥ ೭೪ ॥**

**ಅನ್ನಮಿಚ್ಛತ್ಯಸೌ ತೀವ್ರಃ ಪಯಸಾ ಚ ಸಮನ್ವಿತಂ ।**
**ಪ್ರಧಾನಂ ಲಭತೇ ಚಾನ್ನಮುದಕಂ ಚಾಪಿ ಭೂಪತೇ ॥ ೭೫ ॥**

**ಶೋಣಿತಂ ಚರತೇ ವಹ್ನಿಸ್ತದ್ವದ್ವೀರ್ಯಂ ನ ಸಂಶಯಃ ।**
**ಯಕ್ಷ್ಮರೋಗೋ ಭವೇತ್ತಸ್ಮಾತ್ಸರ್ವಕಾಯಪ್ರಣಾಶಕಃ ॥ ೭೬ ॥**

---

೭೨. ಆ ರಸದಿಂದ ಪುನಃ ಬೆಂಕಿಯುಂಟಾಗುತ್ತದೆ. ಇಲ್ಲಿ ದೃಷ್ಟಾಂತವನ್ನು ಹೇಳುತ್ತೇನೆ ಕೇಳು. ಕಟ್ಟಿಗೆಯಿಂದ ಬೆಂಕಿ ಹುಟ್ಟಿ ಪುನಃ ಅವನ್ನೇ ಹೇಗೆ ಸುಡುತ್ತದೋ ಹಾಗೆ ದೇಹ ಮಧ್ಯದಲ್ಲಿ ರಸದಿಂದ ಅಗ್ನಿಯು ಹುಟ್ಟಿ ಆದೇಹವನ್ನೇ ಸುಡುತ್ತದೆ.

೭೩-೭೪. ದೇಹದಲ್ಲಿ ಹುಟ್ಟಿದ ಆ ರಸದಲ್ಲಿ ಬೆಂಕಿಯುಂಟಾಗಿ ದೇಹವನ್ನು ವೃದ್ಧಿಹೊಂದಿಸುತ್ತದೆ. ರಸವು ಎಲ್ಲಿಯವರೆಗೂ ಅಧಿಕವಾಗಿದೆಯೋ ಅಲ್ಲಿಯವರೆಗೂ ಜೀವವು ಶಾಂತವಾಗಿರುತ್ತದೆ. ಬೆಂಕಿಯು ಒಳಗೆ ದಹಿಸುತ್ತಾ ಹಸಿವಿನ ರೂಪದಿಂದಿರುತ್ತದೆ.

೭೫. ನೀರಿನಿಂದ ಕೂಡಿದರೆ ಹೆಚ್ಚುತ್ತದೆ. ಪುನಃ ಅದರಿಂದ ಮುಖ್ಯವಾದ ಅನ್ನವನ್ನೂ ನೀರನ್ನೂ ಹೊಂದುತ್ತದೆ.

೭೬. ಅದೇರೀತಿ ಬೆಂಕಿಯು ರಕ್ತವನ್ನೂ ವೀರ್ಯವನ್ನೂ ತಿಂದುಹಾಕುತ್ತದೆ. ಅನಂತರ ದೇಹನಾಶಕವಾದ ಯಕ್ಷ್ಮ (ಕ್ಷಯ) ರೋಗವುಂಟಾಗುತ್ತದೆ.

ರಸಾಧಿಕ್ಯಂ ಭವೇದ್ರಾಜನ್ನಥ ವಹ್ನಿಃ ಪ್ರಶಾಮ್ಯತಿ ।
ರಸೇನ ಪೀಡ್ಯಮಾನಸ್ತು ಜ್ವರರೂಪೋಽಭಿಜಾಯತೇ ॥ ೭೭ ॥

ಗ್ರೀವಾ ಪೃಷ್ಠಂ ಕಟಿಂ ಪಾಯುಂ ಸರ್ವಾಸ್ವೇವ ಸುಸಂಧಿಷು ।
ಆರುಧ್ಯ ತಿಷ್ಠತೇ ವಹ್ನಿಃ ಕಾಯವಹ್ನಿಃ ಪ್ರವರ್ತತೇ ॥ ೭೮ ॥

ತಸ್ಯಾಧಿಕ್ಯಂ ಚರೇನ್ನಿತ್ಯಂ ಕಾಯಂ ಪುಷ್ಣಾತಿ ಸಮ್ಮತಃ ।
ರಸಸ್ತು ವೃದ್ಧಿಮಾಯಾತಿ ಬಲರೂಪೋ ಭವೇತ್ತದಾ ॥ ೭೯ ॥

ಅತಿರಿಕ್ತೋ ಬಲೇನ್ಯೈವ ವೀರ್ಯಾನ್ಮರ್ಮಾಣಿ ಚಾಲಯೇತ್ ।
ತೇನೈವ ಜಾಯತೇ ಕಾಮಃ ಶೋಷವಾನ್ಪುರುಷೋ ಭವೇತ್ ॥ ೮೦ ॥

ಸ ಕಾಮಾಗ್ನಿಃ ಸಮಾಖ್ಯಾತೋ ಬಲನಾಶಕರೋ ನೃಪ ।
ಮೈಥುನಸ್ಯ ಪ್ರಸಂಗೇನ ವಿನಾಶತ್ವಂ ಕಳೇಬರೇ ॥ ೮೧ ॥

---

೭೭. ರಸವು ಹೆಚ್ಚಾದರೆ ಬೆಂಕಿಯು ಮಂದವಾಗುತ್ತದೆ. ರಸವು ತೊಂದರೆ ಪಡಿಸುವುದರಿಂದ ಜ್ವರವು ಬರುತ್ತದೆ.

೭೮. ಕತ್ತು, ಸೊಂಟ, ನಡು, ಗುದ, ಈ ಸಂಧಿಪ್ರದೇಶಗಳಲ್ಲೆಲ್ಲಾ ಅಗ್ನಿಯು ನಿಲ್ಲುತ್ತದೆ. ಅನಂತರ ದೇಹದಲ್ಲೆಲ್ಲಾ ಹೆಚ್ಚು ಜ್ವರ ಬರುತ್ತದೆ.

೭೯. ಆ ರಸ ಹೆಚ್ಚಿದರೆ ಅದನ್ನು ವಹ್ನಿಯು ತಿಂದು ದೇಹವನ್ನು ಪುಷ್ಟಿ ಮಾಡುತ್ತದೆ. ರಸವು ವೃದ್ಧಿಯಾದರೆ ಬಲರೂಪವಾಗಿ ಬಲಬರುತ್ತದೆ.

೮೦. ಬಲವು ಹೆಚ್ಚಾದರೆ ಅದು ತನ್ನ ಶಕ್ತಿಯಿಂದ ಮರ್ಮಸ್ಥಾನಗಳನ್ನು ಅಲ್ಲಾಡಿಸುತ್ತದೆ. ಅದರಿಂದ ಕಾಮವುಂಟಾಗುತ್ತದೆ. ಅದು ಕಡಮೆಯಾದರೆ ಮನುಷ್ಯನು ಸಮನಾದ ಸ್ಥಿತಿಯಲ್ಲಿರುವನು.

೮೧. ಆ ಕಾಮಾಗ್ನಿಯು ಬಲನಾಶಕವೆಂದು ಹೇಳುತ್ತಾರೆ. ಮೈಥುನದಿಂದ ದೇಹದಲ್ಲಿ ಅದೂ ನಾಶವಾಗುವುದಲ್ಲದೆ ದೇಹವೂ ಕೂಡ ನಾಶವಾಗುತ್ತದೆ.

ನಾರೀಣಾಂ ಸಂಶ್ರಯೇತ್ಪಾಣೀ ಪೀಡಿತಃ ಕಾಮವಹ್ನಿನಾ ।
ಮೈಥುನಸ್ಯ ಪ್ರಸಂಗೇನ ಮೂರ್ಛತೇ ಮುರ್ಮು ಕೃಂತತಿ ॥ ೮೨ ॥

ತೇಜೋಹೀನೋ ಭವೇತ್ಕಾಯೋ ಬಲಹೀನಶ್ಚ ಜಾಯತೇ ॥ ೮೩ ॥

ಬಲಹೀನೋ ಯದಾ ಸ್ಯಾದ್ವೈ ದುರ್ಬಲೋ ವಹ್ನಿನೇರಿತಃ ।
ಸ ವಹ್ನಿಃ ಪ್ರಚರೇತ್ಕಾಯಃ ಶೋಣಿತಂ ಶುಕ್ರಮೇವ ಚ ॥ ೮೪ ॥

ಶುಕ್ರಶೋಣಿತಯೋರ್ನಾಶಾಚ್ಛೂನ್ಯದೇಹೋ ವಿಜಾಯತೇ ।
ಅತೀವ ಜಾಯತೇ ವಾಯುಃ ಪ್ರಚಂಡೋ ದಾರುಣಾಕೃತಿಃ ।
ವಿವರ್ಣೋ ದುಃಖಸಂತಪ್ತಃ ಶೂನ್ಯಬುದ್ಧಿಸ್ತತೋ ಭವೇತ್ ॥ ೮೫ ॥

ದೃಷ್ಟ್ವಾ ಶ್ರುತ್ವಾ ಚ ಯಾ ನಾರೀ ತಚ್ಚಿತ್ತೋ ಭ್ರಮತೇ ಸದಾ ।
ತೃಪ್ತಿರ್ನ ಜಾಯತೇ ಕಾಯೇ ಲೋಲುಪೇ ಚಿತ್ತವರ್ತ್ಮನಿ ॥ ೮೬ ॥

---

೮೨-೮೩. ಆ ಕಾಮವಹ್ನಿಯಿಂದ ಪೀಡಿತನಾಗಿ ಹೆಂಗಸರ ಕೈಹಿಡಿಯುತ್ತಾನೆ. ಆ ಮೇಲೆ ಮೈಥುನದ ಪ್ರಸಂಗದಿಂದ ಕಾಮವು ಹೆಚ್ಚುತ್ತದೆ. ಮನಸ್ಸನ್ನು ಕುದಿಸುತ್ತಿರುತ್ತದೆ. ಅದರಿಂದ ದೇಹವು ಕಾಂತಿಗೆಡುತ್ತದೆ. ಬಲಹೀನವೂ ಆಗುತ್ತದೆ.

೮೪. ಬಲಹೀನವಾದಾಗ ದೇಹದಲ್ಲಿ ವಹ್ನಿ ಹೆಚ್ಚಿ ಮಿಕ್ಕವು ಕಡಿಮೆಯಾಗುತ್ತವೆ. ಬೆಂಕಿ ಹೆಚ್ಚಾಗುವುದರಿಂದ ದೇಹವನ್ನು ತಿಂದುಹಾಕುತ್ತದೆ. ಹಾಗೆಯೇ ಶುಕ್ರವನ್ನೂ ಶ್ರೋಣಿತವನ್ನೂ ತಿಂದುಹಾಕುತ್ತದೆ.

೮೫. ಶುಕ್ರ ಶೋಣಿತಗಳು ಹೋದಮೇಲೆ ದೇಹವು ಶೂನ್ಯವಾಗುತ್ತದೆ. ಅನಂತರ ಬಹು ವಾಯುವುಂಟಾಗಿ ಅದೇ ದಾರುಣವಾಗುತ್ತದೆ. ಅನಂತರ ವಿವರ್ಣನಾಗುತ್ತಾನೆ. ದುಃಖಿಯಾಗುತ್ತಾನೆ ಬುದ್ಧಿಕೆಡುತ್ತದೆ.

೮೬. ಕಂಡ ಕೇಳಿದ ಹೆಂಗಸರಲ್ಲಿ ಮನವುಳ್ಳವನಾಗಿ ಸುತ್ತುತ್ತಾನೆ. ತೃಪ್ತಿಯುಂಟಾಗುವುದಿಲ್ಲ. ಚಂಚಲವಾದ ಚಿತ್ತವುಳ್ಳ ದೇಹದಲ್ಲಿ ತೃಪ್ತಿಯು ಉಂಟಾಗುವುದೇ ಇಲ್ಲವು.

**ವಿರೂಪಶ್ಚ ಸುರೂಪಶ್ಚ ಧ್ಯಾನಾನ್ಮರ್ತ್ಯೇ ಪ್ರಜಾಯತೇ ।**
**ಬಲಹೀನೋ ಯದಾ ಕಾಮೀ ಮಾಂಸಶೋಣಿತಸಂಕ್ಷಯಾತ್ ॥ ೮೭ ॥**

**ಪಲಿತಂ ಜಾಯತೇ ಕಾಯೇ ನಾಶಿತೇ ಕಾಮವಹ್ನಿನಾ ।**
**ತಸ್ಮಾತ್ತಂಜಾಯತೇ ಕಾಮೀ ವೃದ್ಧೋ ಭೂತ್ವಾ ದಿನೇ ದಿನೇ ॥ ೮೮ ॥**

**ಸುರತೇ ಚಿಂತತೇ ನಾರೀಂ ಯಥಾ ವಾರ್ಧುಷಿಕೋ ನರಃ ।**
**ತಥಾ ತಥಾ ಭವೇದ್ಧಾನಿಸ್ತೇಜಸೋಽಸ್ಯ ನರೇಶ್ವರ ॥ ೮೯ ॥**

**ತಸ್ಮಾತ್ಪ್ರಜಾಯತೇ ಕಾಮೋ ನಾಶರೂಪೋ ನ ಸಂಶಯಃ ।**
**ಪ್ರಾಣಿನಾಂ ಕಾಲರೂಪೇಣ ಜ್ವರೋ ಭವತಿ ದಾರುಣಃ ॥ ೯೦ ॥**

**ಸ್ಥಾವರಾ ಜಂಗಮಾಸ್ಸರ್ವೇ ಜ್ವರೇಣ ಪರಿಪೀಡಿತಾಃ ।**
**ನಾಶಮಾಯಾಂತಿ ತೇ ಸರ್ವೇ ಬಹುಪೀಡಾಪ್ರಪೀಡಿತಾಃ ॥ ೯೧ ॥**

---

೮೭-೮೮. ಧ್ಯಾನದಿಂದ ಆಗಾಗ ಕಾಂತಿಹೀನನೂ ಕಾಂತಿವಂತನೂ ಆಗುತ್ತಾನೆ. ಕಾಮಿಯು ಬಲಹೀನನಾದಮೇಲೆ ರಕ್ತಮಾಂಸಗಳು ಕ್ಷಯಿಸಿ ಮುಪ್ಪುಬರುತ್ತದೆ. ಹೀಗೆ ಕಾಮಿಯು ದಿನದಿನಕ್ಕೂ ಹೀಗಾಗಿ ವೃದ್ಧನಾಗುತ್ತಾನೆ.

೮೯. ಹೀಗೆ ತೇಜಸ್ಸಿನಿಂದ ವೃದ್ಧಿಶೂನ್ಯನಾದ ಮನುಷ್ಯನು ಹೆಂಗಸನ್ನು ಸುರತದಲ್ಲಿ ಚಿಂತಿಸಿದಹಾಗೆಲ್ಲಾ ತೇಜಸ್ಸಿನ ಹಾನಿಯನ್ನು ಹೊಂದುತ್ತಾನೆ.

೯೦. ಆದ್ದರಿಂದ ನಾಶರೂಪನಾದ ಕಾಮನು ಹೀಗೆ ಉಂಟಾಗಿ ಪ್ರಾಣಿಗಳಿಗೆ ಕಾಲರೂಪದಿಂದ ಹೆಚ್ಚಾಗಿ ಜ್ವರ ಬರುತ್ತದೆ.

೯೧. ಚರಾಚರಗಳು ಇಂತು ಜ್ವರದಿಂದ ತೊಂದರೆಪಟ್ಟು ಅನೇಕಬಗೆಯಲ್ಲಿ ನಾಶಹೊಂದುತ್ತವೆ.

**ಅನೇನ ವಿಧಿನಾ ಜೀರ್ಣಮನ್ಯತ್ಕಿಂ ತೇ ವದಾಮ್ಯಹಂ ।**
**ಏವಮುಕ್ತೋ ಮಹಾಪ್ರಾಜ್ಞೋ ಮಾತಲಿಂ ವಾಕ್ಯಮಬ್ರವೀತ್ ॥ ೯೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಚತುಷ್ಷಷ್ಟಿತಮೋಽಧ್ಯಾಯಃ**



೯೨. ಈರೀತಿಯಾಗಿ ದೇಹವು ಜೀರ್ಣಹೊಂದುತ್ತದೆ. ಇದೆಲ್ಲವನ್ನೂ ಹೇಳಿರುವೆನು. ಈಗ ಇನ್ನೇನು ಹೇಳಲಿ ಕೇಳು ಎಂದು ಮಾತಲಿಯು ಹೇಳಲು, ಅದನ್ನು ಕೇಳಿದ ರಾಜನು ಪುನಃ ಅವನನ್ನು ಕುರಿತು ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಷಷ್ಟಿತಮೋಽಧ್ಯಾಯಃ

॥ ಯಯಾತಿರುವಾಚ ॥

ಧರ್ಮಸ್ಯ ರಕ್ಷಕಃ ಕಾಯೋ ಮಾತಲೇ ಆತ್ಮನಾ ಸಹ ।
ನಾಕಮೇಷ ನ ಪ್ರಯಾತಿ ತನ್ಮೇ ತ್ವಂ ಕಾರಣಂ ವದ ॥ ೧ ॥

॥ ಮಾತಲಿರುವಾಚ ॥

ಪಂಚಾನಮಪಿ ಭೂತಾನಾಂ ಸಂಗತಿರ್ನಾಸ್ತಿ ಭೂಪತೇ ।
ಆತ್ಮನಾ ಸಹ ಭದ್ರಂ ತೇ ಸಂಗತ್ಯಾ ನೈವ ವರ್ತತೇ ॥ ೨ ॥

ಸರ್ವೇಷಾಂ ನಾತ್ರ ಸಂಘಾತಃ ಕಾಯಗ್ರಾಮೇ ಪ್ರವರ್ತತೇ ।
ಜರಯಾ ಪೀಡಿತಾಸ್ಸರ್ವೇ ಸ್ವಂ ಸ್ವಂ ಸ್ಥಾನಂ ಪ್ರಯಾಂತಿ ತೇ ॥ ೩ ॥

---

## ಅರವತ್ತೈದನೆಯ ಅಧ್ಯಾಯವು

೧. ಯಯಾತಿಯು ಹೇಳಿದನು :—ಎಲೈ ಮಾತಲಿಯೇ, ದೇಹವು ಆತ್ಮನೊಡನೆ ಕೂಡಿರುವಾಗ ಧರ್ಮಕ್ಕೆ ರಕ್ಷಕವಾದುದು, ಎಂದರೆ ಸಾಧನಭೂತವಾದುದು. ಆದರೆ ಈ ದೇಹವು ಸ್ವರ್ಗಕ್ಕೆ ಹೋಗುವುದಿಲ್ಲ. ಕಾರಣವೇನು? ಹೇಳು.

೨. ಮಾತಲಿಯು ಹೇಳಿದನು :—ಪಂಚಭೂತಗಳಿಗೂ ಆತ್ಮನಿಗೂ ಸೇರುವಿಕೆಯಿಲ್ಲ. ಆತ್ಮವಿರುವುದರಿಂದ ಅವು ಭದ್ರವಾಗಿವೆ, ಅಷ್ಟೇ.

೩. ಈ ದೇಹದ ಅವಯವಗಳ ಸಮೂಹದಲ್ಲಿ ಎಲ್ಲವೂ ಒಂದಾಗಿರುವುದಿಲ್ಲ. ಮುಪ್ಪು ಬಂದನಂತರ ತಮ್ಮ ತಮ್ಮ ಜಾಗಕ್ಕೆ ಹೋಗುತ್ತವೆ.

ರಸಾಧಿಕಾ ಸ್ಯಾತ್ಪೃಥಿವೀ ಸಾ ರಾಜನ್ ಪರಿಕಥ್ಯತೇ ।
ರಸೈಃ ಕ್ಲಿನ್ನಾ ತತಃ ಪೃಥ್ವೀ ಮೃದುತ್ವಂ ಯಾತಿ ಭೂಪತೇ ॥ ೪ ॥

ಭಿದ್ಯತೇ ಪಿಪೀಲಿಕಾಭಿರ್ಮೂಷಿಕಾಭಿಸ್ತಥೈವ ಸಾ ।
ಛಿದ್ರಾಣ್ಯೇವ ಪ್ರಜಾಯಂತೇ ವಲ್ಮೀಕಾಶ್ಚ ಮಹೋದರಾಃ ॥ ೫ ॥

ತದ್ವತ್ಕಾಯೇ ಪ್ರಜಾಯಂತೇ ಗಂಡಮಾಲಾ ವಿಚರ್ಚಿಕಾಃ ।
ಕೃಮಿಭಿರ್ಭಿದ್ಯಮಾನಾಶ್ಚ ಕಾಯ ಏಷ ನರೋತ್ತಮ ॥ ೬ ॥

ಗುಲ್ಮಾಸ್ತತ್ರ ಪ್ರಜಾಯಂತೇ ಸದ್ಯಃಪೀಡಾಕರಾಸ್ತದಾ ।
ಏಭಿರ್ದೋಷೈಸ್ಸಮಾಯುಕ್ತಃ ಕಾಯೋಽಯಂ ನಹುಷಾತ್ಮಜ ॥ ೭ ॥

ಕಥಂ ಪ್ರಾಣಸಮಾಯೋಗಾದ್ದಿವಂ ಯಾತಿ ನರೇಶ್ವರ ।
ಕಾಯೇ ಪಾರ್ಥಿವ ಭಾಗೋಽಯಂ ಸಮಾನಾರ್ಥಃ ಪ್ರತಿಷ್ಠಿತಃ ॥ ೮ ॥

---

೪. ಪೃಥಿವಿಯು ರಸಾಧಿಕವಾದುದೆಂದು ಹೇಳಲ್ಪಡುತ್ತದೆ. ರಸದಿಂದ ಅದು ನೆನೆದರೆ ಮೆತ್ತಗಾಗುತ್ತದೆ.

೫. ಆ ಮೆತ್ತಗಾದುದನ್ನು ಇರುವೆಗಳೂ, ಇಲಿಗಳೂ, ತೂತುಮಾಡುತ್ತವೆ. ಹಾಗೆಯೇ ದೊಡ್ಡ ಪೊದರುಳ್ಳ ಹುತ್ತವಾಗುತ್ತದೆ.

೬. ಅದರಂತೆಯೇ ದೇಹದಲ್ಲಿ ಗಂಡಮಾಲೆಯೇ ಮೊದಲಾದ ಪೊದರುಳ್ಳ ಗಾಯುಗಳುಂಟಾಗುತ್ತವೆ. ಅವು ಹುಳುಗಳಿಂದ ಭೇದಿಸಲ್ಪಡುತ್ತವೆ. ದೇಹದ ಸ್ಥಿತಿಯು ಇದೇನೇ. ದೇಹದಲ್ಲಿ ಹೀಗಾಗುತ್ತದೆ.

೭. ಒಡನೆಯೇ ತೊಂದರೆಕೊಡುವ ಪೊಟ್ಟರೆಗಳು ಆ ತೂತುಗಳಲ್ಲಿ ಉಂಟಾಗುತ್ತವೆ. ಈ ದೇಹವು ಇಷ್ಟೊಂದು ದೋಷಗಳಿಂದ ಕೂಡಿದೆ.

೮. ಅಂತಹ ದೇಹವು ಆತ್ಮನೊಡನೆ ಹೇಗೆತಾನೆ ಸ್ವರ್ಗಕ್ಕೆ ಹೋದೀತು? ದೇಹದಲ್ಲಿ ಈ ಪೃಥಿವಿಯ ಭಾಗವು ಆತ್ಮನೊಡನೆ ಹೇಗೆತಾನೆ ಸಮನಾಗಿರುತ್ತದೆ?

**ನ ಕಾಯಃ ಸ್ವರ್ಗಮಾಯಾತಿ ಯಥಾ ಪೃಥ್ವೀ ತಥಾ ಸ್ಥಿತಃ ।**
**ಏವಂ ತೇ ಸರ್ವಮಾಖ್ಯಾತಂ ದೋಷೋ ವೈ ಪಾರ್ಥಿವಸ್ಯ ಹಿ ॥ ೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಪಂಚಷಷ್ಟಿತಮೋಽಧ್ಯಾಯಃ**



---

೯. ಆದುದರಿಂದ ದೇಹವು ಸ್ವರ್ಗವನ್ನು ಹೊಂದುವುದಿಲ್ಲ. ಭೂಮಿಯು ಹೇಗಿರಬೇಕೋ ಹಾಗಿರುತ್ತದೆ. ಈರೀತಿಯಾಗಿ ಪೃಥ್ವಿಯ ದೋಷವನ್ನು ಹೇಳಿದ್ದೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಟ್‌ಷಷ್ಟಿತಮೋಽಧ್ಯಾಯಃ

॥ ಯಯಾತಿರುವಾಚ ॥

ಪಾಪಾಚ್ಚ ಪತತೇ ಕಾಯೋ ಧರ್ಮಾಚ್ಚ ಶೃಣು ಮಾತಲೇ ।
ವಿಶೇಷಂ ನೈವ ಪಶ್ಯಾಮಿ ಪುಣ್ಯಸ್ಯಾಪಿ ಮಹೀತಲೇ ॥ ೧ ॥

ಪುನಃ ಪ್ರಜಾಯತೇ ಕಾಯೋ ಯಥಾ ಹಿ ಪತನಂ ಪುರಾ ।
ಕಥಮುತ್ಪದ್ಯತೇ ದೇಹಸ್ತನ್ಮೇ ತ್ವಂ ಕಾರಣಂ ವದ ॥ ೨ ॥

॥ ಮಾತಲಿರುವಾಚ ॥

ಅಥ ನಾರಕಿಣಾಂ ಪುಂಸಾಮಧರ್ಮಾದೇವ ಕೇವಲಾತ್ ।
ಕ್ಷಣಮಾತ್ರೇಣ ಭೂತೇಭ್ಯಃ ಶರೀರಮುಪಜಾಯತೇ ॥ ೩ ॥

---

## ಅರವತ್ತಾರನೆಯ ಅಧ್ಯಾಯವು

೧. ಯಯಾತಿಯು ಹೇಳಿದನು :—ದೇಹವು ಪಾಪದಿಂದ ನಾಶವಾದಂತೆ ಪುಣ್ಯದಿಂದಲೂ ನಾಶವಾದರೆ, ಪಾಪಕ್ಕೂ ಪುಣ್ಯಕ್ಕೂ ಇರುವ ವಿಶೇಷವೇನು? ಇದರ ವ್ಯತ್ಯಾಸವು ನನಗೆ ತಿಳಿಯದು.

೨. ಹಿಂದೆ ನಾಶವಾದಂತೆಯೇ ತಿರುಗಿ ದೇಹವು ಉತ್ಪತ್ತಿಯಾಗುತ್ತದೆಯಷ್ಟೆ? ಅದು ಹೇಗೆ ಹುಟ್ಟುತ್ತದೆ ? ಅದಕ್ಕೆ ಕಾರಣವೇನು ಆದನ್ನು ಹೇಳು ಎನ್ನಲು,

೩. ಮಾತಲಿಯು ಹೇಳಿದನು :—ನರಕಕ್ಕೆ ಹೋಗುವ ಮನುಷ್ಯರಿಗೆ ಅಧರ್ಮದಿಂದಲೇ ಒಂದು ಕ್ಷಣದೊಳಗೆ ನರಕಯೋಗ್ಯವಾದ ಶರೀರವು ಹುಟ್ಟುತ್ತದೆ.

ತದ್ವದ್ಧರ್ಮೇಣ ಚೈಕೇನ ದೇವಾನಾಮೌಪಪಾದಿಕಂ ।
ಸದ್ಯಃ ಪ್ರಜಾಯತೇ ದಿವ್ಯಂ ಶರೀರಂ ಭೂತಸಾರತಃ ॥ ೪ ॥

ಕರ್ಮಣಾ ವ್ಯತಿಮಿಶ್ರೇಣ ಯಚ್ಛರೀರಂ ಮಹಾತ್ಮನಾಂ ।
ತದ್ರೂಪಪರಿಮಾಣೇನ ವಿಜ್ಞೇಯಂ ಹಿ ಚತುರ್ವಿಧಂ ॥ ೫ ॥

ಉದ್ಭಿಜ್ಜಾಃ ಸ್ಥಾವರಾ ಜ್ಞೇಯಾಸ್ತೃಣಗುಲ್ಮಾದಿರೂಪಿಣಃ ।
ಕೃಮಿಕೀಟಪತಂಗಾದ್ಯಾಃ ಸ್ವೇದಜಾ ನಾಮ ದೇಹಿನಃ ॥ ೬ ॥

ಅಂಡಜಾಃ ಪಕ್ಷಿಣಸ್ಸರ್ವೇ ನಕ್ರಾ ಮತ್ಸ್ಯಾಶ್ಚ ಭೂಪತೇ ।
ಜರಾಯುಜಾಶ್ಚ ವಿಜ್ಞೇಯಾ ಮಾನುಷಾಸ್ಸಚತುಷ್ಪದಾಃ ॥ ೭ ॥

ತತ್ರ ಸಿಕ್ತಾ ಜಲೈರ್ಭೂಮಿರನ್ನ ಊಷ್ಮಾಭಿಜಾಯತೇ ।
ವಾಯುನಾ ಧಮ್ಯಮಾನಾ ಚ ಕ್ಷೇತ್ರೇ ಬೀಜಂ ಪ್ರವರ್ತತೇ ॥ ೮ ॥

---

೪. ಅದೇರೀತಿ ಸ್ವರ್ಗಕ್ಕೆ ಹೋಗುವವರಿಗೆ ಅವರ ಧರ್ಮದಿಂದ ದೇವತೆಗಳಿಗೆ ಯೋಗ್ಯವಾದ ದಿವ್ಯಶರೀರವು ಪಂಚಭೂತಗಳ ಸಾರದಿಂದಲೇ ಹುಟ್ಟುತ್ತದೆ.

೫. ಕರ್ಮಗಳ ಯಥಾಯೋಗ್ಯವಾದ ಮಿಶ್ರಣದಿಂದ ಮಹಾತ್ಮರ ಶರೀರ ಮುಂತಾದುವು ಉತ್ಪನ್ನವಾಗುತ್ತದೆ. ಆ ಕರ್ಮವ್ಯತ್ಯಾಸದ ಪರಿಣಾಮದಿಂದಲೇ ಪ್ರಾಣಿಗಳಿಗೆ ನಾಲ್ಕುಬಗೆಯಾದ ಶರೀರಗಳುಂಟಾಗುತ್ತವೆ.

೬-೭. ಅಚರಗಳಾದ ಮರಗಿಡಗಳೆಲ್ಲವೂ ಬೀಜದಿಂದ ಹುಟ್ಟುವುವು. ಅವು ಉದ್ಭಿಜ್ಜಗಳೆನಿಸಿಕೊಳ್ಳುತ್ತವೆ. ಬೆವರಿನಿಂದ ಹುಟ್ಟುವ ಹುಳುಹುಪ್ಪಟೆ ಪತಂಗ ಮುಂತಾದ ಕೃಮಿಕೀಟಗಳು, ಸ್ವೇದಜಗಳು. ಮೀನು, ಮೊಸಳೆ, ಪಕ್ಷಿ ಮುಂತಾದ ಮೊಟ್ಟೆಯಿಂದ ಹುಟ್ಟುವ ಜೀವಿಗಳು, ಅಂಡಜಗಳು. ಜರಾಯು ಎಂಬುದು ಒಂದು ನರ. ಆ ನರದಿಂದ ಸುತ್ತಲ್ಪಟ್ಟು ಹುಟ್ಟುವ ಮನುಷ್ಯರೂ ಮತ್ತು ಚತುಷ್ಪಾದ ಗಳುಳ್ಳ ಪಶುಗಳೂ ಸಹ ಜರಾಯುಜಗಳು.

೮. ನೀರಿನಿಂದ ನೆನೆದ ನೆಲದಲ್ಲಿನ ಅನ್ನವು ಆವಿಯರೂಪವಾಗಿರುತ್ತದೆ. ವಾಯು ಬೀಸುತ್ತಲೂ ಭೂಮಿಯಲ್ಲಿ ಬೀಜವಾಗಿ ಆಗುತ್ತದೆ.

**ಯಥಾ ತಪ್ತಾನಿ ಬೀಜಾನಿ ಸಂಸಿಕ್ತಾನ್ಯಂಭಸಾ ಪುನಃ ।**
**ಊಷ್ಮಣಾ ಚ ಮೃದುತ್ವಂ ಚ ಮೂಲಭಾವಂ ಪ್ರಯಾತಿ ಚ　　॥ ೯ ॥**

**ತನ್ಮೂಲಾದಂಕುರೋತ್ಪತ್ತಿರಂಕುರಾತ್ಪರ್ಣಸಂಭವಃ ।**
**ಪರ್ಣಾನ್ನಾಳಂ ತತಃ ಕಾಂಡಂ ತತ್ಕಾಂಡಾತ್ಪ್ರಭವಃ ಪುನಃ　　॥ ೧೦ ॥**

**ಪ್ರಭವಾಚ್ಚ ಭವೇತ್ ಕ್ಷೀರಂ ಕ್ಷೀರಾತ್ತಂಡುಲಸಂಭವಃ ।**
**ತಂಡುಲಾಚ್ಚ ತತಃ ಪಕ್ವಾತ್ಸ್ವಜನ್ತ್ಯೌಷಧಯಸ್ತಥಾ　　॥ ೧೧ ॥**

**ಯವಾದ್ಯಾಃ ಶಾಲಿಸಂಪೂರ್ವಾಃ ಶ್ರೇಷ್ಠಾಸ್ತತ್ರ ದಶ ಸ್ಮೃತಾಃ ।**
**ಓಷಧ್ಯಃ ಫಲಸಾರಾ ಯಾಃ ಶೇಷಾಶ್ಶುದ್ಧಾಃ ಪ್ರಕೀರ್ತಿತಾಃ　　॥ ೧೨ ॥**

**ಏತಾಸ್ತೃಣಾ ಮರ್ದಿತಾಶ್ಚ ಮುನಿಭಿಃ ಪೂರ್ವಸಂಸ್ಕೃತಾಃ ।**
**ಶೂರ್ಪೋಲೂಖಲಪಾತ್ರಾದ್ಯೈಃ ಸ್ಥಾಲಿಕೋದಕವನ್ಹಿಭಿಃ　　॥ ೧೩ ॥**

---

೯. ಉಷ್ಣದಿಂದ ಬೆಂದ ಬೀಜವು, ನೀರಿನಿಂದ ನೆನೆದುನೆನೆದು ಮೃದುವಾಗುತ್ತದೆ. ಆ ಮೃದುತ್ವವೇ ಅಂಕುರಕ್ಕೆ ಮೂಲವು.

೧೦. ಆ ಮೂಲದಿಂದ ಮೊಳಕೆ ಬರುತ್ತದೆ. ಆ ಮೊಳಕೆಯಿಂದ ಎಲೆಗಳು ಹುಟ್ಟುತ್ತವೆ. ಎಲೆಗಳಿಂದ ನಾಳ ಹುಟ್ಟುತ್ತದೆ. ನಾಳದಿಂದ ಕಾಂಡ ಉಂಟಾಗುತ್ತದೆ. ಕಾಂಡದಿಂದ ಹೊಡೆಯುಂಟಾಗುತ್ತದೆ.

೧೧. ಆ ಹೊಡೆಯಿಂದ ಹಾಲೂ, ಹಾಲಿನಿಂದ ಅಕ್ಕಿಯೂ, ಅಕ್ಕಿಯಿಂದ ಪಾಕವೂ ಉಂಟಾಗುತ್ತದೆ.

೧೨. ಈರೀತಿ ಭತ್ತವೇ ಮೊದಲಾದ ಯವಧಾನ್ಯಗಳುಂಟಾಗುತ್ತವೆ. ಇವುಗಳಲ್ಲಿ ಹತ್ತುವಿಧಗಳಿವೆ. ಇವು ಓಷಧಿಗಳು, ಫಲವೇ ಸಾರವಾಗಿ ಉಳ್ಳವು, ಶ್ರೇಷ್ಠವಾದುವು ಮತ್ತು ಶುದ್ಧವಾದುವು.

೧೩. ಈ ಓಷಧಿಗಳನ್ನು ಮುನಿಗಳು ಮರ್ದಿಸಿ ಮೊರ, ಒರಳು, ಒನಕೆ, ಪಾತ್ರೆ, ಸ್ಥಾಲಿಪಾಕ, ನೀರು, ಬೆಂಕಿಗಳಿಂದ ಸಂಸ್ಕಾರಮಾಡಿರುತ್ತಾರೆ.

**ಷಡ್ವಿಧಾ ಹಿ ಸ್ವಭೇದೇನ ಪರಿಣಾಮಂ ವ್ರಜಂತಿ ತಾಃ ।**
**ಅನ್ಯೋನ್ಯರಸಸಂಯೋಗಾದನೇಕಸ್ವಾದತಾಂ ಗತಾಃ ॥ ೧೪ ॥**

**ಭಕ್ಷ್ಯಂ ಭೋಜ್ಯಂ ಪೇಯಲೇಹ್ಯಂ ಚೋಷ್ಯಂ ಖಾದ್ಯಂ ಚ ಭೂಪತೇ ।**
**ತಾಸಾಂ ಭೇದಾಷ್ಷಡಂಗಾಶ್ಚ ಮಧುರಾದ್ಯಾಶ್ಚ ಷಡ್ಗುಣಾಃ ॥ ೧೫ ॥**

**ತದನ್ನಂ ಪಿಂಡಕವಲ್ಯೈರ್ಗ್ರಾಸೈರ್ಭುಕ್ತಂ ಚ ದೇಹಿಭಿಃ ।**
**ಅನ್ತಸ್ಥೂಲಾಶಯೇಸರ್ವಪ್ರಾಣಾನ್ ಸ್ಥಾಪಯತಿ ಕ್ರಮಾತ್ ॥ ೧೬ ॥**

**ಅಪಕ್ವಭುಕ್ತಮಾಹಾರಂ ಸ ವಾಯುಃ ಕುರುತೇ ದ್ವಿಧಾ ।**
**ಸಂಪ್ರವಿಶ್ಯಾನ್ನಮಧ್ಯೇ ತು ಪಕ್ವಂ ಕೃತ್ವಾ ಪೃಥಗ್ಗುಣಂ ॥ ೧೭ ॥**

**ಅಗ್ನೇರ್ಮೂರ್ಧ್ನಿ ಜಲಂ ಸ್ಥಾಪ್ಯಂ ತದನ್ನಂ ಚ ಜಲೋಪರಿ ।**
**ಜಲಸ್ಯಾಧಃ ಸ್ವಯಂ ಪ್ರಾಣಾಃ ಕೋಷ್ಠಾಗ್ನಿಂ ಧಮತೇ ಶನೈಃ ॥ ೧೮ ॥**

---

೧೪. ಅವು ತಮ್ಮ ರುಚಿ ಭೇದದಿಂದ ಆರುಬಗೆಯಾಗಿರುತ್ತವೆ. ಆ ಆರುಬಗೆಯನ್ನು ಒಂದೊಂದಕ್ಕೆ ಸೇರಿಸಿದರೆ ಅನೇಕಬಗೆಯಾದ ರುಚಿಯನ್ನು ಹೊಂದುತ್ತವೆ.

೧೫. ತಿಂಡಿಗಳು, ಊಟಗಳು, ಕುಡಿತಗಳು, ನಂಚಿಕೊಳ್ಳುವ ಪದಾರ್ಥಗಳು, ಸೊರೆದುಕೊಂಡು ಊಟಮಾಡುವ ಪದಾರ್ಥಗಳು, ಕಡಿದು ತಿನ್ನುವ ತಿಂಡಿಗಳು ಎಂದು ಈ ರೂಪದಲ್ಲಿ ಆರು ಭೇದಗಳಾಗುತ್ತವೆ. ಮಧುರಾದಿ ಆರು ಗುಣಗಳಿಂದ ಇವು ಮತ್ತೆ ಆರು ರೂಪಗಳು ಆಗುತ್ತವೆ.

೧೬. ಆ ಅನ್ನವು ಪಿಂಡ, ಕವಳ, ಗ್ರಾಸ ಈ ರೂಪದಿಂದ ಪ್ರಾಣಿಗಳಿಂದ ತಿನ್ನಲ್ಪಟ್ಟು ಈ ಸ್ಥೂಲದೇಹದಲ್ಲಿ ಒಳಗಡೆಯಿರುವ ಎಲ್ಲಾ ಪ್ರಾಣಗಳನ್ನೂ ಸರಿಯಾದ ರೀತಿಯಲ್ಲಿಡುತ್ತದೆ.

೧೭. ನಾವು ತಿಂದ ಅನ್ನದ ಮಧ್ಯದಲ್ಲಿ ವಾಯುವು ಪ್ರವೇಶಿಸಿ ಮೊದಲು ಎರಡು ಭಾಗಗಳನ್ನಾಗಿ ಮಾಡುತ್ತದೆ. ಅನಂತರ ಅದನ್ನು ಪಕ್ವ ಮಾಡುತ್ತದೆ

೧೮. ಅಗ್ನಿಯ ಮೇಲೆ ನೀರು ಇದ್ದು ಆ ನೀರಿನ ಮೇಲೆ ಅನ್ನವನ್ನಿಡುತ್ತದೆ. ನೀರಿನ ಕೆಳಗಡೆ ಪ್ರಾಣವಾಯುವು ಜಠರಾಗ್ನಿಯನ್ನು ಊದಿ ಹತ್ತಿಸುತ್ತದೆ.

ವಾಯುನಾ ಧಮ್ಯಮಾನೋಽಗ್ನಿರತ್ಯುಷ್ಣಂ ಕುರುತೇ ಜಲಂ ।
ತದನ್ನಮುಷ್ಣಯೋಗೇನ ಸಮಂತಾತ್ಪಚ್ಯತೇ ಪುನಃ ॥ ೧೯ ॥

ದ್ವಿಧಾ ಭವತಿ ತತ್ಪಕ್ವಂ ಕಿಟಂ ಚಾಪಿ ಪೃಥಗ್ರಸಂ ।
ಮಲೈರ್ದ್ವಾದಶಭಿಃ ಕಿಟಂ ಭಿನ್ನದೇಹಾದ್ಬಹಿರ್ವ್ರಜೇತ್ ॥ ೨೦ ॥

ಕರ್ಣಾಕ್ಷಿನಾಸಿಕಾಜಿಹ್ವಾದನ್ತೋಷ್ಠಪ್ರಜನಂ ಗುದಂ ।
ಮಲಾನ್ಸ್ರವೇತ್ ಕಫ ಸ್ವೇದೋ ವಿಣ್ಮೂತ್ರಂ ದ್ವಾದಶ ಸ್ಮೃತಾಃ ॥ ೨೧ ॥

ತಾಭ್ಯಾಂ ವೈ ಪ್ರತಿಬದ್ಧಾಶ್ಚ ಸರ್ವಾ ನಾಡ್ಯಸ್ಸಮಂತತಃ ।
ತಾಸಾಂ ಮುಖೇ ತತಸ್ಸೂಕ್ಷ್ಮಂ ಪ್ರಾಣಃ ಸ್ಥಾಪಯತೇ ರಸಂ ॥ ೨೨ ॥

ರಸೇನ ತೇನ ನಾಡೀಸ್ತಾಃ ಪ್ರಾಣಃ ಪೂರಯತೇ ಪುನಃ ।
ಸಂತರ್ಪಯಂತಿ ತಾ ನಾಡ್ಯಃ ಪೂರ್ಣಾ ದೇಹಂ ಸಮಂತತಃ ॥ ೨೩ ॥

---

೧೯. ವಾಯುವಿನಿಂದ ಹೊತ್ತಿಸಲ್ಪಟ್ಟ ಬೆಂಕಿಯು ನೀರನ್ನು ಕಾಯಿಸುತ್ತದೆ. ಆ ಉಷ್ಣದಿಂದ ಅನ್ನವು ಎಲ್ಲಾ ಕಡೆಯಲ್ಲೂ ಪಾಕಹೊಂದುತ್ತದೆ.

೨೦. ಆ ಅನ್ನವು ಕಿಟ್ಟ, ರಸ, ಎಂದು ಎರಡು ಭಾಗವಾಗುತ್ತದೆ. ದೇಹದ ಹನ್ನೆರಡು ಶುದ್ಧಕರಣಾಂಗಗಳಿಂದ ಆ ಕಿಟ್ಟರೂಪದ ಮಲವು ಹೊರಗೆ ಹೋಗುತ್ತದೆ.

೨೧. ಚರ್ಮ, ಕಿವಿ, ಕಣ್ಣು, ಮೂಗು, ನಾಲಿಗೆ, ಹಲ್ಲು, ತುಟಿ, ಮೂತ್ರಜನಕಾಂಗ, ಪೃಷ್ಠ, ಮಲ, ಮೂತ್ರ, ಇವೂ ಹನ್ನೆರಡು ಭಾಗಗಳಾಗಿಹೋಗುತ್ತವೆ. ಈ ಮಲಗಳು ಅಂಗಭೇದದಿಂದ ಹೆಸರುಗಳಲ್ಲಿ ವ್ಯತ್ಯಾಸಹೊಂದುತ್ತವೆ.

೨೨—೨೩. ಆ ರಸಗಳಿಂದಲೂ ಅಮೇಧ್ಯಗಳಿಂದಲೂ, ಎಲ್ಲಾ ನರಗಳೂ ಕಟ್ಟಲ್ಪಡುತ್ತವೆ. ಪ್ರಾಣವಾಯುವು ಆ ನಾಡಿಗಳ ಮುಖದಲ್ಲಿ ಸೂಕ್ಷ್ಮವಾದ ರಸವನ್ನಿಟ್ಟು ಆ ರಸದಿಂದ ಆ ನರಗಳನ್ನು ತುಂಬಿರುತ್ತದೆ. ಪೂರ್ಣವಾದ ಆ ನಾಳಗಳು ದೇಹದಲ್ಲೆಲ್ಲಾ ಕಡೆಗೂ ರಸವನ್ನು ಕೊಡುತ್ತಾ ತೃಪ್ತಿಪಡಿಸುತ್ತದೆ.

ತತಸ್ಸ ನಾಡೀಮಧ್ಯಸ್ಥಃ ಶರೀರೇಣೋಷ್ಮಣಾ ರಸಃ ।
ಪಚ್ಯತೇ ಪಚ್ಯಮಾನಸ್ಯ ಭವೇತ್ಪಾಕದ್ವಯಂ ಪುನಃ ॥ ೨೪ ॥

ತ್ವಙ್ಮಾಂಸಾಸ್ಥಿ ಮಜ್ಜಾ ಮೇದೋ ರುಧಿರಂ ಚ ಪ್ರಜಾಯತೇ ।
ರಕ್ತಾಲ್ಲೋಮಾನಿ ಮಾಂಸಂ ಚ ಕೇಶಾಸ್ಸ್ನಾಯುಶ್ಚ ಮಾಂಸತಃ ॥ ೨೫ ॥

ಸ್ನಾಯೋರ್ಮಜ್ಜಾ ತಥಾಸ್ಥೀನಿ ವಸಾ ಮಜ್ಜಾಸ್ಥಿಸಂಭವಾ ।
ಮಜ್ಜಾಕಾರೇಣ ವೈ ಕಲ್ಪಂ ಶುಕ್ರಂ ಚ ಪ್ರಸವಾತ್ಮಕಂ ॥ ೨೬ ॥

ಇತಿ ದ್ವಾದಶ ಅನ್ನಸ್ಯ ಪರಿಣಾಮಾಃ ಪ್ರಕೀರ್ತಿತಾಃ ।
ಶುಕ್ರೇಽನ್ನಸ್ಯ ಪರಿಣಾಮಃ ಶುಕ್ರಾದ್ದೇಹಸ್ಯ ಸಂಭವಃ ॥ ೨೭ ॥

ಋತುಕಾಲೇ ಯದಾ ಶುಕ್ರಂ ನಿರ್ದೋಷಂ ಯೋನಿಸಂಸ್ಥಿತಂ ।
ತದಾ ತದ್ವಾಯುನಾ ಸ್ಪೃಷ್ಟಂ ಸ್ತ್ರೀರಕ್ತಮೇಕತಾಂ ನಯೇತ್ ॥ ೨೮ ॥

---

೨೪. ಆ ನರಗಳ ಮಧ್ಯದಲ್ಲಿರುವ ಶರೀರದ ಭಾಗಗಳಲ್ಲಿರುವ ರಸವು ಪುನಃ ಕುದಿಸಲ್ಪಡುತ್ತದೆ. ಕುದಿದ ಆ ರಸವು ಪುನಃ ಎರಡು ವಿಧವಾಗುತ್ತದೆ

೨೫. ಆ ರಸವು ಚರ್ಮ, ಮಾಂಸ, ಮೂಳೆ, ಕೊಬ್ಬು, ಮೇದಸ್ಸು ರಕ್ತವಾಗಿ ಆಗುತ್ತದೆ. ರಕ್ತದಿಂದ ಕೂದಲು, ಮಾಂಸ, ಸಣ್ಣ ಕೂದಲುಗಳೂ, ಮಾಂಸದಿಂದ ನರಗಳೂ, ಉಂಟಾಗುತ್ತವೆ.

೨೬. ನರಗಳಿಂದ ಕೊಬ್ಬು, ಮೂಳೆಗಳೂ. ಉಂಟಾಗುತ್ತವೆ. ಮಜ್ಜದಿಂದಲೂ, ಮೂಳೆಯಿಂದಲೂ ಕೊಬ್ಬುಂಟಾಗುತ್ತದೆ. ಆ ಮಜ್ಜದ ಆಕಾರವಾಗಿಯೇ ಗರ್ಭಧಾರಣೆಗೆ ಯೋಗ್ಯವಾದ ಶುಕ್ರಶೋಣಿತಗಳು ಉಂಟಾಗುತ್ತವೆ.

೨೭. ಈ ರೀತಿ ಅನ್ನದಿಂದ ಹನ್ನೆರಡು ವಿಧವಾದ ಪರಿಣಾಮಗಳುಂಟಾಗುತ್ತವೆ. ಅನ್ನದ ಪರಿಣಾಮವು ಶುಕ್ರರೂಪವಾಗಿ ಆಗಿ ಆ ಶುಕ್ರದಿಂದ ದೇಹೋತ್ಪತ್ತಿಯಾಗುತ್ತದೆ.

೨೮. ನಿರ್ದೋಷವಾದ ಈ ಶುಕ್ರವು ಋತುಕಾಲದಲ್ಲಿ ಯೋನಿಯಲ್ಲಿ ಸೇರಿದರೆ ಆಗ ಪ್ರಾಣವಾಯುವಿನಿಂದ ಸ್ಪರ್ಶಿತವಾಗಿ ಸ್ತ್ರೀರಕ್ತದೊಡನೆ ಸೇರಿ ಒಂದಾಗುತ್ತದೆ.

ವಿಸರ್ಗಕಾಲೇ ಶುಕ್ರಸ್ಯ ಜೀವಃ ಕಾರಣಸಂಯುತಃ ।
ನಿತ್ಯಂ ಪ್ರವಿಶತೇ ಯೋನಿಂ ಕರ್ಮಭಿಸ್ಸ್ವೈರ್ವಿಚಾಲಿತಃ ॥ ೨೯ ॥

ಶುಕ್ರಂ ಚ ರಕ್ತಮೇಕಸ್ಥಮೇಕಾಹಾತ್ಕಲಲಂ ಭವೇತ್ ।
ಪಂಚರಾತ್ರೇಣ ಕಲಲಂ ಬುದ್ಬುದತ್ವಂ ತತೋ ವ್ರಜೇತ್ ॥ ೩೦ ॥

ಭವತೇ ಮಾಸಮಾತ್ರೇಣ ಪಂಚಧಾ ಜಾಯತೇ ಪುನಃ ।
ಗ್ರೀವಾ ಶಿರಶ್ಚ ಸ್ಕಂಧಶ್ಚ ಪೃಷ್ಠವಂಶಸ್ತಥೋದರಂ ॥ ೩೧ ॥

ಪಾಣೀ ಪಾದೌ ತಥಾ ಪಾರ್ಶ್ವೌ ಕಟಿರ್ಗಾತ್ರಂ ತಥೈವ ಚ ।
ಮಾಸದ್ವಯೇನ ಸರ್ವಾಣಿ ಕ್ರಮಶಃ ಸಂಭವಂತಿ ಚ ॥ ೩೨ ॥

ತ್ರಿಭಿರ್ಮಾಸೈಃ ಪ್ರಜಾಯನ್ತೇ ಶತಶೋಂಕುರಸಂಭವಾಃ ।
ಮಾಸೈಶ್ಚತುರ್ಭಿರ್ಜಾಯತೇ ಅಂಗುಳ್ಯಾದಿ ಯಥಾಕ್ರಮಂ ॥ ೩೩ ॥

---

೨೯. ತನ್ನ ಪೂರ್ವಕರ್ಮದಿಂದ ಚಾಲಿತನಾದ ಜೀವನು ಕಾರಣಶರೀರದೊಡನೆ ಯೋನಿಯಲ್ಲಿ ಶುಕ್ರವು ಬೀಳುವಾಗಲೆಲ್ಲಾ ಪ್ರವೇಶಿಸುತ್ತಲೇ ಇರುತ್ತಾನೆ.

೩೦. ರಕ್ತವೂ, ಶುಕ್ರವೂ, ಒಂದಾಗಿ, ಒಂದೇ ದಿನದಲ್ಲಿ ಕಲಲ (ಅಂಬಲಿ) ರೂಪವಾಗಿ ಆಗುತ್ತವೆ. ಆ ಕಲಲವು ಐದುದಿನದ ಮೇಲೆ ಬುದ್ಬುದ (ಗುಳ್ಳೆ) ರೂಪವನ್ನು ಹೊಂದುತ್ತದೆ.

೩೧. ಒಂದು ತಿಂಗಳಾಗುತ್ತಲೂ, ಆ ಬುದ್ಬುದವು ಐದುಬಗೆ ವ್ಯತ್ಯಾಸ ಹೊಂದುತ್ತದೆ. ಕತ್ತು, ತಲೆ, ಭುಜ, ಬೆನ್ನಿನಮೂಳೆ, ಹೊಟ್ಟೆ ಈ ಐದೂ ಉಂಟಾಗುತ್ತದೆ.

೩೨-೩೩. ಕೈ, ಕಾಲು, ಪಕ್ಕಗಳು, ಸೊಂಟ, ಶರೀರ ಇವು ಕ್ರಮವಾಗಿ ಎರಡು ತಿಂಗಳಿಗೆ ಉಂಟಾಗುತ್ತವೆ. ಮೂರುತಿಂಗಳವೇಳೆಗೆ ಸೂಕ್ಷ್ಮಾವಯವಗಳ ಮೊಳಕೆಗಳಾಗುತ್ತವೆ. ನಾಲ್ಕನೇ ತಿಂಗಳಲ್ಲಿ ಬೆರಳುಗಳು ಹುಟ್ಟುತ್ತವೆ.

ಮುಖಂ ನಾಸಾ ಚ ಕರ್ಣೌ ಚ ಮಾಸೈರ್ಜಾಯನ್ತಿ ಪಂಚಭಿಃ ।
ದಂತಪಙ್ಕ್ತಿಸ್ತಥಾ ಜಿಹ್ವಾ ಜಾಯತೇ ಚ ತತಃ ಪುನಃ ॥ ೩೪ ॥

ಕರ್ಣಯೋಶ್ಚ ಭವೇಚ್ಛಿದ್ರಂ ಷಣ್ಮಾಸಾಭ್ಯಂತರೇ ಪುನಃ ।
ಪಾಯುರ್ಮೇಢ್ರಮುಪಸ್ಥಂ ಚ ಶಿಶ್ನಶ್ಚಾಪ್ಯುಪಜಾಯತೇ ॥ ೩೫ ॥

ಸಂಧಯೋ ಯೇ ಚ ಗಾತ್ರೇಷು ಮಾಸೈರ್ಜಾಯಂತಿ ಸಪ್ತಭಿಃ ॥ ೩೬ ॥

ಪ್ರತ್ಯಂಗಮಂಗಂ ಸಂಪೂರ್ಣಂ ಶಿರಃ ಕೇಶಸಮನ್ವಿತಂ ।
ವಿಭಕ್ತಾವಯವಂ ಸ್ಪಷ್ಟಂ ಪುನರ್ಮಾಸಾಷ್ಟಮೇವ ಚ ॥ ೩೭ ॥

ಪಂಚಾತ್ಮಕಸಮಾಯುಕ್ತಃ ಪರಿಪಕ್ವಶರೀರಕಃ ।
ಮಾತುರಾಹಾರವೀರ್ಯೇಣ ಷಡ್ವಿಧೇನ ರಸೇನ ಚ ॥ ೩೮ ॥

---

೩೪. ಐದನೇ ತಿಂಗಳಲ್ಲಿ ಮುಖ, ಮೂಗು, ಕಿವಿ, ಇವು ಹುಟ್ಟುತ್ತವೆ. ಹಲ್ಲಿನ ಪಂಕ್ತಿಯು, ಒಸಡು, ನಾಲಗೆ, ಕಿವಿಯ ರಂಧ್ರಗಳು ಆರನೆಯ ತಿಂಗಳಲ್ಲಿ ಹುಟ್ಟುತ್ತವೆ.

೩೫-೩೬. ಅಂಡು, ತರಡು, ಯೋನಿ, ಲಿಂಗ, ಶರೀರದಲ್ಲಿರುವ ಕೀಲುಗಳು ಏಳನೇ ತಿಂಗಳಲ್ಲಿ ಹುಟ್ಟುತ್ತವೆ.

೩೭. ಅಂಗಗಳೆಲ್ಲವೂ ಸಂಪೂರ್ಣವಾಗಿ, ಅವು ಬೇರೆಬೇರೆ ಕಾಣುವಂತೆಯೂ, ತಲೆಯಲ್ಲಿ ಕೂದಲೂ ಸಹ ಎಂಟನೇ ತಿಂಗಳಲ್ಲಾಗುತ್ತದೆ.

೩೮. ಈರೀತಿ ಪಂಚಭೂತಗಳಿಂದ ಕೂಡಿದ ಪರಿಪಕ್ವವಾದ ಶರೀರವುಳ್ಳ ಈ ಪಿಂಡವು ತಾಯಿಯು ತೆಗೆದುಕೊಳ್ಳುವ ಆಹಾರದ ಆರುಬಗೆಯ ರಸಗಳನ್ನು ಹೊಕ್ಕಳಿನಲ್ಲಿ ಸಂಬಂಧಿಸಿಕೊಂಡಿರುವ ನಾಳದಿಂದ ತೆಗೆದುಕೊಳ್ಳುತ್ತಾ ದಿನದಿನಕ್ಕೂ ಬೆಳೆಯುತ್ತದೆ.

**ನಾಭಿಸೂತ್ರನಿಬದ್ಧೇನ ವರ್ಧತೇ ಸ ದಿನೇ ದಿನೇ ।**
**ತತಸ್ಸ್ಮೃತಿಂ ಲಭೇಜ್ಜೀವಃ ಸಂಪೂರ್ಣೇಽಸ್ಮಿನ್ ಶರೀರಕೇ ।**
**ದುಃಖಂ ಸುಖಂ ವಿಜಾನಾತಿ ನಿದ್ರಾಸುಪ್ತಂ ಪುರಾಕೃತಂ ॥ ೩೯ ॥**

**ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಪುನರ್ಮೃತಃ ।**
**ನಾನಾಯೋನಿಸಹಸ್ರಾಣಿ ಮಯಾ ದೃಷ್ಟಾನ್ಯನೇಕಶಃ ॥ ೪೦ ॥**

**ಅಧುನಾ ಜಾತಮಾತ್ರೋಽಹಂ ಪ್ರಾಪ್ತಸಂಸ್ಕಾರ ಏವ ಚ ।**
**ತತಶ್ಶ್ರೇಯಃ ಕರಿಷ್ಯಾಮಿ ಯೇನ ಗರ್ಭೇ ನ ಸಂಭವಃ ॥ ೪೧ ॥**

**ಗರ್ಭಸ್ಥಶ್ಚಿಂತಯತ್ಯೇವಮಹಂ ಗರ್ಭಾದ್ವಿನಿಸ್ಸೃತಃ ।**
**ಅಧ್ಯೇಷ್ಯಾಮಿ ಪರಂ ಜ್ಞಾನಂ ಸಂಸಾರವಿನಿವರ್ತಕಂ ॥ ೪೨ ॥**

**ಅವಶ್ಯಂ ಗರ್ಭದುಃಖೇನ ಮಹತಾ ಪರಿಪೀಡಿತಃ ।**
**ಜೀವಃ ಕರ್ಮವಶಾದಾಸ್ತೇ ಮೋಕ್ಷೋಪಾಯಂ ವಿಚಿನ್ತಯನ್ ॥ ೪೩ ॥**

---

೩೯. ಈ ಶರೀರವು ಸಂಪೂರ್ಣವಾಗುತ್ತಲೂ, ಜೀವನು ಜ್ಞಾನವನ್ನು ಹೊಂದುತ್ತಾನೆ. ನಿದ್ರೆಯಿಂದ ಮಲಗಿರುತ್ತಾ ಪೂರ್ವಜನ್ಮದಲ್ಲಿ ಮಾಡಿದ ಸುಖದುಃಖಗಳನ್ನು ಈರೀತಿ ಯೋಚಿಸುತ್ತಿರುತ್ತಾನೆ.

೪೦. ಸತ್ತೆ, ಹುಟ್ಟಿದೆ, ಮತ್ತೆಸತ್ತೆ, ಮತ್ತೆಹುಟ್ಟಿದೆ. ಇದೇ ರೀತಿ ಬಗೆಬಗೆಯಾದ ಅನೇಕ ಜನ್ಮಗಳನ್ನು ಅನೇಕಬಾರಿ ನೋಡಿದ್ದೇನೆ.

೪೧. ಈಗ ಹುಟ್ಟುತ್ತಲೂ, ನನಗೆ ಸಂಸ್ಕಾರಗಳೆಲ್ಲಾ ಆದಮೇಲೆ ಪುನಃ ಗರ್ಭದಲ್ಲಿ ಹುಟ್ಟದಂತೆ ಒಳ್ಳೆಯ ಗತಿಯನ್ನು ಸಾಧಿಸುತ್ತೇನೆ.

೪೨. ನಾನು ಗರ್ಭದಿಂದ ಹೊರಗೆಹೋದಮೇಲೆ ಸಂಸಾರನಾಶಕವಾದ ವೇದಾಂತಜ್ಞಾನವನ್ನು ಅಧ್ಯಯನಮಾಡುತ್ತೇನೆ.

೪೩. ಈರೀತಿಯಾಗಿ ಜೀವನು ಕರ್ಮವಶದಿಂದ ಗರ್ಭದುಃಖದಿಂದ ಪೀಡಿತನಾಗಿ ಮೋಕ್ಷೋಪಾಯವನ್ನು ಯೋಚಿಸುತ್ತಲಿರುವನು.

ಯಥಾ ಗಿರಿಗುಹಾಕ್ರಾನ್ತಃ ಕಶ್ಚಿದ್ದುಃಖೇನ ತಿಷ್ಠತಿ ।
ತಥಾ ಜರಾಯುಣಾ ದೇಹೇ ದುಃಖಂ ತಿಷ್ಠತಿ ದುಃಖಿತಃ ॥ ೪೪ ॥

ಪತಿತಸ್ಸಾಗರೇ ಯದ್ವದ್ದುಃಖಮಾಸ್ತೇ ಸಮಾಕುಲಃ ।
ಗರ್ಭೋದಕೇನ ಸಿಕ್ತಾಂಗಸ್ತಥಾಸ್ತೇ ವ್ಯಾಕುಲಾತ್ಮಕಃ ॥ ೪೫ ॥

ಲೋಹಕುಂಭೇ ಯಥಾ ನ್ಯಸ್ತಃ ಪಚ್ಯತೇ ಕಶ್ಚಿದಗ್ನಿನಾ ।
ಗರ್ಭಕುಂಭೇ ತಥಾ ಕ್ಷಿಪ್ತಃ ಪಚ್ಯತೇ ಜಠರಾಗ್ನಿನಾ ॥ ೪೬ ॥

ಸೂಚೀಭಿರಗ್ನಿವರ್ಣಾಭಿರ್ದುರ್ಭಿನ್ನಸ್ಯ ನಿರಂತರಂ ।
ಯದ್ದುಃಖಂ ಜಾಯತೇ ತಸ್ಯ ತದ್ಗರ್ಭೇಽಷ್ಟಗುಣಂ ಭವೇತ್ ॥ ೪೭ ॥

ಗರ್ಭವಾಸಾತ್ಪರಂ ವಾಸಂ ಕಷ್ಟಂ ನೈವಾಸ್ತಿ ಕುತ್ರಚಿತ್ ।
ದೇಹಿನಾಂ ದುಃಖಮತುಳಂ ಸುಘೋರಮಪಿ ಸಂಕಟಂ ॥ ೪೮ ॥

---

೪೪. ಪರ್ವತದ ಗುಹೆಯೊಳಗೆ ಸಿಕ್ಕಿಕೊಂಡವನೊಬ್ಬನು ಹೇಗೆ ದುಃಖದಿಂದ ಇರುತ್ತಾನೆಯೋ ಹಾಗೆ ಈ ದೇಹವುಳ್ಳ ಜೀವವು ಜರಾಯುವೆಂಬ ನಾಳದ ಪಂಜರದಿಂದ ಸುತ್ತಲ್ಪಟ್ಟಿದ್ದು ದುಃಖಪಡುತ್ತಿರುವುದು.

೪೫. ಸಮುದ್ರದಲ್ಲಿ ಬಿದ್ದವನು ಹೇಗೆ ದುಃಖದಿಂದಿರುತ್ತಾನೆಯೋ ಹಾಗೆ ಜೀವನು ಗರ್ಭದ ನೀರಿನಿಂದ ನೆನೆದ ಅವಯವವುಳ್ಳವನಾಗಿ ದುಃಖಗೊಂಡಿರುತ್ತಾನೆ.

೪೬. ಕಬ್ಬಿಣದ ಬಿಂದಿಗೆಯೊಳಗೆ ಹಾಕಿ ಬೇಯಿಸಿದರೆ ಹೇಗೆ ದುಃಖಪಡುತ್ತಾನೆಯೋ ಅಂತೆಯೇ ಗರ್ಭಕುಂಭದಲ್ಲಿ ಬಿದ್ದು ದುಃಖಿಸುತ್ತಾನೆ.

೪೭. ಸೂಜಿಗಳನ್ನು ಕಾಯಿಸಿ ಚುಚ್ಚುತ್ತಿದ್ದರೆ ಹೇಗೆ ದುಃಖವಾಗುತ್ತದೆಯೋ ಹಾಗೆಯೇ ಗರ್ಭದಲ್ಲಿರುವವನಿಗೆ ಅದರ ಎಂಟರಷ್ಟು ದುಃಖವಾಗುತ್ತದೆ.

೪೮. ಗರ್ಭವಾಸಕ್ಕಿಂತ ಹೆಚ್ಚಾದ ಕಷ್ಟವು ಮತ್ತೊಂದಿಲ್ಲ. ಅದು ಪ್ರಾಣಿಗಳಿಗೆ ಬಹು ಘೋರವಾದ ಸಂಕಟವು.

ಇತ್ಯೇತದ್ಗರ್ಭದುಃಖಂ ಹಿ ಪ್ರಾಣಿನಾಂ ಪರಿಕೀರ್ತಿತಂ ।
ಚರಸ್ಥಿರಾಣಾಂ ಸರ್ವೇಷಾಮಾತ್ಮಗರ್ಭಾನುರೂಪತಃ ॥ ೪೯ ॥

ಗರ್ಭಾತ್ಕೋಟಿಗುಣಂ ಪೀಡಾ ಯೋನಿರ್ಜನ್ಮನಿ ಪೀಡನಾತ್ ।
ಸಂಮೂರ್ಛಿತಸ್ಯ ಜಾಯೇತ ಜಾಯಮಾನಸ್ಯ ದೇಹಿನಃ ॥ ೫೦ ॥

ಇಕ್ಷುವತ್ಪೀಡ್ಯಮಾನಸ್ಯ ಪಾಪಮುದ್ಗರಕೇಣ ಚ ।
ಗರ್ಭಾನ್ನಿಷ್ಕ್ರಮಮಾಣಸ್ಯ ಪ್ರಬಲೈಸ್ಸೂತಿವಾಯುಭಿಃ ॥ ೫೧ ॥

ಜಾಯತೇ ಸುಮಹದ್ದುಃಖಂ ಪರಿತ್ರಾಣಂ ನ ವಿಂದತಿ ।
ಯಂತ್ರೇಣ ಪೀಡ್ಯಮಾನಾಸ್ಸ್ಯುರ್ನಿಸ್ಸಾರಾಶ್ಚ ಯಥೇಕ್ಷವಃ ।
ತಥಾ ಶರೀರಂ ಯೋನಿಸ್ಥಂ ಪಾತ್ಯತೇ ಯಂತ್ರಪೀಡನಾತ್ ॥ ೫೨ ॥

ಅಸ್ಥಿಮದ್ವರ್ತುಲಾಕಾರಂ ಸ್ನಾಯುಬಂಧನವೇಷ್ಟಿತಂ ।
ರಕ್ತಮಾಂಸವಸಾಕ್ಲಿಷ್ಟಂ ವಿಣ್ಮೂತ್ರದ್ರವ್ಯಭಾಜನಂ ॥ ೫೩ ॥

---

೪೯. ಚರಾಚರ ಪ್ರಾಣಿಗಳ ಯೋಗ್ಯತೆಗನುಸಾರವಾಗಿ ಗರ್ಭದುಃಖವನ್ನು ಹೇಳಿದ್ದಾಯಿತು.

೫೦. ಯೋನಿಯಿಂದ ಹೊರಗೆಬರುತ್ತಿರುವಾಗ ಮೂರ್ಛೆಹೋಗುವ ಸ್ಥಿತಿಯಲ್ಲಿರುವ ಪ್ರಾಣಿಗೆ ಗರ್ಭವಾಸಕ್ಕಿಂತಲೂ ಕೋಟಿಯಷ್ಟು ಹೆಚ್ಚಾಗಿ ಪೀಡೆಯಾಗುತ್ತದೆ.

೫೧. ಪಾಪವೆಂಬ ಮುದ್ಗರದಿಂದ ಕಡಿದು, ಪ್ರಾಣಿಯು ಹೊರಕ್ಕೆಬರುವಾಗ, ಕಬ್ಬನ್ನು ಆಲೆಗೆ ಕೊಟ್ಟಂತೆ ಪೀಡಿಸಲ್ಪಡುತ್ತಾನೆ. ಆಗ ಸೂತಿಕಾವಾಯುವು ಹೊರ ನೂಕುತ್ತಿದ್ದರೆ ಕೋಟಿಪಾಲು ವ್ಯಥೆಯಾಗುತ್ತದೆ.

೫೨. ಆಗ ಬಹು ದುಃಖವುಂಟಾಗುತ್ತದೆ. ರಕ್ಷಕರೇ ಅವಸಿಗಿರುವುದಿಲ್ಲ. ಯಂತ್ರದಿಂದ ಜಜ್ಜಲ್ಪಟ್ಟು ಕಬ್ಬು ಹೇಗೆ ನಿಸ್ಸಾರವಾಗಿ ಹೊರಗೆ ಬೀಳುತ್ತವೆಯೋ ಹಾಗೆಯೇ ಈ ಶರೀರವು ಯೋನಿಯಲ್ಲಿ ಪೀಡಿಸಲ್ಪಟ್ಟು ಹೊರಗೆ ಬೀಳುತ್ತದೆ.

೫೩-೬೦. ಹಾಗೆ ಬರುವ ಶರೀರವು ಹೇಗಿರುವುದೆಂದರೆ:—ಮೂಳೆಯಿಂದ ಕೂಡಿದ ವರ್ತುಲವಾದ ಆಕಾರದಲ್ಲಿರುವುದು. ನರಗಳಿಂದ ಕಟ್ಟಲ್ಪಟ್ಟು ರಕ್ತ, ಮಾಂಸ

**ಕೇಶಲೋಮನಖಚ್ಛನ್ನಂ ರೋಗಾಯತನಮುತ್ತಮಂ ।**
**ವದನೈಕಮಹಾದ್ವಾರಂ ಗವಾಕ್ಷಾಷ್ಟಕಭೂಷಿತಂ ॥ ೫೪ ॥**

**ಓಷ್ಠದ್ವಯಕಪಾಟಂ ತು ದಂತಜಿಹ್ವಾಗಳಾನ್ವಿತಂ ।**
**ನಾಡೀಸ್ವೇದಪ್ರವಾಹಂ ಚ ಕಫಪಿತ್ಥಪರಿಪ್ಲುತಂ ॥ ೫೫ ॥**

**ಜರಾಶೋಕಸಮಾವಿಷ್ಟಂ ಕಾಲವಕ್ತ್ರಾನಲೇ ಸ್ಥಿತಂ ।**
**ಕಾಮಕ್ರೋಧಸಮಾಕ್ರಾಂತಂ ಶ್ವಸನೈರ್ಶ್ಪೋಪಮರ್ದಿತಂ ॥ ೫೬ ॥**

**ಭೋಗತೃಷ್ಣಾತುರಂ ಮೂಢಂ ರಾಗದ್ವೇಷವಶಾನುಗಂ ।**
**ಸವೃತ್ತಾಂಗಂ ಚ ಪ್ರತ್ಯಂಗಂ ಜರಾಯುಪರಿವೇಷ್ಟಿತಂ ॥ ೫೭ ॥**

**ಸಂಕಟೇನಾವಿವಿಕ್ತೇನ ಯೋನಿಮಾರ್ಗೇಣ ನಿರ್ಗತಂ ।**
**ವಿಣ್ಮೂತ್ರರಕ್ತಚಿತ್ರಾಂಗಂ ಷಟ್ಕೋಶಿಕಸಮುದ್ಭವಂ ॥ ೫೮ ॥**

**ಅಸ್ಥಿಪಂಜರಸಂಘಾತಂ ಜ್ಞೇಯಮಸ್ಮಿನ್ಕಳೇಬರೇ ।**
**ಶತತ್ರಯಂ ಷಷ್ಟ್ಯಧಿಕಂ ಪಂಚಪೇಶೀಶತಾನಿ ಚ ॥ ೫೯ ॥**

**ಸಾರ್ಧಾಭಿಸ್ತಿಸೃಭಿಶ್ಛನ್ನಂ ಸಮಂತಾದ್ರೋಮಕೋಟಿಭಿಃ ॥ ೬೦ ॥**

---

ಕೊಬ್ಬುಗಳಿಂದ ಕೂಡಿ ಮಲಮೂತ್ರಗಳೆಂಬ ದ್ರವ್ಯದಿಂದ ಕೂಡಿರುವುದು. ದೊಡ್ಡ ಕೂದಲು ರೋಮಗಳಿಂದಲೂ, ಉಗುರುಗಳಿಂದಲೂ, ಕೂಡಿ ರೋಗಕ್ಕೆ ತವರುಮನೆಯಾಗಿ ನಾಡಿ, ಬೆವರುಗಳಿಂದಲೂ ಕಫ, ಪಿತ್ಥಗಳಿಂದಲೂ ಮುಪ್ಪು ದುಃಖಗಳಿಂದಲೂ ಕೂಡಿ ಯಮನಬಾಯಲ್ಲಿ ಬಿದ್ದಿರುವುದು ಕ್ರಾಮಕ್ರೋಧಗಳಿಂದ ಆಕ್ರಮಿಸಲ್ಪಟ್ಟಿರುವುದು, ಗಾಳಿಯಿಂದ ಬಡಿಯಲ್ಪಟ್ಟಿರುವುದು. ಭೋಗವೆಂಬ ಆಸೆಯಿಂದ ಕೂಡಿ, ರಾಗದ್ವೇಷಕ್ಕೆ ವಶವಾಗಿರುವುದು. ಅವಯವಗಳೆಲ್ಲಾ ಜರಾಯುವೆಂಬ ನಾಳದಿಂದ ಕಟ್ಟಲ್ಪಟ್ಟಿರುವುದು. ಬಹು ಸಣ್ಣದಾದ ಮತ್ತು ಕಷ್ಟವಾದ ಯೋನಿಮಾರ್ಗದಿಂದ ಹೊರಕ್ಕೆ ಬರಬೇಕಾಗಿರುವುದು. ಮಲ, ಮೂತ್ರ, ರಕ್ತಗಳಿಂದ ನೆನೆದ ಶರೀರದಿಂದಲೂ, ಆರು ಕೋಶಗಳಿಂದಲೂ, ಮೂಳೆಯೆಂಬ ಪಂಜರದಿಂದಲೂ ಕೂಡಿ ಈ ಶರೀರವಿರುವುದು. ಅಲ್ಲದೆ ಇದು ಮುನ್ನೂರ ಅರವತ್ತು ಐದನೂರು ಎಂದರೆ ಮೂವತ್ತಾರು ಸಾವಿರದಐನೂರು ಸಣ್ಣಸಣ್ಣ ಗ್ರಂಥಿಗಳುಳ್ಳದ್ದು. ಮೂರೂವರೆಕೋಟಿ ರೋಮಗಳಿಂದ ಕೂಡಿದೆ. ಈರೀತಿ ಶರೀರವು ದಪ್ಪ, ಸಣ್ಣ, ಕಾಣುವ, ಕಾಣದ ಪದಾರ್ಥಗಳಿಂದ ಕೂಡಿರುವುದು.

ಶರೀರಂ ಸ್ಥೂಲಸೂಕ್ಷ್ಮಾಭಿರ್ದೃಶ್ಯಾsದೃಶ್ಯಾಶ್ಚ ತಾ ಸ್ಸ್ಮೃತಾಃ ॥ ೬೦ ॥

ಏತಾವತೀಭಿರ್ನಾಡೀನಾಂ ಕೋಟಿಭಿಸ್ತತ್ಸಮನ್ವಿತಂ ।
ಪ್ರಸ್ವೇದಮಶುಚಿಂ ತಾಭಿರನ್ತರಸ್ಥಂ ಚ ತೇನ ಹಿ ॥ ೬೧ ॥

ದ್ವಾತ್ರಿಂಶದ್ದಶನಾಃ ಪ್ರೋಕ್ತಾ ವಿಂಶತಿಶ್ಚ ನಖಾಃ ಸ್ಮೃತಾಃ ।
ಪಿತ್ತಸ್ಯ ಕುಡವಂ ಜ್ಞೇಯಂ ಕಫಸ್ಯಾರ್ಧಾಢಕಂ ತಥಾ ॥ ೬೨ ॥

ವಸಾಯಾಶ್ಚ ಪಲತ್ರಿಂಶತ್ತದರ್ಧಂ ಕಲಲಸ್ಯ ವಾ ।
ವಾತಾರ್ಬುದಪಲಂ ಜ್ಞೇಯಂ ಪಲಾನಿ ದಶ ಮೇದಸಃ ॥ ೬೩ ॥

ಪಲತ್ರಯಂ ಮಹಾರಕ್ತಂ ಮಜ್ಜಾ ರಕ್ತಾಚ್ಚತುರ್ಗುಣಾ ।
ಶುಕ್ರಾರ್ಧಕುಡವಂ ಜ್ಞೇಯಂ ತದರ್ಧಂ ದೇಹಿನಾಂ ಬಲಂ ॥ ೬೪ ॥

ಮಾಂಸಸ್ಯ ಚೈಕಪಿಂಡೇನ ಪಲಸಾಹಸ್ರಮುಚ್ಯತೇ ।
ರಕ್ತಂ ಪಲಶತಂ ಜ್ಞೇಯಂ ವಿಣ್ಮೂತ್ರಂ ಚಾಪ್ರಮಾಣತಃ ॥ ೬೫ ॥

---

೬೧. ಮೂರೂವರೆಕೋಟಿ ನಾಡಿಗಳಿಂದಲೂ ಕೂಡಿದೆ. ಬೆವರಿನಿಂದ ಅಶುಚಿಯಾಗಿದೆ. ಒಳಗೆ ಆ ನಾಡಿಗಳಿಂದ ಕೂಡಿದೆ. ಅದರಿಂದಲೂ ಅಶುಚಿಯಾಗಿದೆ.

೬೨. ಮೂವತ್ತೆರಡು ಹಲ್ಲುಗಳಿವೆ. ಇಪ್ಪತ್ತು ಉಗುರುಗಳಿವೆ. ಪಿತ್ತವು ಒಂದು ಕುಡವ ಪ್ರಮಾಣವೂ, ಕಫವು ಅರ್ಧಾಢಕ ಪ್ರಮಾಣವೂ ಇರುವುವು.

೬೩. ಕೊಬ್ಬು ಮೂವತ್ತು ಪಲವಿದೆ. ಕಲಲವೆಂಬುದು ಹದಿನೈದು ಪಲವಿದೆ. ಮೇದಸ್ಸು ಹತ್ತು ಪಲವಿದೆ.

೬೪. ಮೂರು ಪಲಗಳು ಮಹಾರಕ್ತವಿದೆ. ಮಜ್ಜೆಯು ಹನ್ನೆರಡು ಪಲವಿದೆ. ಶುಕ್ರವು ಅರ್ಧ ಕುಡವವಿದೆ. ಬಲವು ಕಾಲು ಪಲವಿದೆ,

೬೫. ಮಾಂಸದ ಒಂದು ಉಂಡೆಗೆ ಪಲಸಹಸ್ರವೆಂದು ಹೆಸರು. ರಕ್ತವು ನೂರು ಪಲಗಳಿರುತ್ತವೆ. ಮಲಮೂತ್ರಗಳಿಗೆ ಪ್ರಮಾಣವೇ ಇಲ್ಲ.

**ಇತಿ ದೇಹಗೃಹಂ ರಾಜನ್ ನಿತ್ಯಮನ್ವೇಷ್ಯಮಾತ್ಮನಃ**
**ಅವಿಶುದ್ಧಂ ವಿಶುದ್ಧಸ್ಯ ಕರ್ಮಬಂಧವಿನಿರ್ಮಿತಂ ॥ ೬೬ ॥**

**ಶುಕ್ರಶೋಣಿತಸಂಯೋಗಾದ್ದೇಹಃ ಸಂಜಾಯತೇ ಕ್ವಚಿತ್ ।**
**ನಿತ್ಯಂ ವಿಣ್ಮೂತ್ರಪೂರ್ಣಶ್ಚ ತೇನಾಯಮಶುಚಿಃ ಸ್ಮೃತಃ ॥ ೬೭ ॥**

**ಯಥಾ ವೈ ವಿಷ್ಠಯಾ ಪೂರ್ಣಃ ಶುಚಿಸ್ಸ್ಯಾತ್ತು ಬಹಿರ್ಘಟಃ ।**
**ಪಂಚಭಿಶ್ಶೋಧ್ಯಮಾನೋಽಪಿ ದೇಹೋಽಯಮಶುಚಿರ್ಭವೇತ್ ॥ ೬೮ ॥**

**ಯಂ ಪ್ರಾಪ್ಯಾತಿಪವಿತ್ರಾಣಿ ಪಂಚಗವ್ಯಂ ಹವೀಂಷಿ ಚ ।**
**ಅಶುಚಿತ್ವಂ ಕ್ಷಣಾದ್ಯಾಂತಿ ಕೋಽನ್ಯೋಽಸ್ಮಾದಶುಚಿಸ್ತತಃ ॥ ೬೯ ॥**

**ಹೃದ್ಯಾನ್ಯಪ್ಯನ್ನಪಾನಾನಿ ಯಂ ಪ್ರಾಪ್ಯ ಸುರಭೀಣಿ ಚ ।**
**ಅಶುಚಿತ್ವಂ ಪ್ರಯಂತ್ಯಾಶು ಕೋಽನ್ಯಃ ಸ್ಯಾದಶುಚಿಸ್ತತಃ ॥ ೭೦ ॥**

---

೬೬. ಇದೇ ದೇಹವೆಂಬ ಗೃಹವು. ಇದು ಅಶುದ್ಧವಾದುದು. ಆತ್ಮನು ಶುದ್ಧನಾಗಿದ್ದರೂ ಕರ್ಮಬದ್ಧನಾಗಿ ಇಂತಹ ದೇಹವನ್ನು ಹುಡುಕುತ್ತಾನೆ.

೬೭. ಶುಕ್ರ ಶೋಣಿತಗಳ ಸಂಯೋಗದಿಂದ ದೇಹವು ಕೆಲವೆಡೆಗಳಲ್ಲಿ ಹುಟ್ಟುತ್ತದೆ. ಮಲಮೂತ್ರ, ಮಾಂಸಗಳಿಂದ ತುಂಬಿ ಅಶುಚಿಯಾಗಿದೆ.

೬೮. ಮಲದಿಂದ ಕೂಡಿರುವ ಬಿಂದಿಗೆಯು ಮೇಲೆ ಶುಚಿಯಾಗಿರುವಂತೆ ಈ ದೇಹವಿದೆ. ಪಂಚಗವ್ಯಗಳು ಶುದ್ಧಿಮಾಡುತ್ತಿದ್ದರೂ ಶುದ್ಧಿ[illegible]ಾಗುವುದೇ ಇಲ್ಲ.

೬೯. ಅತಿ ಪವಿತ್ರವಾದ ಪಂಚಗವ್ಯಗಳೂ, ಹವಿಸ್ಸೂ ಯಾವ ದೇಹವನ್ನು ಹೊಂದಿದ ಮಾತ್ರದಿಂದಲೇ ಅಶುಚಿಗಳಾಗುತ್ತವೆಯೋ ಅಂತಹ ದೇಹಕ್ಕಿಂತ ಅಶುಚಿ ಯಾವ ಪದಾರ್ಥವು ಮತ್ತಾವುದೂ ಇಲ್ಲ.

೭೦. ಸುವಾಸನೆಯಿಂದ ಕೂಡಿದ ಅನ್ನಪಾನಾದಿಗಳು ದೇಹದ ಒಳಗೆ ಸೇರಿದೊಡನೆಯೇ ಅವುಗಳು ಮಲಮೂತ್ರಗಳಾಗಿ ಮಾರ್ಪಟ್ಟು ಅಶುಚಿಯಾಗುವವು. ಆದುದರಿಂದ ಯಾವ ಪದಾರ್ಥ ತಾನೇ ಶುಚಿಯೆನ್ನಲ್ಪಡುವುದು? ಎಲ್ಲವೂ ಅಶುಚಿಯೇ.

**ಹೇ ಜನಾಃ ಕಿಂ ನ ಪಶ್ಯಧ್ವಂ ಯೋ ನಿರ್ಯಾತಿ ದಿನೇ ದಿನೇ ।**
**ದೇಹಾತ್ತು ಕಶ್ಮಲಂ ಪೂತಿಸ್ತದಾಧಾರಃ ಕಥಂ ಶುಚಿಃ ॥ ೭೧ ॥**

**ದೇಹಸ್ಸಂಸಿಚ್ಯಮಾನೋಽಪಿ ಪಂಚಗವ್ಯಕುಶಾಂಬುಭಿಃ ।**
**ಘೃಷ್ಯಮಾಣ ಇವಾಂಗಾರೋ ನಿರ್ಮಲತ್ವಂ ನ ಗಚ್ಛತಿ ॥ ೭೨ ॥**

**ಸ್ರೋತಾಂಸಿ ಯಸ್ಯ ಸತತಂ ಪ್ರವಹನ್ತಿ ಕ್ಷಣೇ ಕ್ಷಣೇ ।**
**ಕಫಮೂತ್ರಾದ್ಯತ್ಯಶುಚಿಃ ಸ ದೇಹಃ ಶುಧ್ಯತೇ ಕಥಂ ॥ ೭೩ ॥**

**ಸರ್ವಾಶುಚಿವಿಲಗ್ನಸ್ಯ ಶರೀರಸ್ಯ ನ ವಿದ್ಯತೇ ।**
**ಶುಚಿರೇಕಃ ಪ್ರದೇಶೋಽಪಿ ಶುಚಿರ್ನ ಸ್ಯಾದ್ಘೃತೇಽಪಿ ವಾ ॥ ೭೪ ॥**

**ದೃಷ್ಟ್ವಾ ಚ ದೇಹಸ್ರೋತಾಂಸಿ ಮೃದಾದ್ಭಿಃ ಶೋಧ್ಯತೇ ನರಃ ।**
**ತಥಾಪ್ಯಶುಚಿಭಾಜಶ್ಚ ನ ವಿರಜ್ಯಂತಿ ತೇ ನರಾಃ ॥ ೭೫ ॥**

---

೭೧. ಎಲೈ ಜನಗಳಿರಾ! ಏಕೆ ನೀವು ನೋಡುವುದಿಲ್ಲ? ಯಾವ ಅಶುಚಿಯಾದ ಮಲಮೂತ್ರಗಳೂ ದುರ್ವಾಸನೆಯೂ ದಿನವೂ ಯಾವುದರಿಂದ ಬರುತ್ತದೆಯೋ ಅದಕ್ಕೆ ಆಧಾರವಾದ ಈ ದೇಹವು ಹೇಗೆತಾನೆ ಶುಚಿಯಾಗಿದ್ದೀತು?

೭೨. ಇದ್ದಿಲನ್ನು ತಿಕ್ಕಿದರೂ ಅದು ಹೇಗೆ ನಿರ್ಮಲವಾಗುವುದಿಲ್ಲವೋ ಹಾಗೆ ಪಂಚಗವ್ಯ ದರ್ಭೆಯನೀರುಗಳಿಂದ ಶುದ್ಧಿಮಾಡುತ್ತಿದ್ದರೂ ನಿರ್ಮಲವಾಗುವುದಿಲ್ಲ.

೭೩. ಯಾವ ದೇಹದಲ್ಲಿ ಕಫ ಮೂತ್ರಾದಿಗಳ ಪ್ರವಾಹವು ಹರಿಯುತ್ತಿರುತ್ತವೋ ಅಂತಹ ಅಶುಚಿಯಾದ ದೇಹವು ಹೇಗೆತಾನೇ ಶುದ್ಧಿಯಾಗುತ್ತದೆ?

೭೪. ಸರ್ವ ಅಶುಚಿಗಳಿಂದ ಕೂಡಿದ ಈ ದೇಹದಲ್ಲಿ ಶುಚಿಯಾದ ಒಂದು ಭಾಗವೂ ಇಲ್ಲವೇ ಇಲ್ಲ. ಒಂದೊಂದು ಜಾಗವೂ ಕೂಡ ಅಶುಚಿಯಾಗಿಯೇ ಇರುವುದು.

೭೫. ದೇಹದಲ್ಲಿ ಹೀಗೆ ಹರಿಯುವುದನ್ನು ನೋಡಿ ಜನರು ಮಣ್ಣು ನೀರುಗಳಿಂದ ಶುದ್ಧಿ ಮಾಡುತ್ತಾರೆ. ಆದರೂ ಈ ಅಶುಚಿಯಿಂದ ಅವರು ವಿರಕ್ತರಾಗುವುದೇ ಇಲ್ಲ.

**ಕಾಯಮಗರುಧೂಪಾದ್ಯೈರ್ಯತ್ನೇನಾಪಿ ಸುಸಂಸ್ಕೃತಂ ।**
**ನ ಜಹಾತಿ ಸ್ವಭಾವಂ ಹಿ ಶ್ವಪುಚ್ಛಮಿವ ನಾಮಿತಂ ॥ ೭೬ ॥**

**ಯಥಾ ಜಾತ್ಯೈವ ಕೃಷ್ಣೋರ್ಣಾ ನ ಶುಕ್ಲಾ ಜಾತು ಜಾಯತೇ ।**
**ಸಂಶೋಧ್ಯಮಾನಾಪಿ ತಥಾ ಭವೇನ್ಮೂರ್ತಿರ್ನ ನಿರ್ಮಲಾ ॥ ೭೭ ॥**

**ಜಿಘ್ರನ್ನಪಿ ಸುದುರ್ಗನ್ಧಂ ಪಶ್ಯನ್ನಪಿ ಮಲಂ ಸ್ವಕಂ ।**
**ನ ವಿರಜ್ಯೇತ ಲೋಕೋಽಯಂ ಪೀಡಯನ್ನಪಿ ನಾಸಿಕಾಂ ॥ ೭೮ ॥**

**ಅಹೋ ಮೋಹಸ್ಯ ಮಾಹಾತ್ಮ್ಯಂ ಯೇನ ವ್ಯಾಮೋಹಿತಂ ಜಗತ್ ।**
**ಜಿಘ್ರನ್ಪಶ್ಯನ್ ಸ್ವಕಾನ್ದೋಷಾನ್ ಕಾಯಸ್ಯ ನ ವಿರಜ್ಯತೇ ॥ ೭೯ ॥**

**ಸ್ವದೇಹಾಶುಚಿಗಂಧೇನ ಯೋ ವಿರಜ್ಯೇತ ಮಾನವಃ ।**
**ವಿರಾಗಕಾರಣಂ ತಸ್ಯ ಕಿಮನ್ಯದುಪದಿಶ್ಯತೇ ॥ ೮೦ ॥**

---

೭೬. ಬಗ್ಗಿರುವ ನಾಯಿಬಾಲವನ್ನು ಸರಿಮಾಡಿದರೂ ತನ್ನ ಸ್ವಭಾವ ಬಿಡ ದಂತೆ ದೇಹವನ್ನು ಅಗರುಧೂಪಾದಿಗಳಿಂದ ಸಂಸ್ಕರಿಸಿದರೂ ಈ ದೇಹವು ತನ್ನ ಸ್ವಭಾ ವವನ್ನು ಬಿಡುವುದಿಲ್ಲ.

೭೭. ಹುಟ್ಟುವಾಗಲೇ ಕಪ್ಪಾಗಿರುವ ಉಣ್ಣೆಯು ಬೆಳ್ಳಗೆ ಆಗುವುದಕ್ಕೆ ಹೇಗೆ ಸಾಧ್ಯವೇ ಇಲ್ಲವೋ, ಹಾಗೆ ದೇಹವನ್ನು ಎಷ್ಟು ಶೋಧಿಸಿ ಶುದ್ಧಿಮಾಡಿದರೂ ನಿರ್ಮಲ ವಾಗುವುದಿಲ್ಲ.

೭೮. ಲೋಕದಲ್ಲಿ ಜನವು ತನ್ನ ದುರ್ಗಂಧವನ್ನು ಮೂಸುತ್ತಿದ್ದರೂ, ತನ್ನ ಅಮೇಧ್ಯವನ್ನು ನೋಡುತ್ತಿದ್ದರೂ. ಮೂಗಿನಿಂದ ಯಾವಾಗಲೂ ಸಿಂಬಳವನ್ನು ಹಿಂಡುತ್ತಿದ್ದರೂ ತನ್ನ ದೇಹವು ಅಶುಚಿಯೆಂದು ತಿಳಿದು ವೈರಾಗ್ಯವನ್ನು ಹೊಂದು ವುದೇ ಇಲ್ಲ

೭೯. ಜನವು ತನ್ನ ದೋಷಗಳನ್ನು, ಮೂಸಿ, ಮುಟ್ಟಿನೋಡಿ ಮಾಡು ತ್ತಿದ್ದರೂ ವೈರಾಗ್ಯ ಹೊಂದುವುದಿಲ್ಲವಲ್ಲಾ ? ಮೋಹದ ಮಹಾತ್ಮ್ಯವೆಂತಿರಬೇಕು ?

೮೦. ತನ್ನ ದೇಹದ ಅಶುಚಿಗಂಧದಿಂದ ಯಾವನು ವೈರಾಗ್ಯ ಹೊಂದು ತ್ತಾನೋ ಅವನಿಗೆ ವೈರಾಗ್ಯಕಾರಣವು ಬೇರೇನುಬೇಕು?

**ಸರ್ವಮೇವ ಜಗತ್ಪೂತಂ ದೇಹಮೇವಾಶುಚಿ ಪರಂ ।**
**ಜನ್ಮನಾವಯವಸ್ಪರ್ಶಾಚ್ಛುಚಿರಪ್ಯಶುಚಿರ್ಭವೇತ್ ॥ ೮೧ ॥**

**ಗಂಧಲೇಪಾಪನೋದಾರ್ಥಂ ಶೌಚಂ ದೇಹಸ್ಯ ಕೀರ್ತಿತಂ ।**
**ಯಸ್ಯಾಪಿ ವಿಗಮಾತ್ಪಶ್ಚಾದ್ಭಾವಶುದ್ಧ್ಯಾ ವಿಶುದ್ಧ್ಯತಿ ॥ ೮೨ ॥**

**ಗಂಗಾತೋಯೇನ ಸರ್ವೇಣ ಮೃದ್ಭಾರೈರ್ಗಾತ್ರಲೇಪನೈಃ ।**
**ಮತ್ರ್ಯೋ ದುರ್ಗನ್ಧದೇಹೋಽಸೌ ಭಾವದುಷ್ಟೋ ನ ಶುದ್ಧ್ಯತಿ ॥ ೮೩ ॥**

**ತೀರ್ಥಸ್ನಾನೈಸ್ತಪೋಭಿಶ್ಚ ದುಷ್ಟಾತ್ಮಾ ನ ಚ ಶುದ್ಧ್ಯತಿ ।**
**ಶ್ವಮೂರ್ತಿಃ ಕ್ಷಾಳಿತಾ ತೀರ್ಥೇ ನ ಶುದ್ಧಿಮಧಿಗಚ್ಛತಿ ॥ ೮೪ ॥**

**ಅಂತರ್ಭಾವಪ್ರದುಷ್ಟಸ್ಯ ವಿಶತೋಽಪಿ ಹುತಾಶನಂ ।**
**ನ ಸ್ವರ್ಗೋ ನಾಪವರ್ಗಶ್ಚ ದೇಹನಿರ್ಬಂಧನಂ ಪರಂ ॥ ೮೫ ॥**

---

೮೧. ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳೂ ಶುದ್ಧವಾದುವು. ದೇಹವೊಂದೇ ಅಶುಚಿಯು, ಹುಟ್ಟುವುದರಿಂದಲೂ ಅವಯವ ಸೇರುವುದರಿಂದಲೂ ಮತ್ತವು ಶುಚಿಯಾದರೂ ಅಶುಚಿಯಾಗುತ್ತವೆ.

೮೨. ಗಂಧಲೇಪಗಳು ಹೋಗುವುದಕ್ಕೋಸ್ಕರವೇ ದೇಹಕ್ಕೆ ಶೌಚವಿಧಾನ ವನ್ನು ಹೇಳಿದೆ. ಅದೂ ಇಲ್ಲದವನು ಭಾವದಿಂದ ಶುದ್ಧನಾದರೆ ಶುದ್ಧಿಯು.

೮೩. ದೇಹವು ಭಾವದಿಂದ ದುಷ್ಟವಾಗಿದ್ದರೆ ಗಂಗೆಯ ನೀರೆಲ್ಲವನ್ನೂ ತಂದು, ಬೇಕಾದಷ್ಟು ಮಣ್ಣುಗಳನ್ನು ಹಾಕಿ ತೊಳೆದರೂ ದುರ್ಗಂಧವುಳ್ಳ ದೇಹವು ಶುದ್ಧಿ ಯಾಗುವುದಿಲ್ಲ.

೮೪. ದುಷ್ಟಾತ್ಮನು ತೀರ್ಥಸ್ನಾನದಿಂದಲೂ ತಪಸ್ಸಿನಿಂದಲೂ ಶುದ್ಧನಾಗು ವುದಿಲ್ಲ. ನೀರಿನಿಂದೆಷ್ಟು ತೊಳೆದರೂ, ದೇಹವು ಶುದ್ಧಿ ಹೊಂದುವುದಿಲ್ಲ.

೮೫. ಅಂತರಾತ್ಮನು ದುಷ್ಟನಾಗಿದ್ದರೆ ಬೆಂಕಿಗೆ ಬಿದ್ದರೂ, ಅವನಿಗೆ ಸ್ವರ್ಗ ವಾಗಲಿ ಮೋಕ್ಷವಾಗಲಿ ಇಲ್ಲ. ದೇಹಕ್ಕೆ ತೊಂದರೆ ಮಾತ್ರ ಉಂಟಾಗುವುದು.

ಭಾವಶುದ್ಧಿಃ ಪರಂ ಶೌಚಂ ಪ್ರಮಾಣಂ ಸರ್ವಕರ್ಮಸು ।
ಅನ್ಯಥಾಽಲಿಂಗ್ಯತೆ ಕಾಂತಾ ಭಾವೇನ ದುಹಿತಾನ್ಯಥಾ ॥ ೮೬ ॥

ಮನಸೋ ಭಿದ್ಯತೇ ವೃತ್ತಿರ್ಭಿನ್ನೇಷ್ವಪಿ ಚ ವಸ್ತುಷು ।
ಅನ್ಯಥೈವ ತತಃ ಪುತ್ರಂ ಭಾವಯತ್ಯನ್ಯಥಾ ಪತಿಂ ॥ ೮೭ ॥

ಯಥಾ ಯಥಾ ಸ್ವಭಾವಸ್ಯ ಮಹಾಭಾಗ ಮುದಾವಹಂ ।
ಪರಿತ್ಯಕ್ತಾ ಯಥಾ ಭಾರ್ಯಾ ಭಾವಹೀನಾ ನ ಕಾಮಯೇತ್ ॥ ೮೮ ॥

ತಸ್ಮಾದ್ವಿವಿಧಮನ್ನಾದ್ಯಂ ಭಕ್ಷ್ಯಾಣಿ ಸುರಭೀಣಿ ಚ ।
ಸ್ವಭಾವೇನ ನರಸ್ತಸ್ಮಾದ್ಭಾವಃ ಸರ್ವತ್ರ ಕಾರಣಂ ॥ ೮೯ ॥

---

೮೬. ಭಾವಶುದ್ಧಿಯೇ ಉತ್ತಮವಾದ ಶೌಚವು, ಎಲ್ಲಾ ಕೆಲಸಕ್ಕೂ ಭಾವಶುದ್ಧಿಯೇ ಪ್ರಮಾಣವು. ಹೆಂಡತಿಯನ್ನು ಆಲಿಂಗಿಸುವ ಭಾವವೇ ಬೇರೆ. ಮಗಳನ್ನು ಆಲಿಂಗಿಸುವ ಭಾವವೇ ಬೇರೆ.

೮೭. ಬೇರೆ ಬೇರೆ ವಸ್ತುಗಳಲ್ಲಿ ಮನುಷ್ಯನಿಗೆ ಬೇರೆಬೇರೆ ಭಾವವು ಹುಟ್ಟುತ್ತದೆ. ಹೆಂಗಸು, ಗಂಡನನ್ನು ಬೇರೆ ಭಾವದಿಂದ ನೋಡುತ್ತಾಳೆ. ಮಗನನ್ನೂ ಬೇರೆ ಭಾವದಿಂದ ನೋಡುತ್ತಾಳೆ.

೮೮. ಸ್ವಭಾವವನ್ನನುಸರಿಸಿ ಎಂದರೆ ತನ್ನ ಪತ್ನಿಯಲ್ಲಿ ಅನುರಾಗವಿರುವಾಗ ಅವಳೊಡನೆ ಸಮಾಗಮದಿಂದ ಸಂತೋಷವುಂಟಾಗುತ್ತಿದ್ದರೂ, ಕಾರಣಾಂತರಗಳಿಂದ ಅವಳನ್ನು ಬಿಟ್ಟಮೇಲೆ ಅವಳಲ್ಲಿ ಪ್ರೀತಿಯೂ, ಕಾಮವೂ ಹುಟ್ಟುವುವೇ? ಎಂದಿಗೂ ಇಲ್ಲ.

೮೯. ಇದೇ ರೀತಿ ವಿವಿಧವಾದ ಅನ್ನ ಭಕ್ಷ್ಯಗಳು ವಾಸನೆಯುಳ್ಳವಾಗಿದ್ದರೂ, ಒಂದು ಭಾವದಿಂದ ಬೇಕಿಲ್ಲ. ಒಂದು ಭಾವದಿಂದ ಬೇಕಾಗುತ್ತದೆ. ಎಂದರೆ ಹಸಿವಾಗಿರುವವನಿಗೆ ಅನ್ನವು ಬೇಕಾಗುತ್ತದೆ. ಅದೇ ಮನುಷ್ಯನಿಗೆ ಹಸಿವಿಲ್ಲದಿರುವಾಗ ಅನ್ನವು ಎಷ್ಟು ಉತ್ತಮವಾಗಿದ್ದರೂ ಬೇಡವಾಗುವುದು. ಆದುದರಿಂದ ಎಲ್ಲಕ್ಕೂ ಭಾವವೇ ಕಾರಣವು.

**ಚಿತ್ತಂ ಶೋಧಯ ಯತ್ನೇನ ಕಿಮನ್ಯೈರ್ಬಾಹ್ಯಶೋಧನೈಃ ।**
**ಭಾವತಶ್ಶುಚಿಶ್ಶುದ್ಧಾತ್ಮಾ ಸ್ವರ್ಗಂ ಮೋಕ್ಷಂ ಚ ವಿನ್ದತಿ ॥ ೯೦ ॥**

**ಜ್ಞಾನಾಮಲಾಂಭಸಾ ಪುಂಸಃ ಸದ್ವೈರಾಗ್ಯಮೃದಾ ಪುನಾಃ ।**
**ಅವಿದ್ಯಾರಾಗವಿಣ್ಮೂತ್ರಲೇಪೋ ನಶ್ಯೇದ್ವಿಶೋಧನೈಃ ॥ ೯೧ ॥**

**ಏವಮೇತಚ್ಛರೀರಂ ಹಿ ನಿಸರ್ಗಾದಶುಚಿ ವಿದುಃ ।**
**ಅಧ್ಯಾತ್ಮಸಾರನಿಸ್ಸಾರಂ ಕದಳೀಸಾರಸನ್ನಿಭಂ ॥ ೯೨ ॥**

**ಜ್ಞಾತ್ವೈವಂ ದೇಹದೋಷಂ ಯಃ ಪ್ರಾಜ್ಞಸ್ಸ ಶಿಥಿಲೋ ಭವೇತ್ ।**
**ಸೋತಿಕ್ರಾಮತಿ ಸಂಸಾರಂ ದೃಢಗ್ರಾಹೀವ ತಿಷ್ಠತಿ ॥ ೯೩ ॥**

**ಏವಮೇತನ್ಮಹಾಕಷ್ಟಂ ಜನ್ಮದುಃಖಂ ಪ್ರಕೀರ್ತಿತಂ ।**
**ಪುಂಸಾಮಜ್ಞಾನದೋಷೇಣ ನಾನಾಕರ್ಮವಶೇನ ಚ ॥ ೯೪ ॥**

---

೯೦. ಪ್ರಯತ್ನಪಟ್ಟು ಚಿತ್ತವನ್ನು ಶೋಧಿಸು. ಬಾಹ್ಯವಾದ ಶುದ್ಧಿಯಿಂದ ಪ್ರಯೋಜನವಿಲ್ಲ. ಭಾವದಿಂದ ಶುಚಿಯಾದವನು ಮಾತ್ರ ಸ್ವರ್ಗವನ್ನೂ ಮೋಕ್ಷವನ್ನೂ ಹೊಂದುತ್ತಾನೆ.

೯೧. ಮನುಷ್ಯನಿಗೆ ಜ್ಞಾನವೆಂಬ ನೀರು, ವೈರಾಗ್ಯವೆಂಬ ಮಣ್ಣು, ಇವುಗಳಿಂದ ಶೋಧಿಸಿದರೆ ಅವಿದ್ಯೆ, ರಾಗ, ಮಲಮೂತ್ರಗಳೆಂಬ ಲೇಪಗಳು ನಾಶವಾಗುತ್ತವೆ.

೯೨. ಆದುದರಿಂದ ಜ್ಞಾನಿಗಳು, ಹೀಗಿರುವ ಈ ಶರೀರವು ಸ್ವಭಾವವಾಗಿ ಅಶುಚಿಯೆಂದು ತಿಳಿಯುತ್ತಾರೆ. ಆತ್ಮಾಲೋಚನೆಯ ಸಾರದಿಂದ ಇದು ನಿಸ್ಸಾರವಾಗಿ ಬಾಳೆಯೊಳಗಿನ ಸಾರವಿಲ್ಲದ ರೀತಿಯಂತೆ ಕಾಣುತ್ತದೆ.

೯೩. ಪ್ರಾಜ್ಞನಾದವನು ಈ ದೇಹದ ದೋಷವನ್ನು ತಿಳಿದು ಆಸೆಯನ್ನು ಬಿಡಬೇಕು. ಅವನು ಸಂಸಾರವನ್ನು ದಾಟುತ್ತಾನೆ. ದೃಢವಾಗಿ ನಿಲ್ಲುತ್ತಾನೆ.

೯೪. ಈ ರೀತಿಯಾಗಿ ಜನ್ಮದುಃಖವು ಮಹಾ ಕಷ್ಟವಾಗಿ ಹೇಳಲ್ಪಟ್ಟಿದೆ. ಮನುಷ್ಯರ ಅಜ್ಞಾನದೋಷದಿಂದಲೂ, ನಾನಾ ಬಗೆಯಾದ ಕರ್ಮವಶದಿಂದಲೂ, ಜನ್ಮತಾಳಿದಾಗ ಯಾವ ಬುದ್ಧಿಯಿರುತ್ತದೋ ಅದು ಹುಟ್ಟಿದನಂತರ ನಾಶವಾಗುತ್ತದೆ.

ಗರ್ಭಸ್ಥಸ್ಯ ಮತಿರ್ಯಾಸೀತ್ಸಂಜಾತಸ್ಯ ಪ್ರಣಶ್ಯತಿ ।
ಸಂಮೂರ್ಛಿತಸ್ಯ ದುಃಖೇನ ಯೋನಿಯಂತ್ರಪ್ರಪೀಡನಾತ್ ॥ ೯೫ ॥

ಬಾಹ್ಯೇನ ವಾಯುನಾ ತಸ್ಯ ಮೋಹಸಂಗೇನ ದೇಹಿನಾಂ ।
ಸ್ಪೃಷ್ಟಮಾತ್ರೇಣ ಘೋರೇಣ ಜ್ವರಸ್ಸಮುಪಜಾಯತೇ ॥ ೯೬ ॥

ತೇನ ಜ್ವರೇಣ ಮಹತಾ ಮಹಾಮೋಹಃ ಪ್ರಜಾಯತೇ ।
ಸಂಮೂಢಸ್ಯ ಸ್ಮೃತಿಭ್ರಂಶಃ ಶೀಘ್ರಂ ಸಂಜಾಯತೇ ಪುನಃ ॥ ೯೭ ॥

ಸ್ಮೃತಿಭ್ರಂಶಾತ್ತಸ್ಯ ಪೂರ್ವಕರ್ಮಜ್ಞಾನಸಮುದ್ಭವಾ ।
ರತಿಸ್ಸಂಜಾಯತೇ ಪೂರ್ಣಾ ಜಂತೋಸ್ತತ್ರೈವ ಜನ್ಮನಿ ॥ ೯೮ ॥

ರಕ್ತೋ ಮೂಢಶ್ಚ ಲೋಕೋಽಯಮಕಾರ್ಯೇ ಸಂಪ್ರವರ್ತತೇ ।
ನ ಚಾತ್ಮಾನಂ ವಿಜಾನಾತಿ ನ ಪರಂ ನ ಚ ದೈವತಂ ॥ ೯೯ ॥

---

೯೫-೯೬. ಯೋನಿಯೆಂಬ ಯಂತ್ರದಿಂದ ಬರುವಾಗ ಪೀಡಿಸಿ ಹಿಂಡಲ್ಪಟ್ಟಿರುವುದರಿಂದಲೂ, ಹೊರಗಿನ ಘಾಳಿಯ ಹೊಡೆತದಿಂದಲೂ, ಮತ್ತು ಹೊರಗಿನ ಆ ಗಾಳಿಯಿಂದ ಬರುವ ಮೋಹದಿಂದಲೂ, ಆ ವಾಯುವು ಮುಟ್ಟಿದೊಡನೆಯೇ ಜ್ವರವು ಬರುತ್ತದೆ.

೯೭. ಆ ಜ್ವರದಿಂದ ಮಹಾ ಮೋಹವು ಉಂಟಾಗುತ್ತದೆ. ಆ ಮೋಹದಿಂದ ಹಿಂದಿನ ಜ್ಞಾಪಕವು ನಾಶವಾಗಿ ಹೋಗುತ್ತದೆ.

೯೮. ಸ್ಮೃತಿ ನಾಶವಾದೊಡನೆಯೇ ಪೂರ್ವಕರ್ಮದಿಂದುಂಟಾದ ಕೆಲಸಗಳಲ್ಲಿ ಪೂರ್ಣವಾದ ಆಸೆಯು ಹುಟ್ಟುತ್ತದೆ. ಆ ಕರ್ಮದಲ್ಲಿ ಆಸೆಯುಂಟಾಗಲು ಮನುಷ್ಯನು ಕೆಟ್ಟ ಕೆಲಸದಲ್ಲಿ ತೊಡಗುತ್ತಾನೆ.

೯೯. ಆಗ ಆ ಜಂತುವು ಆತ್ಮನನ್ನಾಗಲಿ, ಸ್ವರ್ಗವನ್ನಾಗಲೀ, ದೇವರನ್ನಾಗಲೀ ತಿಳಿಯುವುದೇ ಇಲ್ಲ.

**ನ ಶೃಣೋತಿ ಪರಂ ಶ್ರೇಯಃ ಸತಿ ಚಕ್ಷುಷಿ ನೇಕ್ಷತೇ ।**
**ಸಮೇ ಪಥಿ ಶನೈರ್ಗಚ್ಛನ್ ಸ್ಖಲತೀವ ಪದೇ ಪದೇ ॥ ೧೦೦ ॥**

**ಸ್ವಾಪಂ ಸುಪ್ತೋ ನ ಜಹಾತಿ ಬೋಧ್ಯಮಾನೋ ಬುಧೈರಪಿ ।**
**ಸಂಸಾರೇ ಕ್ಲಿಶ್ಯತೇ ತೇನ ನರೋ ಲೋಭವಶಾನುಗಃ ॥ ೧೦೧ ॥**

**ಗರ್ಭಸ್ಮೃತೇರಭಾವೇ ಚ ಶಾಸ್ತ್ರಮುಕ್ತಂ ಶಿವೇನ ಚ ।**
**ನಾನಾದುಃಖವಿನಾಶಾಯ ಸ್ವರ್ಗಮೋಕ್ಷಪ್ರಸಾಧನಂ ॥ ೧೦೨ ॥**

**ಯೇನ ತ್ವಸ್ಮಿನ್ ಶಿವೇ ಜ್ಞಾತೇ ಧರ್ಮಕರ್ಮಾರ್ಥಸಾಧನೇ ।**
**ನ ಕುರ್ವತ್ಯಾತ್ಮನಃ ಶ್ರೇಯಸ್ತದತ್ರ ಮಹದದ್ಭುತಂ ॥ ೧೦೩ ॥**

**ಅವ್ಯಕ್ತೇಂದ್ರಿಯವೃತ್ತಿತ್ವಾದ್ಬಾಲ್ಯೇ ದುಃಖಂ ಮಹತ್ಪುನಃ ।**
**ಇಚ್ಛನ್ನಪಿ ನ ಶಕ್ನೋತಿ ವಕ್ತುಂ ಕರ್ತುಂ ಚ ಸತ್ಕೃತಂ ॥ ೧೦೪ ॥**

---

೧೦೦. ತನ್ನ ಶ್ರೇಯಸ್ಸನ್ನೂ ಗಮನಿಸುವುದಿಲ್ಲ. ಕಣ್ಣಿದ್ದರೂ ನೋಡುವುದಿಲ್ಲ. ಸರಿಯಾದ ದಾರಿಯಲ್ಲಿ ಹೋಗುತ್ತಿದ್ದರೂ ಬಾರಿಬಾರಿಗೂ ತಪ್ಪುತ್ತಿರುತ್ತಾನೆ.

೧೦೧. ತಿಳಿದವರು ಎಚ್ಚರಗೊಳಿಸುತ್ತಿದ್ದರೂ, ಅಜ್ಞಾನವನ್ನು ಬಿಡುವುದಿಲ್ಲ. ಮತ್ತೆ ಈ ಜಂತುವು ಆಸೆಯಿಂದ ಸಂಸಾರದಲ್ಲಿ ಕ್ಲೇಶಪಡುತ್ತದೆ.

೧೦೨. ಗರ್ಭದ ಸಂಬಂಧವಾದ ಜ್ಞಾಪಕವು ಹೋಗಲಾಗಿ ಪುನಃ ನಾನಾ ದುಃಖಗಳನ್ನು ನಾಶಮಾಡಿಕೊಳ್ಳಲು, ಸ್ವರ್ಗಮೋಕ್ಷಗಳ ಸಾಧನೆಯನ್ನು ಮಾಡಿಕೊಳ್ಳಬೇಕೆಂದು ಉತ್ತಮವಾದ ಶಾಸ್ತ್ರದಲ್ಲಿ ಶಿವನಿಂದ ಹೇಳಲ್ಪಟ್ಟಿದೆ.

೧೦೩. ಧರ್ಮವಾದ ಕರ್ಮಗಳಗೆ ಸಾಧನಭೂತವಾದ ಪರಾತ್ಪರ ವಸ್ತುವು ಈ ಶಾಸ್ತ್ರದಿಂದ ತಿಳಿದರೂಕೂಡ ತನಗೆ ಬೇಕಾದ ಶ್ರೇಯಸ್ಸಿನ ಕೆಲಸಗಳನ್ನು ಮಾಡಿಕೊಳ್ಳುವುದಿಲ್ಲ. ಇದು ಆಶ್ಚರ್ಯವಲ್ಲದೆ ಮತ್ತೇನು ?

೧೦೪. ಬಾಲ್ಯದಲ್ಲಿ ಇಂದ್ರಿಯಪಾಟವಗಳು ಚೆನ್ನಾಗಿಲ್ಲದಿರುವುದರಿಂದ ಒಳ್ಳೆಯದನ್ನು ಮಾಡುವುದಕ್ಕೂ, ಬಾಯಲ್ಲಿ ಹೇಳುವುದಕ್ಕೂ ಸಾಧ್ಯವಿಲ್ಲದೇ ಇರುವುದರಿಂದ ಬಹು ದುಃಖವುಂಟಾಗುವುದು.

ಭುಂಕ್ತೇ ತೇನ ಮಹದ್ದುಃಖಂ ಬಾಲ್ಯೇನ ವ್ಯಾಧಿನಾನ್ಯಥಾ ।
ಬಾಲ್ಯ ರೋಗೈಶ್ಚ ವಿವಿಧೈಃ ಪೀಡಾ ಬಾಲಗ್ರಹೈರಪಿ ॥ ೧೦೫ ॥

ತೃಡ್ಬುಭುಕ್ಷಾ ಪರೀತಾಂಗಃ ಕ್ವಚಿದ್ಗಚ್ಛತಿ ತಿಷ್ಠತಿ ।
ವಿಣ್ಮೂತ್ರಮಜ್ಜನಾರ್ಥಂ ಚ ಮೋಹಾದ್ಬಾಲಃ ಸಮಾಚರೇತ್ ॥ ೧೦೬ ॥

ಕೌಮಾರಃ ಕರ್ಣವೇಧೇನ ಮಾತಾಪಿತ್ರೋಶ್ಚ ಲಾಲನಂ ।
ಅಕ್ಷರಾಧ್ಯಯನಾದ್ಯೈಶ್ಚ ದುಃಖಂ ಸ್ಯಾದ್ಗುರುಶಾಸನಂ ॥ ೧೦೭ ॥

ಅನ್ಯತ್ರೇಂದ್ರಿಯವೃತ್ತಿಶ್ಚ ಕಾಮರಾಗಪ್ರಯೋಜನಾತ್ ।
ರೋಗಾವೃತಸ್ಯ ಸತತಂ ಕುತಃ ಸೌಖ್ಯಂ ಚ ಯೌವನೇ ॥ ೧೦೮ ॥

ಈರ್ಷ್ಯಯಾ ಸುಮಹದ್ದುಃಖಂ ಮೋಹಾದ್ದುಃಖಂ ಸುಜಾಯತೇ ।
ತತ್ರ ಸ್ಯಾತ್ಕುಪಿತಸ್ಯೈವ ರಾಗೋ ದುಃಖಾಯ ಕೇವಲಂ ॥ ೧೦೯ ॥

---

೧೦೫. ಅದೂ ಅಲ್ಲದೆ ಬಾಲ್ಯದಲ್ಲಿ ಬರತಕ್ಕ ರೋಗಗಳಿಂದಲೂ, ಬಾಲ ಗ್ರಹಾದಿಗಳಿಂದಲೂ ಬಹು ದುಃಖವನ್ನು ಅನುಭವಿಸುತ್ತಾನೆ.

೧೦೬. ಹಸಿವು ಬಾಯಾರಿಕೆಗಳಿಂದ, ಕಂಗೆಟ್ಟು ಹೋಗುತ್ತಾನೆ, ನಿಲ್ಲುತ್ತಾನೆ, ತೊಂದರೆಪಡುತ್ತಾನೆ. ಜಲಮಲಗಳ ಸ್ನಾನವನ್ನೇ ಅಜ್ಞಾನದಿಂದ ಮಗುವು ಮಾಡುತ್ತದೆ.

೧೦೭. ಕೌಮಾರ ವಯಸ್ಸಿನಲ್ಲಿ ಕಿವಿಚುಚ್ಚುವುದೇ ಮೊದಲಾದ ತಾಯಿ ತಂದೆಗಳ ಪಾಲನೆಯಿಂದಲೂ, ಅಕ್ಷರಾಭ್ಯಾಸ, ಓದುವಿಕೆ ಇವೇ ಮುಂತಾದವುಗಳಲ್ಲಿ ಗುರುವು ಮಾಡುವ ಶಿಕ್ಷೆಯಿಂದಲೂ ದುಃಖಗೊಳ್ಳುತ್ತಾನೆ.

೧೦೮. ಯೌವನದಲ್ಲಿ ಇಂದ್ರಿಯಗಳು ಕಾಮದ ಅಪೇಕ್ಷೆಯಲ್ಲಿರುವುದರಿಂದಲೂ, ದೇಹವು ರೋಗದಿಂದ ಕೂಡಿರುವುದರಿಂದಲೂ, ಜೀವನಿಗೆ ಸೌಖ್ಯವೆಲ್ಲಿ ಬಂತು ?

೧೦೯. ಈರ್ಷ್ಯೆಯಿಂದಲೂ, ಹೆಚ್ಚು ದುಃಖವುಂಟಾಗುತ್ತದೆ. ಆ ಈರ್ಷ್ಯೆ ಮೋಹಗಳಿಂದ ಕೋಪಗೊಂಡರೆ ಆ ಅಪೇಕ್ಷೆಯು ದುಃಖವನ್ನು ಉಂಟುಮಾಡುತ್ತದೆ.

**ರಾತ್ರೌ ನ ಕುರುತೇ ನಿದ್ರಾಂ ಕಾಮಾಗ್ನಿಪರಿಖೇದಿತಃ ।**
**ದಿವಾವಾಪಿ ಕುತಃ ಸೌಖ್ಯಮರ್ಥೋಽಪಾರ್ಜನಚಿಂತಯಾ ॥ ೧೧೦ ॥**

**ವ್ಯವಯಾಶ್ರಿತದೇಹಸ್ಯ ಯೇ ಪುಂಸಃ ಶುಕ್ರಬಿಂದವಃ ।**
**ನ ತೇ ಸುಖಾಯ ಮಂತವ್ಯಾಃ ಸ್ವೇದಜಾ ಇವ ಬಿಂದವಃ ॥ ೧೧೧ ॥**

**ಕ್ರಿಮಿಭಿಃ ಪೀಡ್ಯಮಾನಸ್ಯ ಕುಷ್ಠಿನಃ ಪಾಮರಸ್ಯ ಚ ।**
**ಕಂಡೂಯನಾಭಿತಾಪೇನ ಯತ್ಸುಖಂ ಸ್ತ್ರೀಷು ತದ್ವಿದುಃ ॥ ೧೧೨ ॥**

**ಯಾದೃಶಂ ಮನ್ಯತೇ ಸೌಖ್ಯಮರ್ಥೋಽಪಾರ್ಜನಚಿಂತಯಾ ।**
**ತಾದೃಶಂ ಸ್ತ್ರೀಷು ಮಂತವ್ಯಮಧಿಕಂ ನೈವ ವಿದ್ಯತೇ ॥ ೧೧೩ ॥**

**ಮರ್ತ್ಯಸ್ಯ ವೇದನಾ ನೈವ ಯಾಂ ವಿನಾ ಚಿತ್ತನಿರ್ವೃತಿಃ ।**
**ತತೋಽನ್ಯೋಽನ್ಯಂ ಪುರಾ ಪ್ರಾಪ್ತುಮನ್ತೇ ನೈವಾನ್ಯಥಾ ಭವೇತ್ ॥ ೧೧೪ ॥**

---

೧೧೦. ಕಾಮಾಗ್ನಿಯಿಂದ ಕೂಡಿದ ಆತನಿಗೆ ರಾತ್ರಿಯಲ್ಲಿ ನಿದ್ದೆಯೇ ಬರುವುದಿಲ್ಲ. ದುಡ್ಡು ಸಂಪಾದಿಸುವ ಯೋಚನೆಯಲ್ಲಿ ಹಗಲು ತಾನೆ ಸುಖವೆಲ್ಲಿದೆ?

೧೧೧. ಮೈಥುನವೇ ಪ್ರಧಾನವಾಗಿ ಉಳ್ಳ ಈ ದೇಹದಲ್ಲಿ ಇರುವ ಶುಕ್ಲದ ಬಿಂದುಗಳು ಬೆವರಿನ ಹನಿಗಳಂತೆ ಸುಖಕ್ಕೆ ಹುಟ್ಟಿದುವುಗಳಲ್ಲವೆಂದು ತಿಳಿಯಬೇಕು.

೧೧೨. ಕುಷ್ಠಿಗೂ, ಕಜ್ಜಿ ಬಂದಿರುವವನಿಗೂ, ಕ್ರಿಮಿಗಳಿಂದ ತೊಂದರೆಪಡುವಾಗ ಕೆರೆದರೆ ಏನು ಸುಖವು ಉಂಟಾಗುವುದೋ ಅದೇ ಸುಖವು ಸ್ತ್ರೀಯರಲ್ಲೂ ಇರುವುದು.

೧೧೩. ಹಣ ಸಂಪಾದಿಸುವ ಚಿಂತೆಯಿಂದೇನು ಸೌಖ್ಯವುಂಟೋ ಅದೇ ಸೌಖ್ಯವು ಸ್ತ್ರೀಯರಲ್ಲೂ ಉಂಟಾಗುವುದು. ಅದಕ್ಕಿಂತ ಹೆಚ್ಚಿನ ಸುಖವಿಲ್ಲ.

೧೧೪. ಯಾವುದಿಲ್ಲದಿದ್ದರೆ ಮನಸ್ಸಿಗೆ ಶಾಂತಿಯಿರುವುದಿಲ್ಲವೋ ಅದೇ ಮನುಷ್ಯನಿಗೆ ದುಃಖವೆಂಬುದು. ಆದುದರಿಂದಲೇ ಅವುಗಳು ಸಿಕ್ಕಬೇಕೆಂದು ಅಪೇಕ್ಷಿಸುತ್ತಾನೆ. ಕೊನೆಗೆ ಅದೇನೇ ವೈರಾಗ್ಯಕ್ಕೆ ಕಾರಣವಾಗುವುದು.

**ತದೇವಂ ಜರಯಾ ಗ್ರಸ್ತಮಾಮಯಾವ್ಯಪಿ ನ ಪ್ರಿಯಂ ।**
**ಅಪೂರ್ವವತ್ಸ್ವಮಾತ್ಮಾನಂ ಜರಯಾ ಪರಿಪೀಡಿತಂ ।**
**ಯಃ ಪಶ್ಯನ್ನ ವಿರಜ್ಯೇತ ಕೋಽನ್ಯಸ್ತಸ್ಮಾದಚೇತನಃ ॥ ೧೧೫ ॥**

**ಜರಾಭಿಭೂತೋಽಪಿ ಜನ್ತುಃ ಪತ್ನೀಪುತ್ರಾದಿಬಾಂಧವೈಃ ।**
**ಅಶಕ್ತತ್ವಾದ್ದುರಾಚಾರೈರ್ಭೃತ್ಯೈಶ್ಚ ಪರಿಭೂಯತೇ ॥ ೧೧೬ ॥**

**ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ನ ಜರಯಾ ಪುನಃ ।**
**ಶಕ್ತಸ್ಸಾಧಯಿತುಂ ತಸ್ಮಾದ್ಯುವಾ ಧರ್ಮಂ ಸಮಾಚರೇತ್ ॥ ೧೧೭ ॥**

**ವಾತಪಿತ್ತಕಫಾದೀನಾಂ ವೈಷಮ್ಯಂ ವ್ಯಾಧಿರುಚ್ಯತೇ ।**
**ವಾತಾದೀನಾಂ ಸಮೂಹೇನ ದೇಹೋಽಯಂ ಪರಿಕೀರ್ತಿತಃ ।**
**ತಸ್ಮಾದ್ವ್ಯಾಧಿಮಯಂ ಜ್ಞೇಯಂ ಶರೀರಮಿದಮಾತ್ಮನಃ ॥ ೧೧೮ ॥**

---

೧೧೫. ಆದುದರಿಂದ ಈ ದೇಹವು ಮುಪ್ಪಿನಿಂದಲೂ, ರೋಗದಿಂದಲೂ, ಕೂಡಿರುವುದರಿಂದ ಇದು ಪ್ರಿಯವಲ್ಲ. ಮುಪ್ಪು ಬಂದ ತನ್ನ ದೇಹವು ಹಿಂದಿದ್ದಂತೆ ಇರುವುದಿಲ್ಲವೆಂದು ತಿಳಿದೂ ಯಾವನು ವೈರಾಗ್ಯವಂತನಾಗುವುದಿಲ್ಲವೋ ಅವನಿಗಿಂತಲೂ ಅಜ್ಞಾನಿಯುಂಟೇ?

೧೧೬. ಮುದುಕನಾದವನು ಹೆಂಡತಿ ಮಕ್ಕಳಿಂದಲೂ, ತಿರಸ್ಕರಿಸಲ್ಪಡುತ್ತಾನೆ. ಕೈಲಾಗದಿರುವುದರಿಂದ ಅನಾಚಾರಗಳಿಂದಲೂ, ಆಳುಗಳಿಂದಲೂ, ತಿರಸ್ಕೃತನಾಗುತ್ತಾನೆ.

೧೧೭. ಮುಪ್ಪಿನಿಂದ ಕೂಡಿದವನು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಸಾಧಿಸಲಾರನು. ಆದುದರಿಂದ ಯೌವನದಲ್ಲೇ ಧರ್ಮವನ್ನು ಮಾಡಬೇಕು.

೧೧೮. ವಾತಪಿತ್ತಕಫಗಳ ಉಬ್ಬರವಿಳಿತಗಳೇ ರೋಗವೆನ್ನಿಸಿಕೊಳ್ಳುತ್ತದೆ. ಈ ವಾತ ಪಿತ್ತ ಕಫಗಳಿರುವುದರಿಂದಲೇ ಇದಕ್ಕೆ ದೇಹವೆಂದು ಹೆಸರು ಬಂದಿದೆ. ಆದ್ದರಿಂದಲೇ ಆತ್ಮನ ಈ ಶರೀರವು ರೋಗಮಯವಾದುದು.

ವಾತಾದಿವ್ಯತಿರಿಕ್ತಸ್ಯ ವ್ಯಾಧೀನಾಂ ಚ ಜನಸ್ಯ ಚ ।
ರೋಗೈರ್ನಾನಾವಿಧೈರ್ಯಾತಿ ದೇಹೀ ದುಃಖಾನ್ಯನೇಕಧಾ ॥ ೧೧೯ ॥

ತಾನಿ ಚ ಸ್ವಾತ್ಮವೇದ್ಯಾನಿ ಕಿಮನ್ಯತ್ಕಥಯಾಮ್ಯಹಂ ।
ಏಕೋತ್ತರಂ ಮೃತ್ಯುಶತಮಸ್ಮಿನ್ದೇಹೇ ಪ್ರತಿಷ್ಠಿತಂ ।
ತತ್ರೈಕಃ ಕಾಲಸಂಯುಕ್ತಃ ಶೇಷಾಸ್ತ್ವಾಗನ್ತವಃ ಸ್ಮೃತಾಃ ॥ ೧೨೦ ॥

ಯೇ ತ್ವಿಹಾಗನ್ತವಃ ಪ್ರೋಕ್ತಾಸ್ತೇ ಪ್ರಶ್ಯಾಮ್ಯನ್ತಿ ಭೇಷಜೈಃ ।
ಜಪಹೋಮಪ್ರದಾನೈಶ್ಚ ಕಾಲಮೃತ್ಯುರ್ನ ಶಾಮ್ಯತಿ ॥ ೧೨೧ ॥

ಯದಿ ಹ್ಯಪಮೃತ್ಯುರ್ನ ಸ್ಯಾದ್ವೈ ವಿಷಾಣಾಮದನಂ ಕಿಲ ।
ನಾಪ್ನೈತಿ ತತ್ರ ಪುರುಷೋ ಹ್ಯಪಮೃತ್ಯೋರ್ಬಿಭೇತಿ ಸಃ ॥ ೧೨೨ ॥

ವಿವಿಧಾ ವ್ಯಾಧಯಸ್ತತ್ರ ಸರ್ಪಾದ್ಯಾಃ ಪ್ರಾಣಿನಸ್ತಥಾ ।
ವಿಷಾಣಿ ಚಾಭಿಚಾರಾಶ್ಚ ಮೃತ್ಯೋರ್ದ್ವಾರಾಣಿ ದೇಹಿನಾಂ ॥ ೧೨೩ ॥

---

೧೧೯. ಈ ದೇಹವು ವಾತಾದಿವ್ಯತಿರಿಕ್ತವಾದ ರೋಗಗಳಿಗೆ ಪಂಜರರೂಪವಾದುದು. ಆದುದರಿಂದ ನಾನಾ ವಿಧವಾದ ರೋಗಗಳು ಬರುತ್ತವೆ. ಅವುಗಳೆಲ್ಲವೂ ತನಗೇ ಗೊತ್ತಾಗುತ್ತವೆ. ಇನ್ನೇನು ಬೇಕು, ಕೇಳು.

೧೨೦. ಈ ದೇಹದಲ್ಲಿ ನೂರೊಂದು ಮೃತ್ಯುಗಳು ಕೂಡಿವೆ. ಕೊನೆಯ ಮೃತ್ಯುವು ಕಾಲವನ್ನು ಅನುಸರಿಸಿ ಬರುವುದು. ಮಿಕ್ಕವು ಆಗಾಗ್ಗೆ ಮಧ್ಯದಲ್ಲಿ ಬರತಕ್ಕವು.

೧೨೧. ಆಗಂತುಕಗಳಾದ ಮೃತ್ಯುಗಳು ಔಷಧ, ಜಪ, ಹೋಮ, ದಾನಗಳಿಂದ ನಾಶವಾಗುತ್ತವೆ. ಕಾಲಮೃತ್ಯುವು ಯಾವುದರಿಂದಲೂ ನಾಶವಾಗುವುದಿಲ್ಲ.

೧೨೨. ಒಂದುವೇಳೆ ಅಪಮೃತ್ಯುಗಳು ಬಾರದಿದ್ದರೆ ವಿಷವನ್ನು ಕುಡಿಯಬಹುದಲ್ಲ? ಎಂದರೆ ಮನುಷ್ಯನು ಅದಕ್ಕೂ ಹೋಗುವುದಿಲ್ಲ. ಅಪಮೃತ್ಯುವಿಗೆ ಮನುಷ್ಯನು ಹೆದರುತ್ತಾನೆ.

೧೨೩. ನಾನಾ ಬಗೆಯಾದ ರೋಗಗಳೂ, ಸರ್ಪಾದಿ ವಿಷಪ್ರಾಣಿಗಳೂ, ವಿಷಗಳೂ, ಮಾಟ ಮೊದಲಾದವೂ ಪ್ರಾಣಿಗಳ ಸಾವಿಗೆ ದಾರಿಗಳು.

ಪೀಡಿತಂ ಸರ್ವರೋಗಾದ್ಯೈರಪಿ ಧನ್ವಂತರಿಸ್ಸ್ವಯಂ ।
ಪ್ರತಿಕರ್ತುಂ ನ ಶಕ್ನೋತಿ ಕಾಲಪ್ರಾಪ್ತಂ ಹಿ ನಾನ್ಯಥಾ ॥ ೧೨೪ ॥

ನೌಷಧಂ ನ ತಪೋ ದಾನಂ ನ ಮಂತ್ರಾ ನ ಚ ಬಾಂಧವಾಃ ।
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ॥ ೧೨೫ ॥

ರಸಾಯನತಪೋಯಜ್ಞಯೋಗಸಿದ್ಧಮಹಾತ್ಮಭಿಃ ।
ಅನಾಂತರಿತಶಾಂತಿಸ್ಸ್ಯಾತ್ಕಾಲಮೃತ್ಯುಮವಾಪ್ನುಯಾತ್ ।
ಜಾಯತೇ ಯೋನಿಕೋಟೀಷು ಮೃತಃ ಕರ್ಮವಶಾತ್ಪುನಃ ॥ ೧೨೬ ॥

ದೇಹಭೇದೇನ ಯಃ ಪುಂಸಾಂ ವಿಯೋಗಃ ಕರ್ಮಸಂಕ್ಷಯಾತ್ ।
ಮರಣಂ ತದ್ವಿನಿರ್ದಿಷ್ಟಂ ನ ನಾಶಃ ಪರಮಾರ್ಥತಃ ॥ ೧೨೭ ॥

ಮಹಾತಪಃಪ್ರವಿಷ್ಟಸ್ಯ ಛಿದ್ಯಮಾನೇಷು ಮರ್ಮಸು ।
ಯದ್ದುಃಖಂ ಮರಣೇ ಜಂತೋರ್ನ ತಸ್ಯೇಹೋಪಮಾ ಕ್ವಚಿತ್ ॥ ೧೨೮ ॥

---

೧೨೪. ಧನ್ವಂತರಿಯೂ ಕೂಡ ತಾನೇ ಎಲ್ಲಾ ರೋಗಗಳಿಂದಲೂ ಕೂಡಿರುತ್ತಾನೆ. ಕಾಲಮೃತ್ಯುವಿಗೆ ಆ ಧನ್ವಂತರಿಯೂ ಕೂಡ ಪ್ರತೀಕಾರಮಾಡಲಾರನು.

೧೨೫. ಕಾಲಮೃತ್ಯುವಿನಿಂದ ಕೂಡಿದ ಮನುಜನನ್ನು ಔಷಧ, ತಪಸ್ಸು, ದಾನ, ಮಂತ್ರಗಳಾಗಲಿ, ಬಂಧುಬಾಂಧವರಾಗಲಿ ಯಾರೂ ಕಾಪಾಡಲು ಸಾಧ್ಯವಿಲ್ಲ.

೧೨೬. ರಸಾಯನ, ತಪಸ್ಸು, ಯಜ್ಞ, ಸಿದ್ಧರು, ಮಹಾತ್ಮರುಗಳಿಂದ ಅಪಮೃತ್ಯುಗಳಿಗೆ ಶಾಂತಿಯಾಗಿ ಕಾಲಮೃತ್ಯುವನ್ನು ಹೊಂದುತ್ತಾರೆ. ಸತ್ತಮೇಲೆ ಕರ್ಮಾಧೀನದಿಂದ ಅನೇಕಕೋಟಿ ಯೋನಿಗಳಲ್ಲಿ ಹುಟ್ಟುತ್ತಾರೆ.

೧೨೭. ಕರ್ಮದ ನಾಶದಿಂದ ಎಂದರೆ ಕರ್ಮಾನುಸಾರವಾಗಿ ಫಲವನ್ನು ಅನುಭವಿಸಿದನಂತರ ಬೇರೆ ದೇಹಕ್ಕೆ ಹೋಗುವುದನ್ನು ನಾಶವೆನ್ನುತ್ತಾರೆ. ಮನುಷ್ಯರಿಗೆ ಅದು ಯಥಾರ್ಥವಾಗಿ ಮರಣವಲ್ಲ.

೧೨೮. ಮಹತ್ತಾದ ತಪಸ್ಸನ್ನು ಮಾಡಲು ಕೂತಿರುವವನಿಗೆ ಮನಸ್ಸನ್ನು ವಿಷಯಗಳ ಕಡೆಗೆ ಹೋಗದಂತೆ ಬಿಗಿಹಿಡಿಯಲು ತೊಂದರೆಪಡುತ್ತಿರುವಾಗ ಯಾವ ದುಃಖವುಂಟಾಗುತ್ತದೆಯೋ, ಅದೇ ದುಃಖವು ಮರಣದಲ್ಲಿ ಉಂಟಾಗುತ್ತದೆ. ಅದಕ್ಕೆ ಹೋಲಿಕೆಯೇ ಸಿಕ್ಕುವುದಿಲ್ಲ.

**ಹಾ ತಾತ ಮಾತಃ ಕಾನ್ತೇತಿ ಕ್ರನ್ದತ್ಯೇವಂ ಸುದುಃಖಿತಃ ।**
**ಮಂಡೂಕ ಇವ ಸರ್ಪೇಣ ಗ್ರಸ್ಯತೇ ಮೃತುನಾ ಜಗತ್ ॥ ೧೨೯ ॥**

**ಬಾಂಧವೈಃ ಸ ಪರಿತ್ಯಕ್ತಃ ಪ್ರಿಯೈಶ್ಚ ಪರಿವಾರಿತಃ ।**
**ನಿಶ್ವಸನ್ ದೀರ್ಘಮುಷ್ಣಂ ಚ ಮುಖೇನ ಪರಿಶುಷ್ಯತೇ ॥ ೧೩೦ ॥**

**ಶಯ್ಯಾಸ್ತಃ ಪರಿವೃತ್ತಶ್ಚ ಮುಹ್ಯತೇ ಚ ಮುಹುರ್ಮುಹುಃ ।**
**ಸಮ್ಮೂಢಃ ಕ್ಷಿಪತೇಽತ್ಯರ್ಥಂ ಹಸ್ತಪಾದಾವಿತಸ್ತತಃ ॥ ೧೩೧ ॥**

**ಶಯ್ಯಾತಃ ಪತತೇ ಭೂಮಿಂ ಭೂಮೇಶ್ಶಯ್ಯಾಂ ಪುನರ್ಮುಹೀಂ ।**
**ವಿವಶಸ್ತ್ಯಕ್ತಲಜ್ಜಶ್ಚ ಮೂತ್ರವಿಷ್ಠಾನುಲೇಪಿತಃ ॥ ೧೩೨ ॥**

**ಯಾಚಮಾನಶ್ಚ ಸಲಿಲಂ ಶುಷ್ಕಕಂಠೌಷ್ಠತಾಲುಕಃ ।**
**ಚಿಂತಯಾನಶ್ಚ ವಿತ್ತಾನಿ ಕಸ್ಯೈತಾನಿ ಮೃತೇ ಮಯಿ ॥ ೧೩೩ ॥**

---

೧೨೯. ಆಗ ಸಾಯುವಾಗ ಅಪ್ಪಾ, ಅಮ್ಮಾ, ಕಾನ್ತೆ, ಎಂಬುದಾಗಿ ಅಳುತ್ತಿರುವನು. ಹಾವು ಕಪ್ಪೆಯನ್ನು ಹಿಡಿದಿರುವಂತೆ ಈ ಜಗತ್ತು ಮೃತ್ಯುವಿನಿಂದ ಹಿಡಿಯಲ್ಪಟ್ಟಿದೆ.

೧೩೦. ಬಾಂಧವರೆಲ್ಲರೂ ಅವನನ್ನು ತೊರೆಯುತ್ತಾರೆ. ಪ್ರೀತಿಯುಳ್ಳವರು ಮಾತ್ರ ಸುತ್ತಲೂ ಇರುತ್ತಾರೆ. ಆಗ ನಿಟ್ಟುಸಿರು ಬಿಡುತ್ತಾ ಮುಖದಲ್ಲಿ ಕಾಂತಿ ಹೀನನಾಗುತ್ತಾನೆ.

೧೩೧. ಹಾಸಿಗೆಯಲ್ಲಿ ಹೊರಳಾಡುತ್ತಿದ್ದರೆ ಬಾರಿಬಾರಿಗೂ ಹಿಡಿದುಕೊಳ್ಳುತ್ತಾರೆ. ಅನಂತರ ಜ್ಞಾನತಪ್ಪಿ ಕೈಕಾಲುಗಳನ್ನು ಅತ್ತಿತ್ತ ಹಾಕುತ್ತಾನೆ.

೧೩೨. ಹಾಸಿಕೆಯಿಂದ ನೆಲಕ್ಕೂ ನೆಲದಿಂದ ಹಾಸಿಕೆಗೂ ಒದ್ದಾಡುತ್ತಾನೆ. ಸ್ವಾಧೀನವಿಲ್ಲದವನಾಗಿ ಲಜ್ಜೆಯಿಲ್ಲದೆ, ಮಲಮೂತ್ರಗಳಿಂದ ಬಳಿಯಲ್ಪಟ್ಟವನಾಗಿರುತ್ತಾನೆ.

೧೩೩. ಗಂಟಲು, ತುಟಿ, ದವಡೆಗಳು ಒಣಗಿ ನೀರನ್ನು ಕೇಳುತ್ತಿರುತ್ತಾನೆ. ನನ್ನ ಈ ದುಡ್ಡೆಲ್ಲವೂ ನಾನು ಸತ್ತಮೇಲೆ ಯಾರಿಗೆ ಹೋಗುವುದೆಂದೂ, ನಾಶವಾಗುವುದಲ್ಲಾ ಎಂದೂ ಯೋಚಿಸುತ್ತಿರುತ್ತಾನೆ.

**ಯಮದೂತೈರ್ನೀಯಮಾನಃ ಕಾಲಪಾಶೇನ ಕರ್ಷಿತಃ ।**
**ಮ್ರಿಯತೇ ಪಶ್ಯತಾಮೇವಂ ಕಂಠೇ ಘುರುಘುರಾಯತೇ ॥ ೧೩೪ ॥**

**ಜೀವಸ್ತು ಜನ್ಮನೈಕೇನ ದೇಹಾದ್ದೇಹಮಿತಿ ಕ್ರಮಾತ್ ।**
**ಸಂಪ್ರಾಪ್ಯೋತ್ತರಸಂಗಂ ಚ ದೇಹಂ ತ್ಯಜತಿ ಪೂರ್ವಕಂ ॥ ೧೩೫ ॥**

**ಮರಣಾತ್ ಪ್ರಾರ್ಥನಾದ್ದುಃಖಮಧಿಕಂ ಹಿ ವಿವೇಕಿನಾಂ ।**
**ಕ್ಷಣಿಕಂ ಮರಣಾದ್ದುಃಖಮನಂತಂ ಪ್ರಾರ್ಥನಾಕೃತಂ ॥ ೧೩೬ ॥**

**ಜಗತಾಂ ಪತಿರರ್ಥಿತ್ವಾದ್ವಿಷ್ಣುರ್ವಾಮನತಾಂ ಗತಃ ।**
**ಅಧಿಕಃ ಕೋಽಪರಸ್ತಸ್ಮಾದ್ಯೋ ನ ಯಾತ್ಯತಿಲಾಘವಂ ॥ ೧೩೭ ॥**

**ಜ್ಞಾತಂ ಮಯೇದಮಧುನಾ ಮೃತ್ಯೋರಧಿಕಮದ್ಭುತಂ ।**
**ನ ಪರಂ ಪ್ರಾರ್ಥಯೇದ್ಭೂಯಸ್ತೃಷ್ಣಾ ಲಾಘವಕಾರಣಂ ।**
**ನಿಸರ್ಗಾತ್ಸರ್ವಭೂತಾನಾಮಿತಿ ದುಃಖಪರಂಪರಾ ॥ ೧೩೮ ॥**

---

೧೩೪. ಕಾಲಪಾಶದಿಂದ ಕಟ್ಟಿ ಯಮದೂತರಿಂದೆಳೆಯಲ್ಪಟ್ಟು ಸಾಯುತ್ತಾ ಕುತ್ತಿಗೆಯಲ್ಲಿ ಘುರು ಘುರು ಎಂದು ಶಬ್ದಮಾಡುತ್ತಿರುತ್ತಾನೆ.

೧೩೫. ಜೀವವು ಒಂದು ಜನ್ಮದಿಂದ ಮತ್ತೊಂದು ಜನ್ಮಕ್ಕೆ ಎಂದರೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಈ ಕ್ರಮದಲ್ಲಿ ಮುಂದಿನ ಸಂಬಂಧವನ್ನು ಹೊಂದಿ ಈ ದೇಹವನ್ನು ಬಿಡುತ್ತದೆ.

೧೩೬. ವಿವೇಕಿಗಳಿಗೆ ಮರಣ ದುಃಖಕ್ಕಿಂತಲೂ ಯಾಚನೆಯ ದುಃಖವು ಹೆಚ್ಚಾದುದು. ಮರಣ ದುಃಖವು ಕ್ಷಣಿಕವಾದುದು. ಯಾಚನೆಯ ದುಃಖವು ಯಾವಾಗಲೂ ಇರತಕ್ಕುದು.

೧೩೭. ಜಗತ್ತಿಗೆ ಒಡೆಯನಾದ ವಿಷ್ಣುವೇ ಯಾಚನೆಮಾಡುವಾಗ ವಾಮನನಾದನು. (ಬಗ್ಗಿಹೋದನು) ಅವನಿಗಿಂತ ದೊಡ್ಡವರಾರು? ಯಾರು ತಾನೇ ಯಾಚನೆಮಾಡುವಾಗ ಲಾಘವವನ್ನು ಹೊಂದುವುದಿಲ್ಲ?

೧೩೮. ಈಗ ನನಗೆ ಗೊತ್ತಾಯಿತು. ಮೃತ್ಯುವಿಗಿಂತ ಒಂದು ಪದಾರ್ಥವು ದೊಡ್ಡದಿದೆ. ಮತ್ತೊಬ್ಬರನ್ನು ಯಾಚಿಸಬಾರದು. ಆಸೆಯೇ ಲಾಘವಕ್ಕೆ ಕಾರಣವು. ಸ್ವಭಾವವಾಗಿ ಈ ದುಃಖಪರಂಪರೆಗಳು ಉದ್ದಕ್ಕೂ ಇದ್ದೇ ಇರುತ್ತವೆ.

**ಚತುರ್ಮಾಸಾನತೀತಾನಿ ದುಃಖಾನ್ಯೇತಾನಿ ಯಾನಿ ಚ ।**
**ನ ನರಶ್ಚೋಚಯೇಜ್ಜನ್ಮ ನ ವಿರಜ್ಯತಿ ತೇನ ವೈ ॥ ೧೩೯ ॥**

**ಅತ್ಯಾಹಾರಾನ್ಮಹದ್ದುಃಖಮನಾಹಾರಾನ್ಮಹಾತುರಃ ।**
**ತ್ರುಟತೇ ಭೋಜನೇ ಕಂಠಮನ್ಯಚ್ಚೈವಂ ಕುತಃ ಸುಖಂ ॥ ೧೪೦ ॥**

**ಕ್ಷುಧಾ ಹಿ ಸರ್ವರೋಗಾಣಾಂ ವ್ಯಾಧಿಃ ಶ್ರೇಷ್ಠತಮಸ್ಸ್ಮೃತಃ ।**
**ಸಾ ಕಾಮ್ಯೌಷಧಿಲಾಭೇನ ಕ್ಷಣಮಾತ್ರಂ ಪ್ರಯಾಸ್ಯತಿ ॥ ೧೪೧ ॥**

**ಕ್ಷುದಾಧಿವೇದನಾ ತೀವ್ರಾ ನಿಶ್ಶೇಷಬಲಕೃಂತನೀ**
**ತಯಾಽಭಿಭೂತೋ ಮ್ರಿಯತೇ ಯಥಾನ್ಯೈರ್ವ್ಯಾಧಿಭಿರ್ನರಃ ॥ ೧೪೨ ॥**

**ಆಹಾರೇಽಪಿ ಹಿ ಕಿಂ ಸೌಖ್ಯಂ ಜಿಹ್ವಾಗ್ರೇ ಹಿ ಪ್ರವರ್ತಿನಿ ।**
**ತತ್ಕ್ಷಣಾದರ್ಧಕಾಲೇನ ಕಂಠಂ ಪ್ರಾಪ್ಯ ನಿವರ್ತತೆ ॥ ೧೪೩ ॥**

---

೧೩೯. ದುಃಖದಿಂದಲೇ ಕಳೆದುಹೋಗುವ ಚಾತುರ್ಮಾಸ್ಯಗಳನ್ನು ಯೋಚಿಸುವುದಿಲ್ಲ. ಪುನರ್ಜನ್ಮವನ್ನೂ ಯೋಚಿಸುವುದಿಲ್ಲ. ಆ ಜನ್ಮದಿಂದ ವೈರಾಗ್ಯವನ್ನು ಹೊಂದುವುದಿಲ್ಲ.

೧೪೦. ಹೆಚ್ಚು ತಿಂದರೆ ಸಂಕಟವಾಗುವುದು. ತಿನ್ನದೆ ಹಸಿದುಕೊಂಡಿದ್ದರೆ ಆತುರಪಡಬೇಕಾಗುವುದು. ಊಟಮಾಡುವಾಗ ಗಂಟಲು ನೋಯುವುದು. ಇನ್ನು ಸುಖವೆಲ್ಲಿದೆ?

೧೪೧. ಹಸಿವೆಂಬದು ಎಲ್ಲಾ ರೋಗಗಳಲ್ಲಿಯೂ ದೊಡ್ಡ ರೋಗವು. ಆ ಹಸಿವೆಂಬ ರೋಗವು, ಬೇಕಾದ ಆಹಾರವೆಂಬ ಔಷಧದಿಂದ ಶಾನ್ತವಾಗುತ್ತದೆ. ಅದೂ ಕ್ಷಣಮಾತ್ರ.

೧೪೨. ಹಸಿವೆಂಬ ರೋಗದ ವೇದನೆಯು ತೀವ್ರವಾದುದು. ಬಲವೆಲ್ಲವನ್ನೂ ನಾಶಮಾಡುವಂತಹದು. ಅದು ಕೂಡ ಮನುಜನನ್ನು ಹಿಂಡಿ ಇತರ ವ್ಯಾಧಿಗಳಂತೆ ಅವನನ್ನು ಕೊಲ್ಲುತ್ತದೆ.

೧೪೩. ಆಹಾರದಲ್ಲಿ ತಾನೇ ಸೌಖ್ಯವೇನಿದೆ? ಆಹಾರದ ಸೌಖ್ಯ ತಿಳಿಯಬೇಕಾದರೆ ರುಚಿ ಸೂಚಕವಾದ ನಾಲಗೆಯ ತುದಿಯಲ್ಲಿ ಆಹಾರವಿರಬೇಕು. ಆಹಾರವು ಬಾಯಲ್ಲಿ ಹಾಕಿಕೊಂಡ ಅರ್ಧಕ್ಷಣದಲ್ಲಿಯೇ ಗಂಟಲನ್ನು ಹೊಂದಿ ಕೆಳಗೆ ಹೊರಟುಹೋಗುತ್ತದೆ.

ಇತಿ ಕ್ಷುದ್ವ್ಯಾಧಿತಸ್ತಾನಾಮನ್ನಮೌಷಧವತ್ಸ್ಮೃತಂ ।
ನ ತತ್ಸುಖಾಯ ಮನ್ತವ್ಯಂ ಪರಮಾರ್ಥೇನ ಪಂಡಿತೈಃ ॥ ೧೪೪ ॥

ಮೃತೋಽಯಮಗ್ರತಶ್ಶೇತೇ ಸರ್ವಕಾರ್ಯವಿವರ್ಜಿತಃ ।
ತತ್ರಾಪಿ ಚ ಕುತಸ್ಸೌಖ್ಯಂ ತಪಸಾ ಚೋದಿತಾತ್ಮನಃ ॥ ೧೪೫ ॥

ಪ್ರರೋಧೇ ಹಿ ಕುತಸ್ಸೌಖ್ಯಂ ಕಾರ್ಯೈರುಪಹತಾತ್ಮನಃ ।
ಕೃಷಿವಾಣಿಜ್ಯಸೇವಾಖ್ಯಗೋರಕ್ಷಾದಿಪರಿಶ್ರಮೈಃ ॥ ೧೪೬ ॥

ಪ್ರಾತರ್ಮೂತ್ರಪುರೀಷಾಭ್ಯಾಂ ಮಧ್ಯಾಹ್ನೇ ಕ್ಷುತ್ಪಿಪಾಸಯಾ ।
ತೃಪ್ತಾಃ ಕಾಮೇನ ಬಾಧ್ಯನ್ತೇ ನಿದ್ರಯಾ ನಿಶಿ ಜನ್ತವಃ ॥ ೧೪೭ ॥

ಅರ್ಥಸ್ಯೋಪಾರ್ಜನೇ ದುಃಖಂ ದುಃಖಮರ್ಜಿತರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಮರ್ಥಸ್ಯೈವ ಕುತಃ ಸುಖಂ ॥ ೧೪೮ ॥

---

೧೪೪. ಹಸಿವೆಂಬ ರೋಗಬಂದವರಿಗೆ ಅನ್ನವು ಔಷಧವೆಂದು ಹೇಳಲ್ಪಟ್ಟಿದೆ. ಅದನ್ನು ಪಂಡಿತರು ಸುಖವಾದುದೆಂದು ಭಾವಿಸಬಾರದು.

೧೪೫. ಸತ್ತ ಮನುಷ್ಯನು ಎಲ್ಲಾ ಕೆಲಸವನ್ನೂ ಬಿಟ್ಟು ಬಿದ್ದಿರುವುದನ್ನು ಎದುರಿಗೆ ನೋಡುತ್ತೇವೆ. ತಪಸ್ಸುಮಾಡಿ ಅದರಿಂದಲೇ ಕೃಶನಾದವನಿಗೇನು ಸೌಖ್ಯವಿದೆ?

೧೪೬. ಕೆಲಸಗಳಿಂದ ತೊಂದರೆಪಟ್ಟರೆ, ಅದರಲ್ಲೂ ಬೇಸಾಯ, ವ್ಯಾಪಾರ, ಸೇವೆ, ಗೋರಕ್ಷೆಗಳ ರೂಪದಿಂದ ಕ್ಲೇಶಿಸದೆ ಆತ್ಮನನ್ನು ತಡೆದರೆ ತಾನೇ ಏನು ಸೌಖ್ಯ?

೧೪೭. ಪ್ರಾಣಿಗಳು ಬೆಳಗ್ಗೆ ಮಲಮೂತ್ರದಿಂದಲೂ, ಮಧ್ಯಾಹ್ನದಲ್ಲಿ ಹಸಿವು ಬಾಯಾರಿಕೆಗಳಿಂದಲೂ, ಅದಾದಮೇಲೆ ಕಾಮದಿಂದಲೂ, ರಾತ್ರಿಯಲ್ಲಿ ನಿದ್ದೆಯಿಂದಲೂ, ಬಾಧಿಸಲ್ಪಡುತ್ತವೆ. ಎಂದರೆ ಒಂದಾಗುತ್ತಲೊಂದು ದುಃಖವು ಬರುತ್ತಲೇ ಇರುವುದು.

೧೪೮. ಹಣವನ್ನು ಸಂಪಾದಿಸುವುದರಲ್ಲಿ ದುಃಖವುಂಟಾಗುತ್ತದೆ. ಸಂಪಾದಿಸಿದುದನ್ನು ಕಾಪಾಡುವುದರಲ್ಲಿ ಆಮೇಲೆ ದುಃಖ ಬರುತ್ತದೆ. ನಾಶವಾದರೂ ದುಃಖ, ಖರ್ಚು ಮಾಡಿದರೂ ದುಃಖ, ದುಡ್ಡಿನಿಂದ ಸುಖವೆಲ್ಲಿದೆ?

**ಚೌರೇಭ್ಯಃ ಸಲಿಲೇಭ್ಯೋಽಗ್ನೇಃ ಸ್ವಜನಾತ್ಪಾರ್ಥಿವಾದಪಿ ।**
**ಭಯಮರ್ಥವತಾಂ ನಿತ್ಯಂ ಮೃತ್ಯೋರ್ದೇಹಭೃತಾಮಿವ ॥ ೧೪೯ ॥**

**ಖೇ ಯಥಾ ಪಕ್ಷಿಭಿರ್ಮಾಂಸಂ ಭುಜ್ಯತೇ ಶ್ವಾಪದೈರ್ಭುವಿ ।**
**ಜಲೇ ಚ ಭಕ್ಷ್ಯತೇ ಮತ್ಸ್ಯೈಸ್ತಥಾ ಸರ್ವತ್ರ ವಿತ್ತವಾನ್ ॥ ೧೫೦ ॥**

**ವಿಮೋಹಯನ್ತಿ ಸಂಪತ್ಸು ತಾಪಯನ್ತಿ ವಿಪತ್ಸು ವಾ ।**
**ಖೇದಯಂತ್ಯರ್ಜನೇ ದುಃಖಂ ಕಥಮರ್ಥಾಃ ಸುಖಾವಹಾಃ ॥ ೧೫೧ ॥**

**ಪ್ರಾಗರ್ಥಂ ಯಾತಿ ಚೋದ್ವಿಗ್ನಃ ಪಶ್ಚಾತ್ ಸರ್ವಾರ್ಥನಿಸ್ಪೃಹಃ ।**
**ಜನ್ತುರರ್ಥಾಗಮಾಚ್ಚಾಪಿ ಸುಖೀ ಸ್ಯಾತ್ತೇನ ದುಃಖ್ಯಪಿ ॥ ೧೫೨ ॥**

**ಹೇಮನ್ತೇ ಶಿಶಿರೇ ದುಃಖಂ ಗ್ರೀಷ್ಮೇ ತಾಪಶ್ಚ ದಾರುಣಃ ।**
**ಪ್ರಾವೃಷ್ಯತ್ಯಲ್ಪವೃಷ್ಟಿಭ್ಯಾಂ ಕಾಲೇಷ್ವೇವಂ ಕುತಃ ಸುಖಂ ॥ ೧೫೩ ॥**

---

೧೪೯. ಪ್ರಾಣಿಗೆ ಮೃತ್ಯುವಿನ ದೆಸೆಯಿಂದ ಭಯವಿರುವಂತೆ ದುಡ್ಡಿರುವವನಿಗೆ ಕಳ್ಳ, ನೀರು, ಬೆಂಕಿ, ಸ್ವಜನಗಳು, ರಾಜ ಇವರುಗಳಿಂದ ಭಯವು ಯಾವಾಗಲೂ ಇದ್ದೇ ಇರುತ್ತದೆ.

೧೫೦. ಮಾಂಸವು ಅಂತರಿಕ್ಷದಲ್ಲಿ ಪಕ್ಷಿಗಳಿಂದಲೂ ನೆಲದಲ್ಲಿ ಕ್ರೂರಮೃಗಗಳಿಂದಲೂ, ನೀರಿನಲ್ಲಿ ಮೀನುಗಳಿಂದಲೂ, ಹೇಗೆ ತಿನ್ನಲ್ಪಡುತ್ತದೆಯೋ ಹಾಗೆ ಹಣವಂತನನ್ನು ಎಲ್ಲಾ ಕಡೆಯಲ್ಲೂ ಎಲ್ಲರೂ ಕಿತ್ತು ತಿನ್ನುತ್ತಾರೆ.

೧೫೧. ಹಣವು ಮನುಷ್ಯನನ್ನು ಸಂಪತ್ತಿನಲ್ಲಿ ಮೋಹಗೊಳಿಸುತ್ತದೆ. ಕಷ್ಟದಲ್ಲಿ ದುಃಖ ಕೊಡುತ್ತದೆ. ಸಂಪಾದನೆಯಲ್ಲಿ ಕಷ್ಟಕೊಡುತ್ತದೆ. ಆದುದರಿಂದ ದುಡ್ಡು ಹೇಗೆತಾನೆ ಸುಖವನ್ನು ಕೊಡಬಲ್ಲದು?

೧೫೨. ಮೊದಲು ಹಣವಿಲ್ಲವೆಂದು ದುಃಖಪಡುತ್ತಾನೆ. ಅನಂತರ ಅದೇ ಹಣವು ಆಶೆಯನ್ನು ಬಿಡಿಸುತ್ತದೆ. ಹಣ ಬಂದುದರಿಂದ ಪ್ರಾಣಿಯು ಸುಖಿಯೂ ದುಃಖಿಯೂ ಕೂಡ ಆಗುತ್ತಾನೆ.

೧೫೩. ಹಿಮನ್ತ ಶಿಶಿರ ಋತುಗಳಲ್ಲಿ ಚಳಿಯ ದುಃಖವು. ಗ್ರೀಷ್ಮಋತುವಿನಲ್ಲಿ ಬಹುವಾದ ಶೆಖೆಯು. ಮಳೆಗಾಲದಲ್ಲಿ ಸ್ವಲ್ಪವಾದ ಮಳೆಯಿಂದಲೂ ತೊಂದರೆ ಪಡುತ್ತಾನೆ. ಕಾಲದಲ್ಲಿ ತಾನೇ ಸುಖವೆಲ್ಲಿದೆ?

ವಿವಾಹವಿಸ್ತರೇ ದುಃಖಂ ತದ್ಗರ್ಭೋದ್ವಹನೇ ಪುನಃ ।
ಪ್ರಸವೈರಪಿ ದುಃಖೈಶ್ಚ ದುಃಖಂ ವಿಷ್ಠಾದಿಕರ್ಮಜಂ ॥ ೧೫೪ ॥

ದಂತಾಕ್ಷಿರೋಗೇ ಪುತ್ರಸ್ಯ ಹಾ ಕಷ್ಟಂ ಕಿಂ ಕರೋಮ್ಯಹಂ ।
ಗಾವೋ ನಷ್ಟಾಃ ಕೃಷಿರ್ಭಗ್ನಾ ಭಾರ್ಯಾ ಚ ಪ್ರಪಲಾಯಿತಾ ॥ ೧೫೫ ॥

ಅಮೀ ಪ್ರಾಘೂರ್ಣಿಕಾಃ ಪ್ರಾಪ್ತಾ ಭಯಂ ಮೇ ಶಂಸಿನೋ ಗ್ರಹಾಃ ।
ಬಾಲಾಪತ್ಯಾ ಚ ಮೇ ಭಾರ್ಯಾ ಕಿಂ ಕರಿಷ್ಯತಿ ವೈ ಧನಂ ॥ ೧೫೬ ॥

ಪ್ರದೇಯಕಾಲೇ ಕನ್ಯಾಯಾಃ ಕೀದೃಶಶ್ಚ ವರೋ ಭವೇತ್ ।
ಏತಚ್ಚಿಂತಾಭಿಭೂತಾನಾಂ ಕುತಸ್ಸೌಖ್ಯಂ ಕುಟುಂಬಿನಾಂ ॥ ೧೫೭ ॥

ಕುಟುಂಬಚಿಂತಾಕುಲಿತಸ್ಯ ಪುಂಸಃ
ಶ್ರುತಂ ಚ ಶೀಲಂ ಚ ಗುಣಾಶ್ಚ ಸರ್ವೇ ॥
ಅಪಕ್ವಕುಂಭೇ ನಿಹಿತಾ ಇವಾಪಃ
ಪ್ರಯಾಂತಿ ದೇಹೇನ ಸಮಂ ವಿನಾಶಂ ॥ ೧೫೮ ॥

---

೧೫೪-೧೫೫. ಮದುವೆಯಲ್ಲಿ ಆಡಂಬರದ ದುಃಖ. ಆ ಮೇಲೆ ಗರ್ಭವನ್ನು ಧರಿಸಲಿಲ್ಲವೆಂಬ ದುಃಖ. ಧರಿಸಿದಮೇಲೆ ಹೆರಿಗೆಯ ದುಃಖ. ಅನಂತರ ಆ ಮಗುವಿನ ಜಲಮಲ ಬಾಧೆಗಳನ್ನು ಬಳಿಯುವ ದುಃಖ. ಆ ಮೇಲೆ ಮಗನಿಗೆ ಹಲ್ಲು ನೋವು ಕಣ್ಣುನೋವುಗಳು ಬಂದರೆ ಕಷ್ಟವು. ಅಯ್ಯೋ ಕಷ್ಟವು ಏನುಮಾಡಲಿ? ದನಗಳು ಹೋದವು, ಕೃಷಿನಾಶವಾಯಿತು, ಹೆಂಡತಿ ಹೊರಟುಹೋದಳು.

೧೫೬-೧೫೭. ಹೆಂಡತಿಯು ಎಳೆ ಮಗುವನ್ನು ಕಟ್ಟಿಕೊಂಡಿದ್ದಾಳೆ. ನನ್ನ ಹಣವನ್ನು ಏನುಮಾಡುತ್ತಾಳೋ? ಮಗಳಿಗೆ ಮದುವೆ ಕಾಲವು. ವರನು ಎಂಥವನು ಸಿಕ್ಕುತ್ತಾನೋ? ಎಂಬ ಈ ರೀತಿಯಾದ ಚಿಂತೆಯಿಂದ ಕೂಡಿರುವ ಸಂಸಾರಿಗೆ ಸುಖವೆಲ್ಲಿಯದು?

೧೫೮. ಕುಟುಂಬ ಚಿಂತೆಯಿಂದ ಕೂಡಿರುವ ಮನುಷ್ಯನಿಗೆ, ಹಸಿಯ ಮಡಕೆಯಲ್ಲಿ ನೀರು ಹಾಕಿದರೆ ನೀರು ಮಡಕೆಯೊಡನೆ ನಾಶವಾಗುವಂತೆ ಅವನ ಓದು, ಶೀಲ, ಗುಣಗಳು ಇವೆಲ್ಲವೂ ದೇಹದೊಡನೆಯೇ ನಾಶವಾಗುತ್ತವೆ.

ರಾಜ್ಯೇಽಪಿ ಹಿ ಕುತಸ್ಸೌಖ್ಯಂ ಸಂಧಿವಿಗ್ರಹಚಿನ್ತಯಾ ।
ಪುತ್ರಾದಪಿ ಭಯಂ ಯತ್ರ ತತ್ರ ಸೌಖ್ಯಂ ಹಿ ಕೀದೃಶಂ ॥ ೧೫೯ ॥

ಸ್ವಜಾತೀಯಾದ್ಭಯಂ ಪ್ರಾಯಃ ಸರ್ವೇಷಾಮೇವ ದೇಹಿನಾಂ ।
ಏಕದ್ರವ್ಯಾಭಿಲಾಷಿತ್ವಾಚ್ಛುನಾಮಿವ ಪರಸ್ಪರಂ ॥ ೧೬೦ ॥

ನ ಪ್ರವಿಶ್ಯ ವನಂ ಕಶ್ಚಿನ್ನೃಪಃ ಖ್ಯಾತೋ ಹಿ ಭೂತಳೇ ।
ನಿಖಿಲಂ ಯಸ್ತಿರಸ್ಕೃತ್ಯ ಸುಖಂ ತಿಷ್ಠತಿ ನಿರ್ಭಯಃ ॥ ೧೬೧ ॥

ಯುದ್ಧೇಬಾಹುಸಹಸ್ರಂ ಹಿ ಪಾತಯಾಮಾಸ ಭೂತಳೇ ।
ಶ್ರೀಮತಃ ಕಾರ್ತವೀರ್ಯಸ್ಯ ಋಷಿಪುತ್ರಃ ಪ್ರತಾಪವಾನ್ ॥ ೧೬೨ ॥

ಋಷಿಪುತ್ರಸ್ಯ ರಾಮಸ್ಯ ರಾಮೋ ದಶರಥಾತ್ಮಜಃ ।
ಜಘಾನ ವೀರ್ಯಮತುಳಮೂರ್ಧ್ವಗಂ ಸುಮಹಾತ್ಮನಃ ॥ ೧೬೩ ॥

---

೧೫೯. ರಾಜ್ಯದಲ್ಲಿಯೂ ಕೂಡ ಸಂಧಿಸಮರಗಳ ಯೋಚನೆಯಿರುವುದರಿಂದ ಸೌಖ್ಯವಿಲ್ಲ. ರಾಜ್ಯಸುಖದಲ್ಲಿ ಮಗನಿಂದಲೇ ರಾಜನಿಗೆ ಅನೇಕವೇಳೆ ಭಯವಿರುವಲ್ಲಿ ಸೌಖ್ಯವೆಲ್ಲಿಂದ ಬಂದೀತು?

೧೬೦. ಎಲ್ಲಾ ಪ್ರಾಣಿಗಳಿಗೂ ಸ್ವಜಾತಿಯಿಂದ ಭಯ ಹೆಚ್ಚು. ಒಂದೇ ಪದಾರ್ಥದಲ್ಲಿ ಆಸೆಯುಳ್ಳ ನಾಯಿಗಳಂತೆ ಅವರ ಜನದಿಂದಲೇ ಅವರಿಗೆ ಭಯವುಂಟು.

೧೬೧. ಎಲ್ಲವನ್ನೂ ತಿರಸ್ಕರಿಸಿ ನಿರ್ಭಯನಾಗಿ ಕಾಡಿಗೆ ಹೋಗಿ ಸುಖವಾಗಿದ್ದ ರಾಜನು ಭೂಲೋಕದಲ್ಲಿ ಪ್ರಖ್ಯಾತನಾದವನೊಬ್ಬನೂ ಇಲ್ಲ.

೧೬೨. ಒಬ್ಬ ಪ್ರತಾಪಶಾಲಿಯಾದ ಋಷಿಪುತ್ರನು ಪೂಜ್ಯನೂ ಶಕ್ತನೂ ಆದ ಕಾರ್ತವೀರ್ಯನ ಸಾವಿರ ತೋಳುಗಳನ್ನು ಯುದ್ಧದಲ್ಲಿ ಕತ್ತರಿಸಿದನು.

೧೬೩. ಮಹಾತ್ಮನಾದ ಪರಶುರಾಮನ ಅಪ್ರತಿಮವಾದ ಪರಾಕ್ರಮವೆಂಬ ಕೀರ್ತಿಯನ್ನು ದಶರಥ ಮಗನಾದ ರಾಮನು ನಾಶಮಾಡಿದನು.

ಜರಾಸಂಧೇನ ರಾಮಸ್ಯ ತೇಜಸಾ ನಾಶಿತಂ ಯಶಃ ।
ಜರಾಸಂಧಸ್ಯ ಭೀಮೇನ ತಸ್ಯಾಪಿ ಪವನಾತ್ಮಜಃ ॥ ೧೬೪ ॥

ಹನುಮಾನ್ ಭರತೇನಾಪಿ ಪ್ರಕ್ಷಿಪ್ತಃ ಪತಿತಂ ಕ್ಷಿತೌ ।
ನಿವಾತಕವಚಾಸ್ಸರ್ವೇ ದಾನವಾ ಬಲದರ್ಪಿಣಃ ॥ ೧೬೫ ॥

ಜಿತವಾನರ್ಜುನಸ್ತಾನ್ವೈ ಗೋಪೈಸ್ಸ ಚ ವಿನಿರ್ಜಿತಃ ।
ಸೂರ್ಯಃ ಪ್ರತಾಪಯುಕ್ತೋಽಪಿ ಮೇಘೈಸ್ಸಂಛಾದ್ಯತೇ ಕ್ವಚಿತ್ ॥ ೧೬೬ ॥

ಕ್ಷಿಪ್ಯಂತೇ ವಾಯುನಾ ಮೇಘಾ ವಾಯೋರ್ವೀರ್ಯಂ ನಗೈರ್ಜಿತಂ ।
ದಹ್ಯಂತೇ ವಹ್ನಿನಾ ಶೈಲಾಃ ಸ ವಹ್ನಿಃ ಶಾಮ್ಯತೇ ಜಲೈಃ ॥ ೧೬೭ ॥

ತಜ್ಜಲಂ ಶೋಷ್ಯತೇ ಸೂರ್ಯೈಸ್ತೇ ಸೂರ್ಯಾಸ್ಸಹವಾರಿಣಾ ।
ತ್ರಯೋ ಲೋಕಾಃ ಸಮೇತಾಶ್ಚ ನಶ್ಯಂತೇ ಬ್ರಹ್ಮಣೋ ದಿನೇ ॥ ೧೬೮ ॥

ಬ್ರಹ್ಮಾಪಿ ತ್ರಿದಶೈಸ್ಸಾರ್ಧಮುಪಸಂಹ್ರಿಯತೇ ಪುನಃ ।
ಪರಾರ್ಧದ್ವಯಕಾಲಾಂತೇ ಶಿವೇನ ಪರಮಾತ್ಮನಾ ॥ ೧೬೯ ॥

---

೧೬೪. ಜರಾಸಂಧನು ಬಲರಾಮನ ಯಶಸ್ಸನ್ನು ಸೋಲಿಸಿ ನಾಶಮಾಡಿದನು. ಆ ಜರಾಸಂಧನನ್ನು ಭೀಮನು ಸೋಲಿಸಿದನು. ಆ ಭೀಮನನ್ನು ಹನುಮಂತನು ನಿರ್ಬಲನನ್ನಾಗಿ ಮಾಡಿದನು.

೧೬೫-೧೬೬. ಆ ಬಲಿಷ್ಠರಾದ ಹನುಮಂತನನ್ನು ಭರತನು ಅನಾಯಾಸದಿಂದ ತಳ್ಳಿಬಿಟ್ಟನು, ಬಲಿಷ್ಠನಾದ ನಿವಾತಕವಚರು ಅರ್ಜುನನಿಂದ ಸೋಲಿಸಲ್ಪಟ್ಟರು. ಆ ಅರ್ಜುನನು ಗೋಪರಿಂದ ಜಿತನಾದನು. ಹೀಗೆ ಎಷ್ಟು ಪರಾಕ್ರಮಶಾಲಿಯಾದರೂ ಅವನನ್ನು ಸೋಲಿಸಲು ಮತ್ತೊಬ್ಬನು ಇದ್ದೇ ಇರುವನು.

೧೬೭-೧೬೯. ಸೂರ್ಯನು ಪ್ರತಾಪಶಾಲಿಯಾದರೂ ಮೇಘಗಳು ಅವನನ್ನು ಮುಚ್ಚುತ್ತವೆ. ಆ ಮೇಘಗಳನ್ನು ಗಾಳಿಯು ಓಡಿಸುತ್ತದೆ. ಆ ಗಾಳಿಯ ಬಲವು ಬೆಟ್ಟಗಳ ಮುಂದೆ ನಡೆಯುವುದಿಲ್ಲ. ಆ ಬೆಟ್ಟಗಳನ್ನು ಬೆಂಕಿಯು ಸುಟ್ಟು ಹಾಳು ಮಾಡುತ್ತದೆ. ಆ ಬೆಂಕಿಯು ನೀರಿನಿಂದ ತಣ್ಣಗಾಗುತ್ತದೆ. ಆ ನೀರು ಸೂರ್ಯನಿಂದ ನಾಶವಾಗುತ್ತದೆ. ಅಂತಹ ಅನೇಕ ಸೂರ್ಯರು ನೀರಿನೊಡನೆಯೂ ಮೂರುಲೋಕದೊಡನೆಯೂ, ಬ್ರಹ್ಮನಿಂದ ನಾಶವಾಗುತ್ತಾರೆ. ಆ ಬ್ರಹ್ಮನು ದೇವತೆಗಳೊಡನೆ ಶಿವನಿಂದ ನಾಶಪಡಿಸಲ್ಪಡುತ್ತಾನೆ.

ಏವಂ ನೈವಾಸ್ತಿ ಸಂಸಾರೇ ಯಸ್ಯ ಸರ್ವೋತ್ತಮಂ ಪದಂ ।
ವಿಹಾಯೈಕಂ ಜಗನ್ನಾಥಂ ಪರಮಾತ್ಮಾನಮವ್ಯಯಂ ॥ ೧೭೦ ॥

ಕಾಲಂ ಯಾನ್ತಿ ಸುರಾಸ್ಸರ್ವೇ ಪ್ರತಿಮಾನೇನ ವರ್ಜಿತಾಃ ।
ಏವಂಭೂತೇ ಜಗತ್ಯಸ್ಮಿನ್ ಕಃ ಪುನಃ ಪಂಡಿತೋಽಪಿ ವಾ ॥ ೧೭೧ ॥

ನ ಚಾಸ್ತಿ ಸರ್ವವಿತ್ ಕಶ್ಚಿನ್ನ ಚ ಮೂರ್ಖಶ್ಚ ಸರ್ವಶಃ ।
ಯೋ ಯದ್ವಸ್ತು ವಿಜಾನಾತಿ ತತ್ರ ತತ್ರ ಸ ಪಂಡಿತಃ ॥ ೧೭೨ ॥

ಸಮಾಧಾನೇ ತು ಸರ್ವತ್ರ ಪ್ರಭಾವಃ ಸದೃಶಸ್ಸ್ಮೃತಃ ।
ಸ್ಥಿತಸ್ಯಾತಿಶಯತ್ವೇನ ಪ್ರಭಾವಃ ಕಸ್ಯಚಿತ್ಕ್ವಚಿತ್ ॥ ೧೭೩ ॥

ದಾನವೈರ್ನಿರ್ಜಿತಾ ದೇವಾಸ್ತೇ ದೇವೈರ್ನಿರ್ಜಿತಾ ಪುನಃ ।
ಇತ್ಯನ್ಯೋಽನ್ಯಂ ಸ್ಥಿತಾವೇತೌ ಭಾಗ್ಯೈರ್ಜಯಪರಾಜಯೌ ॥ ೧೭೪ ॥

---

೧೭೦. ಈ ರೀತಿ ಸಂಸಾರದಲ್ಲಿ ಆ ಪರಮಾತ್ಮನಾದ ಜಗನ್ನಾಥನನ್ನು ಬಿಟ್ಟು ಯಾವನೂ ದೊಡ್ಡವನಲ್ಲ.

೧೭೧. ಈ ರೀತಿ ದೇವತೆಗಳೂ ಕೂಡ ಎದುರಿಸದೆ ಕಾಲಕ್ಕೆ ತುತ್ತಾಗುತ್ತಾರೆ. ಈ ಜಗತ್ತಿನಲ್ಲಿ ಹೀಗಿರುವಾಗ ಪಂಡಿತನಾರು? ಪಾಮರನಾರು? ಆದುದರಿಂದ ಸರ್ವಜ್ಞನೂ ಇಲ್ಲ. ಮೂಢನೂ ಕೂಡ ಎಲ್ಲೂ ಇಲ್ಲ.

೧೭೨. ಯಾವಯಾವನು ಯಾವಯಾವ ವಸ್ತುವನ್ನು ತಿಳಿದಿದ್ದಾನೋ ಅವನವನು ಅದರಲ್ಲಿ ಪಂಡಿತನು.

೧೭೩. ಸಾವಧಾನದಿಂದ ನೋಡಿದರೆ ಎಲ್ಲರಲ್ಲೂ ಒಂದು ರೀತಿಯಾದ ಮಹಿಮೆ ಇದ್ದೇ ಇರುವುದು. ಹೆಚ್ಚಾಗಿ ಎಲ್ಲೋ ಒಂದೊಂದೆಡೆಯಲ್ಲಿ ಅದರ ಪ್ರಭಾವವು ಕಾಣುತ್ತದೆ.

೧೭೪. ರಾಕ್ಷಸರು ದೇವತೆಗಳನ್ನು ಗೆದ್ದರು. ಅನಂತರ ದೇವತೆಗಳು ಆ ರಾಕ್ಷಸರನ್ನೇ ಗೆದ್ದರು. ಈ ರೀತಿಯಾಗಿ ಜಯಪರಾಜಯಗಳೂ ಪರಸ್ಪರ ಇದ್ದೇ ಇವೆ.

ಏವಂ ವಸ್ತ್ರಯುಗಂ ರಾಜ್ಞ ಪ್ರಸ್ಥಮಾತ್ರಂ ತು ಭೋಜನಂ ।
ಯಾನಂ ಛತ್ರಾಸನಂ ಚೈವ ಸುಖದುಃಖಾಯ ಕೇವಲಂ ॥ ೧೭೫ ॥

ಸಾರ್ವಭೌಮೋಽಪಿ ಭವತಿ ಶ್ರದ್ಧಾಮಾತ್ರಪರಿಗ್ರಹಃ ।
ಉದಕುಂಭಸಹಸ್ರೇಭ್ಯಃ ಕ್ಲೇಶಾಯಾಸಪ್ರವಿಸ್ತರಃ ॥ ೧೭೬ ॥

ಪ್ರತ್ಯೂಷೇ ತೂರ್ಯನಿರ್ಘೋಷಃ ಸತಾಂ ಪುರನಿವಾಸಿಭಿಃ ।
ರಾಜ್ಯೇಽಭಿಮಾನಮಾತ್ರಂ ಹಿ ಮಮೇದಂ ವಾಹ್ಯತೇ ಗೃಹೇ ॥ ೧೭೭ ॥

ಸರ್ವಾಭರಣಶೃಂಗಾರಃ ಸರ್ವಮಾಲೇಪನಂ ಪರಂ
ಸರ್ವಸಂಲಪಿತಂ ಗೀತಂ ಚಿತ್ತಮುನ್ಮತ್ತಚೇಷ್ಟಿತಂ ॥ ೧೭೮ ॥

ಇತ್ಯೇವಂ ರಾಜ್ಯಸಂಭೋಗೈಃ ಕುತಸ್ಸೌಖ್ಯಂ ವಿಚಾರತಃ ।
ನೃಪಾಣಾಂ ವಿಗ್ರಹೇ ಚಿನ್ತಾ ಹ್ಯನ್ಯೋನ್ಯವಿಜಿಗೀಷಯಾ ॥ ೧೭೯ ॥

---

೧೭೫. ಈ ರೀತಿ ಉಡಲು ಎರಡು ವಸ್ತ್ರಗಳು, ತಿನ್ನಲು ಒಂದು ಪಾವು ಅಕ್ಕಿ ಮಾತ್ರ ಮನುಷ್ಯನಿಗೆ ಸಾಕು. ಯಾನ, ಛತ್ರಿ, ಆಸನ, ಇವೆಲ್ಲವೂ ಸುಖ, ಅಥವಾ ದುಃಖಕ್ಕೆ ಮಾತ್ರ ಕಾರಣವು.

೧೭೬. ಚಕ್ರವರ್ತಿಯು ಶ್ರದ್ಧಾವಂತನಾಗಿ ಆಗುತ್ತಾನೆ. ಅದು ಸಾವಿರ ಕಲಶಗಳ ನೀರಿನಿಂದ ಅನೇಕ ಜನರನ್ನು ಆಯಾಸಪಡಿಸಿ ತಾನೂ ಆಸೆಪಟ್ಟು ಪಟ್ಟಾಭಿಷಿಕ್ತನಾಗುತ್ತಾನೆ.

೧೭೭. ಬೆಳಗ್ಗೆ ಪಟ್ಟಣದಲ್ಲಿರುವವರು ಅವನಿಗೆ ಮಂಗಳಘೋಷವನ್ನು ಮಾಡುತ್ತಾರೆ. ಈ ರಾಜ್ಯವು ನನ್ನದು, ಈ ಮನೆಯು ನನ್ನದು ಎಂಬ ಅಭಿಮಾನವು ಅವನಿಗೂ ಇರುವುದು.

೧೭೮-೧೭೯. ಆಭರಣಗಳೂ, ಗಂಧಾನುಲೇಪನಗಳೂ, ಒಳ್ಳೆಯ ಮಾತುಗಳೂ, ಸಂಗೀತಗಳು ಮನಸ್ಸಿಗೆ ಸಂತೋಷವನ್ನುಂಟುಮಾಡುವ ಮಾತುಗಳು ಇವೆಲ್ಲವೂ ರಾಜನಿಗೆ ಇರುವವು. ಆದರೂ ವಿಚಾರಮಾಡಿದರೆ ಈ ರೀತಿಯಾದ ರಾಜ್ಯಭೋಗದಿಂದ ಸೌಖ್ಯವೆಲ್ಲಿದೆ? ಏಕೆಂದರೆ, ರಾಜರಿಗೆ ಪರಸ್ಪರ ಜಯಿಸುವುದರಲ್ಲಿ ಯೋಚನೆಯಿರುತ್ತದೆ.

**ಪ್ರಾಯೇಣ ಶ್ರೀಮದಾಲೇಪಾನ್ನಹುಷಾದ್ಯಾ ಮಹಾನೃಪಾಃ ।**
**ಸ್ವರ್ಗಂ ಪ್ರಾಪ್ತಾ ನಿಪತಿತಾಃ ಕಶ್ರ್ಯಿಯಾ ವಿನ್ದತೇ ಸುಖಂ ॥ ೧೮೦ ॥**

**ಸ್ವರ್ಗೇಽಪಿ ಹಿ ಕುತಸೌಖ್ಯಂ ದೃಷ್ಟ್ವಾ ದೀಪ್ತಾಂ ಪರಶ್ರಿಯಂ ।**
**ಉಪರ್ಯುಪರಿ ದೇವಾನಾಮನ್ಯೋನ್ಯಾತಿಶಯಸ್ಥಿತಾಂ ॥ ೧೮೧ ॥**

**ನರೈಃ ಪುಣ್ಯಫಲಂ ಸ್ವರ್ಗೇ ಮೂಲಚ್ಛೇದೇನ ಭುಜ್ಯತೇ ।**
**ಯದರ್ಥಂ ಕ್ರಿಯತೇ ಕರ್ಮ ತತ್ರ ದೋಷಸ್ತು ದಾರುಣಃ ॥ ೧೮೨ ॥**

**ಛಿನ್ನಮೂಲಸ್ತರುರ್ಯದ್ವದ್ವಿವಶಃ ಪತಿತಃ ಕ್ಷಿತೌ ।**
**ಕ್ಷೀಣಪುಣ್ಯಾಸ್ತತಸ್ತದ್ವನ್ನಿಪತಂತಿ ದಿವೌಕಸಃ ॥ ೧೮೩ ॥**

**ಸುಖಾಭಿಲಾಷನಿಷ್ಠಾನಾಂ ದುಃಖಭೋಗಾದಿಸಂಪ್ಲವೈಃ ।**
**ಅಕಸ್ಮಾತ್ಪತಿತಂ ದುಃಖಂ ಕಷ್ಟಂ ಸ್ವರ್ಗೇ ದಿವೌಕಸಾಂ ॥ ೧೮೪ ॥**

---

೧೮೦. ನಹುಷನೇ ಮೊದಲಾದ ಚಕ್ರವರ್ತಿಗಳು ಸಾಧಾರಣವಾಗಿ ಲಕ್ಷ್ಮಿಯ ಮದದಿಂದಲೇ ಸ್ವರ್ಗವನ್ನು ಹೊಂದಿ ಕೆಳಗುರುಳಿದರು. ಸಂಪತ್ತಿನಿಂದ ಸುಖವೆಲ್ಲಿ ಬಂದೀತು ?

೧೮೧. ಒಬ್ಬರಿಗಿಂತ ಮತ್ತೊಬ್ಬರು ಅತಿಶಯದಿಂದ ಬಾಳುವ ಆ ದೇವತೆಗಳ ಸಂಪತ್ತನ್ನು ನೋಡಿ ಆ ಸ್ವರ್ಗದಲ್ಲಿ ತಾನೆ ಸೌಖ್ಯವೆಲ್ಲಿಯದು ?

೧೮೨. ಮನುಜರು ಮೂಲವನ್ನು ಕತ್ತರಿಸಿಕೊಂಡು ಎಂದರೆ ತಾವು ಸಂಪಾದಿಸಿದ ಪುಣ್ಯಬಲದಿಂದ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತಾರೆ. ಏತಕ್ಕೋಸ್ಕರ ನಾವು ಕೆಲಸಮಾಡುವೆವೋ ಅದರಲ್ಲಿ ಬಹುವಾದ ದೋಷವಿರುವುದು.

೧೮೩. ಬುಡವನ್ನು ಕಡಿದ ಮರವು ಆಶ್ರಯವಿಲ್ಲದೇ ಹೇಗೆ ಭೂಮಿಯಲ್ಲಿ ಬೀಳುವುದೋ ಹಾಗೆ ಪುಣ್ಯವು ಕ್ಷಯಿಸಿದಮೇಲೆ ಸ್ವರ್ಗದಿಂದ ಕೆಳಗೆ ಬೀಳುತ್ತಾರೆ.

೧೮೪. ಸುಖದಲ್ಲೇ ಮನಸ್ಸುಳ್ಳ, ಸುಖಗಳ ಪ್ರವಾಹಗಳಲ್ಲಿ ಓಲಾಡುತ್ತಿರುವ, ದೇವತೆಗಳು ಸಹ ಸ್ವರ್ಗದಿಂದ ಜಾರಿ ಅಕಸ್ಮಾತ್ ಸ್ವಲ್ಪ ಕಷ್ಟಬಂದರೂ ಅದು ಮಹಾ ದುಃಖವೇ ಆಗುವುದು.

**ಇತಿ ಸ್ವರ್ಗೇಽಪಿ ದೇವಾನಾಂ ನಾಸ್ತಿ ಸೌಖ್ಯಂ ವಿಚಾರತಃ ।**
**ಕ್ಷಯಶ್ಚ ವಿಷಯಾಸಿದ್ಧ್ಯಾ ಸ್ವರ್ಗೇ ಭೋಗಾಯ ಕರ್ಮಣಃ ॥ ೧೮೫ ॥**

**ತತ್ರ ದುಃಖಂ ಮಹತ್ಕಷ್ಟಂ ನರಕಾಗ್ನಿಷು ದೇಹಿನಾಂ ।**
**ಘೋರೈಶ್ಚ ವಿವಿಧೈರ್ಭಾವೈರ್ವಾಙ್ಮನಃಕಾಯಸಂಭವೈಃ ॥ ೧೮೬ ॥**

**ಕುಠಾರಭೇದನಂ ತೀವ್ರಂ ವಲ್ಕಲಾನಾಂ ಚ ತಕ್ಷಣಂ ।**
**ಪರ್ಣಶಾಖಾಫಲಾನಾಂ ಚ ಪಾತಶ್ಚಂಡೇನ ವಾಯುನಾ ॥ ೧೮೭ ॥**

**ತನ್ಮೂಲನಾಶಶ್ಚ ಗಜೈರನ್ಯೈಶ್ಚೈವ ಹಿ ದೇಹಿಭಿಃ ।**
**ದಾವಾಗ್ನಿಹಿಮಪಾತೈಶ್ಚ ದುಃಖಂ ಸ್ಥಾವರಜಾತಿಷು ॥ ೧೮೮ ॥**

**ಪಶೂನಾಮಾತ್ಮಶಮನಂ ದಂಡತಾಡನಮೇವ ಚ ।**
**ನಾಸಾವೇಧೇನ ಸಂತ್ರಾಸಃ ಪ್ರತೋದೇನ ಸುತಾಡನಂ ॥ ೧೮೯ ॥**

---

೧೮೫. ಯೋಚಿಸಿದರೆ ಸ್ವರ್ಗದಲ್ಲೂ ದೇವತೆಗಳಿಗೆ ಸುಖವಿಲ್ಲ. ಕರ್ಮಿಗಳಿಗೆ ವಿಷಯಗಳು ಸಿದ್ಧಿಸಿದರೆ, ಸ್ವರ್ಗವು ಭೋಗಕೋಸ್ಕರ ಇಲ್ಲದಿದ್ದರೆ ಅದರಿಂದ ಅವರಿಗೆ ನಾಶವೇ ಹೊರತು ಬೇರೆಯಿಲ್ಲ.

೧೮೬. ನರಕದಲ್ಲೂ ಕೂಡ ಈ ದೇಹಿಗಳಿಗೆ ಮನೋವಾಕ್ಕಾಯಗಳಿಂದುಂಟಾದ ನಾನಾಭಾವಗಳಿಂದ ಗಳಿಸಿದ ಪಾಪಗಳಿಂದ ಅವರನ್ನಗ್ನಿಯಲ್ಲಿ ಹಾಕಿ ಬಹಳ ಕಷ್ಟವನ್ನುಂಟುಮಾಡಿ ದುಃಖಕೊಡುತ್ತಾರೆ.

೧೮೭-೧೮೮. ವೃಕ್ಷಗಳ ವಿಷಯದಲ್ಲಿ ಜನರು ಅವನ್ನು ಕೊಡಲಿಯಿಂದ ಕಡಿಯುತ್ತಾರೆ. ಮೇಲಿನ ತೊಗಟೆಯನ್ನು ಕೆತ್ತುತ್ತಾರೆ. ಬಿರುಗಾಳಿಬಂದು ಎಲೆ, ಕೊಂಬೆ, ಹಣ್ಣುಗಳನ್ನು ಕೆಡವುತ್ತದೆ. ಆನೆಗಳು ಬ.ಡವನ್ನೇ ಕೀಳುತ್ತವೆ. ಮಿಕ್ಕ ಪ್ರಾಣಿಗಳೂ ಕೂಡ ಪೈರನ್ನೇ ನಾಶಮಾಡುತ್ತವೆ. ಕಾಳ್ಗಿಚ್ಚುಬಿದ್ದರೆ, ಹಿಮಬಿದ್ದರೆ, ಮರಗಳಿಗೆಲ್ಲಾ ಬಹು ಕಷ್ಟವಾಗಿ ನಾಶವಾಗುತ್ತವೆ. ಈ ರೀತಿ ಸ್ಥಾವರಗಳಿಗೂ ಕಷ್ಟವುಂಟು.

೧೮೯-೧೯೧. ಪಶುಗಳು ಕೂಡ ಸ್ವಾತಂತ್ರವಿಲ್ಲದೇ ದುಃಖಪಡುತ್ತವೆ. ಅಲ್ಲದೆ ಏಟುಗಳು ಬೀಳುತ್ತವೆ. ಚಾವಟಿಯ ಹೊಡೆತ, ಕತ್ತಿಗೆ ಕಾಲಿಗೆ ಮರಕಟ್ಟಿ

**ವೇತ್ರಕಾಷ್ಠಾದಿನಿಗಡೈರಂಕುಶೇನಾಂಗಬಂಧನಂ ।**
**ಭಾವೇನ ಮನಸಾ ಕ್ಲೇಶೈರ್ಭಿಕ್ಷಾಯುವಾದಿಪೀಡನಂ ॥ ೧೯೦ ॥**

**ಆತ್ಮಯೂಥನಿಯೋಗೈಶ್ಚ ಬಲಾನ್ನಯನಬಂಧನೇ ।**
**ಪಶೂನಾಂ ಸಂತಿ ಕಾಯಾನಾಮೇವಂ ದುಃಖಾನ್ಯನೇಕಶಃ ॥ ೧೯೧ ॥**

**ವರ್ಷಾಶೀತಾತಪಾದ್ದುಃಖಂ ಸುಕಷ್ಟಂ ಗೃಹಪಕ್ಷಿಣಾಂ ।**
**ಕ್ಲೇಶಮಾನಾತಿಕಾಯಾನಾಮೇವಂ ದುಃಖಾನ್ಯನೇಕಧಾ ॥ ೧೯೨ ॥**

**ಗರ್ಭವಾಸೇ ಮಹದ್ದುಃಖಂ ಜನ್ಮದ್ದುಃಖಂ ತಥಾ ನೃಣಾಂ ।**
**ಸುಬಾಲ್ಯೇ ಚ ಮಹದ್ದುಃಖಂ ಕೌಮಾರೇ ಗುರುಶಾಸನಂ ॥ ೧೯೩ ॥**

**ಯೌವನೇ ಕಾಮರಾಗಾಭ್ಯಾಂ ದುಃಖಂ ಚೈವೇರ್ಷ್ಯಯಾ ಪುನಃ ।**
**ಕೃಷಿವಾಣಿಜ್ಯಸೇವಾದ್ಯೈಃ ಸುಗೋರಕ್ಷಾದಿಕರ್ಮಭಿಃ ॥ ೧೯೪ ॥**

**ವೃದ್ಧಭಾವೇ ಚ ಜರಯಾ ವ್ಯಾಧಿಭಿಶ್ಚ ಪ್ರಪೀಡನಾತ್ ।**
**ಮರಣೇ ಚ ಮಹದುಃಖಂ ಪ್ರಾರ್ಥನಾಯಾಂ ತತೋಽಧಿಕಂ ॥ ೧೯೫ ॥**

---

ವುದು, ಹಗ್ಗಕಟ್ಟುವುದು, ಸರಪಣಿ ಹಾಕುವುದು, ಇವುಗಳಿಂದ ಕಷ್ಟವುಂಟು. ಮನಸ್ಸು ಭಾವಗಳ ಕ್ಲೇಶವಂತೂ ಹೇಳಬೇಕಾದುದಿಲ್ಲ. ಕೊಟ್ಟ ತಿಂಡಿಯನ್ನು ಭಕ್ಷಿಸಬೇಕು. ಇಷ್ಟಬಂದಾಗ ಕಾಮವೇಧೆ ತೀರಿಸಿಕೊಳ್ಳಬೇಕಾಗುವಂತಿಲ್ಲ. ತನ್ನ ಗುಂಪಿನಿಂದ ಬಲಾತ್ಕಾರವಾಗಿ ಎಳೆದುಕೊಂಡು ಹೋದಾಗ ದುಃಖ, ಈ ರೀತಿ ಪಶುಗಳ ದೇಹಕ್ಕೂ ನಾನಾ ತೆರನಾಗಿ ದುಃಖಗಳಿವೆ.

೧೯೨. ಮಳೆ, ಚಳಿ, ಬಿಸಿಲು, ಇವುಗಳ ಕಷ್ಟವು ಪಕ್ಷಿ ಮತ್ತು ಮನೆಗಳಿಗಿವೆ. ಈ ರೀತಿ ದೇಹಿಗಳಿಗೆ ಅನೇಕ ಕಷ್ಟಗಳುಂಟು.

೧೯೩-೧೯೫. ಈ ರೀತಿ ಪ್ರಾಣಿಗೆ ಗರ್ಭವಾಸದಲ್ಲಿ ದುಃಖ, ಹುಟ್ಟುವುದರಲ್ಲಿ ದುಃಖ, ಬಾಲ್ಯದಲ್ಲಿ ದುಃಖ, ಕೌಮಾರದಲ್ಲಿ ಗುರುಶಾಸನದ ದುಃಖ, ಯೌವನದಲ್ಲಿ ಕಾಮೇಚ್ಛೆಗಳಿಂದ ದುಃಖ, ಅಲ್ಲದೆ ಹೊಟ್ಟೆಕಿಚ್ಚಿನಿಂದ ದುಃಖ, ಮತ್ತು ವ್ಯವಸಾಯ, ವ್ಯಾಪಾರ ಸೇವಾ ಗೋರಕ್ಷಾದಿ ಕೆಲಸಗಳಲ್ಲಿ ದುಃಖ. ಮುಪ್ಪಿನಲ್ಲಿ ಜರಾ ವ್ಯಾಧಿಗಳ ದುಃಖ, ಮರಣದಲ್ಲಂತೂ ಅಸಾಧ್ಯವಾದ ದುಃಖ, ಪ್ರಾರ್ಥನೆಯಲ್ಲಂತೂ ಮರಣಕ್ಕಿಂತಲೂ ಹೆಚ್ಚಾದ ದುಃಖ, ಈ ರೀತಿ ದುಃಖಪರಂಪರೆಗಳು ಪ್ರಾಣಿಗಳಿಗಿರುವವು.

**ರಾಜಾಗ್ನಿಜಲದಾಘಾತಚೌರಶತ್ರುಭಯಂ ಮಹತ್ ।**
**ಅರ್ಥಸ್ಯಾರ್ಜನರಕ್ಷಾಯಾಂ ದುಃಖಂ ನಾಶೇ ಭವೇತ್ಪುನಃ ॥ ೧೯೬ ॥**

**ಕಾರ್ಪಣ್ಯಂ ಮತ್ಸರೋದ್ವೇಗೋ ಧನಾಧಿಕ್ಯೇ ಭಯಂ ಮಹತ್ ।**
**ಅಕಾರ್ಯೇ ಸಂಪ್ರವೃತ್ತಿಶ್ಚ ದುಃಖಾನಿ ಧನಿನಾಂ ನೃಪ ॥ ೧೯೭ ॥**

**ಭೃತ್ಯವೃತ್ತಿಃ ಕುಸೀದಂ ಚ ದಾಸತ್ವಂ ಪರವಂಚನಂ ।**
**ಇಷ್ಟಾನಿಷ್ಟವಿಯೋಗೈಶ್ಚ ಸಂಯೋಗೈಶ್ಚ ಸಹಸ್ರಶಃ ॥ ೧೯೮ ॥**

**ದುರ್ಭಿಕ್ಷಂ ದುರ್ಭಗತ್ವಂ ಚ ಮೂರ್ಖತ್ವಂ ಚ ದರಿದ್ರತಾ ।**
**ಅಧರೋತ್ತರಭಾಗಶ್ಚ ನರಕಂ ರಾಜ್ಯವಿಕ್ರಮಂ ॥ ೧೯೯ ॥**

**ಅನ್ಯೋನ್ಯತೋ ಭವಂ ದುಃಖಮನ್ಯೋನ್ಯಾಭಿಭವಸ್ತಥಾ ।**
**ಅನ್ಯೋನ್ಯಾಚ್ಚ ಪ್ರಕೋಪಶ್ಚ ರಾಜ್ಞೋ ದುಃಖಂ ಮಹೀಭೃತಾಂ ॥ ೨೦೦ ॥**

---

೧೯೬-೧೯೭. ರಾಜ, ಅಗ್ನಿ, ಸಿಡಿಲು, ಕಳ್ಳ, ಶತ್ರುಗಳಿಂದ ದೇಹಗಳಿಗೆ ಮಹಾ ದುಃಖವುಂಟು. ಮೊದಲು ಹಣವನ್ನು ಸಂಪಾದಿಸುವ ದುಃಖ,ಸಂಪಾದಿಸಿದುದನ್ನು ಕಾಪಾಡುವ ದುಃಖ, ಅನಂತರ ಅದರ ನಾಶವಾದರೆ ದುಃಖ, ಹಣ ಹೆಚ್ಚಾದರೆ ಜಿಪುಣತನ, ಮಾತ್ಸರ್ಯ, ಉದ್ವೇಗ ಈ ದುಃಖಗಳು ಬಂದು ಭಯವನ್ನು ಹೆಚ್ಚಿಸುತ್ತವೆ. ಹಣವು ಕೆಟ್ಟ ಕೆಲಸಕ್ಕೆ ಕೈ ಹಾಕಿಸುತ್ತದೆ, ಈ ರೀತಿ ಹಣಗಾರರಿಗೆ ಬಹು ದುಃಖಗಳುಂಟು.

೧೯೮-೧೯೯. ಆಳುತನ, ಬಡ್ಡಿ, ಆಳಿಗೆ ಹಣಕೊಡುವುದು, ಪರರಿಗೆ ಮೋಸ, ಇಷ್ಟವಾದುದು ಲಭಿಸದೆ ಬೇಡದಿದ್ದುದು ಬರುವುದು, ಇವುಗಳಿಂದಲೂ ದುಃಖವುಂಟಾಗುತ್ತದೆ. ದುರ್ಭಿಕ್ಷ, ಅಯೋಗ್ಯನಾಗಿರುವುದು, ಮೂರ್ಖನಾಗಿರುವುದು, ಬಡತನ, ಕೀಳು ಮೇಲು ಭಾವ, ರಾಜ್ಯದಲ್ಲಿ ಪರಾಕ್ರಮ, ಇವೆಲ್ಲಾ ದುಃಖಕಾರಕಗಳೇ.

೨೦೦. ಪರಸ್ಪರ ಕಲಹದಿಂದ ದುಃಖ. ಒಬ್ಬರು ಮತ್ತೊಬ್ಬರನ್ನು ಜಯಿಸುವ ದುಃಖ, ಒಬ್ಬೊಬ್ಬರ ಮನಃಕಲ್ಮಷಗಳು, ಇವು ರಾಜ್ಯವಾಳುವವರಿಗೆ ಒಗುವ ದುಃಖಗಳು.

**ಅನಿತ್ಯತಾ ಪ್ರಭಾವಾನಾಂ ಕೃತಕರ್ಮಸ್ಯ ದೇಹಿನಃ ।**
**ಅನ್ಯೋನ್ಯಮರ್ಮಭೇದಾರ್ಥಮನ್ಯೋನ್ಯಕರಪೀಡನಂ ॥ ೨೦೧ ॥**

**ಲುಬ್ಧಶ್ಚ ಪಾಪಮೋಹೇನ ಹ್ಯನ್ಯೋನ್ಯಸ್ಯ ಚ ಭಕ್ಷಣಂ ॥ ೨೦೨ ॥**

**ಇತ್ಯೇವಮಾದಿಭಿರ್ದುಃಖೈರ್ಯಸ್ಮಾದ್ಗ್ರಸ್ತಂ ಚರಾಚರಂ ।**
**ವಿಬುಧಾದಿಮನುಷ್ಯಾಸ್ತಂ ತಸ್ಮಾತ್ಸರ್ವಂ ತ್ಯಜೇದ್ಬುಧಃ ॥ ೨೦೩ ॥**

**ಸ್ಕಂಧಾತ್ಸ್ಕಂಧೇ ನಯನ್ ಭಾರಂ ವಿಶ್ರಾಮಂ ಮನ್ಯತೇ ಯಥಾ ।**
**ತದ್ವತ್ಸರ್ವಮಿದಂ ಲೋಕೇ ದುಃಖಂ ದುಃಖೇನ ಶಾಮ್ಯತಿ ॥ ೨೦೪ ॥**

**ಅನ್ಯೋನ್ಯಾತಿಶಯೋಪೇತಾಃ ಸಂಭವಾ ಭೋಗಸಂಪ್ಲವೇ ।**
**ಧರ್ಮಕ್ಷಯಾಚ್ಚ ದೇವಾನಾಂ ದಿವಿ ದುಃಖಮವಸ್ಥಿತಂ ।**
**ನಾನಾಯೋನಿಸಹಸ್ರೇಷು ಸಂಭವಃ ಪುಣ್ಯಸಂಕ್ಷಯಾತ್ ॥ ೨೦೫ ॥**

---

೨೦೧-೨೦೨. ತಾನು ಮಾಡಿದ ಉತ್ತಮ ಕೆಲಸವು ಶಾಶ್ವತವಾಗಿಲ್ಲದಿರುವಿಕೆ, ಪರಸ್ಪರವಾಗಿ ದುಃಖಕೊಡಲು ಅವರ ಕಡೆಯವರಿಗಿವರು, ಇವರ ಕಡೆಯವರಿಗವರು, ಸುಂಕ ಹಾಕುವುದು. ಈ ರೀತಿ ಪಾಪದಿಂದ ಕಣ್ಣುಕಾಣದೆ ಪರಸ್ಪರರನ್ನೇ ತಿನ್ನುವ ಪ್ರಯತ್ನ, ಇವೆಲ್ಲವೂ ದುಃಖಗಳು.

೨೦೩. ದೇವತೆಗಳಿಂದ ಹಿಡಿದು ಮನುಷ್ಯರವರಿಗಿರುವ ಈ ಚರಾಚರಗಳು ಇವೇ ಮೊದಲಾದ ದುಃಖಗಳಿಂದ ಕೂಡಿರುವುದರಿಂದ ತಿಳಿದವನು ಇವೆಲ್ಲವನ್ನೂ ಬಿಟ್ಟುಬಿಡಬೇಕು.

೨೦೪. ಹೊರೆಯನ್ನು ಹೆಗಲಿನಿಂದ ಹೆಗಲಿಗೆ ಬದಲಾಯಿಸಿಕೊಳ್ಳುತ್ತ ವಿಶ್ರಾಂತಿ ಬಂತೆಂದು ಮನುಷ್ಯನು ತಿಳಿದುಕೊಳ್ಳುವಂತೆ ಈ ಲೋಕದಲ್ಲಿ ಇರುವುವೆಲ್ಲವೂ ಹಾಗೆಯೇ. ದುಃಖವು ಮತ್ತೊಂದು ದುಃಖದಿಂದ ಶಾಂತಿಯಾಗುವಂತೆ ತೋರುತ್ತದೆ.

೨೦೫. ದೇವತೆಗಳಲ್ಲೂ ಕೂಡ ಒಬ್ಬರಿಗೊಬ್ಬರು ಮೇಲಾದ ಐಶ್ವರ್ಯವನ್ನು ಅನುಭವಿಸಬೇಕೆನ್ನುತ್ತಾರೆ. ಹಾಗೆ ಮಾಡಿದರೆ ಧರ್ಮವೆಲ್ಲವೂ ನಾಶವಾಗುವುದೆಂದು ಮಹಾ ದುಃಖವಾಗುತ್ತದೆ. ಅನೇಕ ಜನ್ಮಗಳನ್ನು ಹೊಂದುವುದು. ನಾನಾ ಬಗೆಯಾದ ರೋಗಗಳು ಇವೂ ಕೂಡ ದೇವಲೋಕದಲ್ಲಿವೆ.

ರೋಗಾಶ್ಚ ವಿವಿಧಾಕಾರಾ ದೇವಲೋಕೇಽಪಿ ಯೇ ಸ್ಮೃತಾಃ ।
ಯಜ್ಞಸ್ಯ ಹಿ ಶಿರಶ್ಛಿನ್ನಮಶ್ವಿಭ್ಯಾಂ ಸಂಧಿತಂ ಪುನಃ ।
ತೇನ ದೋಷೇಣ ಯಜ್ಞಸ್ಯ ಶಿರೋರೋಗಸ್ಸದೈವ ಹಿ ॥ ೨೦೬ ॥

ಮಾರ್ತಂಡಾನಾಂ ಮಹತ್ಕುಷ್ಠಂ ವರುಣಸ್ಯ ಜಲೋದರಃ ।
ಪೂಷ್ಣೋ ದಶನವೈಕಲ್ಯಂ ಭುಜಸ್ತಂಭಶ್ಶಚೀಪತೇಃ ॥ ೨೦೭ ॥

ಸುಮಹಾಕ್ಷಯರೋಗಶ್ಚ ಸೋಮಸ್ಯಾಪಿ ಪ್ರಕೀರ್ತಿತಃ ।
ಜ್ವರಸ್ತು ಸುಮಹಾನಾಸೀದ್ದಕ್ಷಸ್ಯಾಪಿ ಪ್ರಜಾಪತೇಃ ॥ ೨೦೮ ॥

ಕಲ್ಪೇ ಕಲ್ಪೇ ಚ ದೇವಾನಾಂ ಮಹತಾಮಪಿ ಸಂಕ್ಷಯಃ ।
ಪರಾರ್ಧದ್ವಯಕಾಲಾಂತೇ ಬ್ರಹ್ಮಣಶ್ಚಾಪ್ಯನಿತ್ಯತಾ ॥ ೨೦೯ ॥

ದಕ್ಷಸ್ಯ ದುಹಿತಾಂ ಪುತ್ರೀಂ ಬ್ರಹ್ಮಾ ಕಾಮಿತವಾನ್ಪುನಃ ।
ಕ್ರೋಧೇನ ಚಂಡಿಕಾಂ ದೇವೀಂ ಯೋಗಜ್ಞಾಂ ಶಪ್ತವಾನ್ಪ್ರಭುಃ ॥ ೨೧೦ ॥

ಕಾಮಕ್ರೋಧೌ ಸ್ಥಿತೌ ಯತ್ರ ತತ್ರ ದೋಷಾಸ್ತದಾತ್ಮಕಾಃ ।
ದುಃಖಾನಿ ಚ ಸಮಸ್ತಾನಿ ಸಂಸ್ಥಿತಾನಿ ನ ಸಂಶಯಃ ॥ ೨೧೧ ॥

---

೨೦೬ ಯಜ್ಞದ ತಲೆಯನ್ನು ಕಡಿದುಬಿಟ್ಟರು. ಅಶ್ವಿನೀದೇವತೆಗಳು ಪುನಃ ಅದನ್ನು ಸೇರಿಸಿದರು. ಅದರಿಂದ ಅದಕ್ಕೆ ತಲೆನೋವು ಸ್ವರ್ಗದಲ್ಲಿದ್ದೇ ಇದೆ.

೨೦೭-೨೦೮. ಮಾರ್ತಂಡರಿಗೆ ಕುಷ್ಠರೋಗ, ವರುಣನಿಗೆ ಜಲೋದರ. ಪೂಷನೆಂಬುವನಿಗೆ ಹಲ್ಲೇ ಇಲ್ಲ. ಇಂದ್ರನಿಗೆ ಕೈ ಅಲ್ಲಾಡಿಸಲಾಗದ ಪಾರ್ಶ್ವವಾಯು, ಚಂದ್ರನಿಗೆ ಕ್ಷಯರೋಗ, ದಕ್ಷನಿಗೆ ಮಹಾಜ್ವರ, ಹೀಗೆ ಸ್ವರ್ಗದಲ್ಲೂ ರೋಗಗಳುಂಟು.

೨೦೯-೨೧೧ ಪ್ರತಿ ಕಲ್ಪದಲ್ಲೂ ದೊಡ್ಡದೊಡ್ಡ ದೇವತೆಗಳೂ ನಾಶಹೊಂದುತ್ತಾರೆ. ಪರಾರ್ಧದ್ವಯ ಕಾಲವು ಆಗುತ್ತಲೂ ಬ್ರಹ್ಮನ ಕಾಮಿಸಿದನು. ಕೋಪದಿಂದ ಚಂಡಿಕೆಯನ್ನು ವಿಷ್ಣುವು ಶಪಿಸಿದನು. ಎಲ್ಲಿ ಕಾಮಕ್ರೋಧಗಳಿವೆಯೋ ಅಲ್ಲಿ ಅದೇ ರೀತಿಯಾದ ದೋಷಗಳಿವೆ. ಆ ಕಾಮಕ್ರೋಧಗಳಿರುವಲ್ಲಿ ಎಲ್ಲಾ ದುಃಖಗಳೂ ಇರುತ್ತವೆ. ಸಂಶಯವಿಲ್ಲಾ.

ವಿಶ್ಲೇಷಜನ್ಮಮರಣಂ ಸರ್ವಾಶಿತ್ವಂ ಹವಿರ್ಭುಜಃ ।
ಸ್ತ್ರೀವಧಃ ಕಾಮುಶಕ್ತಿಶ್ಚ ಸಾರಥ್ಯಂ ಪಾಂಡವೇನ ವೈ ॥ ೨೧೨ ॥

ರುದ್ರೇಣ ತ್ರಿಪುರಂ ದಗ್ಧಂ ದಕ್ಷಯಜ್ಞಶ್ಚ ನಾಶಿತಃ ।
ಸ್ಕಂದಸ್ಯ ಜನ್ಮವೈಶುದ್ಧ್ಯಾತ್ ಕ್ರೀಡಾದೀನಾಂ ಸಹಸ್ರಶಃ ॥ ೨೧೩ ॥

ಏವಂ ತ್ರಯೋಽಪಿ ರಾಗಾದ್ಯೈರ್ದೋಷೈರ್ದೇವಾಸ್ಸಮನ್ವಿತಾಃ ।
ಏಭ್ಯಃ ಪರಃ ಪ್ರಭುಃ ಶಾಂತಃ ಪರಿಪೂರ್ಣಸ್ಸ ಮುಕ್ತಿದಃ ॥ ೨೧೪ ॥

ಏವಮೇತಜ್ಜಗತ್ಸರ್ವಮನ್ಯೋನ್ಯಾತಿಶಯೇ ಸ್ಥಿತಂ ।
ದುಃಖೈರಾಕುಲಿತಂ ಜ್ಞಾತ್ವಾ ನಿರ್ವೇದಂ ಪರಮಂ ವ್ರಜೇತ್ ॥ ೨೧೫ ॥

ನಿರ್ವೇದಾಚ್ಚ ವಿರಾಗಸ್ಸ್ಯಾದ್ವಿರಾಗಾದ್ಜ್ಞಾನಸಂಭವಃ ।
ಜ್ಞಾನೇನ ತತ್ಪರಂ ಜ್ಞಾತ್ವಾ ಶಿವಂ ಮುಕ್ತಿಮವಾಪ್ನುಯಾತ್ ॥ ೨೧೬ ॥

---

೨೧೨-೨೧೩. ಅಗಲುವಿಕೆ, ಹುಟ್ಟುವಿಕೆ, ಸಾಯುವಿಕೆ, ಎಲ್ಲವನ್ನೂ ಭಕ್ಷಿಸುವಿಕೆ, ಈ ದೋಷಗಳು ಅಗ್ನಿಗೆ ಪ್ರಾಪ್ತವಾಗಿದೆ. ಸ್ತ್ರೀವಧೆ, ಕಾಮಿಯಾಗಿರುವಿಕೆ, ಅರ್ಜುನನಿಗೆ ಸಾರಥ್ಯ ಇವು ವಿಷ್ಣುವಿಗೆ ಪ್ರಾಪ್ತವಾಗಿವೆ. ರುದ್ರನು ತ್ರಿಪುರಗಳನ್ನು ಸುಟ್ಟನು, ಮತ್ತು ದಕ್ಷಯಜ್ಞವನ್ನು ನಾಶಮಾಡಿದನು, ಮತ್ತು ಸ್ಕಂದನ ಹುಟ್ಟುವಿಕೆಯಲ್ಲಿ ಅಯೋಗ್ಯತನ ಇವೆಲ್ಲವೂ ದುಃಖಗಳಲ್ಲವೇ ?

೨೧೪. ಈ ರೀತಿ ತ್ರಿಮೂರ್ತಿಗಳೂ ಕೂಡ ದೋಷದಿಂದ ಕೂಡಿದ್ದಾರೆ. ಇವರೆಲ್ಲರಿಗಿಂತ ಒಬ್ಬ ಪ್ರಭುವಿದ್ದಾನೆ. ಆತನು ಶಾಂತನು, ಪರಿಪೂರ್ಣನು, ಮುಕ್ತಿ ಕೊಡತಕ್ಕವನು.

೨೧೫. ಈ ರೀತಿ ಜಗತ್ತು ಒಂದಕ್ಕೊಂದು ಹೆಚ್ಚಿನದೇ ಹೊರತು ಕಡಿಮೆ ಇಲ್ಲದ ದುಃಖದಿಂದ ಕೂಡಿದೆ. ಆದುದರಿಂದ ವೈರಾಗ್ಯವನ್ನು ಹೊಂದಬೇಕು.

೨೧೬. ನಿರ್ವೇದದಿಂದ ಆಸೆ ಹೋಗುತ್ತದೆ. ಆಸೆಬಿಟ್ಟರೆ ಜ್ಞಾನವುಂಟಾಗುತ್ತದೆ. ಜ್ಞಾನದಿಂದ ಆ ಪರವಸ್ತುವನ್ನು ತಿಳಿದು ಮಂಗಳಕರವಾದ ಮೋಕ್ಷವನ್ನು ಹೊಂದುತ್ತೇವೆ.

**ಸಮಸ್ತದುಃಖನಿರ್ಮುಕ್ತಃ ಸ್ವಸ್ಥಾನೇ ಸ ಸುಖೀ ಸದಾ ।**
**ಸರ್ವಜ್ಞಃ ಪರಿಪೂರ್ಣಶ್ಚ ಮುಕ್ತ ಇತ್ಯಭಿಧೀಯತೇ ॥ ೨೧೭ ॥**

**॥ ಮಾತಲಿರುವಾಚ ॥**

**ಏತತ್ತೇ ಸರ್ವಮಾಖ್ಯಾತಂ ಯತ್ತ್ವಯಾ ಪರಿಪೃಚ್ಛಿತಂ ।**
**ಧರ್ಮಾಧರ್ಮವಿವೇಕೋ ಹಿ ಸರ್ವಜ್ಞಾನಸಮುಚ್ಚಯಃ ॥ ೨೧೮ ॥**

**ಇಂದ್ರಲೋಕಂ ಪ್ರಗಂತವ್ಯಂ ದೇವರಾಜಸ್ಯ ಶಾಸನಾತ್ ।**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಷಟ್‌ಷಷ್ಟಿತಮೋಽಧ್ಯಾಯಃ**



---

೨೧೭. ಈ ರೀತಿ ಆಸೆಬಿಟ್ಟವನು ಸಕಲವಾದ ದುಃಖಗಳನ್ನೂ ಕಳೆದುಕೊಂಡು ತಾನಿದ್ದಲ್ಲಿಯೇ ಸುಖಿಯಾಗುವನು. ಸರ್ವಜ್ಞನಾಗುವನು. ಅಲ್ಲದೆ ಪೂರ್ಣನೂ, ಮುಕ್ತನೂ ಎಂದೆನ್ನಿಸಿಕೊಳ್ಳುತ್ತಾನೆ.

೨೧೮. ಮಾತಲಿಯು ಹೇಳಿದನು :—ನೀನು ಕೇಳಿದುದನ್ನೆಲ್ಲಾ ಹೇಳಿದೆನು. ಧರ್ಮ ಅಧರ್ಮಗಳ ವಿವೇಕ, ಸರ್ವಜ್ಞಾನಗಳ ವಿವರಣೆಗಳನ್ನೂ ಮಾಡಿದ್ದೇನೆ. ಈಗ ನಾನು ಇಂದ್ರನ ಅಪ್ಪಣೆಯಂತೆ ಇಂದ್ರಲೋಕಕ್ಕೆ ಹೋಗಬೇಕು ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತಷಷ್ಟಿತಮೋಽಧ್ಯಾಯಃ

॥ ಯಯಾತಿರುವಾಚ ॥

ಅಸ್ಮದ್ಭಾಗ್ಯಪ್ರಲಬ್ಧಂ ಚ ಭವತೋ ದರ್ಶನಂ ಪರಂ
ಸಂಜಾತಂ ಶಕ್ರಸಂವಾಹ ಯತಃ ಶ್ರೇಯೋ ಮಮಾತುಲಂ ॥ ೧ ॥

ಮಾನವಾ ಮರ್ತ್ಯಲೋಕೇ ಚ ಪಾಪಂ ಕುರ್ವಂತಿ ದಾರುಣಂ ।
ತೇಷಾಂ ಕರ್ಮವಿಪಾಕಂ ಚ ಮಾತಲೇ ವದ ಸಾಂಪ್ರತಂ ॥ ೨ ॥

॥ ಮಾತಲಿರುವಾಚ ॥

ಶ್ರೂಯತಾಮಭಿಧಾಸ್ಯಾಮಿ ಪಾಪಾಚಾರಸ್ಯ ಲಕ್ಷಣಂ ।
ಶ್ರುತೇ ಸತಿ ಮಹಾಜ್ಞಾನಮತ್ರ ಲೋಕೇ ಪ್ರಜಾಯತೇ ॥ ೩ ॥

---

## ಅರವತ್ತೇಳನೆಯ ಅಧ್ಯಾಯವು

೧. ಯಯಾತಿಯು ಹೇಳಿದನು :—ಎಲೈ ಮಾತಲಿಯೇ, ನನ್ನ ಭಾಗ್ಯದಿಂದ ನಿನ್ನ ದರ್ಶನವಾಯಿತು. ನನಗೆ ಬಹುವಾದ ಶ್ರೇಯಸ್ಸುಂಟಾಗಿದೆ.

೨. ಮನುಷ್ಯರು ಈ ಮರ್ತ್ಯಲೋಕದಲ್ಲಿ ಕ್ರೂರವಾದ ಪಾಪಗಳನ್ನು ಮಾಡುತ್ತಾರೆ. ಅವರ ಕರ್ಮವಿಪಾಕಗಳನ್ನು ದಯವಿಟ್ಟು ಹೇಳುವಿಯಾ ? ಎಂದನು.

೩. ಮಾತಲಿಯು ಹೇಳಿದನು :—ಪಾಪಾಚಾರದ ಲಕ್ಷಣವನ್ನು ಹೇಳುತ್ತೇನೆ, ಕೇಳು. ಅದನ್ನು ಕೇಳುವುದರಿಂದಲೇ ಈ ಲೋಕದಲ್ಲಿ ಮಹಾಜ್ಞಾನವುಂಟಾಗುತ್ತದೆ.

ವೇದನಿಂದಾಂ ಪ್ರಕುರ್ವಂತಿ ಬ್ರಹ್ಮಾಚಾರಸ್ಯ ಕುತ್ಸನಂ ।
ಮಹಾಪಾತಕಮೇವಾಪಿ ಜ್ಞಾತವ್ಯಂ ಜ್ಞಾನಪಂಡಿತೈಃ ॥ ೪ ॥

ಸಾಧೂನಾಮಪಿ ಸರ್ವೇಷಾಂ ಯಃ ಪೀಡಾಂ ಹಿ ಸಮಾಚರೇತ್ ।
ಮಹಾಪಾತಕಮೇವಾಪಿ ಪ್ರಾಯಶ್ಚಿತ್ತೇನ ಹಿ ವ್ರಜೇತ್ । ॥ ೫ ॥

ಕುಲಾಚಾರಂ ಪರಿತ್ಯಜ್ಯ ಅನ್ಯಾಚಾರಂ ವ್ರಜಂತಿ ಯೇ ।
ಏತತ್ಪಾತಕಸಂಚಾರಂ ಕಥಿತಂ ತತ್ತ್ವವೇದಿಭಿಃ ॥ ೬ ॥

ಮಾತಾಪಿತ್ರೋಶ್ಚ ಯೋ ನಿಂದಾಂ ತಾಡಯೇದ್ಭಗಿನೀಂ ಸದಾ ।
ಸ್ವಸಾರಂ ನಿಂದಯೇದ್ಯೋ ವೈ ತದೇವಂ ಪಾತಕಂ ಧ್ರುವಂ ॥ ೭ ॥

ಸಂಪ್ರಾಪ್ತೇ ಶ್ರಾದ್ಧಕಾಲೇಽಪಿ ಪಂಚಕ್ರೋಶಾನ್ತರೇ ಸ್ಥಿತಂ ।
ಜಾಮಾತರಂ ಪರಿತ್ಯಜ್ಯ ಅನ್ಯಂ ಚ ಭಗಿನೀಸುತಂ ॥ ೮ ॥

ಸ್ವಸಾರಂ ಚೈವ ರಾಜೇಂದ್ರ ಪರಿತ್ಯಜ್ಯ ಪ್ರವರ್ತತೇ ।
ಕಾಮಕ್ರೋಧಾದ್ಭಯಾದ್ವಾಪಿ ಅನ್ಯಂ ಭೋಜಯತೇ ಸದಾ ॥ ೯ ॥

---

೪. ವೇದನಿಂದೆ, ಬ್ರಾಹ್ಮಣಾಚಾರದ ತಿರಸ್ಕಾರ, ಇವು ಮಹಾಪಾತಕಗಳು. ಇವನ್ನು ಪಂಡಿತರು ತಿಳಿದಿರಬೇಕು.

೫. ಸಾಧುಗಳನ್ನು ಪೀಡಿಸುವುದೂ ಮಹಾಪಾತಕವು. ಅದಕ್ಕೆ ಪ್ರಾಯಶ್ಚಿತ್ತವಿಲ್ಲ.

೬. ತನ್ನ ಕುಲದ ಆಚಾರವನ್ನು ಬಿಟ್ಟು ಪರರ ಆಚಾರವನ್ನು ಆಶ್ರಯಿಸುವುದು ಪಾಪಕರವೆಂದು ತಿಳಿದವರು ಹೇಳುತ್ತಾರೆ.

೭. ತಾಯಿತಂದೆಗಳನ್ನು ಬಯ್ಯುವುದು; ತಂಗಿಯನ್ನು ಹೊಡೆಯುವುದು. ತಂದೆಯ ಸೋದರಿಯನ್ನು ಬಯ್ಯುವುದು. ಅಕ್ಕನನ್ನು ಬಯ್ಯುವುದು ಇವೆಲ್ಲವೂ ಪಾತಕಗಳು.

೮-೯. ಶ್ರಾದ್ಧಕಾಲದಲ್ಲಿ ಹದಿನೈದು ಮೈಲಿಯೊಳಗಿದ್ದರೆ ಅಳಿಯ, ಸೋದರಿಯರ ಮಕ್ಕಳು, ತಂದೆಯ ಸೋದರಿಯರು, ಇವರನ್ನು ದ್ವೇಷಾಸೂಯೆಗಳಿಂದ ಬಿಟ್ಟು, ಮತ್ತೊಬ್ಬನನ್ನು ಯಾವಾಗಲೂ ಊಟಮಾಡಿಸಬಾರದು.

ಪಿತರೋ ನೈವ ಭುಂಜಂತಿ ಶ್ರಾದ್ಧವಿಘ್ನಂ ವ್ರಜಂತಿ ಯೇ ।
ಏತತ್ಸುಪಾತಕಂ ತಸ್ಯ ಪಿತೃಘಾತಸಮಂ ಸ್ಮೃತಂ ॥ ೧೦ ॥

ದಾನಕಾಲೇಽಪಿ ಸಂಪ್ರಾಪ್ತೇ ಆಗತಾ ಬ್ರಾಹ್ಮಣಾಃ ಕಿಲ ।
ಭೂರಿದಾನಂ ಪರಿತ್ಯಜ್ಯ ಕತಿಭ್ಯೋ ಹಿ ಪ್ರವರ್ತತೇ ॥ ೧೧ ॥

ಏಕಸ್ಮೈ ದೀಯತೇ ದಾನಮನ್ಯೇಭ್ಯೋಽಥ ನ ದೀಯತೇ ।
ಏತತ್ಸುಪಾತಕಂ ಘೋರಂ ದಾನಭ್ರಂಶಕರಂ ಸ್ಮೃತಂ ॥ ೧೨ ॥

ಯಜಮಾನಶ್ಚ ಸ್ವಗೃಹಂ ಪ್ರಸ್ಥಿತಾನ್ ಬ್ರಾಹ್ಮಣಾಂಸ್ತ್ಯಜೇತ್ ।
ತೇಷು ತ್ಯಕ್ತೇಷು ಯದ್ದಾನಂ ನ ತದ್ದಾನಸ್ಯ ಲಕ್ಷಣಂ ॥ ೧೩ ॥

ಸಮಾಶ್ರಿತಂ ಚ ನೈ ವಿಪ್ರಂ ಸರ್ವಾಚಾರಸಮನ್ವಿತಂ ।
ಸರ್ವೈಃ ಪುಣ್ಯೈಃ ಸಮಾಯುಕ್ತಂ ಸುದಾನೈರ್ಬಹುಭಿರ್ನೃಪ ।
ತಂ ಸಮಭ್ಯರ್ಚ್ಯ ವಿದ್ವಾಂಸಂ ಪ್ರಾಪ್ತಂ ವಿಪ್ರಂ ಸದಾರ್ಹಯೇತ್ ॥ ೧೪ ॥

---

೧೦. ಅವರಿಗೆ ಶ್ರಾದ್ಧವಿಘ್ನವಾದಂತಾಗಿ ಪಿತೃಗಳು ಆ ಶ್ರಾದ್ಧದಲ್ಲಿ ಊಟ ಮಾಡುವುದಿಲ್ಲ. ಇದು ಮಹಾಪಾಪ. ಪಿತೃಹತ್ಯೆಗೆ ಸಮನಾದುದು.

೧೧-೧೨. ದಾನಕಾಲದಲ್ಲಿ ಬಹಳಜನ ಬ್ರಾಹ್ಮಣರು ಬಂದರೆ ಭೂರಿದಾನವನ್ನೂ ಎಲ್ಲರಿಗೂ ಕೊಡದೆ ಕೆಲವರಿಗೆ ಮಾತ್ರ ಕೊಡುತ್ತಾನೆ. ಒಬ್ಬನಿಗೆ ಕೊಟ್ಟದ್ದಕ್ಕೂ ಫಲವಿಲ್ಲವಾಗುತ್ತದೆ.

೧೩. ದಾನಮಾಡತಕ್ಕವನ ಮನೆಗೆ ಬ್ರಾಹ್ಮಣರು ಅವರಾಗಿ ಬಂದರೆ ಅವರಿಗೆ ದಾನಕೊಡದೆ, ಅವರು ಹೋದಮೇಲೆ ತನಗೆ ಬೇಕಾದವರಿಗೆ ದಾನಕೊಟ್ಟರೆ ಅದು ದಾನವಲ್ಲ, ಅದಕ್ಕೆ ದಾನದ ಫಲವೂ ಇಲ್ಲ.

೧೪. ಸಮಸ್ತ ಸದಾಚಾರಗಳಿಂದ ಕೂಡಿ ಪುಣ್ಯ ಕೆಲಸಗಳನ್ನು ಮಾಡುತ್ತಿರುವ, ತನ್ನನ್ನೇ ಆಶ್ರಯಿಸಿಕೊಂಡಿರುವ ಮನುಷ್ಯನನ್ನು ಎಲ್ಲಾ ಕಾಲದಲ್ಲೂ ಗೌರವಿಸಿ ಅವನಿಗೆ ದಾನವನ್ನು ಕೊಡುತ್ತಿರಬೇಕು.

ತಂ ಸಂತ್ಯಜ್ಯ ದದ್ದೇದಾನಮನ್ಯಸ್ಮೈ ಬ್ರಾಹ್ಮಣಾಯ ಚ ।
ದತ್ತಂ ತು ತದ್ಭವೇತ್ತಸ್ಯ ನಿಷ್ಫಲಂ ನಾತ್ರ ಸಂಶಯಃ ॥ ೧೫ ॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಾಪಿ ಚತುರ್ಥಕಃ ।
ಪುಣ್ಯಕಾಲೇಷು ಸರ್ವೇಷು ನಿರ್ಧನಂ ಪೂಜಯೇದ್ದ್ವಿಜಂ ॥ ೧೬ ॥

ಮೂರ್ಖಂ ವಾಪಿ ಚ ವಿದ್ವಾಂಸಂ ತಸ್ಯ ಪುಣ್ಯಫಲಂ ಶೃಣು ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ತಸ್ಯ ಪ್ರಜಾಯತೇ ॥ ೧೭ ॥

ತಸ್ಮಾದ್ಧಿ ಕಾರಣಾದ್ರಾಜನ್ ಶಕ್ಯಂ ಪ್ರಾಪ್ಯಂ ಚ ಕಾರಯೇತ್ ।
ಅನ್ಯೋ ವಿಪ್ರಸ್ಸಮಾಯಾತಸ್ತತ್ಕಾಲಂ ಶ್ರಾದ್ಧಕರ್ಮಣಿ ॥ ೧೮ ॥

ಉಭೌ ತೌ ಪೂಜಯೇತ್ತತ್ರ ಭೋಜನಾಚ್ಛಾದನೈಸ್ತಥಾ ।
ತಾಂಬೂಲೈರ್ದಕ್ಷಿಣಾಭಿಶ್ಚ ಪಿತರಸ್ತಸ್ಯ ಹರ್ಷಿತಾಃ ॥ ೧೯ ॥

---

೧೫. ಅಂತಹ ಆಶ್ರಿತನನ್ನು ಬಿಟ್ಟು ಬೇರೆ ಬ್ರಾಹ್ಮಣನಿಗೆ ದಾನಮಾಡಿದರೆ ಆ ದಾನವು ಫಲಹೀನವಾಗುತ್ತದೆ. ಸಂಶಯವಿಲ್ಲ.

೧೬. ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರರು, ಯಾರೇ ಆಗಲಿ ಪುಣ್ಯಕಾಲಗಳು ಬಂದಾಗಲೆಲ್ಲಾ ಬಡವನಾದ ಬ್ರಾಹ್ಮಣನನ್ನು ದಾನಮಾನಗಳಿಂದ ಕಾಪಾಡಬೇಕು.

೧೭. ಹಾಗೆ ಬಡವನಾದವನು ಮೂರ್ಖನಾಗಲಿ, ವಿದ್ವಾಂಸನೇ ಆಗಲಿ ಬಾಧಕವಿಲ್ಲ ಅವನಿಗೆ ಕೊಟ್ಟರೆ ಅಶ್ವಮೇಧಯಜ್ಞದ ಫಲವು ಲಭಿಸುತ್ತದೆ.

೧೮-೧೯. ಆದುದರಿಂದ ಬಂದವರಿಗೆ ಸಾಧ್ಯವಾದಷ್ಟು ಕೊಡಬೇಕು. ಅದೇ ಶ್ರಾದ್ಧಕಾಲದಲ್ಲಿ ಬೇರೊಬ್ಬ ಮನುಷ್ಯನು ಬರುವನು. ಆಗ ಬಂದವನನ್ನೂ ಆಸನ ಊಟ ಉಡುಗೆಗಳಿಂದಲೂ, ದಕ್ಷಿಣೆ ತಾಂಬೂಲಗಳಿಂದಲೂ, ಸತ್ಕರಿಸಬೇಕು. ಆಗ ಅವನ ಪಿತೃಗಳು ಸಂತೋಷಗೊಳ್ಳುತ್ತಾರೆ.

ಶ್ರಾದ್ಧಭುಕ್ತಾಯ ವಿಪ್ರಾಯ ನ ದದ್ಯಾದ್ದಕ್ಷಿಣಾಂ ತಥಾ ।
ಆಥರಾಚ್ಛ್ರಾದ್ಧಕರ್ತಾ ಯೋ ಗೋಹತ್ಯಾದಿಸಮಂ ಲಭೇತ್ ॥ ೨೦ ॥

ದ್ವಾವೇತೌ ಪೂಜಯೇತ್ತಸ್ಮಾಚ್ಛ್ರಾದ್ಧೇ ಚ ನೃಪಸತ್ತಮ ।
ನಿರ್ಧನಸ್ತತ್ಪ್ರಭಾವಾದ್ವಾ ಏಕಮೇಕಂ ಹಿ ಪೂಜಯೇತ್ ॥ ೨೧ ॥

ಅಮಾಯಾಂ ಚ ಮಹಾರಾಜ ಕ್ಷಯಾಹೇ ಚಾಪರಾಹ್ಣಿಕೇ ।
ವ್ಯತೀಪಾತೇ ಚ ಸಂಪ್ರಾಪ್ತೇ ವೈಧೃತೌ ಚ ನೃಪೋತ್ತಮ ॥ ೨೨ ॥

ಶ್ರಾದ್ಧಮೇವಂ ಪ್ರಕರ್ತವ್ಯಂ ಬ್ರಾಹ್ಮಣಾದಿಸವರ್ಣಕೈಃ ।
ಯಜ್ಞೇ ಯಥಾ ಮಹಾರಾಜಾ ಋತ್ವಿಜಶ್ಚ ಪ್ರಕಾರಯೇತ್ ।
ತಥಾ ವಿಪ್ರಾಃ ಪ್ರಕರ್ತವ್ಯಾಃ ಶ್ರಾದ್ಧದಾನೇಽಥ ಸರ್ವದಾ ॥ ೨೩ ॥

ಅವಿಜ್ಞಾತಃ ಪ್ರಕರ್ತವ್ಯೋ ಬ್ರಾಹ್ಮಣೋ ನೈವ ಜಾನತಾ ।
ಯಸ್ಯಾಪಿ ಜ್ಞಾಯತೇ ವಂಶಃ ಕುಲಂ ತ್ರಿಪುರುಷಂ ತಥಾ ॥ ೨೪ ॥

---

೨೦. ಶ್ರಾದ್ಧದಲ್ಲಿ ಊಟಮಾಡಿದವನಿಗೆ ದಕ್ಷಿಣೆಕೊಡದಿದ್ದಲ್ಲಿ ಗೋಹತ್ಯಾ ಪಾಪ ಬರುತ್ತದೆ.

೨೧. ಆದುದರಿಂದ ಶ್ರಾದ್ಧದಲ್ಲಿ ಆ ಎರಡು ಬಗೆಯವರನ್ನೂ ಪೂಜಿಸಬೇಕು. ಬಡವನಾದರೆ ಒಬ್ಬನನ್ನಾದರೂ ಪೂಜಿಸಬೇಕು.

೨೨. ಅಮವಾಸ್ಯೆ, ಪಿತೃಪಕ್ಷ, ಅಪರಾಹ್ಣ, ವ್ಯತೀಪಾತ, ವೈಧೃತಿಗಳಲ್ಲಿ ಬ್ರಾಹ್ಮಣಾದಿ ವರ್ಣದವರು ತಮ್ಮ ಜಾತಿಯವರನ್ನು ಕರೆದು ಶ್ರಾದ್ಧಾದಿಗಳನ್ನು ಮಾಡಬೇಕು.

೨೩. ಯಜ್ಞದಲ್ಲಿ ಋತ್ವಿಕ್ಕುಗಳನ್ನು ಗೌರವಿಸಿ ದಾನಕೊಡುವಂತೆ ಶ್ರಾದ್ಧದಲ್ಲಿಯೂ ಮಾಡಬೇಕು.

೨೪. ತಿಳಿಯದೇ ಇರುವವನನ್ನು ಶ್ರಾದ್ಧದಲ್ಲಿ ಪೂರ್ವಪಂಕ್ತಿಗೆ ಬ್ರಾಹ್ಮಣನನ್ನಾಗಿ ಮಾಡಬಾರದು. ಅವನ ವಂಶವನ್ನೂ ಮೂರುತಲೆಯವರೆಗಿನ ಕುಲಾಚಾರಗಳನ್ನೂ ತಿಳಿದು, ಯೋಗ್ಯನಾಗಿದ್ದರೆ ಅಂತಹವನನ್ನು ಬ್ರಾಹ್ಮಣನನ್ನಾಗಿ ಕರೆಯಬೇಕು.

ಆಚಾರಶ್ಚ ತಥಾ ರಾಜಂಸ್ತಾನ್ವಿಪ್ರಾನ್ಸಂನಿಮಂತ್ರಯೇತ್
ಕುಲಂ ನ ಜ್ಞಾಯತೇ ಯಸ್ಯ ಆಚಾರೇಣ ವಿಚಾರಯೇತ್ ।
ಶ್ರಾದ್ಧೇ ದಾನೇ ಪ್ರಕರ್ತವ್ಯೇ ವಿಶುದ್ಧೋ ಮೂರ್ಖ ಏವ ಹಿ ॥ ೨೫ ॥

ಅವಿಜ್ಞಾತೋ ಭವೇದ್ವಿಪ್ರೋ ವೇದವೇದಾಂಗಪಾರಗಃ ।
ಶ್ರಾದ್ಧದಾನಂ ಪ್ರಕರ್ತವ್ಯಂ ತಸ್ಮಾದ್ವಿಪ್ರಂ ನಿಮಂತ್ರಯೇತ್ ॥ ೨೬ ॥

ಆತಿಥ್ಯಂ ತು ಪ್ರಕರ್ತವ್ಯಮಪೂರ್ವಂ ನೃಪಸತ್ತಮ ।
ಅನ್ಯಥಾ ಕುರುತೇ ಪಾಪೀ ಸ ಯಾತಿ ನರಕಂ ಧ್ರುವಂ ॥ ೨೭ ॥

ತಸ್ಮಾದ್ವಿಪ್ರಃ ಪ್ರಕರ್ತವ್ಯೋ ದಿನೇ ಶ್ರಾದ್ಧೇ ಚ ಪರ್ವಸು ।
ಆದೌ ಪರೀಕ್ಷಯೇದ್ವಿಪ್ರಂ ಶ್ರಾದ್ಧೇ ದಾನೇ ಪ್ರಕಾರಯೇತ್ ॥ ೨೮ ॥

ನಾಶ್ನಂತಿ ತಸ್ಯ ವೈ ಗೇಹೇ ಪಿತರೋ ವಿಪ್ರವರ್ಜಿತಾಃ ।
ಶಾಪಂ ದತ್ವಾ ತತೋ ಯಾಂತಿ ಶ್ರಾದ್ಧಾದ್ವೈ ವಿಪ್ರವರ್ಜಿತಾತ್ ।
ಮಹಾಪಾಪೀ ಭವೇತ್ಸೋಽಪಿ ಬ್ರಹ್ಮಹಾ ಸ ಚ ಕಥ್ಯತೇ ॥ ೨೯ ॥

---

೨೫. ಯಾವನ ಕುಲವು ಗೊತ್ತಾಗುವುದಿಲ್ಲವೋ, ಅವನ ಆಚಾರವನ್ನಾದರೂ ತಿಳಿಯಬೇಕು. ಶ್ರಾದ್ಧದಲ್ಲೂ, ದಾನದಲ್ಲೂ ಮೂರ್ಖನಾದರೂ, ಕುಲ ಆಚಾರಗಳಿದ್ದರೆ ಅವನು ಶುದ್ಧನೇ.

೨೬. ವೇದ ವೇದಾಂಗ ಪಾರಗನಾದವನು ನಮಗೆ ಅಪರಿಚಿತನಾದರೂ ಅಂತವನನ್ನು ಕರೆದು ಶ್ರಾದ್ಧವನ್ನು ಮಾಡಬೇಕು. ಅವನಿಗೆ ಹೇಳಬೇಕು.

೨೭. ಆ ಮನುಷ್ಯನಿಗೆ ವಿಶೇಷವಾಗಿ ಆತಿಥ್ಯವನ್ನು ಮಾಡಬೇಕು. ಹಾಗೆ ಮಾಡದಿದ್ದರೆ ಪಾಪಿಯಾಗಿ ನರಕವನ್ನು ಹೊಂದುತ್ತಾನೆ.

೨೮. ಆದುದರಿಂದ ಶ್ರಾದ್ಧದಲ್ಲೂ, ದಾನದಲ್ಲೂ, ಯೋಗ್ಯರಾದ ಬ್ರಾಹ್ಮಣರನ್ನು ಕರೆಯಬೇಕು. ಮೊದಲು ಅವರನ್ನು ಪರೀಕ್ಷಿಸಿ ಅನಂತರ ದಾನಮಾಡಬೇಕು.

೨೯. ಯಾವನು ಮಾಡುವ ಶ್ರಾದ್ಧದಲ್ಲಿ ಬ್ರಾಹ್ಮಣನಿರುವುದಿಲ್ಲವೋ ಆ ಶ್ರಾದ್ಧದಲ್ಲಿ ಪಿತೃಗಳು ಊಟಮಾಡುವುದಿಲ್ಲ. ಅಲ್ಲದೆ ಅವರಿಗೆ ಶಾಪಕೊಟ್ಟು ಹೋಗುತ್ತಾರೆ. ಅವನು ಬ್ರಹ್ಮಹತ್ಯ ಮಾಡಿದವನೆಂದು ಪರಿಗಣಿಸಲ್ಪಡುತ್ತಾನೆ.

**ಸ್ವೈತ್ರಾಚಾರಂ ಪರಿತ್ಯಜ್ಯ ಯೋ ವರ್ತೇತ ನರಾಧಿಪ ।**
**ಮಹಾಪಾಪೀ ಸ ವಿಜ್ಞೇಯಃ ಸರ್ವಧರ್ಮಬಹಿಷ್ಕೃತಃ ॥ ೩೦ ॥**

**ಯೇ ತ್ಯಜಂತಿ ಶಿವಾಚಾರಂ ವೈಷ್ಣವಂ ಭೋಗದಾಯಕಂ ।**
**ನಿಂದಂತಿ ಬ್ರಾಹ್ಮಣಾನ್ ಧರ್ಮಾನ್ ವಿಜ್ಞೇಯಾಃ ಪಾಪವರ್ಧನಾಃ ॥ ೩೧ ॥**

**ಶಿವಾಚಾರಂ ಪರಿತ್ಯಜ್ಯ ಶಿವಭಕ್ತಾನ್ದ್ವಿಷಂತಿ ಚ ।**
**ಹರಿಂ ನಿಂದಂತಿ ಯೇ ಪಾಪಾ ಬ್ರಹ್ಮದ್ವೇಷಕರಾಸ್ಸದಾ ॥**
**ಆಚಾರನಿಂದಕಾಶ್ಚೈವ ಮಹಾಪಾತಕಕೃತ್ತಮಾಃ ॥ ೩೨ ॥**

**ಆದ್ಯಂ ಪೂಜ್ಯಂ ಪರಂ ಜ್ಞಾನಂ ಪುಣ್ಯಂ ಭಾಗವತಂ ತಥಾ ।**
**ವೈಷ್ಣವಂ ಹರಿವಂಶಂ ಚ ಮಾತ್ಸ್ಯಕಂ ಕೂರ್ಮಮೇವ ಚ ॥ ೩೩ ॥**

**ಯೇ ಪೂಜಯಂತಿ ಪಾದ್ಮಂ ಚ ತೇಷಾಂ ಶ್ರೇಯೋ ವದಾಮ್ಯಹಂ ।**
**ಪ್ರತ್ಯಕ್ಷಂ ತೇನ ವೈ ದೇವಃ ಪೂಜಿತೋ ಮಧುಸೂದನಃ ॥ ೩೪ ॥**

---

೩೦. ತನ್ನ ತಂದೆಯ ಆಚಾರವನ್ನು ಬಿಟ್ಟು ಯಾವನಿರುತ್ತಾನೋ ಅವನು ಸರ್ವಧರ್ಮದಿಂದ ಬಿಡಲ್ಪಟ್ಟ ಮಹಾಪಾಪಿಯು.

೩೧. ಯಾರು ಶಿವನ ಆಚಾರವನ್ನೂ, ವಿಷ್ಣುವಿನ ಆಚಾರವನ್ನೂ ನಿಂದಿಸುತ್ತಾರೋ ಮತ್ತು ಬ್ರಾಹ್ಮಣ ಧರ್ಮವನ್ನೇ ನಿಂದಿಸುತ್ತಾರೋ ಅವರು ಪಾಪಿಗಳೆಂದು ತಿಳಿಯಬೇಕು.

೩೨. ಶಿವನ ಆಚಾರವನ್ನು ಬಿಟ್ಟು ಶಿವಭಕ್ತರನ್ನು ನಿಂದಿಸುತ್ತ, ಹರಿಯನ್ನು ನಿಂದಿಸುತ್ತ ಬ್ರಾಹ್ಮಣನನ್ನೂ,ಆಚಾರವನ್ನೂ ನಿಂದಿಸುವವರು ಮಹಾಪಾಪಿಗಳು.

೩೩. ಮೊದಲು ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮನನ್ನೂ ಅನಂತರ ಭಾಗವತ, ವಿಷ್ಣುಪುರಾಣ, ಹರಿವಂಶ, ಮತ್ಸ್ಯ ಕೂರ್ಮ, ಪಾದ್ಮಗಳೆಂಬ ಪುರಾಣಗಳನ್ನೂ, ಪೂಜಿಸಬೇಕು. ಅವರಿಗೆ ಬರುವ ಶ್ರೇಯಸ್ಸನ್ನು ಹೇಳುತ್ತೇನೆ.

೩೪-೩೫. ಹಾಗೆ ಮಾಡಿದರೆ ವಿಷ್ಣುವನ್ನು ಪ್ರತ್ಯಕ್ಷವಾಗಿ ಪೂಜೆಮಾಡಿದಂತಾಗುತ್ತದೆ. ಆದುದರಿಂದ ವಿಷ್ಣುಪ್ರಿಯವಾದ ವೈಷ್ಣವ ಜ್ಞಾನವನ್ನು ಪೂಜಿಸ

ತಸ್ಮಾತ್ಸಂಪೂಜಯೇತ್ ಜ್ಞಾನಂ ವೈಷ್ಣವಂ ವಿಷ್ಣುವಲ್ಲಭಂ ।
ದೇವಸ್ಥಾನೇ ಹಿ ನಿತ್ಯಂ ವೈ ವೈಷ್ಣವಂ ಪುಸ್ತಕಂ ನೃಪ ।
ತಸ್ಮಿನ್ಸಂಪೂಜಿತೇ ವಿಪ್ರ ಪೂಜಿತಃ ಕಮಲಾಪತಿಃ ॥ ೩೫ ॥

ಅಸಂಪೂಜ್ಯ ಹರೇರ್ಜ್ಞಾನಂ ಯೋಽಧೀಯತೇ ಲಿಖಂತಿ ಚ ।
ಅಜ್ಞಾಯ ತತ್ಪ್ರಯಚ್ಛಂತಿ ಶೃಣ್ವಂತಿ ಧಾರಯಂತಿ ಚ ॥ ೩೬ ॥

ವಿಕ್ರೀಣಂತಿ ಚ ಲೋಭೇನ ಕುಜ್ಞಾನನಿಯಮೇನ ಚ ।
ಅಸಂಸ್ಕೃತಪ್ರದೇಶೇ ತು ಯಥೇಷ್ಟಂ ಸ್ಥಾಪಯಂತಿ ಚ ॥ ೩೭ ॥

ಹರೇರ್ಜ್ಞಾನಂ ಯಥಾಕ್ಷೇಮಂ ಪ್ರತ್ಯಕ್ಷಾಚ್ಚ ಪ್ರಕಾಶಯೇತ್ ।
ಅಧೀತೇ ಚ ಸಮರ್ಥಶ್ಚ ಯಃ ಪ್ರಸಾದಂ ಕರೋತಿ ಚ ॥ ೩೮ ॥

ಅಶುಚಿಶ್ಚಾಶುಚಿಸ್ಥಾನೇ ಯಃ ಪ್ರವಕ್ತಿ ಶೃಣೋತಿ ಚ ।
ಇತಿ ಸರ್ವಂ ಸಮಾಸೇನ ಗುರುನಿಂದಾ ಸಮಂ ಸ್ಮೃತಂ ॥ ೩೯ ॥

ಗುರುಪೂಜಾಮಕೃತ್ವೈವ ಯಃ ಶಾಸ್ತ್ರಂ ಶ್ರೋತುಮಿಚ್ಛತಿ ।
ನ ಕರೋತಿ ಚ ಶುಶ್ರೂಷಾಮಾಜ್ಞಾಭಂಗಂ ಚ ಭಾವಯೇತ್ ॥ ೪೦ ॥

---

ಬೇಕು. ದೇವಸ್ಥಾನದಲ್ಲಿ ವೈಷ್ಣವ ಸಂಬಂಧವಾದ ಪುಸ್ತಕಗಳನ್ನು ಪೂಜಿಸಬೇಕು. ಆ ಪುಸ್ತಕವನ್ನು ಪೂಜಿಸಿದರೂ ವಿಷ್ಣುವನ್ನು ಪೂಜಿಸಿದಂತೆಯೇ ಆಗುತ್ತದೆ.

೩೬-೩೯. ಹರಿಯ ಜ್ಞಾನವನ್ನು ಪೂಜೆಮಾಡದೆ ಓದಬಾರದು, ಬರೆಯಬಾರದು. ತಿಳುವಳಿಕೆಯಿಲ್ಲದೆ ಮತ್ತೊಬ್ಬರಿಗೆ ಕೊಡಬಾರದು. ಕೇಳಬಾರದು, ಇಟ್ಟುಕೊಳ್ಳಬಾರದು. ಮಾರಬಾರದು. ಆ ಪುಸ್ತಕಗಳನ್ನು ಸಾರಿಸಿ ಗುಡಿಸಿದ ಸ್ಥಳದಲ್ಲಿಡಬೇಕು. ಆ ಹರಿಯ ಜ್ಞಾನವನ್ನು (ಪುಸ್ತಕವನ್ನು) ಕ್ಷೇಮವಾದ ಜಾಗದಲ್ಲಿ ಪ್ರಕಾಶಪಡಿಸಬೇಕು. ಅಶುಚಿ ಜಾಗದಲ್ಲಿ ಅಥವಾ ಅಶುಚಿಯಾಗಿ ಓದಬಾರದು. ಕೊಡಬಾರದು, ಅಲ್ಲಿ ಹೇಳಲೂಬಾರದು. ಕೇಳಲೂಬಾರದು. ಹಾಗೆ ಮಾಡಿದರೆ ಗುರುನಿಂದೆ ಮಾಡಿದಂತಾಗುತ್ತದೆ. ಸಂಕ್ಷೇಪವಾಗಿ ಇದನ್ನು ಹೇಳಿದ್ದೇನೆ.

೪೦. ಗುರುಪೂಜೆಯನ್ನು ಅಥವಾ ಗುರು ಶುಶ್ರೂಷೆಯನ್ನೂ ಮಾಡದೆ ಈ ಶಾಸ್ತ್ರವನ್ನು ಕೇಳಿದರೆ, ಆಜ್ಞಾಭಂಗದ ದೋಷಬರುತ್ತದೆ.

**ನಾಭಿನಂದತಿ ತದ್ವಾಕ್ಯಮುತ್ತರಂ ಚ ಪ್ರಯಚ್ಛತಿ ।**
**ಗುರುಕರ್ಮಾಭಿಸಾಧ್ಯಂ ಚ ತದುಪೇಕ್ಷಾಂ ಕರೋತಿ ಚ ॥ ೪೧ ॥**

**ಗುರುಮಾರ್ತಮುಶಕ್ತಂ ವಾ ವಿದೇಶೇ ಪ್ರಸ್ಥಿತಂ ತಥಾ ।**
**ಅರಿಭಿಃ ಪರಿಭೂತಂ ವಾ ಯ ಸ್ಸಂತ್ಯಜತಿ ಪಾಪಕೃತ್ ।**
**ಪಠಮಾನಂ ಪುರಾಣಂ ತು ತಸ್ಯ ಪಾಪಂ ವದಾಮ್ಯಹಂ ॥ ೪೨ ॥**

**ಕುಂಭೀಪಾಕೇ ವಸೇತ್ತಾವದ್ಯಾವದಿಂದ್ರಾಶ್ಚತುರ್ದಶ ।**
**ಪಠಮಾನಂ ಗುರುಂ ಯೋ ಹಿ ಉಪೇಕ್ಷಯತಿ ಪಾಪಧೀಃ ॥ ೪೩ ॥**

**ತಸ್ಯಾಪಿ ಪಾತಕಂ ಘೋರಂ ಚಿರಂ ನರಕದಾಯಕಂ ।**
**ಭಾರ್ಯಾಪುತ್ರೇಷು ಮಿತ್ರೇಷು ಯಶ್ಚಾವಜ್ಞಾಂ ಕರೋತಿ ಚ ।**
**ಇತ್ಯೇತತ್ಪಾತಕಂ ಜ್ಞೇಯಂ ಗುರುನಿಂದಾಸಮಂ ಮಹತ್ ॥ ೪೪ ॥**

---

೪೧-೪೨. ಆ ಗುರುವಿನ ವಾಕ್ಯವನ್ನು ಕೇಳದಿದ್ದರೆ, ಅಥವಾ ಗುರುವಿಗೆ ಎದುರುತ್ತರ ಕೊಟ್ಟರೆ ಬರುವ ಪಾಪವನ್ನು ಹೇಳುತ್ತೇನೆ. ಗುರುವಿನ ಕೆಲಸವನ್ನು ಮಾಡಲು ಸಾಧ್ಯವಿದ್ದರೂ ಉಪೇಕ್ಷಿಸಬಾರದು. ಗುರುವು ಕಷ್ಟದಲ್ಲಿದ್ದರೂ, ಅಶಕ್ತನಾಗಿದ್ದರೂ, ಬೇರೆ ಸ್ಥಳಕ್ಕೆ ಹೋಗಿದ್ದರೂ, ಶತ್ರುಗಳಿಂದ ತಿರಸ್ಕೃತನಾದರೂ ಅಂತಹ ಗುರುವನ್ನು ಬಿಡಬಾರದು. ಹಾಗೆ ಗುರುವನ್ನು ಕಷ್ಟಕಾಲದಲ್ಲಿ ಬಿಡುವ ಪಾಪಿಯು ಪುರಾಣಾದಿಗಳನ್ನು ಓದಿದರೂ ಅವನಿಗೆ ಅದರಿಂದ ಯಾವ ಫಲವೂ ಉಂಟಾಗುವುದಿಲ್ಲ. ಪಾಪವೇ ಬರುತ್ತದೆ.

೪೩. ಈ ಮೇಲೆ ಹೇಳಿದಂತೆ ಮಾಡಿದರೆ ಅವನು ಹದಿನಾಲ್ಕು ಜನ ಇಂದ್ರರ ರಾಜ್ಯಭಾರ ಮುಗಿಯುವವರೆಗೆ ಕುಂಭೀಪಾತಕದಲ್ಲಿರುತ್ತಾನೆ. ತನಗೆ ಪಾಠಹೇಳುತ್ತಿರುವ ಗುರುವನ್ನು ಉಪೇಕ್ಷಿಸಿದರೆ ಬಹುಕಾಲ ಘೋರವಾದ ನರಕಪ್ರಾಪ್ತಿಯಾಗುವುದು.

೪೪. ಆ ಗುರುವಿನ ಹೆಂಡತಿ, ಮಕ್ಕಳು, ಮಿತ್ರರಲ್ಲಿ ತಿರಸ್ಕಾರ ತೋರಿಸಿದರೆ ಅದು ಗುರುನಿಂದಾಸಮವಾದ ಮಹಾಪಾಪವು.

ಬ್ರಹ್ಮಘ್ನಃ ಸ್ವರ್ಣಸ್ತೇಯೀ ಚ ಗೋಹನ್ತಾ ಗುರುತಲ್ಪಗಃ ।
ಮಹಾಪಾತಕಿನಸ್ತ್ವೇತೇ ಯೋಗನಾಶಕಪಂಚಮಾಃ ॥ ೪೫ ॥

ಕ್ರೋಧಾದ್ದ್ವೇಷಾದ್ಭಯಾಲ್ಲೋಭಾದ್ಬ್ರಾಹ್ಮಣಸ್ಯ ವಿಶೇಷತಃ ।
ಮರ್ಮಾದಿಕೃಂತಕೋ ಯಶ್ಚ ಬ್ರಹ್ಮಘ್ನಸ್ಸ ಪ್ರಕೀರ್ತಿತಃ ॥ ೪೬ ॥

ಬ್ರಾಹ್ಮಣಂ ಯಸ್ಸಮಾಹೂಯ ಯಾಚಮಾನಮಕಿಂಚನಂ ।
ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ಸ ಚ ವೈ ಬ್ರಹ್ಮಹಾ ಸ್ಮೃತಃ ॥ ೪೭ ॥

ಯಸ್ತು ವಿದ್ಯಾಭಿಮಾನೇನ ನಿಸ್ತೇಜಯತಿ ಚ ದ್ವಿಜಾನ್ ।
ಉದಾಸೀನಾನ್ಸಭಾಮಧ್ಯೇ ಬ್ರಹ್ಮಹಾ ಸ ಪ್ರಕೀರ್ತಿತಃ ॥ ೪೮ ॥

ಮಿಥ್ಯಾಗುಣೈರಥಾತ್ಮಾನಂ ನಯತ್ಯುತ್ಕರ್ಷತಾಂ ಬಲಾತ್ ।
ಗುರುಂ ವಿಬೋಧಯೇದ್ಯಸ್ತು ಸ ಚ ವೈ ಬ್ರಹ್ಮಹಾ ಸ್ಮೃತಃ ॥ ೪೯ ॥

---

೪೫. ಬ್ರಾಹ್ಮಣನನ್ನು ಕೊಂದವನು, ಚಿನ್ನವನ್ನು ಕದಿಯುವವನು, ಗೋವನ್ನು ಕೊಲ್ಲುವವನು, ಗುರುವಿನ ಹೆಂಡತಿಯಲ್ಲಿ ರಮಿಸುವವನು, ಯೋಗವನ್ನು ನಾಶ ಮಾಡುವವನು ಇವರು ಮಹಾಪಾತಕಿಗಳು.

೪೬. ಕೋಪ, ದ್ವೇಷ, ಭಯ, ಆಸೆ ಇವುಗಳಿಂದ ಬ್ರಾಹ್ಮಣನಿಗೆ ನಿಂದಾವಾಕ್ಯಗಳನ್ನಾಡಿದರೆ ಅವನು ಬ್ರಹ್ಮಘ್ನನೆನಿಸುತ್ತಾನೆ.

೪೭. ಭಿಕ್ಷೆಬೇಡುವ ಬಡವನಾದ ಬ್ರಾಹ್ಮಣನನ್ನು ಕೂಗಿ ಕರೆದು, ಅನಂತರ ಏನೂ ಇಲ್ಲವೆಂದು ಹೇಳಿದರೆ ಅವನು ಬ್ರಹ್ಮಘ್ನನೆನಿಸುವನು.

೪೮. ಯಾವನು ವಿದ್ಯಾಮದದಿಂದ ಸಭಾಮಧ್ಯದಲ್ಲಿ ಉದಾಸೀನರಾದ ಬ್ರಾಹ್ಮಣರನ್ನು ಅವಮಾನಮಾಡುತ್ತಾನೋ ಅವನು ಬ್ರಹ್ಮಘ್ನನು.

೪೯. ಯಾವನು ಸುಳ್ಳು ಹೇಳಿ ತನಗೆ ಪ್ರೌಢಿಮೆ ತೋರ್ಪಡಿಸಿಕೊಳ್ಳುತ್ತಾನೋ, ಮತ್ತು ಗುರುವನ್ನು ನಿದ್ದೆಯಿಂದೆಬ್ಬಿಸುತ್ತಾನೋ ಅವನು ಬ್ರಹ್ಮಘ್ನನು.

ಕ್ಷುತ್ತೃಷ್ಣಾರ್ತಪ್ರದೇಹಾನಾಂ ಯದನ್ನಂ ಭೋಕ್ತುಮಿಚ್ಛತಾಂ ।
ಯಸ್ಸಮಾಚರತೇ ವಿಘ್ನಂ ತಮಾಹುರ್ಬ್ರಹ್ಮಘಾತಕಂ ॥ ೫೦ ॥

ಪಿಶುನಸ್ಸರ್ವಲೋಕಾನಾಂ ರಂಧ್ರಾನ್ವೇಷಣತತ್ಪರಃ ।
ಉದ್ವೇಜನಕರಃ ಕ್ರೂರಃ ಸ ಚ ವೈ ಬಹ್ಮಹಾ ಸ್ಮೃತಃ ॥ ೫೧ ॥

ದೇವದ್ವಿಜಗವಾಂ ಭೂಮಿಂ ಪೂರ್ವದತ್ತಾಂ ಹರೇತ್ತು ಯಃ ।
ಪ್ರಣಷ್ಟಾಮಪಿ ಕಾಲೇನ ತಮಾಹುರ್ಬ್ರಹ್ಮಘಾತಕಂ ॥ ೫೨ ॥

ದ್ವಿಜವಿತ್ತಾಪಹರಣಂ ಪರೇಣ ಸಮುಪಾರ್ಜಿತಂ ।
ಬ್ರಹ್ಮಹತ್ಯಾಸಮಂ ಜ್ಞೇಯಂ ತಸ್ಯ ಪಾತಕಮುತ್ತಮಂ ॥ ೫೩ ॥

ಅಗ್ನಿಹೋತ್ರಂ ಪರಿತ್ಯಜ್ಯ ಪಂಚಯಜ್ಞಾದಿಕರ್ಮ ಚ ।
ಮಾತಾಪಿತ್ರೋರ್ಗುರೂಣಾಂ ಚ ಕೂಟಸಾಕ್ಷ್ಯಂ ಚ ಯಶ್ಚರೇತ್ ॥ ೫೪ ॥

---

೫೦. ಹಸಿವು ಬಾಯಾರಿಕೆಗಳಿಂದ ಕೂಡಿದವನೊಬ್ಬನು ಮತ್ತೊಬ್ಬನ ಮನೆಗೆ ಊಟಕ್ಕೆ ಹೋಗಿದ್ದಾಗ ಊಟಕ್ಕೆ ವಿಘ್ನವನ್ನು ಮಾಡಿದರೆ ಅವನು ಬ್ರಹ್ಮಘಾತಕನು.

೫೧. ಚಾಡಿಕೋರ, ಮತ್ತೊಬ್ಬರಲ್ಲಿ ಕೆಟ್ಟದ್ದನ್ನೇ ಹುಡುಕುವವನು, ಪರರನ್ನು ಕೋಪಗೊಳಿಸುವವನು, ಕ್ರೂರಿ, ಇವರಿಷ್ಟು ಜನಗಳೂ ಬ್ರಹ್ಮಘಾತಕರು.

೫೨. ದೇವತೆಗಳು, ಬ್ರಾಹ್ಮಣರು, ಗೋವುಗಳು, ಇವುಗಳಿಗೆ ಧರ್ಮಾರ್ಥವಾಗಿ ಬಿಟ್ಟಿರುವ ಭೂಮಿಯನ್ನು ಕೆಟ್ಟುಹೋಗಿದ್ದರೂ ಕೂಡ ಅದನ್ನು ದಾನ ತೆಗೆದು ಕೊಂಡರೆ ಅವನು ಬ್ರಹ್ಮಘಾತಕನು.

೫೩. ಬ್ರಾಹ್ಮಣನ ಹಣವನ್ನು ಕದಿಯುವುದು, ಪರರು ಕಷ್ಟಪಟ್ಟು ಸಂಪಾದಿಸುವುದನ್ನು ಕದಿಯುವುದು, ಇವು ಬ್ರಹ್ಮಹತ್ಯೆಗೆ ಸಮನಾದ ಪಾಪಗಳು.

೫೪-೫೬. ಅಗ್ನಿಹೋತ್ರಮಾಡದಿರುವುದು. ಬ್ರಹ್ಮಯಜ್ಞಾದಿಗಳನ್ನು ಮಾಡದಿರುವುದು. ತಾಯಿತಂದೆಗಳು, ಗುರುಗಳು ಇವರ ಶುಶ್ರೂಷೆಮಾಡದಿರುವುದು.

**ಅಪ್ರಿಯಂ ಶಿವಭಕ್ತಾನಾಮಭಕ್ಷ್ಯಸ್ಯ ಚ ಭಕ್ಷಣಂ ।**
**ವನೇ ನಿರಪರಾಧಾನಾಂ ಪ್ರಾಣಿನಾಂ ಚ ಪ್ರಮಾರಣಂ ॥ ೫೫ ॥**

**ಗವಾಂ ಗೋಷ್ಠೇ ದೇವಗೃಹೇ ಪುರೇಗ್ರಾಮೇ ಚ ದೀಪನಂ ।**
**ಇತಿ ಪಾಪಾನಿ ಘೋರಾಣಿ ಪೂರ್ವಪಾಪ ಸಮಾನಿ ತು ॥ ೫೬ ॥**

**ದೀನಸರ್ವಸ್ವಹರಣಂ ಪರಸ್ತ್ರೀಗಜವಾಜಿನಾಂ ।**
**ಗೋಭೂರಜತರತ್ನಾನಾಮೋಷಧೀನಾಂ ರಸಸ್ಯ ಚ ॥ ೫೭ ॥**

**ಚಂದನಾಗರುಕರ್ಪೂರಕಸ್ತೂರೀಪೂಪವಾಸಸಾಂ**
**ಪರನ್ಯಾಸಾಪಹರಣಂ ಸ್ವರ್ಣಸ್ತೇಯಸಮಂ ಸ್ಮೃತಂ ॥ ೫೮ ॥**

**ಕನ್ಯಾಯಾ ವರಯೋಗ್ಯಾಯಾ ಅದಾನಂ ಸದೃಶೇ ವರೇ ।**
**ಪುತ್ರಮಿತ್ರಕಳತ್ರೇಷು ಗಮನಂ ಭಗಿನೀಷು ಚ ॥ ೫೯ ॥**

---

ಸುಳ್ಳುಸಾಕ್ಷಿಹೇಳುವುದು, ಶಿವನ ಭಕ್ತರಿಗೆ ಕೆಡಕುಮಾಡುವುದು, ತಿನ್ನಬಾರದುದನ್ನು ತಿನ್ನುವುದು, ಕಾಡಿನಲ್ಲಿರುವ ನಿರಪರಾಧಿಗಳಾದ ಪ್ರಾಣಿಗಳನ್ನು ಕೊಲ್ಲುವುದು, ಹಸುಗಳ ಕೊಟ್ಟಿಗೆ, ದೇವಸ್ಥಾನ, ಪಟ್ಟಣ, ಗ್ರಾಮಗಳಿಗೆ ಬೆಂಕಿಹಾಕುವುದು ಇಂತಹ ಪಾಪಗಳು ಕ್ರೂರವಾದುವು. ಇವು ಬ್ರಹ್ಮಹತ್ಯೆಗೆ ಸಮವಾದುವು.

೫೭-೫೮. ಬಡವರ ಸೊತ್ತನ್ನೆಲ್ಲಾ ಅಪಹರಿಸುವುದು, ಪರಸ್ತ್ರೀ, ಪರರ ಆನೆ, ಪರರ ಕುದುರೆ, ಪರರ ಗೋವು, ಭೂಮಿ, ಬೆಳ್ಳಿ, ರತ್ನ, ದವಸಧಾನ್ಯಗಳು, ರಸ, (ಉಪ್ಪು ತುಪ್ಪ) ಚಂದನ, ಅಗರು, ಕರ್ಪೂರ, ಕಸ್ತೂರಿ, ಸಿಹಿಪದಾರ್ಥ, ಬಟ್ಟೆ ಇವುಗಳನ್ನು ಕದಿಯುವುದು, ಪರರು ಇಟ್ಟಿರೆಂದು ಕೊಟ್ಟದನ್ನು ಕದಿಯುವುದು. ಎಂದರೆ ಹಿಂದಕ್ಕೆ ಕೊಡದಿರುವುದು ಇವೆಲ್ಲವೂ ಸ್ವರ್ಣಸ್ತೇಯಕ್ಕೆ ಸಮಾನವಾದುವು. ಪಂಚಮಹಾಪಾತಕದಲ್ಲಿ ಸೇರಿರುವುದು.

೫೯-೬೦. ಮದುವೆಯಾಗಲು ವಯಸ್ಸಾಗಿರುವ ಹುಡುಗಿಯನ್ನು ಯೋಗ್ಯನಾದ ವರನಿಗೆ ಕೊಡದಿರುವಿಕೆ, ಸೊಸೆ, ಅಥವಾ ಸ್ನೇಹಿತನ ಹೆಂಡತಿಯಲ್ಲಿ ರಮಿಸುವಿಕೆ, ಸೋದರಿಯರಲ್ಲಿ ಗಮನ ಮಾಡುವುದು, ಮದುವೆಯಾಗದವಳ ಗಮನ, ಅನ್ತ್ಯಜ

**ಕುಮಾರೀಸಾಹಸಂ ಘೋರಮನ್ತ್ಯಜಸ್ತ್ರೀನಿಷೇವಣಂ ।**
**ಸವರ್ಣಾಯಾಶ್ಚ ಗಮನಂ ಗುರುತಲ್ಪಸಮಂ ಸ್ಮೃತಂ ॥ ೬೦ ॥**

**ಮಹಾಪಾತಕತುಲ್ಯಾನಿ ಪಾಪಾನ್ಯುಕ್ತಾನಿ ಯಾನಿ ತು ।**
**ತಾನಿ ಪಾತಕಸಂಜ್ಞಾನಿ ತತ್ಪಶ್ಚಾದುಪಪಾತಕಂ ॥ ೬೧ ॥**

**ದ್ವಿಜಾಯಾರ್ಥಂ ಪ್ರತಿಜ್ಞಾಯ ನ ಪ್ರಯಚ್ಛತಿ ಯಃ ಪುನಃ ।**
**ನ ಚ ತತ್ಸ್ಮರತೇ ನಿತ್ಯಂ ತುಲ್ಯಂ ತದುಪಪಾತಕಂ ॥ ೬೨ ॥**

**ದ್ವಿಜದ್ರವ್ಯಾಪಹರಣಂ ಮರ್ಯಾದಾಯಾ ವ್ಯತಿಕ್ರಮಃ ।**
**ಅತಿಮಾನೋಽತಿಕೋಪಶ್ಚ ದಾಂಭಿಕತ್ವಂ ಕೃತಘ್ನತಾ ॥ ೬೩ ॥**

**ಅತ್ಯಂತವಿಷಯಾಸಕ್ತಿಃ ಕಾರ್ಪಣ್ಯಂ ಶಾಠ್ಯಮತ್ಸರಂ ।**
**ಪರದಾರಾಭಿಗಮನಂ ಸಾಧ್ವೀಕನ್ಯಾವಿದೂಷಣಂ ॥ ೬೪ ॥**

**ಪರಿವಿತ್ತಿಃ ಪರಿವೇತ್ತಾ ಯಯಾ ಚ ಪರಿವಿದ್ಯತೇ ।**
**ತಯೋರ್ದಾನಂ ಚ ಕನ್ಯಾಯಾಸ್ತಯೋರೇವ ಚ ಯಾಜನಂ ॥ ೬೫ ॥**

---

ಸ್ತ್ರೀಯನ್ನು ಸೇವಿಸುವುದು, ತನ್ನ ಸಗೋತ್ರದವಳಲ್ಲಿ ರಮಿಸುವಿಕೆ, ಇವಿಷ್ಟೂ ಗುರುವಿನ ಹೆಂಡತಿಯಲ್ಲಿ ಗಮನ ಮಾಡಿದಷ್ಟು ಪಾಪವನ್ನುಂಟುಮಾಡುವವು. ಈ ಪಾಪ ಮಾಡಿದವರು ಮಹಾಪಾತಕಿಗಳಾಗುತ್ತಾರೆ.

೬೧. ಮಹಾಪಾತಕಕ್ಕೆ ಸಮವೆಂದು ಇರುವ ಪಾಪಗಳನ್ನೆಲ್ಲಾ ಹೇಳಿದೆ. ಇವುಗಳು ಪಾತಕಗಳೆನಿಸಿಕೊಳ್ಳುತ್ತವೆ. ಆ ಮೇಲೆ ಹೇಳುವುದು ಉಪಪಾತಕಗಳು.

೬೨. ಬ್ರಾಹ್ಮಣನಿಗೆ ಹಣಕೊಡುತ್ತೇನೆಂದು ಮಾತುಕೊಟ್ಟು ಕೊಡದಿದ್ದರೆ ಅಥವಾ ಅದನ್ನು ಸ್ಮರಿಸದಿದ್ದರೂ ಅದು ಉಪಪಾತಕಕ್ಕೆ ಸಮವು.

೬೩-೬೭. ಬ್ರಾಹ್ಮಣನ ಹಣವನ್ನು ಅಪಹರಿಸುವುದು, ಬ್ರಾಹ್ಮಣನಿಗೆ ಮರ್ಯಾದೆ ಮಾಡದಿರುವುದು, ಹೆಚ್ಚು ಸ್ವಾಭಿಮಾನಿಯಾಗಿರುವುದು. ಹೆಚ್ಚು ಕೋಪಮಾಡುವುದು, ಡಂಭಾಚಾರ ಮಾಡುವುದು, ವಿಷಯ ಸುಖವಾದ ಸ್ತ್ರೀಲೋಲುಪತೆ, ಕೃಪಣತನ, ಕಪಟತನ, ಮಾತ್ಸರ್ಯ, ಪರರ ಹೆಂಡತಿಯರಲ್ಲಿ ರಮಿಸುವುದು, ಪತಿವ್ರತೆಯಾದ ಕನ್ಯೆಯರನ್ನು ಕೆಡಿಸುವುದು, ಅವರನ್ನು ದೂಷಿಸುವುದು. (ಅಣ್ಣ ಮದುವೆಯಾಗದೆ

**ಪುತ್ರಮಿತ್ರಕಳತ್ರಾಣಾಮಭಾವೇ ಸ್ವಾಮಿನಸ್ತಥಾ ।**
**ಭಾರ್ಯಾಣಾಂ ಚ ಪರಿತ್ಯಾಗಃ ಸಾಧೂನಾಂ ಚ ತಪಸ್ವಿನಾಂ ॥ ೬೬ ॥**

**ಗವಾಂ ಕ್ಷತ್ರಿಯವೈಶ್ಯಾನಾಂ ಸ್ತ್ರೀಶೂದ್ರಾಣಾಂ ಚ ಘಾತನಂ ।**
**ಶಿವಾಯತನವೃಕ್ಷಾಣಾಂ ಪುಷ್ಪಾರಾಮವಿನಾಶನಂ ॥ ೬೭ ॥**

**ಯಃ ಪೀಡಾ ಮಾಶ್ರಮಸ್ಥಾನಾಮಾಚರೇದಲ್ಪಿಕಾವಪಿ ।**
**ತದ್ಭೃತ್ಯಪರಿವರ್ಗಸ್ಯ ಶೂದ್ರಾತ್ಪರತರಸ್ಯ ಚ ॥ ೬೮ ॥**

**ವಸ್ತ್ರಧಾನ್ಯಪಶುಸ್ತೇಯಮಯಾಚ್ಯಾನಾಂ ಪ್ರಯಾಚನಂ ।**
**ಯಜ್ಞಾರಾಮತಟಾಕಾನಾಂ ದಾರಾಪತ್ಯಸ್ಯ ವಿಕ್ರಯಃ ॥ ೬೯ ॥**

**ತೀರ್ಥಯಾತ್ರೋಪವಾಸಾನಾಂ ವ್ರತಾನಾಂ ಚ ಸುಕರ್ಮಣಾಂ ।**
**ಸ್ತ್ರೀಧನಾನ್ಯುಪಜೀವಂತಿ ಸ್ತ್ರೀಭವಾದ್ಯನ್ನಜೀವಿತಾಃ ॥ ೭೦ ॥**

---

ತಮ್ಮನಿಗೆ ಮದುವೆಯಾದರೆ ಹಿರಿಯವನು ಪರಿವಿತ್ತಿ ಕಿರಿಯವನು ಪರಿವೇತ್ತಾ ಎನಿಸುವನು), ಪರಿವೇತ್ತರಿಗೆ ದಾನಮಾಡುವುದು. ಆ ಕನ್ಯೆಗೆ ದಾನಮಾಡುವುದು, ಅವರಿಗೆ ಹವ್ಯಕವ್ಯಗಳನ್ನು ಮಾಡಿಸುವುದು ಪುತ್ರರು, ಮಿತ್ರರು, ಇತರ ಬಂಧುಗಳು ಇಲ್ಲದವರಿಗೆ ತಾನೇ ಸ್ವಾಮಿಯಾಗುವುದು, ಹೆಂಡತಿಯನ್ನು ಬಿಟ್ಟುಬಿಡುವುದು, ಸಾಧುಗಳು, ತಪಸ್ವಿಗಳು, ಗೋವುಗಳು, ಕ್ಷತ್ರಿಯರು ವೈಶ್ಯರು, ಸ್ತ್ರೀಯರು, ಶೂದ್ರರು ಇವರುಗಳನ್ನು ಕೊಲ್ಲುವುದು, ಶಿವದೇವಸ್ಥಾನ, ಮರಗಳು, ಹೂವಿನತೋಟ ಇವನ್ನು ನಾಶಮಾಡುವುದು, ಆಶ್ರಮದವರಿಗೆ ಅಲ್ಪವಾದರೂ ಪೀಡೆಮಾಡುವುದು, ತನ್ನ ಆಳು, ಪರಿಚಾರಕರು, ಶೂದ್ರರಿಗಿಂತ ನೀಚರಾದ ಬೇಡರು ಮುಂತಾದವರ ಬಟ್ಟೆ ಧಾನ್ಯ ಪಶುಗಳನ್ನು ಕದಿಯುವುದು, ಇವೆಲ್ಲಾ ಉಪಪಾತಕಗಳು.

೬೯. ಬೇಡಲು ಅನರ್ಹರಾದವರಲ್ಲಿ ಯಾಚಿಸುವುದು, ಯಜ್ಞಮಾಡಿ ಪರರಿಗೆ ಮಾರುವುದು, ತೋಟ, ಕೆರೆ, ಹೆಂಡತಿ, ಮಗ ಇವರನ್ನು ಮಾರುವುದು, ಇವೂ ಉಪಪಾತಕವು.

೭೦-೭೧. ತೀರ್ಥಯಾತ್ರೆ, ಉಪವಾಸ, ವ್ರತ, ಮತ್ತು ಒಳ್ಳೆಯ ಕೆಲಸಗಳು ಇವನ್ನು ಮಾರುವಿಕೆ, ಸ್ತ್ರೀಧನದಿಂದ ಜೀವಿಸುವುದು. ಸ್ತ್ರೀಯರಿಗೆ ಕೊಟ್ಟ ಭೂಮಿಯ ಅನ್ನದಿಂದ ಜೀವಿಸುವುದು ಇವೂ ಉಪಪಾತಗಳು. ಇವಲ್ಲದೆ ಅಧರ್ಮವನ್ನು ಹೇಳಿ

**ಅಧರ್ಮಂ ವಿಬ್ರೂಯೊದ್ಯಸ್ತು ಅಧರ್ಮಂ ವರ್ಣತೆ ನರಃ ।**
**ಪರದೋಷಪ್ರವಾದೀ ಚ ಪರಿಚ್ಛಿದ್ರಾವಲೋಕಕಃ ॥ ೭೧ ॥**

**ಪರದ್ರವ್ಯಾಭಿಲಾಷೀ ಚ ಪರದಾರಾವಲೋಕಕಃ ।**
**ಏತೇ ಗೋಘ್ನಸಮಾನಾಸ್ತು ಜ್ಞಾತವ್ಯಾ ನೃಪನಂದನ ॥ ೭೨ ॥**

**ಯಃ ಕರ್ತಾ ಸರ್ವಶಾಸ್ತ್ರಾಣಾಂ ಯೋ ಹರ್ತಾ ಪಶುವಿಕ್ರಯೀ ।**
**ನಿರ್ದಯೋऽತೀವ ಭೃತ್ಯೇಷು ಪಶೂನಾಂ ದಮಕಶ್ಚ ಯಃ ॥ ೭೩ ॥**

**ಮಿಥ್ಯಾ ಪ್ರವದತೇ ವಾಚಮಾಕರ್ಣಯತಿ ಯಶ್ಚ ತಾಂ ।**
**ಸ್ವಾಮಿಮಿತ್ರಗುರುದ್ರೋಹೀ ಮಾಯಾವೀ ಚಪಲಶ್ಶಠಃ ॥ ೭೪ ॥**

**ಯೇ ಭಾರ್ಯಾಪುತ್ರಮಿತ್ರಾಣಿ ಬಾಲವೃದ್ಧಕೃಶಾನರಾಃ ।**
**ಭೃತ್ಯಾನತಿಥಿಬಂಧೂಂಶ್ಚ ತ್ಯಕ್ತ್ವಾಶ್ನಂತಿ ಬುಭುಕ್ಷಿತಾನ್ ॥ ೭೫ ॥**

---

ಮಾಡಿಸುವವನು, ಅಧರ್ಮವನ್ನು ವರ್ಣಿಸುವವನು, ಪರರ ದೋಷವನ್ನು ಹೇಳುವವನು, ಪರರ ಛಿದ್ರವನ್ನೇ ನೋಡುವವನು, ಇವರು ಉಪಪಾತಕಿಗಳು.

೭೨. ಪರದ್ರವ್ಯವನ್ನು ಅಪೇಕ್ಷಿಸುವವನು, ಪರರ ಹೆಂಡಿರನ್ನಪೇಕ್ಷಿಸುವವನು, ಇವರು ಗೋಹತ್ಯಮಾಡಿದ ಪಾಪವನ್ನು ಹೊಂದುತ್ತಾರೆ.

೭೩-೭೫. ಶಸ್ತ್ರಗಳನ್ನು ಮಾಡುವವನು, ಶಸ್ತ್ರವನ್ನು ಕದಿಯುವವನು, ಹಸುವನ್ನು ಮಾರುವವನು, ಭೃತ್ಯರಲ್ಲಿ ದಯವಿಲ್ಲದವನು. ಪಶುಗಳನ್ನು ಶಿಕ್ಷಿಸುವವನು, ಸುಳ್ಳು ಹೇಳುವವನು, ಅದನ್ನು ಕೇಳುವವನು, ಸ್ವಾಮಿ, ಮಿತ್ರ, ಗುರುಗಳಲ್ಲಿ ದ್ರೋಹ ಮಾಡುವವನು, ಮಾಯಾವಿಯು, ಚಪಲನು, ಅಯೋಗ್ಯ ಹೆಂಡತಿ, ಮಕ್ಕಳು, ಮಿತ್ರರು, ಬಾಲರು, ಮುದುಕರು, ಕೃಶರು, ಆಳುಗಳು, ಅತಿಥಿಗಳು, ಬಂಧುಗಳು, ಹಸಿದಿರುವವನು, ಇವರುಗಳನ್ನು ಬಿಟ್ಟು ಊಟಮಾಡುವವನು, ಇವರೆಲ್ಲರೂ ಉಪಪಾತಕಿಗಳು.

**ಯೇಽತಿಮಿಷ್ಟಂ ಸಮುಶ್ನಂತಿ ನೋಽನ್ಯಾಪ್ಯನ್ನಂ ದದಾತಿ ಚ ।**
**ಪೃಥಕ್ಪಾಕೀ ಸ ವಿಜ್ಞೇಯೋ ಬ್ರಹ್ಮವಾದಿಷು ಗರ್ಹಿತಃ ॥ ೭೬ ॥**

**ನಿಯಮಾನ್ ಸ್ವಯಮಾದಾಯ ಯೇ ತ್ಯಜಂತ್ಯಜಿತೇಂದ್ರಿಯಃ ।**
**ಪ್ರವರ್ಗಾ ವಂಚಿತಾ ಯೈಶ್ಚ ಸಂಯುಕ್ತಾ ಯೇ ಚ ಮದ್ಯಪೈಃ ॥ ೭೭ ॥**

**ಯೇ ಚಾಪಿ ಕ್ಷತರೋಗಾರ್ತಾಂ ಗಾಂ ಪಿಪಾಸಾಕ್ಷುಧಾತುರಾಂ ।**
**ನ ಪಾಲಯಂತಿ ಯತ್ನೇನ ತೇ ಗೋಘ್ನಾ ನಾರಕಾಸ್ಸ್ಮೃತಾಃ ॥ ೭೮ ॥**

**ಸರ್ವಪಾಪರತಾ ಯೇ ಚ ಚತುಷ್ಪಾತ್ಕ್ಷೇತ್ರಭೇದಕಾಃ ।**
**ಸಾಧೂನ್ವಿಪ್ರಗುರೂಂಶ್ಚೈವ ಯೇ ವೈ ಗಾಂ ತಾಡಯನ್ತಿ ಚ ॥ ೭೯ ॥**

**ಯೇ ತಾಡಯನ್ತಿ ನಿರ್ದೋಷಾಂ ನಾರೀಂ ಸಾಧುಪದೇ ಸ್ಥಿತಾಂ ।**
**ಆಲಸ್ಯಬದ್ಧಸರ್ವಾಂಗೋ ಯಃ ಸ್ವಪಿತಿ ಮುಹುರ್ಮುಹುಃ ॥ ೮೦ ॥**

---

೭೬. ಯಾರು ಮೃಷ್ಟಾನ್ನವನ್ನು ಇತರರಿಗೆ ಹಾಕದೆ ತಾವೇ ಊಟಮಾಡುತ್ತಾರೋ ಅವರು ಬೇರೆ ಅಡಿಗೆಯವನೆಂದು ಹೇಳಿಸಿಕೊಳ್ಳುತ್ತಾರೆ. ಅವನನ್ನು ಧರ್ಮಿಷ್ಠರು ಬಯ್ಯುತ್ತಾರೆ. ಅವನು ಉಪಪಾತಕಿಯು.

೭೭-೭೮. ನಿಯಮವನ್ನು ಮೊದಲು ಸ್ವೀಕರಿಸಿ, ಇಂದ್ರಿಯ ಚಾಪಲ್ಯದಿಂದ ಮಧ್ಯದಲ್ಲೇ ಬಿಡುತ್ತಾನೋ ಅವನೂ, ಗುಂಪಿನಲ್ಲಿ ಸ್ನೇಹದಿಂದ ಇರುವವರನ್ನು ಬೇರ್ಪಡಿಸುವವನು, ಮದ್ಯಕುಡಿದವರೊಂದಿಗೆ ಸೇರಿದವನು ಇವರು ಉಪಪಾತಕಿಗಳು. ಏಟು ಬಿದ್ದು ದುಃಖಿಸುತ್ತಿರುವ ಹಸುವನ್ನು ಕಾಪಾಡದವನು, ಹಸಿವು ಬಾಯಾರಿಕೆಯುಳ್ಳ ಹಸುವಿಗೆ ಅದನ್ನು ಶಮನಮಾಡದವನು, ಇವರು ಗೋಹಂತಕರು ಮತ್ತೂ ಉಪಪಾತಕಿಗಳು.

೭೯-೮೦. ಎಲ್ಲಾ ಪಾಪ ಕೆಲಸಗಳಲ್ಲೂ ಆಸಕ್ತರಾಗಿರುವವರು, ಗೋಮಾಳವನ್ನು ಹಾಳುಮಾಡುವವರು, ಸಾಧುಗಳು, ಬ್ರಾಹ್ಮಣರು, ಗುರುಗಳು, ಗೋವುಗಳು ಇವನ್ನು ಹೊಡೆಯುವವರು, ಸಾಧ್ವಿಯಾಗಿರುವ ಹೆಂಗಸನ್ನು ಹೊಡೆಯುವವರು, ಸೋಮಾರಿತನದಿಂದ ಪದೇಪದೇ ಮಲಗುವವರು ಇವರು ನರಕಭಾಗಿಗಳು.

**ದುರ್ಬಲಾಂಶ್ಚ ನಿಯುಂಜಂತಿ ಬಲಾಚ್ಚ ಪ್ರೇಷಯಂತಿ ಚ ।**
**ಪೀಡಯಂತ್ಯತಿಭಾರೇಣ ಸಕ್ಷತಾನ್ ವಾಹಯಂತಿ ಚ   ॥ ೮೧ ॥**

**ವೃಷಭಾಣಾಂ ಚ ವೃಷಣೌ ಪೇಷಯಂತಿ ಚ ದುರ್ಜನಾಃ ।**
**ಗೋವತ್ಸಾನಾಂ ಚ ದಮನಂ ಮಹಾಪಾತಕಸಮ್ಮಿತಂ   ॥ ೮೨ ॥**

**ಆಶಯಾ ಸಮನುಪ್ರಾಪ್ತಂ ಕ್ಷುತ್ತೃಷ್ಣಾಶ್ರಮಪೀಡಿತಂ ।**
**ಯೇ ಚಾತಿಥಿಂ ನ ಮನ್ಯಂತೇ ತೇ ವೈ ನಿರಯಗಾಮಿನಃ   ॥ ೮೩ ॥**

**ಅನಾಥಂ ವಿಕಲಂ ದೀನಂ ಬಾಲಂ ವೃದ್ಧಂ ಕ್ಷುಧಾತುರಂ ।**
**ನಾನುಕಂಪಂತಿ ಯೇ ಮೂಢಾಸ್ತೇ ಯಾಂತಿ ನಿರಯಾರ್ಣವಂ   ॥ ೮೪ ॥**

**ಅಜಾವಿಕೋ ಮಾಹಿಷಿಕೋ ಯಃ ಶೂದ್ರಾವೃಷಲೀಪತಿಃ ।**
**ಶೂದ್ರೋ ವಿಪ್ರಸ್ಯ ಕ್ಷತ್ರಸ್ಯ ಯ ಆಚಾರೇಣಾನುವರ್ತತೇ   ॥ ೮೫ ॥**

---

೮೧-೮೨. ಬಲವಿಲ್ಲದ ಪಶುವನ್ನು ಗಾಡಿ ಮುಂತಾದುವಕ್ಕೆ ಕಟ್ಟುವುದು, ಬಲಾತ್ಕಾರದಿಂದ ಓಡಿಸುವುದು, ಅತಿಯಾದ ಭಾರವನ್ನು ಹೊರಿಸುವುದು, ಗಾಯವಾದವುಗಳ ಕೈಲಿ ಕೆಲಸಮಾಡಿಸುವುದು, ಹೋರಿಗಳಿಗೆ ಹಿಡ ಬಡಿಯುವುದು ಗೋವುಗಳನ್ನೂ, ಸಣ್ಣ ಸಣ್ಣ ಕರುಗಳನ್ನೂ ಹೊಡೆಯುವುದು, ಇವೆಲ್ಲವೂ ಮಹಾಪಾತಕಗಳಿಗೆ ಸಮಾನಗಳು.

೮೩. ಆಶಿಪಟ್ಟುಕೊಂಡು ಹಸಿವು ಬಾಯಾರಿಕೆಗಳಿಂದ ಬಂದ ಅತಿಥಿಯನ್ನು ಗೌರವಿಸದವರು, ನರಕಭಾಗಿಗಳು.

೮೪. ಅನಾಥರು, ಅಂಗಹೀನರು, ಬಡವರು, ಮಕ್ಕಳು, ಮುದುಕರು, ಹಸಿದವರು, ಇವರಲ್ಲಿ ದಯೆ ತೋರದಿದ್ದರೆ, ಅವರು ನರಕಗಾಮಿಗಳಾಗುತ್ತಾರೆ.

೮೫-೮೭. ಆಡು ಎಮ್ಮೆಗಳಿಂದ ಜೀವಿಸುವವರು, ಶೂದ್ರಜಾತಿಯವಳನ್ನು ಮದುವೆಯಾದವನು, ಬ್ರಾಹ್ಮಣಕ್ಷತ್ರಿಯರ ಆಚಾರದಲ್ಲಿರುವ ಶೂದ್ರನು, ಶಿಲ್ಪವನ್ನು ಮಾಡುವವನು, ಗಾರೆಕೆಲಸಮಾಡುವವನು, ವೈದ್ಯ, ದೇವಸ್ಥಾನದಲ್ಲಿ ಪೂಜೆ ಮಾಡುವ

ಶಿಲ್ಪಿನಃ ಕಾರವೋ ಷೈದ್ಯಾಸ್ತಥಾ ದೇವಲಕಾ ನರಾಃ ।
ಭೃತಕಾ ದೂತ್ಯಕರ್ಮಾಣಃ ಸರ್ವೇ ನಿರಯಗಾಮಿನಃ ॥ ೮೬ ॥

ಯಶ್ಚೋದಿತಮತಿಕ್ರಮ್ಯ ಸ್ವೇಚ್ಛಯಾ ಆಹರೇತ್ಕರಂ ।
ನರಕೇ ಪರಿಪಚ್ಯೇತ ಯಶ್ಚ ದಂಡಂ ವೃಥಾ ನಯೇತ್ ॥ ೮೭ ॥

ಉತ್ಕೋಚಕೈರಧಿಕೃತೈಸ್ತಸ್ಕರೈಶ್ಚ ಪ್ರಪೀಡಿತಾ ।
ಯಸ್ಯ ರಾಜ್ಞಃ ಪ್ರಜಾ ರಾಷ್ಟ್ರೇ ಪಚ್ಯತೇ ನರಕೇಷು ಸಃ ॥ ೮೮ ॥

ಯೇ ದ್ವಿಜಾಃ ಪ್ರತಿಗೃಹ್ಣಂತಿ ನೃಪಸ್ಯಾನ್ಯಾಯವರ್ತಿನಃ ।
ಪ್ರಯಾಂತಿ ತೇಽಪಿ ಘೋರೇಷು ನರಕೇಷು ನ ಸಂಶಯಃ ॥ ೮೯ ॥

ಪಾಪಕಾರಕಪೌರಾಣಾಂ ಯತ್ಪಾಪಂ ಪಾರ್ಥಿವಸ್ಯ ಚ ।
ತೇನ ಭೀತೋ ನೃಪಃ ಕುರ್ಯಾತ್ಪ್ರಜಾನಾಂ ಪರಿನಿಗ್ರಹಂ ॥ ೯೦ ॥

---

ಅರ್ಚಕರು, ಸಂಬಳ ತೆಗೆದುಕೊಂಡು ಕೆಲಸಮಾಡುವವರು, ದೂತರು ಇವರೆಲ್ಲರೂ ತಮ್ಮ ಕೆಲಸಗಳನ್ನು ಸರಿಯಾಗಿ ಮಾಡದಿದ್ದರೆ ನರಕಗಾಮಿಗಳಾಗುವರು.

೮೭-೮೮. ಶಾಸ್ತ್ರದಲ್ಲಿ ಹೇಳಿರುವುದಕ್ಕಿಂತಲೂ ಹೆಚ್ಚು ಕಂದಾಯವನ್ನು ತೆಗೆದುಕೊಳ್ಳುವವನು, ತಪ್ಪಿಲ್ಲದಿದ್ದರೂ ಶಿಕ್ಷಿಸುವವನು, ಇವರೂ ನರಕಗಾಮಿಗಳು. ಯಾವನ ರಾಜ್ಯದಲ್ಲಿ ಲಂಚ, ಅಧಿಕಾರಿಗಳಿಂದ ತೊಂದರೆ, ಕಳ್ಳರಿಂದ ಬಾಧೆಗಳಿರುವವೋ ಆ ರಾಜನು ನರಕಗಾಮಿಯಾಗುತ್ತಾನೆ.

೮೯. ಅನ್ಯಾಯ ಮಾಡುವ ರಾಜನಿಂದ ದಾನತೆಗೆದುಕೊಳ್ಳುವ ಬ್ರಾಹ್ಮಣನೂ ನರಕಭಾಗಿಯಾಗುತ್ತಾನೆ.

೯೦. ದೇಶದವರು ಪಾಪಮಾಡಿದರೆ ರಾಜನಿಗೆ ಸೇರುತ್ತದೆ. ಆದುದರಿಂದ ರಾಜನು ಪಾಪಮಾಡುವ ಪ್ರಜೆಗಳನ್ನು ನಿಗ್ರಹಿಸಬೇಕು.

**ಅಚೌರಂ ಚೌರವದ್ಯಶ್ಚ ಚೌರಂ ಚಾಚೌರವತ್ಪ್ರನಃ ।**
**ಅವಿಚಾರ್ಯ ನೃಪಃ ಕುರ್ಯಾತ್ ಸೋಽಪಿ ವೈ ನರಕಂ ವ್ರಜೇತ್ ॥ ೯೧ ॥**

**ಘೃತತೈಲಾನುಪಾನಾನಿ ಮಧು ಮಾಂಸಂ ಸುರಾಸವಂ ।**
**ಗುಡೇಕ್ಷುಕ್ಷೀರಶಾಕಾದಿ ದಧಿಮೂಲಫಲಾನಿ ಚ ॥ ೯೨ ॥**

**ತೃಣಕಾಷ್ಠಂ ಪುಷ್ಪಪತ್ರೇ ಕಾಂಸ್ಯಂ ರಜತಮೇವ ವಾ ।**
**ಉಪಾನಚ್ಛತ್ರಶಕಟಶಿಬಿಕಾಸಾಶನಂ ಮೃದು ॥ ೯೩ ॥**

**ತಾಮ್ರಂ ಸೀಸಂ ತ್ರಪು ಕಾಂಸ್ಯಂ ಶಂಖಾದ್ಯಂ ರಜತೋದ್ಭವಂ ।**
**ವಾದಿತ್ರಂ ವೇಣುವಂಶಾದ್ಯಂ ಗೃಹಸ್ಯೋಪಸ್ಕರಾಣಿ ಚ ॥ ೯೪ ॥**

**ಊರ್ಣಾಕಾರ್ಪಾಸಕೌಶೇಯರಂಗಪತ್ರೋತ್ತರಾಣಿ ಚ ।**
**ತಥಾ ಸೂಕ್ಷ್ಮಾಣಿ ವಸ್ತ್ರಾಣಿ ಯೇಽನ್ಯೇಷಾಂ ವೈ ಹರಂತಿ ಚ ॥ ೯೫ ॥**

**ಏವಮಾದೀನಿ ಚಾನ್ಯಾನಿ ದ್ರವ್ಯಾಣಿ ನರಕಂ ತು ತೇ ।**
**ಗಚ್ಛಂತಿ ಸತತಂ ಭೂಪ ಹೃತ್ವಾ ಹತ್ವಾ ಗೃಹಾಧಿಪಂ ॥ ೯೬ ॥**

---

೯೧. ಕಳ್ಳನಲ್ಲದವನನ್ನು ಕಳ್ಳನಂತೆಯೂ, ಕಳ್ಳನನ್ನು ಕಳ್ಳನಲ್ಲದವನಂತೆಯೂ ವಿಚಾರಿಸದೆ ಶಿಕ್ಷಿಸಿದರೆ ಅವನಿಗೆ ನರಕವು.

೯೨-೯೬. ತುಪ್ಪ, ಎಣ್ಣೆ, ಪಾನಮಾಡತಕ್ಕ ವಸ್ತುಗಳು ಜೇನು, ಮಾಂಸ, ಹೆಂಡ, ಆಸವವೆಂಬ ಮದ್ಯ, ಬೆಲ್ಲ, ಕಬ್ಬು, ಹಾಲು, ಕಾಯಿಪಲ್ಯಗಳು. ಮೊಸರು, ಗೆಣಸು, ಹಣ್ಣು, ಹುಲ್ಲು, ಸೌದೆ, ಹೂ, ಎಲೆ, ಕಂಚು, ಬೆಳ್ಳಿಯ ಸಾಮಾನುಗಳು, ಬೆಳ್ಳಿ, ಕೆರ, ಛತ್ರಿ, ಗಾಡಿ, ಮೇನ, ಮೃದುವಾದ ಪದಾರ್ಥಗಳು, ತಾಮ್ರ, ಸೀಸ, ಹಿತ್ತಾಳೆ, ಕಂಚು, ಶಂಖ ಮುಂತಾದುವುಗಳು, ವಾದ್ಯಗಳು, ಕೊಳಲು, ಮನೆಯ ಪದಾರ್ಥಗಳು, ಕಂಬಳಿ, ಶಾಲು, ಹತ್ತಿಬಟ್ಟೆ, ರೇಷ್ಮೆಬಟ್ಟೆ, ಸೀಸದ ಒಡವೆ, ಇನ್ನೂ ಸೂಕ್ಷ್ಮವಾದ ಇತರ ಪದಾರ್ಥಗಳು, ಇವನ್ನು ಕದ್ದರೆ ಅವರು ಯಾವಾಗಲೂ ನರಕದಲ್ಲೇ ಇರುವರು. ಯಜಮಾನನನ್ನು ಹೊಡೆದು ದರೋಡೆಯಿಂದ ತಂದರೂ ನರಕಗಾಮಿಗಳಾಗುತ್ತಾರೆ.

ಬಹ್ವಲ್ಪಕಾದ್ಯಪಿ ತಥಾ ಪರಸ್ಯ ಮಮತಾಕೃತಂ ।
ಅಪಹೃತ್ಯ ನರೋ ಯಾತಿ ನರಕೇ ನಾತ್ರ ಸಂಶಯಃ ॥ ೯೭ ॥

ಏವಮಾದಿಕಪಾಪಾನಿ ಕುರ್ವದ್ಭಿರ್ಮರಣೋತ್ತರಂ ।
ಶರೀರಂ ಯಾತನಾರ್ಥಾಯ ಪೂರ್ವಾಕಾರಮವಾಪ್ಯತೇ ॥ ೯೮ ॥

ಯಮಲೋಕಂ ವ್ರಜಂತ್ಯೇತೇ ಶರೀರೇಣ ಯಮಾಜ್ಞಯಾ ।
ಯಮದೂತೈರ್ಮಹಾಘೋರೈರ್ನೀಯಮಾನಾಸ್ಸುದುಃಖಿತಾಃ ॥ ೯೯ ॥

ದೇವಮಾನುಷತಿರ್ಯಂಚಾಮಧರ್ಮನಿಯತಾತ್ಮನಾಂ ।
ಧರ್ಮರಾಜಃ ಸ್ಮೃತಃ ಶಾಸ್ತಾ ಸುಘೋರೈರ್ವಿವಿಧೈರ್ವಧೈಃ ॥ ೧೦೦ ॥

ವಿನಯಾಚಾರಯುಕ್ತಾನಾಂ ಪ್ರಮಾದಸಲಿಲಾಶಯಾತ್ ।
ಪ್ರಾಯಶ್ಚಿತ್ತೈರ್ಗುರುಶ್ಶಾಸ್ತಾ ನ ತು ತೈರಿಷ್ಯತೇ ಯಮಃ ॥ ೧೦೧ ॥

---

೯೭. ಇನ್ನೊಬ್ಬನಿಗೆ ಸೇರಿದ ಸ್ವತ್ತನ್ನು, ಅದು ಹೆಚ್ಚಾಗಲಿ ಸ್ವಲ್ಪವಾಗಲಿ, ಆಗಿದ್ದರೂ ಕದ್ದರೆ ನರಕವನ್ನು ಹೊಂದುತ್ತಾರೆ.

೯೮. ಇವೇ ಮುಂತಾದ ಪಾಪಗಳನ್ನು, ಮಾಡುವವರ ಶರೀರವು, ಸತ್ತಮೇಲೆ ಶಿಕ್ಷೆಯನ್ನನುಭವಿಸುವುದಕ್ಕೇನೆ ಈ ಆಕಾರವನ್ನು ಹೊಂದಿದೆ.

೯೯. ಇಂತಹವರು ಯಮನ ಆಜ್ಞೆಯಿಂದ ಶರೀರದೊಡನೆ ಯಮಲೋಕಕ್ಕೆ ಹೋಗುತ್ತಾರೆ. ಹೋಗುವಾಗ ಯಮನ ದೂತರು ಕಷ್ಟಕೊಡುತ್ತಾ ಇವರನ್ನು ಕರೆದೊಯ್ಯುತ್ತಾರೆ.

೧೦೦. ದೇವತೆಗಳು, ಮನುಜರು, ಪಶು ಮುಂತಾದುವುಗಳಾವುದಾದರೂ, ಅಧರ್ಮದಲ್ಲಿ ಕೂಡಿದ್ದರೆ, ಅವರಿಗೆ ಘೋರವಾದ ಶಿಕ್ಷಕನು ಯಮನು.

೧೦೧. ವಿನಯ ಆಚಾರಗಳಿಂದ ಕೂಡಿದವರು ಪ್ರಮಾದದಿಂದಾಗಲಿ ಕೆಲಸವು ಅಲ್ಪವೆಂದಾಗಲಿ ಕಾಣದೆ ತಪ್ಪುಮಾಡಿದರೆ ಅವರಿಗೆ ಶಿಕ್ಷಕನು, ಗುರುವು. ಯಮನು ಆ ವಿಚಾರದಲ್ಲಿ ಕೈ ಹಾಕುವುದಿಲ್ಲ.

**ಪಾರದಾರಿಕಚೌರಾಣಾಮನ್ಯಾಯವ್ಯವಹಾರಿಣಾಂ ।**
**ನೃಪತಿಃ ಶಾಸಕಃ ಪ್ರೋಕ್ತಃ ಪ್ರಚ್ಛನ್ನಾನಾಂ ಚ ಧರ್ಮರಾಟ್ ॥ ೧೦೨ ॥**

**ತಸ್ಮಾತ್ಕೃತಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।**
**ನಾನ್ಯಥಾ ನಶ್ಯತೇ ಪಾಪಂ ಕಲ್ಪಕೋಟಿಶತೈರಪಿ ॥ ೧೦೩ ॥**

**ಯಃ ಕರೋತಿ ಸ್ವಯಂ ಕರ್ಮ ಸ ಭುಂಕ್ತೇ ತತ್ಫಲಂ ನರಃ ।**
**ಕಾಯೇನ ಮನಸಾ ವಾಚಾ ತಸ್ಯ ವಾಧೋಗತಿಃ ಫಲಂ ॥ ೧೦೪ ॥**

**ಇತಿ ಸಂಕ್ಷೇಪತಃ ಪ್ರೋಕ್ತಾಃ ಪಾಪಭೇಧಾಸ್ತ್ರಿಧಾಽಧುನಾ ।**
**ಕಥ್ಯಂತೇ ಗತಯಶ್ಚಿತ್ರಾ ನರಾಣಾಂ ಪಾಪಕರ್ಮಣಾಂ ॥ ೧೦೫ ॥**

**ಏತತ್ತೇ ನೃಪತೇ ಧರ್ಮಫಲಂ ಪ್ರೋಕ್ತಂ ಸುವಿಸ್ತರಂ ।**
**ಅನ್ಯತ್ಕಿಂತೇ ಪ್ರವಕ್ಷ್ಯಾಮಿ ತನ್ಮೇ ಬ್ರೂಹಿ ನರೋತ್ತಮ ॥ ೧೦೬ ॥**

---

೧೦೨. ಇತರರ ಹೆಂಡಿರ ಸಹವಾಸ, ಕಳ್ಳತನ, ಅನ್ಯಾಯದ ಕೆಲಸಗಳು ಇವನ್ನು ಮಾಡುವವರಿಗೆ ರಾಜನು ಶಿಕ್ಷಕನು. ಇವು ತಿಳಿಯದಂತೆ ಮುಚ್ಚಿದ್ದರೆ, ಧರ್ಮರಾಜನೇ ಎಂದರೆ ಯಮನೇ ಶಿಕ್ಷಕನು.

೧೦೩. ಆದುದರಿಂದ ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಲೇಬೇಕು. ಅದಿಲ್ಲ ದಿದ್ದರೆ ಕೋಟಿಕಲ್ಪಗಳಾದರೂ ಹೋಗುವುದಿಲ್ಲ.

೧೦೪. ಯಾವನು ಯಾವ ಕರ್ಮವಾಡುತ್ತಾನೋ ಅವನೇ ಅದರ ಫಲ ವನ್ನು ಅನುಭವಿಸಬೇಕು. ಮನೋವಾಕ್ಕಾಯಗಳಿಂದ ಕೆಟ್ಟದು ಮಾಡಿದರೆ ಅಧೋ ಗತಿಯೇ ಫಲವು.

೧೦೫. ಈ ರೀತಿ ಕಾಯಕ ವಾಚಿಕ, ಮಾನಸಿಕಗಳೆಂಬ ಪಾಪಭೇದಗಳನ್ನು ಹೇಳಿದುದಾಯಿತು. ಪಾಪಿಗಳಾದವರ ಚಿತ್ರವಾದ ಗತಿಗಳನ್ನು ಹೇಳುತ್ತೇನೆ ಕೇಳು.

೧೦೬ ಎಲೈ ದೊರೆಯೆ, ಧರ್ಮಫಲಗಳೆಲ್ಲವನ್ನೂ ವಿಸ್ತಾರವಾಗಿ ಹೇಳಿದೆ. ಇನ್ನೇನು ಹೇಳಲಿ, ಕೇಳು.

**ಅಧರ್ಮಸ್ಯ ಫಲಂ ಪ್ರೋಕ್ತಂ ಧರ್ಮಸ್ಯಾಪಿ ವದಾಮ್ಯಹಂ ।**
**ಇತ್ಯುಕ್ತ್ವಾ ಮಾತಲಿಸ್ತತ್ರ ರಾಜಾನಂ ಧರ್ಮವತ್ಸಲಂ ॥ ೧೦೭ ॥**

**ತಸ್ಮಿನ್ ಧರ್ಮಪ್ರಸಂಗೇನ ಪುಣ್ಯಂ ಖ್ಯಾತಂ ಮಹಾತ್ಮನಾಂ ।**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಸಪ್ತಷಷ್ಟಿತಮೋಽಧ್ಯಾಯಃ**



---

೧೦೭. ಅಧರ್ಮದ ಫಲವನ್ನು ಹೇಳಿದೆನು. ಇನ್ನು ಧರ್ಮದ ಫಲವನ್ನು ಹೇಳುತ್ತೇನೆ. ಮತ್ತು ಧರ್ಮವಿಚಾರದಲ್ಲಿ ಪುಣ್ಯಾದಿಕಾರ್ಯಗಳನ್ನು ಮಾಡಿ, ಮಹಾತ್ಮರೆಂದು ಖ್ಯಾತಿಪಡೆಯುವ ರೀತಿಯನ್ನು ಹೇಳುವೆನು ಎಂದು ಧರ್ಮವತ್ಸಲನಾದ ಯಯಾತಿಗೆ ಮಾತಲಿಯು ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಅರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಷಷ್ಟಿತಮೋಽಧ್ಯಾಯಃ

॥ ಯಯಾತಿರುವಾಚ ॥

ಅಧರ್ಮಸ್ಯ ಫಲಂ ಸೂತ ಶ್ರುತಂ ಸರ್ವಂ ಮಯಾ ವಿಭೋ ।
ಧರ್ಮಸ್ಯಾಪಿ ಫಲಂ ಬ್ರೂಹಿ ಶ್ರೋತುಂ ಕೌತೂಹಲಂ ಮಮ ॥ ೧ ॥

॥ ಮಾತಲಿರುವಾಚ ॥

ಅಥ ಪಾಪೈರಿಮೇ ಯಾಂತಿ ಯಮಲೋಕಂ ಚತುರ್ವಿಧಾಃ ।
ಸಂತ್ರಾಸಜನನಂ ಘೋರಂ ವಿವಶಾಃ ಸರ್ವದೇಹಿನಃ ॥ ೨ ॥

ಗರ್ಭಸ್ಥೈರ್ಜಾಯಮಾನೈಶ್ಚ ಬಾಲೈಸ್ತರುಣಮಧ್ಯಮೈಃ ।
ಸ್ತ್ರೀಪುಂನಪುಂಸಕೈರ್ವೃದ್ಧೈರ್ಯಾತವ್ಯಂ ಸರ್ವಜಂತುಭಿಃ ॥ ೩ ॥

---

## ಅರವತ್ತೆಂಟನೆಯ ಅಧ್ಯಾಯವು

೧. ಯಯಾತಿಯು ಹೇಳಿದನು :—ಎಲೈ ಸೂತನೇ, ಅಧರ್ಮದ ಫಲವನ್ನು ಕೇಳಿದೆ. ಧರ್ಮದ ಫಲವನ್ನೂ ಹೇಳು ಕೇಳಬೇಕೆಂಬಾಸೆ ಬಹಳವಾಗಿದೆ. ಈಗ ಅದನ್ನು ಹೇಳು.

೨. ಮಾತಲಿಯು ಹೇಳಿದನು :—ಬ್ರಹ್ಮ, ಕ್ಷತ್ರಿಯ, ವೈಶ್ಯ ಶೂದ್ರರು ತಮ್ಮ ತಮ್ಮ ಪಾಪಗಳಿಂದ ಘೋರವಾದ ಯಮಲೋಕವನ್ನು ಹೊಂದುತ್ತಾರೆ.

೩. ಗರ್ಭದಲ್ಲಿರುವವರು, ಹುಟ್ಟಿದವರು, ಬಾಲರು, ತರುಣರು, ಮಧ್ಯ ವಯಸ್ಕರು, ವೃದ್ಧರು, ಗಂಡು, ಹೆಣ್ಣು, ನಪುಂಸಕರು ಎಲ್ಲಾ ಪ್ರಾಣಿಗಳೂ ಮೃತ ರಾದ ಮೇಲೆ ಯಮನ ಬಳಿಗೆ ಹೋಗಲೇ ಬೇಕು.

ಶುಭಾಶುಭಂ ಕೃತಂ ಕರ್ಮ ದೇಹಿನಾಂ ಪ್ರವಿಚಾರ್ಯತೇ ।
ಚಿತ್ರಗುಪ್ತಾದಿಮಧ್ಯಸ್ಥೈರ್ಜ್ಞಾತವ್ಯಂ ಸರ್ವದರ್ಶಿಭಿಃ ॥ ೪ ॥

ನ ತೇಽತ್ರ ಪ್ರಾಣಿನಸ್ಸಂತಿ ಯೇ ನ ಯಾಂತಿ ಯಮಕ್ಷಯಂ ।
ಅತ್ರ ಶಾಂತಿಕೃತಂ ಕರ್ಮ ಸ್ಮೃತ್ಯುಕ್ತಂ ತದ್ವಿಚಾರಿತಂ ॥ ೫ ॥

ಯೇ ತತ್ರ ಶುಭಕರ್ಮಾಣಃ ಸೌಮ್ಯಚಿತ್ತಾದಯಾನ್ವಿತಾಃ ।
ತೇ ನರಾ ಯಾಂತಿ ಸೌಮ್ಯೇನ ಯಥಾ ಯಮನಿಕೇತನಂ ॥ ೬ ॥

ಯಶ್ಚ ದದ್ಯಾದ್ದ್ವಿಜೇಂದ್ರಾಣಾಮುಪಾನತ್ಕಾಷ್ಠಪಾದುಕೇ ।
ಸ ವಿಮಾನೇನ ಮಹತಾ ಸುಖಂ ಯಾತಿ ಯಮಾಲಯಂ ॥ ೭ ॥

ಛತ್ರದಾನೇನ ಗಚ್ಛಂತಿ ಪಥಾ ಸಾಂದ್ರೇಣ ದೇಹಿನಃ ।
ದಿವ್ಯವಸ್ತ್ರಪರೀಧಾನಾ ಯಾನ್ತಿ ವಸ್ತ್ರಪ್ರದಾಯಿನಃ ॥ ೮ ॥

ಶಿಬಿಕಾಯಾಃ ಪ್ರದಾನೇನ ವಿಮಾನೇನ ಸುಖಂ ವ್ರಜೇತ್ ।
ಸುಖಾಸನಪ್ರದಾನೇನ ಸುಖಂ ಯಾನ್ತಿ ಯಮಾಲಯಂ ॥ ೯ ॥

---

೪. ಸರ್ವದರ್ಶಿಗಳಾದ ಚಿತ್ರಗುಪ್ತಾದಿಗಳು ದೇಹಿಯು ಮಾಡಿದ ಶುಭಾಶುಭ ಕರ್ಮಗಳನ್ನು ಅಲ್ಲಿ ವಿವರಿಸುತ್ತಾರೆ.

೫. ಯಮನ ಬಳಿಗೆ ಹೋಗದಿರುವ ಪ್ರಾಣಿಯೇ ಇಲ್ಲಿಲ್ಲ. ಇಲ್ಲಿ ಸ್ಮೃತಿಯಲ್ಲಿ ಹೇಳಿರುವಂತೆ ಆ ಪಾಪಕ್ಕೆ ಶಾಂತಿಕರ್ಮ ಮಾಡಿಕೊಂಡಿರುವುದನ್ನು ವಿಚಾರಿಸುತ್ತಾರೆ.

೬. ಯಾರು ಈ ಲೋಕದಲ್ಲಿ ಒಳ್ಳೆಯವರಾಗಿ ಒಳ್ಳೆಯ ಕೆಲಸಗಳನ್ನು ಮಾಡುತ್ತಾರೋ ಅವರು ಸೌಮ್ಯಭಾವದಿಂದ ಯಮನ ಬಳಿಗೆ ಹೋಗುತ್ತಾರೆ.

೭. ಯಾವನು ಬ್ರಾಹ್ಮಣರಿಗೆ ಕೆರ, ಪಾದುಕೆಗಳನ್ನು ದಾನ ಕೊಡುತ್ತಾನೋ ಅವನು ದೊಡ್ಡ ವಿಮಾನದಲ್ಲಿ ಕುಳಿತು ಸುಖವಾಗಿ ಯಮನ ಬಳಿಗೆ ಹೋಗುತ್ತಾನೆ

೮-೯. ಛತ್ರದಾನ ಮಾಡಿದರೆ ಮರಗಳ ನೆರಳಿನಲ್ಲಿ ಹೋಗುತ್ತಾರೆ. ವಸ್ತ್ರದಾನಮಾಡಿದ್ದರೆ ಉತ್ತಮವಾದ ವಸ್ತ್ರವನ್ನುಟ್ಟು ಹೋಗುತ್ತಾರೆ. ಪಲ್ಲಕ್ಕಿ ದಾನ ಮಾಡಿದ್ದರೆ ವಿಮಾನದಲ್ಲಿ ಹೋಗುತ್ತಾರೆ. ಆಸನ ದಾನಮಾಡಿದ್ದರೆ ಸುಖವಾಗಿ ಯಮಲೋಕಕ್ಕೆ ಹೋಗುತ್ತಾರೆ.

ಆರಾಮಕರ್ತಾ ಛಾಯಾಸು ಶೀತಲಾಸು ಸುಖಂ ವ್ರಜೇತ್ ।
ಯಾನ್ತಿ ಪುಷ್ಪಮಯಾನೇನ ಪುಷ್ಪಮಾಲಾಪ್ರದಾಯಿನಃ ॥ ೧೦ ॥

ದೇವತಾಗೃಹಕರ್ತಾ ಚ ಯತೀನಾಮಾಶ್ರಮಸ್ಯ ಚ ।
ಅನಾಥಸ್ಯಾತುರಣಾಂ ಚ ಕ್ರೀಡತ್ಯತಿಗೃಹೋತ್ತಮೈಃ ॥ ೧೧ ॥

ದೇವಾಗ್ನಿಗುರುವಿಪ್ರಾಣಾಂ ಮಾತಾಪಿತ್ರೋಶ್ಚ ಪೂಜಕಃ ।
ಗುಣಾನ್ವಿತೇಷು ದೀನೇಷು ಯಚ್ಛತ್ಯಾವಸಥಾನ್ಯಪಿ ।
ಸ ಪ್ರಯಾತಿ ಸರ್ವಕಾಮಂ ಸ್ಥಾನಂ ಪೈತಾಮಹಂ ನೃಪ ॥ ೧೨ ॥

ಶ್ರದ್ಧಯಾ ಯೇನ ವಿಪ್ರಾಯ ದತ್ತಂ ಕಾಕಿಣಿಮಾತ್ರಕಂ ।
ಸ ಸ್ಯಾದ್ದಿವ್ಯತಿಥಿರ್ಭೂಪ ದೇವಾನಾಂ ಕೀರ್ತಿವರ್ಧನಃ ।
ತಸ್ಮಾಚ್ಛ್ರದ್ಧಾನ್ವಿತೈರ್ದೇಯಂ ತತ್ಫಲಂ ಭವತಿ ಧ್ರುವಂ ॥ ೧೩ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಅಷ್ಟಷಷ್ಟಿತಮೋಽಧ್ಯಾಯಃ**

---

೧೦. ತೋಪುಗಳನ್ನು ಹಾಕಿಸಿರುವವನು ತಣ್ಣಗಿರುವ ನೆರಳಿನಲ್ಲಿ ಹೋಗುತ್ತಾನೆ. ಪುಷ್ಪಮಾಲೆ ದಾನಮಾಡಿದವರು ಪುಷ್ಪಯಾನದಿಂದ ಹೋಗುತ್ತಾರೆ.

೧೧. ದೇವಸ್ಥಾನ, ಯತಿಗಳಿಗೆ ಆಶ್ರಮ, ಅನಾಥರಿಗೆ, ರೋಗಿಗಳಿಗೆ ಸ್ಥಳ ವಸತಿ ಮಾಡಿಸಿದವರು ಒಳ್ಳೆಯ ಮನೆಯಲ್ಲಿ ಕ್ರೀಡಿಸುತ್ತಾರೆ.

೧೨. ದೇವರು, ಅಗ್ನಿ, ಗುರು, ಬ್ರಾಹ್ಮಣರು, ತಾಯಿತಂದೆಗಳನ್ನು ಪೂಜಿಸುವವರು, ಗುಣಿಗಳಾದ ಬ್ರಾಹ್ಮಣರಿಗೆ ಮನೆಕೊಟ್ಟವರು, ಇವರು ಬ್ರಹ್ಮಲೋಕಕ್ಕೆ ಹೋಗಿ ಸರ್ವಕಾಮವನ್ನೂ ಹೊಂದುತ್ತಾರೆ.

೧೩. ಶ್ರದ್ಧೆಯಿಂದ ಬ್ರಾಹ್ಮಣನಿಗೆ ಒಂದು ಕಾಸು ಕೊಟ್ಟವನೂ ಕೂಡ, ಸ್ವರ್ಗದಲ್ಲಿ ದೇವತೆಗಳಿಗೆ ಅತಿಥಿಯಾಗುತ್ತಾನೆ. ಆದುದರಿಂದ ಶ್ರದ್ಧೆಯಿಂದ ದಾನ ಮಾಡಬೇಕು. ಹಾಗಾದರೆ ಖಂಡಿತವಾಗಿ ಫಲಬರುತ್ತದೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ
# ಏಕೋನಸಪ್ತತಿತಮೋಽಧ್ಯಾಯಃ

---

॥ ಮಾತಲಿರುವಾಚ ॥

**ಅಥ ಧರ್ಮಾಶ್ಶಿವೇನೋಕ್ತಾಃ ಶಿವಧರ್ಮಾಗಮೋತ್ತಮಾಃ**
**ಜ್ಞೇಯಾ ದ್ವಿರ್ವಿಧಾನೇನ ಕರ್ಮಯೋಗಪ್ರಭೇದತಃ ॥ ೧ ॥**

**ಹಿಂಸಾದಿದೋಷನಿರ್ಮುಕ್ತಾಃ ಕ್ಲೇಶಾಯಾಸವಿವರ್ಜಿತಾಃ**
**ಸರ್ವಭೂತಹಿತಾಶ್ಶುದ್ಧಾಃ ಸುಸೂಕ್ಷ್ಮಾಸ್ತು ಮಹಾಬಲಾಃ ॥ ೨ ॥**

**ಅನಂತಶಾಖಾಃ ಕಥಿತಾಃ ಶಿವಮೂಲೈಕಮಾಸ್ಥಿತಾಃ ।**
**ಜ್ಞಾನಧ್ಯಾನಸಮಾಯುಕ್ತಾಃ ಶಿವಧರ್ಮಾಃ ಸನಾತನಾಃ ॥ ೩ ॥**

---

## ಅರವತ್ತೊಂಭತ್ತನೆಯ ಅಧ್ಯಾಯವು

೧. ಮಾತಲಿಯು ಹೇಳಿದನು:—ಶಿವನು ಶಿವಾಗಮದ ಧರ್ಮಗಳನ್ನು ಹೇಳಿದ್ದಾನೆ. ಕರ್ಮ, ಯೋಗ ಎಂಬ ಎರಡು ಭೇದಗಳು ಅದರಲ್ಲಿವೆ.

೨. ಆ ಶಿವಾಗಮಗಳು ಉತ್ತಮವಾದವುಗಳಾಗಿಯೂ, ಪ್ರಾಣಿಹಿಂಸೆಯೇ ಮೊದಲಾದವುಗಳನ್ನು ಮಾಡಕೂಡದೆಂಬುದಾಗಿಯೂ ಸಾರುತ್ತವೆ. ಯಾರಿಗೂ ಕ್ಲೇಶವನ್ನೂ ಆಯಾಸವನ್ನೂ ಮಾಡಕೂಡದೆಂತಲೂ ಸರ್ವಭೂತಗಳಿಗೂ ಹಿತವನ್ನೇ ಮಾಡಬೇಕೆಂತಲೂ ಘೋಷಿಸುತ್ತವೆ. ಆದುದರಿಂದ ಶಿವಾಗಮತತ್ತ್ವಗಳು ಶುದ್ಧವೂ, ಸೂಕ್ಷ್ಮವೂ ಆಗಿವೆ.

೩. ಇವು ಅನೇಕ ಶಾಖೆಗಳಾಗಿವೆ. ಎಲ್ಲಕ್ಕೂ ಶಿವನೇ ಮೂಲ. ಜ್ಞಾನ ಧ್ಯಾನಗಳೆರಡೂ ಬೇಕು. ಶಿವಧರ್ಮಗಳು ಸನಾತನವಾದುವು.

**ಧಾರಯಂತಿ ಶಿವಂ ಯಸ್ಮಾದ್ಧಾರ್ಯತೇ ಶಿವಭಾಷಿತೈಃ ।**
**ಶಿವಧರ್ಮಾಶ್ರಿತಾಸ್ತಸ್ಮಾತ್ಸಂಸಾರಾರ್ಣವತಾರಣಾಃ ॥ ೪ ॥**

**ಅಥಾಹಿಂಸಾ ಕ್ಷಮಾ ಸತ್ಯಂ ಹ್ರೀಃ ಶ್ರದ್ಧೇಂದ್ರಿಯಸಂಯಮಃ ।**
**ದಾನಮಿಜ್ಯಾ ತತೋ ಧ್ಯಾನಂ ದಶಕಂ ಧರ್ಮಸಾಧನಂ ॥ ೫ ॥**

**ಅಥ ವ್ಯಸ್ತೈಃ ಸಮಸ್ತೈರ್ವಾ ಶಿವಧರ್ಮೈರನುಷ್ಠಿತೈಃ ।**
**ಶಿವೈಕಸ್ಥಾನಸಂಪ್ರಾಪ್ತಿರ್ಗತಿರೇಕೈವ ಕಲ್ಪಿತಾ ॥ ೬ ॥**

**ಯಥಾ ಭೂಃ ಸರ್ವಭೂತಾನಾಂ ಸ್ಥಾನಂ ಸಾಧಾರಣಂ ಸ್ಮೃತಂ ।**
**ತತ್ಸ್ಥಾನಂ ಶಿವಭಕ್ತಾನಾಮತುಲಂ ಕೇವಲಂ ಸ್ಮೃತಂ ॥ ೭ ॥**

**ಯಥೇಹ ಸರ್ವಭೂತಾನಾಂ ಭೋಗಾಸ್ಸಾತಿಶಯಾಃ ಸ್ಮೃತಾಃ ।**
**ಮತಾಃ ಪುಣ್ಯವಿಶೇಷೇಣ ಭೋಗಾಃ ಶಿವಪುರೇ ತಥಾ ॥ ೮ ॥**

---

೪. ಶಿವನನ್ನು ಯಾವಾಗಲೂ ಧರಿಸಿರುತ್ತಾರೆ. ಶಿವನು ಹೇಳಿದ ಆಚಾರವನ್ನೇ ಆಚರಿಸುತ್ತಾರೆ. ಆದುದರಿಂದ ಸಂಸಾರವನ್ನು ದಾಟಿಸುವ ಆ ಶಿವತತ್ತ್ವಗಳನ್ನು ಆಚರಿಸುವವರು ಶಿವಧರ್ಮಾಶ್ರಿತರೆಂದು ಹೇಳಲ್ಪಡುವರು.

೫. ಅಹಿಂಸೆ, ಕ್ಷಮಾ, ಸತ್ಯ, ಲಜ್ಜೆ, ಶ್ರದ್ಧೆ, ಇಂದ್ರಿಯನಿಗ್ರಹ, ದಾನ, ಯಾಗ ಮಾಡುವುದು, ಧ್ಯಾನ, ಧರ್ಮ, ಈ ಹತ್ತು ಈ ಮತದ ಧರ್ಮಗಳು.

೬, ಈ ಶಿವಧರ್ಮಗಳನ್ನು ಒಂದೊಂದನ್ನೇ ಆಗಲಿ, ಎಲ್ಲವನ್ನೂ ಸೇರಿಸಿಯಾಗಲಿ ಆಚರಿಸಬಹುದು. ಹಾಗೆ ಮಾಡಿದರೆ ಶಿವಸ್ಥಾನವು ಸಿಕ್ಕುತ್ತದೆ. ಇದನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ.

೭. ಭೂಮಿಯು ಎಲ್ಲಾ ಪ್ರಾಣಿಗಳಿಗೂ ಸಾಧಾರಣವಾದ ಸ್ಥಾನವೆಂದು ಇರುವಂತೆ ಶಿವಭಕ್ತರಿಗೆ ಆ ಧರ್ಮಗಳೇ ಸ್ಥಾನಗಳು,

೮. ಇಲ್ಲಿ ಸರ್ವಪ್ರಾಣಿಗಳಿಗೂ ಭೋಗಗಳು ಹೇಗೆ ಅತಿಶಯವಾಗಿವೆಯೋ ಆ ಶಿವಪುರದಲ್ಲಿ (ಕೈಲಾಸದಲ್ಲಿ) ಪುಣ್ಯವಿಶೇಷದಿಂದ ಎಲ್ಲಾ ಭೋಗಗಳೂ ದೊರಕುತ್ತವೆ.

ಶುಭಾಶುಭಫಲಂ ಚಾತ್ರ ಭುಜ್ಯತೇ ಸರ್ವದಾ ನೃಭಿಃ ।
ಶಿವಧರ್ಮಸ್ಯ ಚೈಕಸ್ಯ ಫಲಂ ತತ್ರೋಪಭುಜ್ಯತೇ ॥ ೯ ॥

ಯಸ್ಯ ಯಾದೃಗ್ಭವೇತ್ಪುಣ್ಯಂ ಶ್ರದ್ಧಾಪಾತ್ರವಿಶೇಷತಃ ।
ಭೋಗಾಃ ಶಿವಪುರೇ ತಸ್ಯ ಜ್ಞೇಯಾಸ್ತಾತಿಶಯಾಃ ಶುಭಾಃ ॥ ೧೦ ॥

ಸ್ಥಾನಪ್ರಾಪ್ತಿಃ ಪರಂ ತುಲ್ಯಾ ಭೋಗಾಶ್ಯಾನ್ತಿಮಯಾಃ ಸ್ಮೃತಾಃ ।
ಕುರ್ಯಾತ್ತಸ್ಮಿನ್ ಮಹಾಸ್ಥಾನಂ ಮಹಾಯೋಗಜಿಗೀಷಯಾ ॥ ೧೧ ॥

ಸರ್ವಾತಿಶಯಮೇವೈಕಂ ಭಾವಿತಂ ತು ಸುರೋತ್ತಮೈಃ ।
ಆತ್ಮಯೋಗಾಧಿಪತ್ಯಂ ಸ್ಯಾಚ್ಛಿವಃ ಸರ್ವಜಗತ್ಪತಿಃ ॥ ೧೨ ॥

ಕೇಚಿತ್ತತ್ರೈವ ಮುಚ್ಯಂತೆ ಜ್ಞಾನಯೋಗರತಾ ನರಾಃ ।
ಆವರ್ತಂತೇ ಪುನಶ್ಚಾನ್ಯೇ ಸಂಸಾರೇ ಭೋಗತತ್ಪರಾಃ ॥ ೧೩ ॥

---

೯. ಈ ಶುಭಾಶುಭಗಳ ಫಲವನ್ನು ಮನುಷ್ಯರು ಈ ಲೋಕದಲ್ಲೇ ಅನುಭವಿಸುತ್ತಾರೆ. ಶಿವಧರ್ಮ ಒಂದಕ್ಕೆ ಮಾತ್ರ ಅಲ್ಲಿ ಫಲವು ಅನುಭವಿಸಲ್ಪಡುತ್ತದೆ,

೧೦. ಶ್ರದ್ಧೆಯಿಂದಲೂ ಪಾತ್ರಾಪಾತ್ರವಿವೇಚನೆಯಿಂದಲೂ ಯಾವನು ಪುಣ್ಯಕರ್ಮವನ್ನು ಮಾಡುವನೋ ಅವನಿಗೆ ಅವೆಲ್ಲದರ ಭೋಗವೂ ಶಿವಪುರದಲ್ಲಿ ಸಿಕ್ಕುತ್ತವೆ.

೧೧. ಈ ಧರ್ಮದವರಿಗೆ ಸ್ಥಾನವು ಒಂದೇ ಬಗೆಯಾದುದು. ಭೋಗಗಳು ಶಾಂತಿಯಿಂದ ಕೂಡಿವೆ. ಮಹಾಯೋಗವನ್ನು ಕಲಿಯಬೇಕೆಂಬ ಇಚ್ಛೆಯಿಂದ ಅಲ್ಲಿ ಹೋಗಬೇಕಷ್ಟೆ.

೧೨. ಆ ಸ್ಥಳದಲ್ಲಿ ಎಲ್ಲಕ್ಕೂ ಅತಿಶಯವಾದುದು ಆತ್ಮಯೋಗಜ್ಞಾನವೇ. ಶಿವನೇ ಸರ್ವಜಗತ್ತಿಗೆ ಒಡೆಯನಷ್ಟೆ?

೧೩. ಜ್ಞಾನಯೋಗದಲ್ಲಿರುವ ಮನುಷ್ಯರು ಕೆಲವರು ಕೈಲಾಸದಲ್ಲಿಯೇ ಇದ್ದುಬಿಡುವರು. ಮತ್ತೆ ಕೆಲವರು ಸಂಸಾರಾಪೇಕ್ಷೆಯಿಂದ ಇಲ್ಲಿ ಬಂದು ಹುಟ್ಟಿ ಸಂಸಾರಿಗಳಾಗುತ್ತಾರೆ.

**ತಸ್ಮಾದ್ವಿಮುಕ್ತಿಮಿಚ್ಛಂಸ್ತು ಭೋಗಾಸಕ್ತಿಂ ವಿವರ್ಜಯೇತ್ ।**
**ವಿರಕ್ತಃ ಶಾಂತಚಿತ್ತಾತ್ಮಾ ಶಿವಜ್ಞಾನಮವಾಪ್ನುಯಾತ್ ॥ ೧೪ ॥**

**ಯೇ ಚಾನ್ಯಾಸಕ್ತಹೃದಯಾ ಯಜನ್ತೀಶಂ ಪ್ರಯತ್ನತಃ ।**
**ತೇಷಾಮಪಿ ದದಾತೀಶಃ ಸ್ಥಾನಂ ಭಾವಾನುರೂಪತಃ ॥ ೧೫ ॥**

**ತತ್ರಾರ್ಚಯನ್ತಿ ಯೇ ರುದ್ರಂ ಸಕೃದುಚ್ಛಿಷ್ಟಕರ್ಮಣಾ ।**
**ತೇಷಾಂ ಪಿಶಾಚಲೋಕೇಷು ಭೋಗಾನೀಶಃ ಪ್ರಯಚ್ಛತಿ ॥ ೧೬ ॥**

**ಸಂತಪ್ತಾ ದುಃಖಭಾವೇನ ಮ್ರಿಯಂತೇ ಸರ್ವದೇಹಿನಃ ।**
**ಅನ್ನದಃ ಪ್ರಾಣದಃ ಪ್ರೋಕ್ತಃ ಪ್ರಾಣದಶ್ಚಾಪಿ ಸರ್ವದಃ ॥ ೧೭ ॥**

**ತಸ್ಮಾದನ್ನಪ್ರದಾನೇನ ಸರ್ವದಾನಫಲಂ ಭವೇತ್ ।**
**ತ್ರೈಲೋಕ್ಯೇ ಯಾನಿ ರತ್ನಾನಿ ಭೋಗಸ್ತ್ರೀವಾಹನಾನಿ ಚ ।**
**ಅನ್ನದಾನಪ್ರದಸ್ಸರ್ವಮಿಹಾಮುತ್ರ ಫಲಂ ಲಭೇತ್ ॥ ೧೮ ॥**

---

೧೪. ಮುಕ್ತಿಯನ್ನಪೇಕ್ಷಿಸುವವರು ಭೋಗಾಪೇಕ್ಷೆಯನ್ನು ಬಿಡಬೇಕು. ವಿರಕ್ತರಾಗಿ ಶಾನ್ತರಾಗಿರುವವರು ಮಾತ್ರ ಶಿವಜ್ಞಾನವನ್ನು ಹೊಂದುತ್ತಾರೆ.

೧೫. ಬೇರೆ ದೇವರಲ್ಲಿ ಆಸಕ್ತನಾದರೂ ಈಶ್ವರನನ್ನು ಪೂಜಿಸಿದರೆ ಅವನಿಗೆ ಯೋಗ್ಯವಾದ ಸ್ಥಾನವನ್ನು ಶಿವನು ಕೊಡುತ್ತಾನೆ.

೧೬. ಇತರ ದೇವತೆಯನ್ನು ಮೊದಲು ಪೂಜಿಸಿ, ಬಳಿಕ ಶಿವನನ್ನು ಆ ದೇವತೆಗಿಂತ ಕಮ್ಮಿಯಾಗಿ ಭಾವಿಸಿ ಪೂಜಿಸುವವರಿಗೆ ಪಿಶಾಚಲೋಕಪ್ರಾಪ್ತಿಯಾಗಿ ದುಃಖ ಪಡುವರು.

೧೭. ಎಲ್ಲಾ ಪ್ರಾಣಿಗಳೂ ದುಃಖದಿಂದ ತಪಿಸಿ ಸಾಯುತ್ತಾರೆ. ಅದರಲ್ಲಿ ಅನ್ನಕೊಟ್ಟವನನ್ನು ಪ್ರಾಣಕೊಟ್ಟವನಂತೆ ಭಾವಿಸಬೇಕು.

೧೮. ಆದುದರಿಂದ ಅನ್ನದಾನ ಮಾಡಿದರೆ ಸರ್ವದಾನಫಲವೂ ಬರುತ್ತದೆ, ಅನ್ನದಾನ ಮಾಡಿದವನು ಮೂರುಲೋಕದ ರತ್ನಗಳನ್ನೂ ಸ್ತ್ರೀವಾಹನಗಳನ್ನೂ ಹೊಂದಿ ಇಹಲೋಕ ಪರಲೋಕಗಳಲ್ಲಿ ಭೋಗಿಸುತ್ತಾನೆ.

ಯಸ್ಮಾದನ್ನೇನ ಪುಷ್ಟಾಂಗಃ ಕುರುತೇ ಪುಣ್ಯಸಂಚಯಂ ।
ಅನ್ನಪ್ರದಾತುಸ್ತಸ್ಯಾರ್ಥಂ ಕರ್ತುರ್ಶ್ಚಾರ್ಧಂ ನ ಸಂಶಯಃ ॥ ೧೯ ॥

ಧರ್ಮಾರ್ಥಕಾಮಮೋಕ್ಷಾಣಾಂ ದೇಹಃ ಪರಮಸಾಧನಂ ।
ಸ್ಥಿತಿಸ್ತಸ್ಯಾನ್ನಪಾನಾಭ್ಯಾಮತಸ್ತತ್ಸರ್ವಸಾಧನಂ ॥ ೨೦ ॥

ಅನ್ನಂ ಪ್ರಜಾಪತಿಸ್ಸಾಕ್ಷಾದನ್ನಂ ವಿಷ್ಣು ಶ್ಶಿವಸ್ಸ್ವಯಂ ।
ತಸ್ಮಾದನ್ನಸಮಂ ದಾನಂ ನ ಭೂತಂ ನ ಭವಿಷ್ಯತಿ ॥ ೨೧ ॥

ತ್ರಯಾಣಾಮಪಿ ಲೋಕಾನಾಮುದಕಂ ಜೀವನಂ ಸ್ಮೃತಂ ।
ಪವಿತ್ರಮುದಕಂ ದಿವ್ಯಂ ಶುದ್ಧಂ ಸರ್ವರಸಾಶ್ರಯಂ ॥ ೨೨ ॥

ಅನ್ನಪಾನಾಶ್ವಗೋವಸ್ತ್ರಶಯ್ಯಾಸೂತ್ರಾಸನಾನಿ ಚ ।
ಪ್ರೇತಲೋಕೇ ಪ್ರಶಸ್ತಾನಿ ದಾನಾನ್ಯಷ್ಟೌ ವಿಶೇಷತಃ ॥ ೨೩ ॥

---

೧೯. ಆ ಅನ್ನದಿಂದ ಬೆಳೆದ ಶರೀರವುಳ್ಳವನಾಗಿ ಪುಣ್ಯವನ್ನು ಸಂಪಾದಿಸುವುದರಿಂದ ಆ ಪುಣ್ಯವು ಅನ್ನದಾತನಿಗೆ ಅರ್ಧವೂ, ಮಾಡಿದವನಿಗೆ ಅರ್ಧವೂ ಸಹ ಹಂಚಲ್ಪಡುತ್ತದೆ.

೨೦. ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆಲ್ಲಕ್ಕೂ ದೇಹವೇ ಬೇಕಾದ ಮುಖ್ಯಸಾಧನವು. ಆ ದೇಹವಿರಬೇಕಾದರೆ ಅನ್ನ ನೀರು ಬೇಕು. ಆದುದರಿಂದಲೇ ದೇಹವೂ, ಅನ್ನವೂ ಸರ್ವಸಾಧನಗಳು.

೨೧. ಅನ್ನವೇ ಬ್ರಹ್ಮನು, ಅನ್ನವೇ ಶಿವಸ್ವರೂಪವು. ಅನ್ನವೇ ವಿಷ್ಣು ಸ್ವರೂಪವು, ಆದುದರಿಂದ ಅನ್ನಸಮವಾದ ದಾನವು ಹಿಂದೂ ಇಲ್ಲ ಮುಂದೂ ಇರುವುದಿಲ್ಲ.

೨೨. ಮೂರು ಲೋಕಕ್ಕೂ ನೀರೇ ಆಧಾರವು, ಪವಿತ್ರವಾದುದು. ಶುದ್ಧವಾದುದು. ಇದು ಸರ್ವರಸವನ್ನೂ ಒಳಗೊಂಡಿರುವುದು.

೨೩. ಅನ್ನ, ಪಾನ, ಕುದುರೆ, ಗೋವು, ವಸ್ತ್ರ, ಶಯ್ಯೆ, ದಾರ, ಮಂದಲಿಗೆ, ಇವು ಎಂಟೂ ಪ್ರೇತಲೋಕದಲ್ಲಿ ಪ್ರಶಸ್ತವಾದುವು.

ಏವಂ ದಾನವಿಶೇಷೇಣ ಧರ್ಮರಾಜಪುರಂ ನರಾಃ ।
ಯಸ್ಮಾದ್ಯಾತಿ ಸುಖೇನೈವ ತಸ್ಮಾದ್ಧರ್ಮಂ ಸಮಾಚರೇತ್ ॥ ೨೪ ॥

ಯಃ ಪುನಃ ಕ್ರೂರಕರ್ಮಾಣಃ ಸದಾ ದಾನವಿವರ್ಜಿತಾಃ ।
ಭುಂಜತೇ ದಾರುಣಂ ದುಃಖಂ ನರಕೇ ನೃಪನಂದನ ॥ ೨೫ ॥

ತಥಾ ಸುಖಂ ಪ್ರಭೋಕ್ಷ್ಯಂತಿ ದಾನಂ ಕೃತ್ವಾ ತು ಚಾತುಲಂ ।
ತೇಷಾಂ ಸ್ವಯಂ ಭವೇತ್ಸೌಖ್ಯಂ ಕರ್ಮಯೋಗರತಾತ್ಮನಾಂ ॥ ೨೬ ॥

ಅಪ್ರಮೇಯಗುಣೈರ್ದಿವ್ಯೈರ್ವಿಮಾನೈಃ ಸಾರ್ವಕಾಮಿಕೈಃ ।
ಅಸಂಖ್ಯೈಸ್ತತ್ಪರಂ ಪ್ರಾಪ್ತಂ ಪ್ರಾಣಿನಾಮುಪಕಾರಕೈಃ ॥ ೨೭ ॥

ಸಹಸ್ರಸೋಮದಿವ್ಯಂ ವಾ ಸೂರ್ಯತೇಜಸ್ಸಮಪ್ರಭಂ ।
ರುದ್ರಲೋಕಮಿತಿ ಪ್ರೋಕ್ತಮಶೇಷಗುಣಸಂಯುತಂ ॥ ೨೮ ॥

---

೨೪. ಈ ದಾನಗಳಿಂದ ಮನುಷ್ಯನು ಧರ್ಮರಾಜನ ಲೋಕವನ್ನು ಸುಖವಾಗಿ ಹೊಂದುತ್ತಾನಾದ್ದರಿಂದ ಧರ್ಮವನ್ನು ಮಾಡಬೇಕು.

೨೫. ಕ್ರೂರಕರ್ಮಿಯಾಗಿದ್ದು, ದಾನಮಾಡದಿದ್ದವನು ನರಕದಲ್ಲಿ ಕಷ್ಟವಾದ ದುಃಖವನ್ನು ಅನುಭವಿಸುತ್ತಾನೆ.

೨೬. ಮಹತ್ತಾಗಿ ದಾನಮಾಡಿದವರು ಹಾಗೆಯೇ ಸುಖವನ್ನು ಅನುಭವಿಸುತ್ತಾರೆ. ಕರ್ಮಯೋಗದಲ್ಲಾಸಕ್ತರಾದವರಿಗೆ ಸ್ವತಃ ಸೌಖ್ಯವುಂಟಾಗುತ್ತದೆ.

೨೭. ಇಂತಹ ಉಪಕಾರಮಾಡಿದವರು ಎಲ್ಲಾ ಭೋಗಗಳನ್ನೂ ಕೊಡುವ ಅನೇಕ ವಿಮಾನಗಳಿಂದ ಉತ್ತಮ ಲೋಕಗಳಿಗೆ ಹೋಗುತ್ತಲೇ ಇರುವರು.

೨೮. ರುದ್ರಲೋಕವೆಂಬುದು ಸಾವಿರಾರು ಚಂದ್ರರಿಗೆ ಸಮವಾದ ಅಥವಾ ಸೂರ್ಯತೇಜಸ್ಸಿ ಸಮವಾದುದು. ಅದು ಬಹುವಾದ ಗುಣಗಳಿಂದ ಕೂಡಿದೆ.

ಸರ್ವೇಷಾಂ ಶಿವಭಕ್ತಾನಾಂ ತತ್ಪುರಂ ಪರಿಕೀರ್ತಿತಂ ।
ರುದ್ರಕ್ಷೇತ್ರೇ ಮೃತಾನಾಂ ಚ ಜಂಗಮಸ್ಥಾವರಾತ್ಮನಾಂ ॥ ೨೯ ॥

ಅಪ್ಯೇಕದಿವಸಂ ಭಕ್ತ್ಯಾ ಯಃ ಪೂಜಯತಿ ಶಂಕರಂ ।
ಸೋऽಪಿ ಯಾತಿ ಶಿವಂ ಸ್ಥಾನಂ ಕಿಂಪುನರ್ಬಹುಶೋऽರ್ಚಯನ್ ॥ ೩೦ ॥

ವೈಷ್ಣವಾ ವಿಷ್ಣುಭಕ್ತಾಶ್ಚ ವಿಷ್ಣುಧ್ಯಾನಪರಾಯಣಾಃ ।
ತೇऽಪಿ ಯಾಂತಿ ಚ ವೈಕುಂಠಂ ಸಮೀಪಂ ಚೈವ ಚಕ್ರಿಣಃ ॥ ೩೧ ॥

ಬ್ರಹ್ಮವಾದೀ ಚ ಧರ್ಮಾತ್ಮಾ ಬ್ರಹ್ಮಲೋಕಂ ಪ್ರಯಾತಿ ಸಃ ।
ಪುಣ್ಯಕರ್ತಾ ಸುಪುಣ್ಯೇನ ಪುಣ್ಯಲೋಕಂ ಪ್ರಯಾತಿ ಚ ॥ ೩೨ ॥

ತಸ್ಮಾದೀಶಂ ಸದಾ ಭಕ್ತ್ಯಾ ಭಾವಯೇದಾತ್ಮನಾತ್ಮನಿ ।
ಹರೌ ವಾಪಿ ಮಹಾರಾಜ ಯುಕ್ತಾತ್ಮಾ ಜ್ಞಾನವಾನ್ ಸ್ವಯಂ ॥ ೩೩ ॥

---

೨೯-೩೦. ಎಲ್ಲಾ ಶಿವಭಕ್ತರುಗಳಿಗೂ, ರುದ್ರಕ್ಷೇತ್ರದಲ್ಲಿ ಮೃತರಾದ ಚರಾಚರಗಳಿಗೂ, ಈ ಪುರವು ಉತ್ತಮವಾದುದೆಂದು ಹೇಳಲ್ಪಟ್ಟಿದೆ. ಒಂದು ದಿನ ಮಾತ್ರವಾದರೂ ಶಂಕರನನ್ನು ಭಕ್ತಿಯಿಂದ ಪೂಜಿಸಿದವನು ಕೈಲಾಸವನ್ನು ಹೊಂದುವನು. ಅನೇಕ ಬಾರಿ ಶಿವಾರ್ಚನೆಯನ್ನು ಮಾಡತಕ್ಕವನು ಹೋಗುತ್ತಾನೆಂಬುದರಲ್ಲಿ ಸಂದೇಹವೇ ಇಲ್ಲ.

೩೧. ವೈಷ್ಣವರೂ, ವಿಷ್ಣುಭಕ್ತರಾದ ಇತರರೂ, ವಿಷ್ಣುವನ್ನು ಧ್ಯಾನಮಾಡುವವರೂ, ಕೂಡ ವೈಕುಂಠವನ್ನು ಹೊಂದಿ ವಿಷ್ಣುವಿನ ಸಮೀಪದಲ್ಲೇ ಇರುತ್ತಾರೆ.

೩೨. ಬ್ರಹ್ಮವಾದಿಯೂ, ಧರ್ಮಾತ್ಮನಾದವನೂ, ಬ್ರಹ್ಮಲೋಕವನ್ನು ಹೊಂದುತ್ತಾನೆ. ಪುಣ್ಯಮಾಡಿದವನು ಪುಣ್ಯಲೋಕವನ್ನು ಹೊಂದುತ್ತಾನೆ.

೩೩. ಆದುದರಿಂದ ಈಶ್ವರನನ್ನು ಮನಸ್ಸಿನಲ್ಲಿ ಸದಾ ಭಜಿಸಬೇಕು. ಅಥವಾ ಹರಿಯನ್ನಾಗಲೀ ಸದಾಜ್ಞಾನದಿಂದ ಭಜಿಸುತ್ತಿರಬೇಕು. ಆದುದರಿಂದ ಭಕ್ತಿಭಾವವನ್ನು ಮುಖ್ಯವಾಗಿಟ್ಟುಕೊಂಡು ಸ್ವಾಮಿಯನ್ನು ಧ್ಯಾನಿಸಬೇಕು.

ತಸ್ಮಾತ್ಸರ್ವವಿಚಾರೇಣ ಭಾವದೋಷವಿಚಾರತಃ ।
ಏವಂ ವಿಷ್ಣುಪ್ರಭಾವೇನ ವಿಶಿಷ್ಟೇನಾಪಿ ಕರ್ಮಣಾ ।
ನರೈಃ ಸ್ಥಾನಮವಾಪ್ಯೇತ ವೇಶಭಾವಾನುರೂಪತಃ ॥ ೩೪ ॥

ಇತ್ಯೇತದಪರಂ ಪ್ರೋಕ್ತಂ ಶ್ರೀಮಚ್ಛಿವಪುರಂ ಮಹತ್ ।
ದೇಹಿನಾಂ ಕರ್ಮನಿಷ್ಠಾನಾಂ ಪುನರಾವರ್ತಕಂ ಸ್ಮೃತಂ ॥ ೩೫ ॥

ಊರ್ಧ್ವಂ ಶಿವಪುರಾತ್ ಜ್ಞೇಯಂ ವೈಷ್ಣವಂ ಲೋಕಮುತ್ತಮಂ ।
ವೈಷ್ಣವಾ ಮಾನವಾ ಯಾಂತಿ ವಿಷ್ಣುಧ್ಯಾನಪರಾಯಣಾಃ ॥ ೩೬ ॥

ಬ್ರಾಹ್ಮಣಾ ಬ್ರಹ್ಮಲೋಕಂ ತು ಸದಾಚಾರಾ ನರೋತ್ತಮಾಃ ।
ಪ್ರಯಾನ್ತಿ ಯಜ್ವಿನಃ ಸರ್ವೇ ಸುನೀತಾಸ್ತತ್ರ ಕೋವಿದಾಃ ॥ ೩೭ ॥

---

೩೪. ಈ ರೀತಿಯಾಗಿ ವಿಷ್ಣುವಿನ ಪ್ರಭಾವದಿಂದ ಅವನಲ್ಲೇ ಮನಸ್ಸಿಟ್ಟು ಭಜಿಸೋಣದರಿಂದ ನರರು ಆ ವೇಷ, ಆ ಭಾವಗಳಿಗನುರೂಪವಾದ ಸ್ಥಾನವನ್ನು ಹೊಂದುತ್ತಾರೆ.

೩೫. ಈ ರೀತಿಯಾದ ಶಿವಪುರ ಅಥವಾ ಕೈಲಾಸವೆಂಬ ಮತ್ತೊಂದು ಸ್ಥಾನವನ್ನೂ ಹೇಳಿದಂತಾಯಿತು. ಕರ್ಮಿಗಳಾದ ದೇಹಿಗಳಿಗೆ ಪುನರಾವೃತ್ತಿಯು ಸಂಸಾರದಲ್ಲಿ ಉಂಟು.

೩೬. ಕೈಲಾಸಕ್ಕಿಂತಲೂ, ವೈಕುಂಠವು ಮೇಲಿರುವುದು. ಅದನ್ನು ವಿಷ್ಣು ಧ್ಯಾನಾಸಕ್ತರಾದ ವೈಷ್ಣವರು ಹೊಂದುತ್ತಾರೆ.

೩೭. ಸದಾಚಾರಿಗಳಾದ ಬ್ರಹ್ಮನಿಷ್ಠರು ಬ್ರಹ್ಮಲೋಕವನ್ನು ಹೊಂದುತ್ತಾರೆ. ಯಾಗಮಾಡಿದ ಪುನೀತರೂ ವಿದ್ವಾಂಸರೂ ಆ ಬ್ರಹ್ಮಲೋಕವನ್ನು ಹೊಂದುತ್ತಾರೆ.

**ಇಂದ್ರಲೋಕಂ ತಥಾ ಯಾನ್ತಿ ಕ್ಷತ್ರಿಯಾ ಯುದ್ಧಗಾಮಿನಃ ।**
**ಅನ್ಯೇ ಚ ಪುಣ್ಯಕರ್ತಾರಃ ಪುಣ್ಯಲೋಕಾನ್ ಪ್ರಯಾಂತಿ ಚ ॥ ೩೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ**
**ಮಾತಾಪಿತೃತೀರ್ಥಕಥನೇ ಏಕೋನಸಪ್ತತಿತಮೋಽಧ್ಯಾಯಃ**



---

೩೮. ಯುದ್ಧದಲ್ಲಿ ಮೃತರಾದ ಕ್ಷತ್ರಿಯರು ಇಂದ್ರಲೋಕವನ್ನು ಹೊಂದುತ್ತಾರೆ. ಬೇರೆಬೇರೆಯಾದ ಪುಣ್ಯಗಳನ್ನು ಮಾಡಿದವರು ಇತರ ಪುಣ್ಯಲೋಕಗಳನ್ನು ಹೊಂದುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತತಿತಮೋಽಧ್ಯಾಯಃ

॥ ಮಾತಲಿರುವಾಚ ॥

ಯಮಪೀಡಾಂ ಪ್ರವಕ್ಷ್ಯಾಮಿ ಮಹಾತೀವ್ರಾಂ ಸುದಾರುಣಾಂ
ಭುಂಜಂತಿ ಪಾಪಿನಸ್ಸರ್ವೇ ಕೂಟಾಸ್ತೇ ಬ್ರಹ್ಮಘಾತಿನಃ ॥ ೧ ॥

ಕ್ವಚಿತ್ಪಾಪಾಃ ಪ್ರಪಚ್ಯಂತೇ ತೀವ್ರೇಣ ನರಕಾಗ್ನಿನಾ ।
ಕ್ವಚಿತ್ಸಿಂಹೈರ್ವ್ಯಕೈರ್ವ್ಯಾಘ್ರೈರ್ದಂಶೈಃ ಕೀಟೈಸ್ತು ದಾರುಣೈಃ ॥ ೨ ॥

ಕ್ವಚಿನ್ಮಹಾಜಲೌಕೋಭಿಃ ಕ್ವಚಿಚ್ಚಾಽಜಗರೈಃ ಪುನಃ ।
ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪೈರ್ವಿಷೋಲ್ಬಣೈಃ ॥ ೩ ॥

---

## ಎಪ್ಪತ್ತನೆಯ ಅಧ್ಯಾಯವು

೧. ಮಾತಲಿಯು ಹೇಳಿದನು:—ಇನ್ನು ಮೇಲೆ ಮಹಾದಾರುಣವಾದ ಯಮಪೀಡೆಗಳನ್ನು ಹೇಳುತ್ತೇನೆ. ಬ್ರಹ್ಮಹತ್ಯ ಮಾಡಿದ ಪಾಪಿಗಳು ಅಲ್ಲಿ ನರಕವನ್ನು ಅನುಭವಿಸುತ್ತಾರೆ.

೨. ಒಂದು ಜಾಗದಲ್ಲಿ ತೀವ್ರವಾದ ನರಕಾಗ್ನಿಯಿಂದ ಪಾಪಿಗಳು ಸುಡಲ್ಪಡುತ್ತಾರೆ. ಒಂದು ಸ್ಥಳದಲ್ಲಿ ಸಿಂಹ, ಮತ್ತೊಂದು ಕಡೆ ಹುಲಿ, ಇನ್ನೊಂದೆಡೆ ತೋಳ, ಮಗದೊಂದೆಡೆ ಕಾಡುನೊಣ, ಸೊಳ್ಳೆ ಮುಂತಾದ ಕೆಟ್ಟ ಪ್ರಾಣಿಗಳು, ಇವೆಲ್ಲವೂ ಪಾಪಿಗಳನ್ನು ಹಿಂಸಿಸುತ್ತವೆ.

೩-೫. ಜಿಗಣೆ, ಅಜಗರವೆಂಬ ಸರ್ಪ, ನೊಣ, ವಿಷಸರ್ಪ, ಮದ್ದಾನೆ, ಕೋಪವುಳ್ಳ ಚೂಪಾದ ಕೊಂಬುಳ್ಳ ಹೋರಿಗಳು, ದೊಡ್ಡ ಕೋಡುಳ್ಳ ಎಮ್ಮೆಗಳು, ಡಾಕಿನಿ

ಮತ್ತಮಾತಂಗಯೂಥೈಶ್ಚ ಬಲೋತ್ಕೃಷ್ಟೈಃ ಪ್ರಮಾಥಿಭಿಃ ।
ಪಂಥಾನಮುಲ್ಲಿಖದ್ಭಿಶ್ಚ ತೀಕ್ಷ್ಣಶೃಂಗೈರ್ಮಹಾವೃಷೈಃ ॥ ೪ ॥

ಮಹಾಶೃಂಗೈಶ್ಚ ಮಹಿಷೈರ್ದುಷ್ಟಗಾತ್ರಪ್ರಬಾಧಕೈಃ ।
ಡಾಕಿನೀಭಿಶ್ಚ ರೌದ್ರಾಭಿರ್ವಿಕಟಾಕ್ಷೈಶ್ಚ ರಾಕ್ಷಸೈಃ ॥ ೫ ॥

ವ್ಯಾಧಿಭಿಶ್ಚ ಮಹಾರೌದ್ರೈಃ ಪೀಡ್ಯಮಾನಾ ವ್ರಜಂತಿ ತೇ
ಮಹಾತುಲಾಸಮಾರೂಢಾ ದೋಲ್ಯಮಾನಾ ಅತೀವ ತೇ ॥ ೬ ॥

ಮಹಾವೇಗಪ್ರಧೂತಾಸ್ತೇ ಮಹಾಚಂಡೇನ ವಾಯುನಾ ।
ಮಹಾಪಾಷಾಣವರ್ಷೇಣ ಭಿದ್ಯಮಾನಾಶ್ಚ ಸರ್ವತಃ ॥ ೭ ॥

ಪತದ್ಭಿರ್ವಜ್ರನಿರ್ಘೋಷೈರುಲ್ಕಾಪಾತೈಶ್ಚ ದಾರುಣೈಃ ।
ಪ್ರದೀಪ್ತಾಂಗಾರವರ್ಷೇಣ ಹನ್ಯಮಾನಾ ವ್ರಜಂತಿ ತೇ ॥ ೮ ॥

ಮಹತಾ ಪಾಂಶುವರ್ಷೇಣ ಪೂರ್ಯಮಾಣಂ ಯಮಂ ಗತಾಃ ।
ಯೇ ನರಾಃ ಪಾಪಕರ್ಮಾಣಃ ಪಾಪಂ ಭುಂಜಂತಿ ದಾರುಣಂ ॥ ೯ ॥

---

ಗಳು, ಭಯಂಕರರಾದ ರಾಕ್ಷಸರು, ಕ್ರೂರವಾದ ವ್ಯಾಧಿಗಳು, ಇವುಗಳಿಂದ ಪೀಡಿಸಲ್ಪಡುತ್ತಾ ಪಾಪಿಗಳು ನರಕಕ್ಕೆ ಹೋಗುತ್ತಾರೆ.

೬-೭. ದೊಡ್ಡದಾದ ಉಯ್ಯಾಲೆಯಲ್ಲಿ ಹತ್ತಿಸಿ ವೇಗವಾದ ಗಾಳಿಯಿಂದಾಡಿಸಿ ತೂಗಿ ದೂರಕ್ಕೆ ಎಸೆಯಲ್ಪಡುತ್ತಾರೆ. ಕಾಲನ್ನು ಕತ್ತರಿಸುವ ಕಲ್ಲುಗಳ ಮೇಲೆ ಹೋಗುವಂತೆ ಮಾಡಿ ಕಾಲು ಕತ್ತರಿಸುವಂತೆ ಮಾಡುತ್ತಾರೆ.

೮. ಸಿಡಲಿನಂತೆ ಶಬ್ದಮಾಡುತ್ತಾ ಬೀಳುತ್ತಿರುವ ಕೊಳ್ಳಿಗಳನ್ನು ಮೇಲೆ ಹಾಕುತ್ತಾರೆ. ಪ್ರಕಾಶಮಾನವಾದ ಕೆಂಡದ ಮಳೆಯನ್ನು ಮೇಲೆ ಸುರಿಸುತ್ತಾರೆ.

೯. ಬಹಳವಾದ ಧೂಳನ್ನು ಮೇಲೆ ಹಾಕುತ್ತಿರುತ್ತಾರೆ. ಈ ರೀತಿ ಪಾಪಿಗಳು ಪಾಪವನ್ನು ಅನುಭವಿಸುತ್ತಾ ದಾರಿಯಲ್ಲಿ ಹೋಗುತ್ತಾರೆ.

**ಏವಂ ಪಾಪವಿಶೇಷೇಣ ಪಾಪಿಷ್ಠಾಃ ಪಾಪಕಾರಕಾಃ ।**
**ನಿರಯಂ ಪ್ರಾಪ್ಯ ಭುಂಜಂತಿ ಬಹುಪೀಡಾಸಮಾಕುಲಂ ॥ ೧೦ ॥**

**ಏತತ್ತೇ ಸರ್ವಮಾಖ್ಯಾತಂ ವಿವೇಕಂ ಪಾಪಪುಣ್ಯಯೋಃ ।**
**ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ಧರ್ಮಸಾರಮನುತ್ತಮಂ ॥ ೧೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಮಾತಾಪಿತೃತೀರ್ಥಕಥನೇ ಸಪ್ತತಿತಮೋಽಧ್ಯಾಯಃ**



---

೧೦. ಪಾಪಿಗಳಾದ ನರರು ಬಹುಪೀಡೆಯಿಂದ ಕೂಡಿದ ನರಕವನ್ನು ಹೊಂದಿ ಅಲ್ಲಿ ದುಃಖವನ್ನು ಅನುಭವಿಸುತ್ತಾರೆ.

೧೧. ಈ ರೀತಿ ಪಾಪಪುಣ್ಯಗಳ ವಿವೇಚನೆಯನ್ನು ಹೇಳಿದೆನು. ಮತ್ತಾವ ಧರ್ಮವನ್ನು ಹೇಳಲಿ, ಕೇಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕಸಪ್ತತಿತಮೋಽಧ್ಯಾಯಃ

॥ ಯಯಾತಿರುವಾಚ ॥

ಯತ್ತ್ವಯಾ ಸರ್ವಮಾಖ್ಯಾತಂ ಧರ್ಮಾಧರ್ಮಮನುತ್ತಮಂ ।
ಶೃಣ್ವತೋಽಥ ಮಮ ಶ್ರದ್ಧಾ ಪುಣ್ಯಂ ಚೈವ ಪ್ರವರ್ಧತೇ ॥ ೧ ॥

ದೇವಾನಾಂ ಲೋಕಸಂಸ್ಥಾನಾಂ ವದ ಸಂಖ್ಯಾಃ ಪ್ರಕೀರ್ತಿತಾಃ ।
ಯಸ್ಯ ಪುಣ್ಯಪ್ರಸಂಗೇನ ಯೇನ ಪ್ರಾಪ್ತಂ ಚ ಮಾತಲೇ ॥ ೨ ॥

॥ ಮಾತಲಿರುವಾಚ ॥

ಯೋಗಯುಕ್ತಂ ಪ್ರವಕ್ಷ್ಯಾಮಿ ತಪಸಾ ಯದುಪಾರ್ಜಿತಂ ।
ದೇವಾನಾಂ ವಾಸಸಂಸ್ಥಾನಂ ಸುಖಭೋಗಪ್ರದಾಯಕಂ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯವು

೧. ಯಯಾತಿಯು ಹೇಳಿದನು:—ನೀನು ಹೇಳಿದ ಉತ್ಕೃಷ್ಟವಾದ ಧರ್ಮಾಧರ್ಮಗಳನ್ನು ಕೇಳಿದ ನನಗೆ ಅವುಗಳನ್ನು ಇನ್ನೂ ಕೇಳಬೇಕೆಂಬ ಶ್ರದ್ಧೆಯೂ, ಪುಣ್ಯವೂ ಹೆಚ್ಚುತ್ತಿವೆ.

೨. ದೇವಲೋಕದಲ್ಲಿ ಎಷ್ಟು ಸ್ಥಾನಗಳಿವೆ? ಯಾವಯಾವ ಪುಣ್ಯದಿಂದ ಯಾರು ಯಾರು ಯಾವ ಯಾವ ಲೋಕವನ್ನು ಹೊಂದುತ್ತಾರೆ? ಅವೆಲ್ಲವನ್ನೂ ಹೇಳಬೇಕೆನಲು,

೩. ಮಾತಲಿಯು ಹೇಳಿದನು:—ಯೋಗದಿಂದಲೂ, ತಪಸ್ಸಿನಿಂದಲೂ, ಸಂಪಾದಿಸಬಹುದಾದ ಮತ್ತೂ ದೇವತೆಗಳಿಗೆ ಸುಖದಾಯಕವಾದ ಸ್ಥಾನಗಳನ್ನು ಹೇಳುತ್ತೇನೆ.

**ಧರ್ಮಭಾವಂ ಪ್ರವಕ್ಷ್ಯಾಮಿ ಹ್ಯಾಯಾಸೇನಾರ್ಜಿತಂ ಪೃಥಕ್ ।**
**ಉಪರಿಷ್ಟಾಚ್ಚ ಲೋಕಾನಾಂ ಸ್ವರೂಪಂ ಚಾಪ್ಯನುಕ್ರಮಾತ್ ॥ ೪ ॥**

**ತತ್ರಾಷ್ಟಗುಣಮೈಶ್ವರ್ಯಂ ಪಾರ್ಥಿವಂ ಪಿಶಿತಾಶಿನಾಂ ।**
**ತಸ್ಮಾತ್ಸದೋಗತಾನಾಂ ಚ ನರಾಣಾಮುತ್ತಮಂ ಸ್ಮೃತಂ ॥ ೫ ॥**

**ಬಹುದ್ವಾರಂ ಷೋಡಶಕುಲಂ ಪಾರ್ಥಿವಾತ್ಪಂಚ ತದ್ವಿಧಾ ।**
**ಏಕಂ ನಿರವಶೇಷಂ ಚ ಯಚ್ಛೇಷಂ ಕುಲತೇಜಸಾಂ ॥ ೬ ॥**

**ಗಂಧರ್ವಾಣಾಂ ಚ ವಾಯವ್ಯಮಾದ್ಯಂ ಚ ಸಕಲಂ ಸ್ಮೃತಂ ।**
**ಪಾಂಚಭೌತಿಕಮಿಂದ್ರಸ್ಯ ಚತ್ವಾರಿಂಶದ್ಗುಣಂ ಮಹತ್**
**ಸೋಮಸ್ಯ ಮಾನಸಂ ದಿವ್ಯಂ ವಿಶ್ವೇಶಂ ಪಾಂಚಭೌತಿಕಂ ॥ ೭ ॥**

---

೪. ಮೊದಲು ಕಷ್ಟದಿಂದ ಸಂಪಾದಿಸಿದ ಧರ್ಮಗಳನ್ನು ಹೇಳುತ್ತೇನೆ. ಆ ಮೇಲೆ ಮೇಲಿರುವ ಲೋಕಗಳ ಸ್ವರೂಪವನ್ನು ಕ್ರಮವಾಗಿ ಹೇಳುತ್ತೇನೆ.

೫. ಈ ಭೂಮಿಯಲ್ಲಿ ಮಾಂಸಾಹಾರದಿಂದ ಉಂಟಾಗುವ ಸೌಖ್ಯದ ಎಂಟರಷ್ಟು ಸುಖವು ಆ ಲೋಕದಲ್ಲುಂಟಾಗುವುದು. ಆದುದರಿಂದ ಹೊಸದಾಗಿ ಆಗತಾನೆ ಆ ಲೋಕಕ್ಕೆ ಹೋದ ಮನುಷ್ಯರಿಗೆ ಅದು ಉತ್ತಮವಾಗಿ ಕಾಣುತ್ತದೆ.

೬. ಆ ಲೋಕಕ್ಕೆ ಬಹು ದ್ವಾರಗಳಿವೆ. ಹದಿನಾರು ಭಾಗಗಳಿವೆ. ಅವೆಲ್ಲವೂ ಪಾರ್ಥಿವ (ಪೃಥ್ವಿಯ ಸಂಬಂಧ) ವಾದುದರಿಂದ ಐದು ಬಗೆಯವು. ಅದರಲ್ಲಿಯೂ ಎರಡು ಹೆಚ್ಚು ಪ್ರಕಾಶವಾದುದು. ಒಂದು ಬಗೆಯದು ಎಲ್ಲರಿಗೂ ಸಮಾನವಾಗಿ ಸಾಮಾನ್ಯವಾದುದು. ಮತ್ತೊಂದು ವಿಶೇಷವಾದುದು. ಬೇರೆಬೇರೆ ಪುಣ್ಯದವರಿಗೆ ಬೇರೆಬೇರೆಯಾಗಿ ಸಲ್ಲತಕ್ಕದ್ದು. ಅದು ಅವರ ಕುಲ ತೇಜಸ್ಸುಗಳಿಗೆ ಯೋಗ್ಯವಾದುದು.

೭. ಅದು ಗಂಧರ್ವರು, ವಾಯವ್ಯರುಗಳಿಗೆಲ್ಲರಿಗೂ ಸಂಬಂಧಿಸಿದುದು. ಅಲ್ಲಿ ಅವರೇ ಹೆಚ್ಚು. ಅದು ಪಂಚಭೂತಗಳಿಂದ ಕೂಡಿದುದು. ಇಂದ್ರನದು, ಇಪ್ಪತ್ತೆನಾಲ್ಕರಷ್ಟು ಮಿಗಿಲಾದುದು. ಮತ್ತು ಮಹತ್ತಾದುದು. ಸೋಮನದು ಮಾನಸವಾದುದು. ಎಂದರೆ ಮನಸ್ಸಿಗೆ ಸಂಬಂಧಪಟ್ಟುದು, ದಿವ್ಯವಾದುದು. ವಿಶ್ವೇಶನದು ಪಂಚಭೂತಗಳಿಂದ ಕೂಡಿರುವುದು. ಎಂದರೆ ಪಂಚಭೂತಾತ್ಮಕವಾದ ವಸ್ತುಗಳಿಂದ ನಿರ್ಮಿತವಾದುದು.

**ಸೌಮ್ಯಂ ಪ್ರಜಾಪತೀಶಾನಾಮಹಂಕಾರಗುಣಾನ್ವಿತಂ ।**
**ಚತುಷ್ಷಷ್ಟಿಗುಣಂ ಬ್ರಾಹ್ಮ್ಯಂ ಬೌಧಮೈಶ್ವರ್ಯಮುತ್ತಮಂ ॥ ೮ ॥**

**ವಿಷ್ಣೋಃ ಪ್ರಧಾನಕಂ ಸೂಕ್ಷ್ಮಂ ಶಿವಸ್ಯಾತ್ಮಗತಂ ಮಹತ್ ।**
**ಆದಿಮಧ್ಯಾಂತರಹಿತಂ ವಿಶುದ್ಧಂ ತತ್ತ್ವಲಕ್ಷಣಂ ॥ ೯ ॥**

**ಸರ್ವಾಭಿಭಾವಕಂ ಸೂಕ್ಷ್ಮಮನೌಪಮ್ಯಂ ಪರಾತ್ಪರಂ ।**
**ಸುಸಂಪೂರ್ಣಂ ಜಗದ್ಧೇತುಃ ಪಶುಪಾಶವಿಮೋಕ್ಷಣಂ ॥ ೧೦ ॥**

**ಯೋ ಯತ್ಸ್ಥಾನಮನುಪ್ರಾಪ್ತಸ್ತಸ್ಯ ಭೋಗಸ್ತದಾತ್ಮಕಃ ।**
**ವಿಮಾನಂ ತತ್ಸಮಾನಂ ಚ ಭವೇದಿಶಪ್ರಸಾದತಃ ॥ ೧೧ ॥**

**ನಾನಾರೂಪಾಣಿ ಭಾವಾನಾಂ ದೃಶ್ಯಂತೇ ಕೋಟಿಯಸ್ತ್ವಮೂಃ ।**
**ಅಷ್ಟಾವಿಂಶತಿರೇವೋರ್ಧ್ವಸುಧೀರ್ಘಾಃ ಸುಕೃತಾತ್ಮನಾಂ ॥ ೧೨ ॥**

---

೮. ಸೋಮಸ್ಥಾನವು ಪ್ರಜಾಪತಿಗಳಿಗೂ, ಈಶರಿಗೂ, ಸೇರಿದುದು. ಅಹಂಕಾರದಿಂದ ಆ ಸ್ಥಳವು ಕೂಡಿರುವುದು. ಬ್ರಾಹ್ಮಸ್ಥಾನವು ಅರವತ್ತುನಾಲ್ಕು ಗುಣಗಳುಳ್ಳದು. ಬುದ್ಧಿ ಐಶ್ವರ್ಯಗಳಿಂದ ಕೂಡಿರುತ್ತದೆ.

೯-೧೦. ವಿಷ್ಣುಸ್ಥಾನವು ಪ್ರಧಾನನಾದುದು. ಸೂಕ್ಷ್ಮವಾದುದು, ಶಿವನದು, ಆತ್ಮಗಳಿಂದ ತುಂಬಿರುವುದು. ಮಹತ್ತಾದುದು. ಅದಕ್ಕೆ ಆದಿಮಧ್ಯಾಂತಗಳಿಲ್ಲ. ಶುದ್ಧವಾಗಿ ತತ್ವಲಕ್ಷಣಗಳಿಂದ ಕೂಡಿದೆ. ಅದು ಎಲ್ಲಕ್ಕಿಂತ ಉತ್ತಮವಾದುದು. ಸೂಕ್ಷ್ಮವಾದುದು. ಹೋಲಿಕೆಯಿಲ್ಲದುದು. ಅತ್ಯುತ್ತಮವಾದುದು. ಸಂಪೂರ್ಣವಾದುದು. ಜಗತ್ತಿಗೆ ಕಾರಣವಾದುದು. ಪ್ರಾಣಿಯ ಪಾಶನಾಶಕವಾದುದು.

೧೧. ಯಾವನು ಯಾವ ಸ್ಥಳಕ್ಕೆ ಹೋಗುತ್ತಾನೋ ಅವನ ಭೋಗವು ಆ ಲೋಕಕ್ಕೆ ಅನುಸಾರವಾಗಿರುವುದು. ವಿಮಾನವು ಈಶ್ವರನನುಗ್ರಹದಿಂದ ಎಲ್ಲರಿಗೂ ಸಾಮಾನ್ಯವಾದುದು.

೧೨. ಅಭಿಪ್ರಾಯಗಳು ಕೋಟಿ ರೀತಿಯಲ್ಲಿರುವುದರಿಂದ ಆ ಭಾವಗಳೆಲ್ಲವೂ ಅಲ್ಲಿ ಕಾಣುತ್ತವೆ. ಎಂದರೆ ನಾನಾಬಗೆಯಾದ ಅಲಂಕಾರಗಳು ಆ ವಿಮಾನಕ್ಕೆ ಮಾಡಲ್ಪಟ್ಟಿವೆ. ಇಪ್ಪತ್ತೆಂಟು ಹಸ್ತಗಳಷ್ಟು ಎತ್ತರವಿದ್ದು ಅಷ್ಟೇ ಉದ್ದವಾಗಿದೆ. ಅದು ಸುಕೃತಿಗಳಿಗೆ ಲಭಿಸುತ್ತವೆ.

**ಯೇ ಕುರ್ವಂತಿ ನಮಸ್ಕಾರಮೀಶ್ವರಸ್ಯ ಕ್ವಚಿತ್ಕ್ವಚಿತ್ ।**
**ಸಂಪರ್ಕಾತ್ಕೌತುಕಾಲ್ಲೋಭಾತ್ತದ್ವಿಮಾನಂ ಲಭಂತಿ ತೇ ॥ ೧೩ ॥**

**ನಾಮಸಂಕೀರ್ತನಂ ಚಾಪಿ ಪ್ರಸಂಗೇನ ಶಿವಸ್ಯ ಯಃ ।**
**ಕುರ್ಯಾದ್ವಾಪಿ ನಮಸ್ಕಾರಂ ನ ತಸ್ಯ ನಿಷ್ಫಲಂ ಭವೇತ್ ॥ ೧೪ ॥**

**ಇತ್ಯೇತಾ ಗತಯಃ ಪ್ರೋಕ್ತಾ ಮಹತ್ಯಃ ಶಿವಕರ್ಮಣಿ ।**
**ಕರ್ಮಣಾ ಮನಸಾ ವಾಚಾ ಪುಂಸಾಮೀಶಾನುಭಾವತಃ ॥ ೧೫ ॥**

**ಪ್ರಸಂಗೇನಾಪಿ ಯೇ ಕುರ್ಯುರಾಕಂಠಸ್ಮರಣಂ ನರಃ ।**
**ತೇ ಲಭಂತೇಽತುಲಂ ಸೌಖ್ಯಂ ಕಿಂ ಪುನಸ್ತತ್ಪರಾಯಣಾಃ ॥ ೧೬ ॥**

**ವಿಷ್ಣುಚಿಂತಾಂ ಪ್ರಕುರ್ವಂತಿ ಧ್ಯಾನೇನಾಕುಲಮಾನಸಾಃ ।**
**ತೇ ಯಾಂತಿ ಪರಮಂ ಸ್ಥಾನಂ ತದ್ವಿಷ್ಣೋಃ ಪರಮಂ ಪದಂ ॥ ೧೭ ॥**

---

೧೩. ಸಂಪರ್ಕದಿಂದಾಗಲಿ, ಹಾಸ್ಯದಿಂದಾಗಲೀ, ಆಸೆಯಿಂದಾಗಲಿ ಯಾವ ವಿಧದಿಂದಲೇ ಆಗಲಿ ಒಂದೊಂದು ಬಾರಿಯಾದರೂ ಈಶ್ವರನಿಗೆ ನಮಸ್ಕಾರಮಾಡಿದವರಿಗೆ ಈ ವಿಮಾನವು ಸಿಕ್ಕುತ್ತದೆ.

೧೪. ಮಾತಿನ ಪ್ರಸಂಗದಿಂದಲಾದರೂ ಶಿವನ ನಾಮಸ್ಮರಣೆ ಮಾಡಿದರೆ ಅಥವಾ ನಮಸ್ಕಾರಮಾಡಿದರೂ ಅದಕ್ಕೆ ಫಲವಿಲ್ಲದೇ ಹೋಗುವುದಿಲ್ಲ.

೧೫. ಮನೋವಾಕ್ಕಾಯಗಳಿಂದ ಈಶನನ್ನು ಸ್ಮರಿಸಿದವರಿಗೆ ಮಹತ್ತರವಾದ ಗತಿಯು ಪ್ರಾಪ್ತವಾಗುತ್ತದೆ.

೧೬. ಪ್ರಸಂಗದಿಂದಾದರೂ ಶಿವನಾಮವನ್ನು ಬಾಯಲ್ಲಿ ಹೇಳಿದರೆ ಅವನಿಗೆ ಅಪಾರವಾದ ಸೌಖ್ಯವುಂಟು. ಅವನಲ್ಲೇ ಆಸಕ್ತನಾದವನಿಗೆ ಹೇಳಬೇಕಾದುದಿಲ್ಲ.

೧೭. ಧ್ಯಾನದಿಂದ ವಿಷ್ಣುಚಿಂತೆಯನ್ನು ಮಾಡಿದರೆ ಅವರು ಆ ಉತ್ತಮ ಗತಿಯಾದ ವೈಕುಂಠವನ್ನು ಹೊಂದುತ್ತಾರೆ.

ಶೈವಂ ಚ ವೈಷ್ಣಂ ಲೋಕಕನೇಕರೂಪಂ ನರೋತ್ತಮ ।
ದ್ವಯೋಶ್ಚಾಪ್ಯನ್ತರಂ ನಾಸ್ತಿ ಏಕರೂಪಂ ಮಹಾತ್ಮನೋಃ ॥ ೧೮ ॥

ಶಿವಾಯ ವಿಷ್ಣುರೂಪಾಯ ವಿಷ್ಣವೇ ಶಿವರೂಪಿಣೇ ।
ಶಿವಸ್ಯ ಹೃದಯೇ ವಿಷ್ಣುರ್ವಿಷ್ಣೋಶ್ಚ ಹೃದಯೇ ಶಿವಃ । ॥ ೧೯ ॥

ಏಕಮೂರ್ತಿಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ತ್ರಯಾಣಾಮನ್ತರಂ ನಾಸ್ತಿ ಗುಣಬೇಧಾಃ ಪ್ರಕೀರ್ತಿತಾಃ ॥ ೨೦ ॥

ಶಿವಭಕ್ತೋಽಸಿ ರಾಜೇಂದ್ರ ತಥಾ ಭಾಗವತೋಽಸಿ ಚ ।
ತೇನ ದೇವಾಃ ಪ್ರಸನ್ನಾಸ್ತೇ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೧ ॥

ಸುಪ್ರೀತಾ ವರದಾ ರಾಜನ್ ಕರ್ಮಣಾ ತವ ಸುವ್ರತ ।
ಇಂದ್ರದೇಶಾತ್ಸಮಾಯಾತಃ ಸನ್ನಿಧೌ ತವ ಮಾನದ ।
ಐಂದ್ರಮೇನಂ ಪದಂ ಯಾಹಿ ಪಶ್ಚಾದ್ಬ್ರಾಹ್ಮ್ಯಂ ಮಹೇಶ್ವರಂ ॥ ೨೨ ॥

---

೧೮. ಶಿವನ ಮತ್ತು ವಿಷ್ಣುವಿನ ಲೋಕಗಳು ಒಂದೇ ರೀತಿಯಾದವುಗಳು. ಎರಡಕ್ಕೂ ಭೇದವೇನೂ ಇಲ್ಲ.

೧೯. ಶಿವನೇ ವಿಷ್ಣುವಿನ ರೂಪವು. ವಿಷ್ಣುವೇ ಶಿವನ ರೂಪವು. ಶಿವನ ಹೃದಯದಲ್ಲಿ ವಿಷ್ಣುವೂ ವಿಷ್ಣುವಿನ ಹೃದಯದಲ್ಲಿ ಶಿವನೂ ಇದ್ದಾರೆ.

೨೦. ಬ್ರಹ್ಮ, ವಿಷ್ಣು, ಮಹೇಶ್ವರರು, ಒಂದೇ ಮೂರ್ತಿಯ ಸ್ವರೂಪರು. ಗುಣಭೇದದಿಂದ ಬೇರೆಬೇರೆಯಾಗಿದಾರೆ.

೨೧. ನೀನು ಶಿವಭಕ್ತನಾಗಿದ್ದೀಯೆ. ಅಂತೆಯೇ ವಿಷ್ಣುಭಕ್ತನೂ ಆಗಿದ್ದೀಯೆ. ಆದುದರಿಂದ ಬ್ರಹ್ಮ, ವಿಷ್ಣು, ಶಿವರು ನಿನಗೆ ಪ್ರಸನ್ನರಾಗಿ ವರ ಕೊಡುತ್ತಾರೆ.

೨೨. ಇಂದ್ರನ ಅಪ್ಪಣೆಯಂತೆ ನಾನು ಬಂದಿದ್ದೇನೆ. ಮೊದಲು ಇಂದ್ರನ ದೇಶಕ್ಕೆ ಹೋಗಿ ಅನಂತರ ಶಿವನ ಪದವನ್ನು ಹೊಂದು.

ವೈಷ್ಣವಂ ಚ ಪ್ರಯಾಹಿ ತ್ವಂ ದಾಹಪ್ರಲಯವರ್ಜಿತಂ ।
ಅನೇನಾಪಿ ವಿಮಾನೇನ ದಿವ್ಯೇನ ಸರ್ವಗಾಮಿನಾ ॥ ೨೩ ॥

ದೇವಾನಾಂ ದಿವ್ಯಭೋಗಾಂಸ್ತ್ವಂ ಭುಂಕ್ಷ್ವ ರಾಜನ್ಮನೋನುಗಾನ್ ।
ಸಮಾರುಹ್ಯ ವಿಮಾನಂ ತ್ವಂ ಪುಷ್ಪಕಂ ಸುಖಗಾಮಿನಂ ॥ ೨೪ ॥

॥ ಸುಕರ್ಮೋವಾಚ ॥

ಏವಮುಕ್ತ್ವಾ ದ್ವಿಜಶ್ರೇಷ್ಠ ರಾಜಾನಂ ಧರ್ಮವತ್ಸಲಂ ।
ಯಯಾತಿಂ ಮಾತಲೀ ರಾಜ್ಞಾ ಪೂಜಿತಸ್ಸಾದರಂ ತದಾ ॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಮಾತಾಪಿತೃತೀರ್ಥಕಥನೇ ಏಕಸಪ್ತತಿತಮೋಽಧ್ಯಾಯಃ



---

೨೩. ಎಲ್ಲಾ ಕಡೆಗೂ ಹೋಗುವ ಈ ವಿಮಾನದಿಂದಲೇ ಆಶಾರಹಿತವಾದ ವೈಷ್ಣವಲೋಕವನ್ನು ಹೊಂದು.

೨೪. ಸುಖವಾಗಿ ಸಂಚಾರಮಾಡುವ ಈ ವಿಮಾನದಲ್ಲಿ ಕುಳಿತು ದೇವತೆಗಳ ದಿವ್ಯಭೋಗಗಳನ್ನು ಅನುಭವಿಸು ಎಂದನು.

೨೫. ಸುಕರ್ಮನು ಹೇಳಿದನು:—ಹೀಗೆ ಧರ್ಮಿಷ್ಠನಾದ ರಾಜನಿಗೆ ಮಾತಲಿಯು ಹೇಳಿದನು. ರಾಜನೂ ಕೂಡ ಮಾತಲಿಯನ್ನು ಪೂಜೆಯಿಂದ ಗೌರವಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವಿಸಪ್ತತಿತಮೋಽಧ್ಯಾಯಃ

॥ ಪಿಪ್ಪಲ ಉವಾಚ ॥

ಮಾತಲೇಶ್ಚ ವಚಶ್ಶ್ರುತ್ವಾ ಸ ರಾಜಾ ನಹುಷಾತ್ಮಜಃ ।
ಕಿಂ ಚಕಾರ ಮಹಾಪ್ರಾಜ್ಞಸ್ತನ್ಮೇ ವಿಸ್ತರತೋ ವದ ॥ ೧ ॥

ಸರ್ವಪುಣ್ಯಮಯೀ ಪುಣ್ಯಾ ಕಥೇಯಂ ಪಾಪನಾಶಿನೀ ।
ಶ್ರೋತುಮಿಚ್ಛಾಮ್ಯಹಂ ಪ್ರಾಜ್ಞ ನೈವ ತೃಪ್ತೋಽಸ್ಮಿ ಸರ್ವದಾ ॥ ೨ ॥

॥ ಸುಕರ್ಮೋವಾಚ ॥

ಸರ್ವಧರ್ಮಭೃತಾಂ ಶ್ರೇಷ್ಠೋ ಯಯಾತಿರ್ನೃಪಸತ್ತಮಃ ।
ತಮುವಾಚ ಗತಂ ದೂತಂ ಮಾತಲಿಂ ಚೇಂದ್ರಸಾರಥಿಂ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯವು

೧. ಪಿಪ್ಪಲನು ಕೇಳಿದನು:—ಮಾತಲಿಯ ಮಾತನ್ನು ಕೇಳಿ ಆ ಮಹಾರಾಜನು ಏನು ಮಾಡಿದನು? ಎಂಬುದನ್ನು ನನಗೆ ವಿಸ್ತಾರವಾಗಿ ತಿಳಿಸು.

೨. ಈ ಕಥೆಯು ಮಹಾಪುಣ್ಯಪ್ರದವಾದುದು. ಪಾಪನಾಶಕವಾದುದು. ಅದನ್ನು ಕೇಳಲು ಅಪೇಕ್ಷಿಸುತ್ತೇನೆ. ಅದರಿಂದ ತೃಪ್ತಿಯೇ ಉಂಟಾಗುವುದಿಲ್ಲ. ಎಂದನು.

೩-೪. ಸುಕರ್ಮನು ಹೇಳಿದನು:—ಧರ್ಮಿಷ್ಠನಾದ ಆ ನಹುಷನ ಮಗನು ಮಾತಲಿಯನ್ನು ಕುರಿತು ಈ ಶರೀರವನ್ನು ನಾನು ಬಿಡುವುದೇ ಇಲ್ಲ. ಇಂದ್ರನ

॥ ಯಯಾತಿರುವಾಚ ॥

ಶರೀರಂ ನೈವ ತ್ಯಕ್ಷ್ಯಾಮಿ ನ ಗಮಿಷ್ಯೇ ಪುರಂದರಂ ।
ಶರೀರೇಣ ವಿನಾ ದೂತ ಪಾರ್ಥಿವೇನ ನ ಸಂಶಯಃ ॥ ೪ ॥

ಯದ್ಯಪೀಹ ಮಹಾದೋಷಾಃ ಕಾಯಸ್ಯೈವಂ ಪ್ರಕೀರ್ತಿತಾಃ ।
ಪೂರ್ವಂ ಚಾಪಿ ತ್ವಯಾ ಮೇಽದ್ಯ ಸರ್ವಮುಕ್ತಂ ಗುಣಾಗುಣಂ ॥ ೫ ॥

ನಾಹಂ ತ್ಯಕ್ತ್ವಾ ಶರೀರಂ ವೈ ಗಮಿಷ್ಯೇ ತ್ರಿದಿವಂ ಪುನಃ ।
ಇತ್ಯಾಚಕ್ಷ್ವ ಇತೋ ಗತ್ವಾ ದೇವದೇವಂ ಪುರಂದರಂ ॥ ೬ ॥

ಏಕಾಕಿನಾಪಿ ಜೀವೇನ ಕಾಯೇನಾಪಿ ಮಹಾಮತೇ ।
ನೈವ ಸಿದ್ಧಿಂ ಪ್ರಯಾತ್ಯೇವ ಸಾಂಸಾರಕೀಮಿಹೈವ ಹಿ ॥ ೭ ॥

ನೈವ ಪ್ರಾಣಂ ವಿನಾ ಕಾಯೋ ಜೀವಃ ಕಾಯಂ ವಿನಾ ನ ಹಿ
ಉಭಯೋಶ್ಚಾಪಿ ಮಿತ್ರತ್ವಂ ನಯಿಷ್ಯೇ ನಾಶಮೇವ ನ ॥ ೮ ॥

---

ಬಳಿಗೂ ಹೋಗುವುದೇ ಇಲ್ಲ. ಈ ಪಾರ್ಥಿವಶರೀರವನ್ನ ತ್ಯಜಿಸಿ ಬೇರೆ ಶರೀರದಿಂದ ಖಂಡಿತವಾಗಿಯೂ ಹೋಗುವುದೇ ಇಲ್ಲ.

೫. ನೀನು ದೇಹದಲ್ಲಿ ಮಹಾದೋಷಗಳಿವೆಯೆಂದು ಹೇಳಿದೆ. ಹಿಂದೆಯೂ ಕೂಡ ದೇಹದ ಗುಣ, ಮತ್ತು ಅವಗುಣಗಳನ್ನು ಹೇಳಿದ್ದೀಯೆ.

೬. ನಾನು ಈ ದೇಹವನ್ನು ಬಿಟ್ಟು ಸ್ವರ್ಗಕ್ಕೆ ಬರುವುದಿಲ್ಲ, ಎಂದು ದೇವ ದೇವನಾದ ಇಂದ್ರನಿಗೆ ಅರಿಕೆಮಾಡು.

೭. ಜೀವ ಒಂದೇ ಆಗಲಿ, ದೇಹ ಒಂದೇ ಆಗಲಿ, ಬೇರೆಬೇರೆಯಾಗಿ ಸಂಸಾರ ದಲ್ಲಿ ಸಿದ್ಧಿಯನ್ನು ಹೊಂದುವುದಿಲ್ಲ. ಎಂದರೆ ಜೀವವಿದ್ದು ದೇಹವಿಲ್ಲದಿದ್ದರೂ ಅಥವಾ ದೇಹವಿದ್ದು ಜೀವವಿಲ್ಲದಿದ್ದರೂ ಅದರಿಂದ ಯಾವ ಸಿದ್ಧಿಯೂ ಉಂಟಾಗುವುದಿಲ್ಲ.

೮. ಪ್ರಾಣಬಿಟ್ಟು ದೇಹವಿರಲಾರದು. ದೇಹವನ್ನು ಬಿಟ್ಟು ಪ್ರಾಣವಿರ ಲಾರದು. ಎರಡಕ್ಕೂ ಮಿತ್ರತ್ವವನ್ನುಂಟುಮಾಡುತ್ತೇನೆ. ನಾಶವನ್ನು ಹೊಂದಿಸಲಾರೆ.

ಯಸ್ಯ ಪ್ರಸಾದಭಾವಾದ್ವೈ ಸುಖಮಶ್ನಾತಿ ಕೇವಲಂ ।
ಶರೀರಸ್ಯಾಪ್ಯಯಂ ಪ್ರಾಣೋ ಭೋಗಾನಸ್ಯಾನ್ಮನೋಽನುಗಾ॥ ॥ ೯ ॥

ಏನಂ ತ್ಯಕ್ತ್ವಾ ಸ್ವರ್ಗಭೋಗಂ ಭೋಕ್ಷ್ಯೇಽಹಂ ದೇವದೂತ ನ ।
ಸಂಭವಂತಿ ಮಹಾದುಷ್ಟಾ ವ್ಯಾಧಯೋ ದುಃಖದಾಯಕಾಃ ॥ ೧೦ ॥

ಮಾತಲೇ ಕಿಲ್ಬಿಷಾಚ್ಚೈವ ಜರಾದೋಷಾದಿ ಜಾಯತೇ ।
ಪಶ್ಯ ಮೇ ಪುಣ್ಯಸಂಯುಕ್ತಂ ಕಾಯಂ ಷೋಡಶವಾರ್ಷಿಕಂ ॥ ೧೧ ॥

ಜನ್ಮಪ್ರಭೃತಿ ಮೇ ಕಾಯಃ ಶತಾರ್ಧಂ ಚ ಪ್ರಯಾತಿ ಹಿ ।
ತಥಾಪಿ ನೂತನೋ ಭಾವಃ ಕಾಯಸ್ಯಾಪಿ ಪ್ರಜಾಯತೇ ।
ಮಮ ಕಾಲೋ ಗತೋ ದೂತ ಅಬ್ದಲಕ್ಷಮನುತ್ತಮಂ ॥ ೧೨ ॥

ಯಥಾ ಷೋಡಶವರ್ಷಸ್ಯ ಕಾಯಃ ಪುಂಸಃ ಪ್ರಶೋಭತೇ ।
ತಥಾ ಮೇ ಶೋಭತೇ ದೇಹೋ ಬಲವೀರ್ಯಸಮನ್ವಿತಃ ॥ ೧೩ ॥

---

೯. ಈ ಪ್ರಾಣವು ಯಾವ ದೇಹದ ಅನುಗ್ರಹದಿಂದ ಸುಖವನ್ನು ಮಾತ್ರ ಅನುಭವಿಸುತ್ತದೆಯೋ ಅಂತಹ ಶರೀರವನ್ನು ಬಿಡಲಾರೆ.

೧೦. ಎಲೈ ದೇವದೂತನೇ, ಈ ದೇಹವನ್ನು ಬಿಟ್ಟು ಸ್ವರ್ಗಭೋಗವನ್ನನುಭವಿಸಲು ಇಷ್ಟಪಡುವುದಿಲ್ಲ. ಹಾಗೆ ಮಾಡಿದರೆ ದುಃಖವನ್ನು ಕೊಡುವ ಸರ್ವ ರೋಗಗಳೂ ಉಂಟಾಗುತ್ತದೆ.

೧೧. ಎಲೈ ಮಾತಲಿಯೇ, ಪಾಪದಿಂದ ಮುಪ್ಪು, ಇತರ ದೋಷಗಳೂ ಉಂಟಾಗುತ್ತವೆ. ಪುಣ್ಯದಿಂದ ಕೂಡಿರುವ ನನ್ನ ಹದಿನಾರು ವರ್ಷದ ಶರೀರವನ್ನು ನೋಡು.

೧೨. ನಾನು ಹುಟ್ಟಿದ ಮೊದಲುಗೊಂಡು ದೇಹವು ಐವತ್ತುಸಾರಿ ಬದಲಾವಣೆ ಹೊಂದಿತು. ಆದರೂ ನನ್ನ ದೇಹಕ್ಕೆ ಆಗಾಗ್ಗೆ ಹೊಸತನವು ಬರುತ್ತಲೇ ಇದೆ. ನನ್ನ ವಯಸ್ಸು ಈಗ ಒಂದು ಲಕ್ಷವರ್ಷಗಳು ಕಳೆದಿವೆ.

೧೩. ಹದಿನಾರು ವರ್ಷದವನಿಗಿರುವ ದೇಹದಂತೆ ನನ್ನ ದೇಹವೂ ಕೂಡ ಬಲಕಾಂತಿಗಳಿಂದ ಕೂಡಿದೆ.

ನೈವ ಗ್ಲಾನಿರ್ನ ಮೇ ಹಾನಿರ್ನ ಭ್ರಮೋವ್ಯಾಧಯೋ ನ ಚ ।
ಮಾತಲೇ ಮಮ ಕಾಯೋ ಹಿ ಧರ್ಮೋತ್ಸಾಹೇನ ವರ್ಧತೇ ॥ ೧೪ ॥

ಸರ್ವಾಮೃತಮಯಂ ದಿವ್ಯಮೌಷಧಂ ಪರಮೌಷಧಂ ।
ಪಾಪವ್ಯಾಧಿಪ್ರಣಾಶಾರ್ಥಂ ಧರ್ಮಾರ್ಥಂ ಹಿ ಕೃತಂ ಪುರಾ ॥ ೧೫ ॥

ತೇನ ಮೇ ಶೋಧಿತಃ ಕಾಯೋ ಗದದೋಷೋ ನ ಜಾಯತೇ ।
ಹೃಷೀಕೇಶಸ್ಯ ದೇವಸ್ಯ ನಾಮೋಚ್ಚಾರಣಮುತ್ತಮಂ ॥ ೧೬ ॥

ಏತದ್ರಸಾಯನಂ ದೂತ ನಿತ್ಯಮೇವ ಕರೋಮ್ಯಹಂ ।
ತೇನ ಮೇ ವ್ಯಾಧಯೋ ದೋಷಾಃ ಪಾಪಾದ್ಯಾಃ ಪ್ರಳಯಂ ಗತಾಃ ॥ ೧೭ ॥

ವಿದ್ಯಮಾನೇ ಹಿ ಸಂಸಾರೇ ಕೃಷ್ಣನಾಮ್ನಿ ಮಹೌಷಧೇ ।
ಮಾನವಾ ಮರಣಂ ಯಾನ್ತಿ ಪಾಪವ್ಯಾಧಿಪ್ರಪೀಡಿತಾಃ ।
ನ ಪಿಬಂತಿ ಮಹಾಮೂಢಾಃ ಕೃಷ್ಣನಾಮರಸಾಯನಂ ॥ ೧೮ ॥

---

೧೪. ನನಗೆ, ಕಂದುವಿಕೆ, ಕುಂದುವಿಕೆ, ಭ್ರಾಂತಿ ರೋಗಗಳೊಂದೂ ಇಲ್ಲ. ಎಲೈ ಮಾತಲಿಯೇ, ನನ್ನ ದೇಹವು ಧರ್ಮದಲ್ಲಿರುವ ಉತ್ಸಾಹದಿಂದ ಬೆಳೆಯುತ್ತಿದೆ.

೧೫. ಈ ದೇಹದಿಂದ ಧರ್ಮವನ್ನು ಗಳಿಸಬೇಕೆಂದು ಅಮೃತರೂಪವಾದ ಔಷಧಗಳನ್ನು ಸೇವಿಸಿ ಪಾಪ, ರೋಗಗಳನ್ನು ನಾಶಮಾಡಿಕೊಂಡು ಧರ್ಮಕ್ಕೋಸ್ಕರ ಶರೀರಸಂರಕ್ಷಣೆ ಮಾಡುತ್ತಿರುತ್ತೇನೆ.

೧೬. ಈ ರೀತಿಯಾಗಿ ದೇಹವನ್ನು ಶೋಧಿಸಿರುವುದರಿಂದ ರೋಗವೆಂಬ ದೋಷವೇ ನನಗಿಲ್ಲ. ಅಲ್ಲದೆ ಉತ್ತಮವಾದ ವಿಷ್ಣುನಾಮವನ್ನು ಸ್ಮರಿಸುತ್ತಿರುವೆನು.

೧೭. ಈ ವಿಷ್ಣುನಾಮಸ್ಮರಣರೂಪವಾದ ರಸಾಯನವನ್ನು ನಿತ್ಯವೂ ಸೇವಿಸುತ್ತಿರುವೆನು. ಅದರಿಂದ ನನ್ನ ರೋಗ ಪಾಪ ಮುಂತಾದ ದೋಷಗಳೆಲ್ಲವೂ ಹೋಗುತ್ತವೆ.

೧೮. ಸಂಸಾರದಲ್ಲಿ ಕೃಷ್ಣನಾಮ ಸ್ಮರಣವೆಂಬ ಮಹೌಷಧವಿರುವಾಗ ಮಾನವರು ಪಾಪದಿಂದಲೂ, ವ್ಯಾಧಿಯಿಂದಲೂ, ಸಾಯುತ್ತಾರಲ್ಲ? ಈ ಕೃಷ್ಣನಾಮ ಸ್ಮರಣವೆಂಬ ಮಹೌಷಧವನ್ನು ಕುಡಿಯುವುದಿಲ್ಲವಲ್ಲ? ಇದಲ್ಲವೇ ಆಶ್ಚರ್ಯವು?

ತೇನ ಧ್ಯಾನೇನ ಭಾವೇನ ಪೂಜಾಭಾವೇನ ಮಾತಲೇ ।
ಸತ್ಯೇನ ದಾನಪುಣ್ಯೇನ ಮಮಕಾಯೋ ನಿರಾಮಯಃ ॥ ೧೯ ॥

ಪಾಪಾಚ್ಚ ಆಮಯಾತ್ಪೀಡಾಃ ಪ್ರಭವಂತಿ ಶರೀರಿಣಾಂ ।
ಪೀಡಾಭ್ಯೋ ಜಾಯತೇ ಮೃತ್ಯುಃ ಪ್ರಾಣಿನಾಂ ನಾತ್ರ ಸಂಶಯಃ ॥ ೨೦ ॥

ತಸ್ಮಾದ್ಧರ್ಮಃ ಪ್ರಕರ್ತವ್ಯಃ ಪುಣ್ಯಂ ಸತ್ಯಾಶ್ರಯಂ ನರೈಃ ।
ಪಂಚಭೂತಾತ್ಮಕಃ ಕಾಯಃ ಶಿರಾಸಂಧಿಷು ಜರ್ಜರಃ ॥ ೨೧ ॥

ಏವಂ ಸಂಧೀಕೃತೋ ಮರ್ತ್ಯೋ ಹೇಮಕಾರೇವ ಕಂಕಣಂ ।
ತತ್ರ ಭಾವೋ ಮಹಾನಗ್ನಿರ್ಧಾತುರೇವ ಕಳೇಬರಂ ॥ ೨೨ ॥

ಶತಖಂಡಮಯೋ ವಿಪ್ರಯೋಽನುಸಂಧತಿ ಬುದ್ಧಿಮಾನ್ ।
ಹರೇರ್ನಾಮ್ನಾ ಚ ದಿವ್ಯೇನ ಸೌಭಾಗ್ಯೇನಾಪಿ ಪಿಪ್ಪಲ ॥ ೨೩ ॥

---

೧೯. ಆ ವಿಷ್ಣುವಿನ ಧ್ಯಾನದಿಂದಲೂ, ಪೂಜೆಯಿಂದಲೂ, ಸತ್ಯದಿಂದಲೂ, ಪುಣ್ಯದಿಂದಲೂ, ನನ್ನ ದೇಹವು ರೋಗವಿಲ್ಲದೇ ಇರುವುದು.

೨೦. ದೇಹಿಗಳಿಗೆ ಪಾಪದಿಂದಲೂ ರೋಗದಿಂದಲೂ, ಪೀಡೆಯುಂಟಾಗುತ್ತದೆ. ಆ ರೀತಿಯಿಂದ ಸಾಯುತ್ತಾರೆ ಸಂಶಯವಿಲ್ಲ.

೨೧. ಆದುದರಿಂದ ಪುಣ್ಯಕ್ಕೂ ಸತ್ಯಕ್ಕೂ ಆಶ್ರಯವಾದ ಧರ್ಮವನ್ನು ಮಾಡಬೇಕು. ಪಾಂಚಭೌತಿಕ ಶರೀರವು ನರ, ಕೀಲಗಳಲ್ಲಿ ಕ್ರಮಕ್ರಮವಾಗಿ ಶಿಥಿಲವಾಗಿ ನಿಸ್ಸತ್ತ್ವವಾಗುವುದು.

೨೨. ಅಕ್ಕಸಾಲಿಗನು ಕೈ ಬಳೆಯನ್ನು ಮಾಡುವಂತೆ ಮನುಜನು ಪಂಚಭೂತಗಳಿಂದ ಕೀಲುಕೀಲಾಗಿ ಮಾಡಲ್ಪಟ್ಟಿದ್ದಾನೆ. ಅಲ್ಲಿ ಬೆಂಕಿಯೂ ಧಾತುಗಳೂ ಕೂಡಿವೆ. ಅದೇ ದೇಹವು,

೨೩. ಆದುದರಿಂದ ಬುದ್ಧಿವಂತನು ಹರಿನಾಮಸ್ಮರಣೆಯಿಂದ ಅನೇಕ ಭಾಗವಾಗಿರುವ ಈ ದೇಹವನ್ನು ಸೇರಿಸಬೇಕು.

ಪಂಚಾತ್ಮಕಾ ಹಿ ಯೇ ಖಂಡಾಃ ಶತಸಂಧಿಷು ಜರ್ಜರಾಃ ।
ತೇನಾನುಸಂಧಿತಾಸ್ಸರ್ವೇ ಕಾಯಧಾತುಸಮಾ ಅಭವನ್ ॥ ೨೪ ॥

ಹರಿಪೂಜೋಪಚಾರೇಣ ಧ್ಯಾನೇನ ನಿಯಮೇನ ವಾ ।
ಸತ್ಯಭಾವೇನ ದಾನೇನ ಕಾಯಶ್ಶುದ್ಧೋ ವಿಜಾಯತೇ ॥ ೨೫ ॥

ದೋಷಾ ನಶ್ಯಂತಿ ಕಾಯಸ್ಯ ವ್ಯಾಧಯಶ್ಶೃಣು ಮಾತಲೇ ।
ಬಾಹ್ಯಾಭ್ಯಂತರಶೌಚಂ ಹಿ ದುರ್ಗನ್ಧಿರ್ನೈವ ಜಾಯತೇ ॥ ೨೬ ॥

ಶುಚಿಸ್ತತೋ ಭವೇತ್ಸೂತ ಪ್ರಸಾದಾತ್ತಸ್ಯ ಚಕ್ರಿಣಃ ।
ನಾಹಂ ಸ್ವರ್ಗಂ ಗಮಿಷ್ಯಾಮಿ ಸ್ವರ್ಗಮತ್ರ ಕರೋಮ್ಯಹಂ ।
ತಪಸಾ ಚೈವ ಭಾವೇನ ಸ್ವಧರ್ಮೇಣ ಮಹೀತಲೇ ॥ ೨೭ ॥

ಸ್ವರ್ಗರೂಪಂ ಕರಿಷ್ಯಾಮಿ ಪ್ರಸಾದಾತ್ತಸ್ಯ ಚಕ್ರಿಣಃ ।
ಏವಂ ಜ್ಞಾತ್ವಾ ಪ್ರಯಾಹಿ ತ್ವಂ ಕಥಯಸ್ವ ಪುರಂದರಂ ॥ ೨೮ ॥

---

೨೪. ಈ ಪೃಥಿವ್ಯಾದಿರೂಪವಾಗಿರುವ ಪಂಚಖಂಡಗಳಿಂದ ಕೂಡಿದ ಈ ದೇಹವು ನೂರು ಕೀಲುಗಳಿಂದ ಬೇರೆಬೇರೆಯಾಗಿದೆ. ಬುದ್ಧಿವಂತನು ಅವನ್ನು ಸೇರಿಸಿದರೆ ಅದೇ ದೇಹವಾಗಿ ಅನಂತರ ಕಾಯಧಾತುವೆನಿಸುವುದು.

೨೫. ಹರಿಯ ಪೂಜೆಯಿಂದಲೂ, ಧ್ಯಾನದಿಂದಲೂ, ನಿಯಮದಿಂದಲೂ, ಸತ್ಯದಿಂದಲೂ, ದಾನದಿಂದಲೂ, ದೇಹವು ಶುದ್ಧವಾಗುತ್ತದೆ.

೨೬. ಹಾಗೆ ಮಾಡಿದರೆ ದೇಹದಲ್ಲಿರುವ ವ್ಯಾಧಿಗಳೂ, ದೋಷಗಳೂ ನಾಶವಾಗಿ ಒಳಗೂ ಹೊರಗೂ, ಶುಚಿಯಾಗುತ್ತಾನೆ. ದುರ್ಗಂಧವುಂಟಾಗುವುದಿಲ್ಲ. ಅನಂತರ ವಿಷ್ಣುವಿನ ಪ್ರಸಾದದಿಂದ ಶುಚಿಯಾಗುತ್ತಾನೆ.

೨೭-೨೮. ನಾನು ಸ್ವರ್ಗಕ್ಕೆ ಹೋಗುವುದೂ ಇಲ್ಲ. ಈ ಭೂತಳವನ್ನೇ ತಪಸ್ಸು, ಧರ್ಮಗಳಿಂದ ಸ್ವರ್ಗವನ್ನಾಗಿಮಾಡುತ್ತೇನೆ. ಆ ವಿಷ್ಣುವಿನ ಅನುಗ್ರಹದಿಂದ ಈ ಭೂಮಿಯನ್ನೇ ಸ್ವರ್ಗಸದೃಶವನ್ನಾಗಿ ಮಾಡುತ್ತೇನೆ. ಇದನ್ನು ತಿಳಿದುಕೊಂಡು ಇಂದ್ರನ ಬಳಿಗೆ ಹೋಗಿ ಅವನಿಗೆ ಇದೆಲ್ಲವನ್ನೂ ಹೇಳು, ಎಂದನು.

॥ ಸುಕರ್ಮೋವಾಚ ॥

ಇತ್ಥಂ ಶ್ರುತ್ವಾ ಸ ವೈ ದೂತೋ ನೃಪತೇಃ ಪರಿಭಾಷಿತಂ ।
ಆಶೀರ್ಭಿರಭಿನಂದ್ಯಾಥ ಆಮಂತ್ರ್ಯ ನೃಪತಿಂ ಗತಃ ।
ಸರ್ವಂ ನಿವೇದಯಾಮಾಸ ಸ ಇಂದ್ರಾಯ ಮಹಾತ್ಮನೇ ॥ ೨೯ ॥

ಸಮಾಕರ್ಣ್ಯ ಸಹಸ್ರಾಕ್ಷೋ ಯಯಾತ್ತೇಸ್ತು ಮಹಾತ್ಮನಃ ।
ತದರ್ಥಂ ಚಿಂತಯಾಮಾಸ ಸಮಾನೇತುಂ ದಿವಂ ಪ್ರತಿ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಮಾತಾಪಿತೃತೀರ್ಥಕಥನೇ ದ್ವಿಸಪ್ತತಿತಮೋಽಧ್ಯಾಯಃ



೨೯. ಸುಕರ್ಮನು ಹೇಳಿದನು:—ಇದನ್ನು ಕೇಳಿ ಮಾತಲಿಯು ರಾಜನಿಗೆ ಅನೇಕ ಆಶೀರ್ವಾದಗಳನ್ನು ಹೇಳಿ ಹೊರಟುಹೋದನು. ಇದೆಲ್ಲವನ್ನೂ ಮಹಾತ್ಮನಾದ ಇಂದ್ರನಿಗೆ ಅರಿಕೆಮಾಡಿದನು.

೩೦. ಯಯಾತಿಯು ಹೇಳಿಕಳುಹಿಸಿದ ಈ ಮಾತುಗಳನ್ನು ಕೇಳಿ ಇಂದ್ರನು ಅವನನ್ನು ಹೇಗಾದರೂ ಮಾಡಿ ಸ್ವರ್ಗಕ್ಕೆ ಕರೆತರಲೇಬೇಕೆಂದು ಯೋಚಿಸುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರಿಸಪ್ತತಿತಮೋಽಧ್ಯಾಯಃ

॥ ಪಿಪ್ಪಲ ಉವಾಚ ॥

ಗತೇ ತಸ್ಮಿನ್ ಮಹಾಭಾಗೇ ದೂತ ಇಂದ್ರಸ್ಯ ವೈ ಪುನಃ ।
ಕಿಂ ಚಕಾರ ಸ ಧರ್ಮಾತ್ಮಾ ಯಯಾತಿರ್ನಹುಷಾತ್ಮಜಃ ॥ ೧ ॥

॥ ಸುಕರ್ಮೋವಾಚ ॥

ತಸ್ಮಿನ್ಗತೇ ದೇವವರಸ್ಯ ದೂತೇ ।
ಸ ಚಿಂತಯಾಮಾಸ ನರೇಂದ್ರಸೂನುಃ ।
ಆಹೂಯ ದೂತಪ್ರವರಾನ್ಸ ಸತ್ವರಂ ।
ಧರ್ಮಾರ್ಥಯುಕ್ತಂ ಪರಮಾದಿದೇಶ ॥ ೨ ॥

---

## ಎಪ್ಪತ್ತಮೂರನೆಯ ಅಧ್ಯಾಯವು

೧. ಪಿಪ್ಪಲನು ಪುನಃ ಕೇಳಿದನು:—ಇಂದ್ರನ ದೂತನು ಹೊರಟುಹೋದ ಮೇಲೆ ಯಯಾತಿಯು ಏನು ಮಾಡಿದನು? ಎನ್ನಲು,

೨. ಸುಕರ್ಮನು ಹೇಳಿದನು:—ಆ ಮಾತಲಿಯು ಹೊರಟುಹೋದಮೇಲೆ ಆ ಯಯಾತಿಯು ಹಾಗೆಯೇ ಸ್ವಲ್ಪಹೊತ್ತು ಯೋಚಿಸಿ, ಉತ್ತಮರಾದ ದೂತರನ್ನು ಕರೆಸಿ ಈ ರೀತಿ ಆಜ್ಞೆಮಾಡಿದನು.

ಗಚ್ಛನ್ತು ದೂತಾ ಮಮ ಶಾಸನೇನ
ಸ್ವೀಯೇಷು ದೇಶೇಷು ಪರೇಷು ಚೈವ ।
ಶೃಣ್ವಂತಿ ಸರ್ವೇಽಪಿ ತಥೈವ ಲೋಕಾ
ಜುಷಂತು ವಾಕ್ಯಂ ಮಮ ಧರ್ಮಯುಕ್ತಂ ॥ ೩ ॥

ವ್ರಜನ್ತು ಲೋಕಾಃ ಸುಪಥಂ ಹರೇಶ್ಚ
ಭಾವೈಸ್ಸುಪುಣ್ಯೈರನ್ಯತೋಽಪಮಾನ್ಯೈಃ ।
ಸುಕರ್ಮಭಿಶ್ಚಾಪಿ ಚ ಜ್ಞಾನಧ್ಯಾನೈ
ಸ್ತಪೋಭಿರಿತ್ಥಂ ಸತತಂ ನಿಯುಕ್ತಾಃ ।
ಯಜ್ಞೈಶ್ಚ ದಾನೈರ್ಮಧುಸೂದನೈಕ-
ಮರ್ಚನ್ತು ಲೋಕಾ ವಿಷಯಾನ್ವಿಹಾಯ ॥ ೪ ॥

ಸರ್ವತ್ರ ಪಶ್ಯನ್ತು ಮುರಾರಿಮೇಕಂ
ಶುಷ್ಕೇಷು ಚಾರ್ದ್ರೇಷ್ವಪಿ ಸ್ಥಾವರೇಷು ।
ಅಭ್ರೇಷು ಭೂಮೌ ಸಚರಾಚರೇಷು
ಸ್ವೀಯೇಷು ಕಾಯೇಷ್ವಪಿ ಜೀವರೂಪಂ ॥ ೫ ॥

---

೩. ಎಲೈ! ದೂತರಿರಾ, ನನ್ನ ಅಪ್ಪಣೆಯ ಪ್ರಕಾರ ನನ್ನ ಮತ್ತು ಪರರ ದೇಶಕ್ಕೆಲ್ಲಾ ಹೋಗಿ ನಾನು ಹೇಳಿದ ಧರ್ಮಯುಕ್ತವಾದ ಮಾತನ್ನು ಜನಗಳಿಗೆ ತಿಳಿಯಹೇಳಿ, ಅವರನ್ನು ಧರ್ಮದಲ್ಲಿ ಪ್ರವೃತ್ತರಾಗುವಂತೆ ಮಾಡಬೇಕು.

೪. ಜನರೆಲ್ಲರೂ, ಜ್ಞಾನ, ಧ್ಯಾನ, ತಪಸ್ಸುಗಳಿಂದ ಕೂಡಿ ಸದ್ಭಾವಗಳಿಂದ ಹರಿಯನ್ನು ಅರ್ಚಿಸಬೇಕು. ಮಧುಸೂಧನನಿಗೆ ಪ್ರಿಯವಾದ ಯಜ್ಞಯಾಗಾದಿಗಳನ್ನು ಮಾಡಬೇಕು.

೫. ಹಸಿದು, ಒಣಗಿದುದು, ಚರಾಚರಗಳು, ಆಕಾಶ, ಭೂಮಿ, ತಮ್ಮ ಶರೀರ, ಒಟ್ಟಿನಲ್ಲಿ ಎಲ್ಲೆಲ್ಲೂ ಹರಿಯನ್ನೇ ಭಾವಿಸಿ ನೋಡಬೇಕು. ಅವನನ್ನೇ ಭಜಿಸಬೇಕು.

ದೇವಂ ತಮುದ್ದಿಶ್ಯ ದದನ್ತು ದಾನಾ-
ನ್ಯಾತಿಥ್ಯಭಾವೈಃ ಪರಿಜ್ಞಾನಕೈಶ್ಚ ।
ನಾರಾಯಣಂ ದೇವವರಂ ಯಜಧ್ವಂ
ದೋಷೈರ್ವಿಮುಕ್ತಾ ಅಚಿರಾದ್ಭವಿಷ್ಯಥ ॥ ೬ ॥

ಯೋ ಮಾಮಕಂ ವಾಕ್ಯಮಿಹೈವ ಮಾನವೋ
ಲೋಭಾದ್ವಿಮೋಹಾದಪಿ ನೈವ ಕಾರಯೇತ್ ।
ಸ ಶಾಸ್ಯತಾಂ ಯಾತಿ ಸುನಿಶ್ಚಿತೋ ಧ್ರುವಂ
ಮಮಾಪಿ ಚೌರೋ ಹಿ ಯಥಾ ನಿಕೃಷ್ಟಃ ॥ ೭ ॥

ಆಕರ್ಣ್ಯ ವಾಕ್ಯಂ ನೃಪತೇಶ್ಚ ದೂತಾಃ
ಸಂಹೃಷ್ಟಭಾವಾಃ ಸಕಲಾಂ ಚ ಪೃಥ್ವೀಂ ।
ಸುಶ್ರಾವಯನ್ತಿ ಸ್ಮ ನೃಪಪ್ರಣೀತ-
ಮಾದೇಶಭಾವಂ ಸಕಲಂ ಪ್ರಜಾಸು ॥ ೮ ॥

ವಿಪ್ರಾದಿ ಮರ್ತ್ಯಾ ಅಮೃತಂ ಸುಪುಣ್ಯ-
ಮಾನೀತಮೇವಂ ಭುವನೇ ಚ ರಾಜ್ಞಾ ।

---

೬. ಆ ಸ್ವಾಮಿಯಾದ ನಾರಾಯಣನನ್ನೇ ಕುರಿತು ದಾನ, ಆತಿಥ್ಯ, ಮಾಡಬೇಕು. ಆ ನಾರಾಯಣನನ್ನು ಪೂಜಿಸಿದರೆ ನೀವು ದೋಷಗಳಿಂದ ಸ್ವಲ್ಪಕಾಲದಲ್ಲೇ ಮುಕ್ತರಾಗಿ ಶ್ರೇಯಸ್ಸನ್ನು ಪಡೆಯುವಿರಿ.

೭. ಮತ್ತೊಂದರಲ್ಲಿರುವ ಆಸೆಯಿಂದಾಗಲಿ, ಅಜ್ಞಾನದಿಂದಾಗಲಿ ಯಾವನು ನನ್ನ ಅಪ್ಪಣೆಯನ್ನು ನಡೆಸುವುದಿಲ್ಲವೋ ಅವನನ್ನು, ಕಳ್ಳರನ್ನು ಶಿಕ್ಷಿಸುವಂತೆ ಶಿಕ್ಷಿಸುತ್ತೇನೆ. ಹೀಗೆಂದು ಜನರಿಗೆ ತಿಳಿಸಬೇಕೆಂದು ದೂತರಿಗೆ ಆಜ್ಞೆಮಾಡಿ ಅವರನ್ನು ನಾನಾ ದಿಕ್ಕುಗಳಿಗೆ ಕಳುಹಿಸಿದನು.

೮. ರಾಜನ ಅಪ್ಪಣೆಯನ್ನು ಕೇಳಿ ದೂತರು ಸಂತೋಷಪಟ್ಟು ರಾಜನು ಮಾಡಿರುವ ಅಪ್ಪಣೆಯನ್ನು ಲೋಕದಲ್ಲೆಲ್ಲಾ ತಿಳಿಸಿದರು.

೯. ಬ್ರಾಹ್ಮಣರೇ ಮುಂತಾದ ಎಲ್ಲಾ ಮನುಜರೇ, ರಾಜನು ಈ ಪುಣ್ಯಪ್ರದ

ಪಿಬಂತು ಪುಣ್ಯಂ ಪರಿವೈಷ್ಣವಾಖ್ಯಂ
ದೋಷೈರ್ವಿಹೀನಂ ಪರಿಮಾಣಮಿಷ್ಟಂ ॥ ೯ ॥

ಶ್ರೀ ಕೇಶವಂ ಕ್ಲೇಶಹರಂ ವರೇಣ್ಯ-
ಮಾನಂದರೂಪಂ ಪರಮಾರ್ಥಮೇವ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೦ ॥

ಶ್ರೀ ಪದ್ಮನಾಭಂ ಕಮಲೇಕ್ಷಣಂ ಚ
ಆಧಾರರೂಪಂ ಜಗತಾಂ ಮಹೇಶಂ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೧ ॥

ಪಾಪಾಪಹಂ ವ್ಯಾಧಿವಿನಾಶರೂಪ-
ಮಾನಂದದಂ ದಾನವದೈತ್ಯನಾಶನಂ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೨ ॥

---

ವಾದ ಅಮೃತವನ್ನು ಭೂಮಿಗೆ ತಂದಿದ್ದಾನೆ. ದೋಷರಹಿತವಾದ ಈ ವೈಷ್ಣವವೆಂಬ ಅಮೃತವನ್ನು ಬೇಕಾದಷ್ಟು ಪಾನಮಾಡಿರಿ.

೧೦. ಕ್ಲೇಶಹರವೂ, ಉತ್ತಮವೂ, ಆನಂದರೂಪವೂ, ಪಾರಮಾರ್ಥಿಕವೂ ಆದ ಈ ಕೇಶವನಾಮವನ್ನು ರಾಜನು ನಿಮ್ಮೆಲ್ಲರ ಬಳಿಗೆ ತಂದಿದ್ದಾನೆ ಇದನ್ನು ನೀವೆಲ್ಲರೂ ಪಾನಮಾಡಿ.

೧೧. ಪದ್ಮನಾಭನೆಂದೂ, ಕಮಲನಾಭನೆಂದೂ, ಪ್ರಸಿದ್ಧನಾಗಿ ಸಕಲ ಜಗತ್ತಿಗೂ ಆಧಾರರೂಪನಾಗಿರುವವನ ನಾಮಾಮೃತವು ದೋಷರಹಿತವಾದುದು. ಅದನ್ನು ಇಲ್ಲಿಗೆ ತಂದಿದ್ದೇನೆ. ಅದನ್ನು ಕುಡಿಯಿರಿ.

೧೨. ಆ ಅಮೃತವು ಪಾಪನಾಶಕವಾದುದು, ವ್ಯಾಧಿನಾಶಕವು, ಆನಂದವನ್ನು ಕೊಡತಕ್ಕುದು, ದಾನವರು ದೈತ್ಯರು ಮೊದಲಾದ ದುಷ್ಟರನ್ನು ನಾಶಮಾಡುವುದು, ಇಂತಹ ಅಮೃತವನ್ನು ರಾಜನು ಲೋಕಕ್ಕೆ ತಂದಿದ್ದಾನೆ.

ಯಜ್ಞಾಂಗರೂಪಂ ಚ ರಥಾಂಗಪಾಣಿಂ
ಪುಣ್ಯಾಕರಂ ಸೌಖ್ಯಮನಂತರೂಪಂ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೩ ॥

ವಿಶ್ವಾಧಿವಾಸಂ ವಿಮಲಂ ವಿರಾಮಂ
ರಾಮಾಭಿಧಾನಂ ರಮಣಂ ಮುರಾರಿಂ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೪ ॥

ಆದಿತ್ಯರೂಪಂ ತಮಸಾಂ ವಿನಾಶಂ
ಚಂದ್ರಪ್ರಕಾಶಂ ಮಲಪಂಕಜಾನಾಂ ।
ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೫ ॥

ಸಖಡ್ಗಪಾಣಿಂ ಮಧುಸೂದನಾಖ್ಯಂ
ತಂ ಶ್ರೀನಿವಾಸಂ ಸಗುಣಂ ಸುರೇಶಂ ।

---

೧೩. ಆ ಕಮಲನಾಭನು ಯಜ್ಞಗಳ ಸ್ವರೂಪನು. ಪುಣ್ಯಗಳಿಗೆ ಆಶ್ರಯ ಸ್ಥಾನನು, ಸೌಖ್ಯಕರನು. ಅನಂತರೂಪನು. ಅಂತಹ ಸ್ವಾಮಿಯ ನಾಮಾಮೃತ ವನ್ನು ರಾಜನು ತಂದಿದ್ದಾನೆ. ಪಾನಮಾಡಿರಿ.

೧೪. ಆ ನಾಮಾಮೃತವು ವಿಶ್ವಕ್ಕೆ ಸಾಧನವು, ವಿಮಲವು, ರಾಮನೆಂಬ ಹೆಸರುಳ್ಳದು, ಮುರಾರಿಯ ರೂಪವಾದುದು, ಇಂತಹ ದೋಷರಹಿತವಾದ ಅಮೃತ ವನ್ನು ಪಾನಮಾಡಿರಿ.

೧೫. ಅದು ಆದಿತ್ಯರೂಪವಾದುದು, ಅಂಧಕಾರ ನಾಶಕವಾದುದು. ಮಲ ವೆಂಬ ಕಮಲಕ್ಕೆ ಚಂದ್ರಪ್ರಾಯವಾದುದು. ಇಂತಹ ಹರಿನಾಮಸ್ಮರಣೆಯೆಂಬ ಅಮೃ ತವನ್ನು ಲೋಕದ ಜನರು ಪಾನಮಾಡಲಿ.

೧೬. ಕೈಯಲ್ಲಿ ಖಡ್ಗವನ್ನು ಧರಿಸಿ ಮಧುಸೂದನನೆಂದೂ, ಶ್ರೀನಿವಾಸ ನೆಂದೂ, ಅನೇಕ ನಾಮಗಳಿಂದ ಕೂಡಿದ ಸುರೇಶನಾದ ವಿಷ್ಣುವಿನ ನಾಮಸ್ಮರಣೆ ಯೆಂಬ ಅಮೃತವನ್ನು ನೀವೆಲ್ಲರೂ ಪಾನಮಾಡಿರಿ.

ನಾಮಾಮೃತಂ ದೋಷಹರಂ ತು ರಾಜ್ಞಾ
ಆನೀತಮತ್ರೈವ ಪಿಬಂತು ಲೋಕಾಃ ॥ ೧೬ ॥

ನಾಮಾಮೃತಂ ದೋಷಹರಂ ಸುಪುಣ್ಯ
ಮಧೀತ್ಯ ಯೋ ಮಾಧವವಿಷ್ಣುಭಕ್ತಃ ।
ಪ್ರಭಾತಕಾಲೇ ನಿಯತೋ ಮಹಾತ್ಮಾ
ಸ ಯಾತಿ ಮುಕ್ತಿಂ ನ ಹಿ ಕಾರಣಂ ಚ ॥ ೧೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಮಾತಾಪಿತೃತೀರ್ಥಕಥನೇ ತ್ರಿಸಪ್ತತಿತಮೋಽಧ್ಯಾಯಃ



---

೧೭. ದೋಷಹರವೂ, ಪುಣ್ಯಪ್ರದವೂ ಆದ ವಿಷ್ಣುನಾಮ ಸ್ಮರಣೆಯನ್ನು ಯಾವನು ಪ್ರಾತಃಕಾಲದಲ್ಲಿ ಮಾಡುವನೋ, ಅವನು ಮುಕ್ತಿಯನ್ನು ಹೊಂದುತ್ತಾನೆ. ಅದಕ್ಕೆ ಕಾರಣವೇನೆಂದು ಯೋಚಿಸಬೇಕಾಗಿಲ್ಲ ಎಂದು ದೂತರು ಜನರೆಲ್ಲರಿಗೂ ಸಾರಿದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುಃಸಪ್ತತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ದೂತಾಸ್ತು ಗ್ರಾಮೇಷು ವದಂತಿ ಸರ್ವೇ
ದೇಶೇಷು ದ್ವಿಪೇಷ್ವಥ ಪತ್ತನೇಷು ।
ಲೋಕಾಃ ಶೃಣುಧ್ವಂ ನೃಪತೇಸ್ತಥಾಜ್ಞಾಂ
ಸರ್ವಪ್ರಭಾವೈರ್ಹರಿಮರ್ಚಯನ್ತು ॥ ೧ ॥

ದಾನೈಶ್ಚ ಯಜ್ಞೈರ್ಬಹುಭಿಸ್ಸುಕರ್ಮಭಿ-
ರ್ಧರ್ಮಾದಿಭಿರ್ವಾ ಯಜನೈರ್ಮನೋಭಿಃ ।
ಧ್ಯಾಯನ್ತು ಲೋಕಾ ಮಧುಸೂದನಂ ತ-
ಮಾದೇಶಮೇವಂ ನೃಪತೇಸ್ತು ತಸ್ಯ ॥ ೨ ॥

---

## ಎಪ್ಪತ್ತನಾಲ್ಕನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು:—ಈ ರೀತಿಯಾಗಿ ಆ ದೂತರೂ ಕೂಡ ಗ್ರಾಮಗಳಲ್ಲಿಯೂ ದೇಶಗಳಲ್ಲಿಯೂ, ದ್ವೀಪಗಳಲ್ಲಿಯೂ, ಪಟ್ಟಣಗಳಲ್ಲಿಯೂ, ಸಂಚರಿಸುತ್ತಾ, ಎಲೈ ಜನಗಳಿರಾ, ಎಲ್ಲಾ ರೀತಿಯಿಂದಲೂ ಹರಿಯನ್ನೇ ಪೂಜಿಸಿರಿ. ಎಂದು ರಾಜಾಜ್ಞೆಯಾಗಿದೆ, ಎಂಬದಾಗಿ ಸಾರುತ್ತಿದ್ದರು.

೨. ದಾನ, ಯಜ್ಞ ಅನೇಕವಾದ ಸುಕರ್ಮಗಳು, ಧರ್ಮ, ಒಳ್ಳೆಯ ಮನಸ್ಸು ಇವುಗಳಿಂದ ಆ ಮಧುಸೂದನನನ್ನೇ ಧ್ಯಾನಮಾಡಬೇಕು, ಎಂದು ರಾಜಾಜ್ಞೆಯಾಗಿದೆ.

ಏವಂ ಪ್ರಕೃಷ್ಟಂ ಸಕಲಂ ಸುಪುಣ್ಯ-
ಮಾಕರ್ಣಿತಂ ಭೂಮಿತಲೇ ಸುಲೋಕೈಃ ।
ತದಾಪ್ರಭೃತ್ಯೇವ ಸಮಸ್ತಮರ್ತ್ಯಾ
ಧ್ಯಾಯನ್ತಿ ಗಾಯನ್ತಿ ಸುರಾರಿಮೇಕಂ ॥ ೩ ॥

ಜಪನ್ತಿ ತಪ್ಯನ್ತಿ ಯಜನ್ತಿ ಚೈವ
ವೇದಪ್ರಣೀತೈಶ್ಚ ಸುಸೂಕ್ತಮಂತ್ರೈಃ।
ಶ್ರೋತ್ರೈಕಪುಣ್ಯೈರಮೃತೋಪಮಾನೈಃ
ಶ್ರೀ ಕೇಶವಂ ತದ್ಗತಮಾನಸಾಸ್ತೇ ॥ ೪ ॥

ವ್ರತೋಪವಾಸೈರ್ನಿಯಮೈಶ್ಚ ದಾನೈ-
ರ್ವಿಹಾಯ ದೋಷಾನ್ ವಿಷಯಾನ್ಸಮಸ್ತಾನ್ ।
ಲಕ್ಷ್ಮೀನಿವಾಸಂ ಜಗತಾಂ ನಿವಾಸಂ
ಲೋಕಾಸ್ತು ಭಕ್ತ್ಯಾ ಪರಿಪೂಜಯಂತಿ ॥ ೫ ॥

ಇತ್ಯಾಜ್ಞಾ ತಸ್ಯ ಭೂಪಸ್ಯ ವರ್ತತೇ ಕ್ಷಿತಿಮಂಡಲೇ ।
ವೈಷ್ಣವೇನ ಪ್ರಭಾವೇಣ ಜನಾಸ್ಸರ್ವೇ ಯಜಂತಿ ತೇ ॥ ೬ ॥

---

೩. ಈ ರೀತಿ ಪುಣ್ಯತಮವಾದ ವಿಷಯವನ್ನು ಜನರೆಲ್ಲರೂ ಕೇಳಿ, ಆಗಿನಿಂದಲೇ ಮೊದಲುಗೊಂಡು ಆ ವಿಷ್ಣುವನ್ನೇ ಧ್ಯಾನಮಾಡಿ ಪೂಜಿಸಿದರು.

೪. ಜನರೆಲ್ಲರೂ ಆ ಸ್ವಾಮಿಯಲ್ಲಿಯೇ ಮನಸ್ಸಿಟ್ಟು ಜಪಮಾಡುತ್ತಿದ್ದರು. ತಪಸ್ಸು ಮಾಡುತ್ತಿದ್ದರು. ಪೂಜೆಮಾಡುತ್ತಿದ್ದರು. ವೇದೋಕ್ತವಾದ ಮಂತ್ರಗಳಿಂದ ಆ ಕೇಶವನನ್ನೇ ಯಾವಾಗಲೂ ಪೂಜಿಸುತ್ತಿದ್ದರು.

೫. ವ್ರತಗಳಿಂದಲೂ, ನಿಯಮಗಳಿಂದಲೂ, ದಾನಗಳಿಂದಲೂ, ವಿಷಯಸುಖಗಳನ್ನು ಬಿಟ್ಟು, ಲಕ್ಷ್ಮಿಗೆ ಆವಾಸನಾದ ಆ ಸ್ವಾಮಿಯನ್ನೇ ದಿನವೂ ಪೂಜಿಸಿದರು.

೬. ಈ ರೀತಿಯಾದ ಅಪ್ಪಣೆಯು ಲೋಕದಲ್ಲೆಲ್ಲಾ ಪ್ರವರ್ತಿಸಿತು. ವಿಷ್ಣುಭಕ್ತರಾಗಿ ಜನರೆಲ್ಲರೂ ಪೂಜೆಮಾಡಲು ಪ್ರಾರಂಭಿಸಿದರು.

ನಾಮಭಿಃ ಕರ್ಮಭಿರ್ನಿಷ್ಣಂ ಯಜನ್ತೇ ಯಜ್ಞಕೋವಿದಾಃ ।
ತದ್ಧ್ಯಾನಾಸ್ತದ್ವ್ಯವಸಿತಾ ವಿಷ್ಣುಪೂಜಾಪರಾಯಣಾಃ ॥ ೭ ॥

ಯಾವದ್ಭೂಮಂಡಲಂ ಸರ್ವಂ ಯಾವತ್ತಪತಿ ತಿಗ್ಮಗುಃ ।
ತಾವದ್ಧಿ ಮಾನವಾ ಲೋಕಾಃ ಸರ್ವೇ ಭಾಗವತಾಸ್ತು ತೇ ॥ ೮ ॥

ವಿಷ್ಣೋಶ್ಚೈವ ಪ್ರಭಾವೇನ ಪೂಜಾಸ್ತೋತ್ರೈಶ್ಚ ನಾಮಭಿಃ ।
ಆಧಿಹೀನಾಶ್ಚ ತೇ ಭೂಮೌ ಸಂಜಾತಾ ಮಾನವಾಸ್ತದಾ ॥ ೯ ॥

ವೀತಶೋಕಾಶ್ಚ ಪುಣ್ಯಾಶ್ಚ ಸರ್ವೇ ಚೈವ ತಪೋಧನಾಃ ।
ಸಂಜಾತಾ ವೈಷ್ಣವಾ ವಿಪ್ರ ಪ್ರಸಾದಾತ್ತಸ್ಯ ಚಕ್ರಿಣಃ ॥ ೧೦ ॥

ಆಮಯೈಶ್ಚ ವಿಹೀನಾಸ್ತೇ ದೋಷೈ ರೋಷೈಶ್ಚ ವರ್ಜಿತಾಃ ।
ಸರ್ವೈಶ್ವರ್ಯಸಮಾಪನ್ನಾಃ ಸರ್ವರೋಗವಿವರ್ಜಿತಾಃ ॥ ೧೧ ॥

---

೭. ಜನರು ವಿಷ್ಣುನಾಮಸ್ಮರಣೆಯ ಧ್ಯಾನದಿಂದಲೂ, ಕಾರ್ಯದಿಂದಲೂ, ಯಜ್ಞಗಳಿಂದಲೂ, ವಿಷ್ಣುಧ್ಯಾನ, ಪೂಜೆಗಳಲ್ಲಿ ಆಸಕ್ತರಾಗಿ ಕರ್ಮಗಳನ್ನು ಮಾಡಿದರು.

೮. ಭೂಮಿಯಿರುವ ಪರ್ಯಂತವೂ, ಸೂರ್ಯನು ಪ್ರಕಾಶಿಸುವವರೆಗೂ, ಜನರೆಲ್ಲರೂ ಭಾಗವತರಾಗಿ ವಿಷ್ಣುಭಕ್ತರಾಗಿದ್ದರು.

೯. ವಿಷ್ಣುವಿನ ಪೂಜೆ, ಸ್ತೋತ್ರಗಳ ಪ್ರಭಾವದಿಂದ ಭೂಮಿಯಲ್ಲಿನ ಜನಗಳೂ ಮನೋವ್ಯಥೆಯಿಲ್ಲದವರಾದರು.

೧೦. ಎಲ್ಲರೂ ದುಃಖರಹಿತರಾಗಿಯೂ, ತಪಸ್ವಿಗಳಾಗಿಯೂ, ವೈಷ್ಣವರಾಗಿಯೂ, ಆ ವಿಷ್ಣುವಿನ ಅನುಗ್ರಹದಿಂದ ಆದರು.

೧೧. ಆ ಸ್ವಾಮಿಯ ಅನುಗ್ರಹದಿಂದ ರೋಗರಹಿತರಾಗಿಯೂ, ದೋಷರಹಿತರಾಗಿಯೂ, ಐಶ್ವರ್ಯವಂತರಾಗಿಯೂ ಆದರು.

ಪ್ರಸಾದಾತ್ತಸ್ಯ ದೇವಸ್ಯ ಸಂಜಾತಾ ಮನವಾಸ್ತದಾ ।
ಅಮರಾ ನಿರ್ಜರಾಸ್ಸರ್ವೇ ಧನಧಾನ್ಯಸಮನ್ವಿತಾಃ ।
ಮಹಾವಿಷ್ಣುಪ್ರಸಾದೇನ ಪುತ್ರಪೌತ್ರೈರಲಂಕೃತಾಃ ॥ ೧೨ ॥

ತೇಷಾಮೇವ ಮಹಾಭಾಗ ಗೃಹದ್ವಾರೇಷು ನಿತ್ಯದಾ ।
ಕಲ್ಪದ್ರುಮಾಸ್ಸುಪುಣ್ಯಾಸ್ತೇ ಸರ್ವಕಾಮಫಲಪ್ರದಾಃ ॥ ೧೩ ॥

ಸರ್ವಕಾಮದುಘಾ ಗಾವಃ ಸಚಿಂತಾಮಣಯಸ್ತಥಾ ।
ಸಂತಿ ತೇಷಾಂ ಗೃಹೇ ಪುಣ್ಯಾಃ ಸರ್ವಕಾಮಪ್ರದಾಯಕಾಃ ॥ ೧೪ ॥

ಅಮರಾ ಮಾನವಾ ಜಾತಾಃ ಪುತ್ರಪೌತ್ರೈರಲಂಕೃತಾಃ ।
ಸರ್ವದೋಷವಿಹೀನಾಸ್ತೇ ವಿಷ್ಣೋಶ್ಚೈವ ಪ್ರಸಾದತಃ ॥ ೧೫ ॥

ಸರ್ವಸೌಭಾಗ್ಯಸಂಪನ್ನಾಃ ಪುಣ್ಯಮಂಗಳಸಂಯುತಾಃ ।
ಸುಪುಣ್ಯಾ ದಾನಸಂಪನ್ನಾ ಜ್ಞಾನಧ್ಯಾನಪರಾಯಣಾಃ ॥ ೧೬ ॥

ನ ದುರ್ಭಿಕ್ಷಂ ನ ಚ ವ್ಯಾಧಿರ್ನಾಕಾಲಮರಣಂ ನೃಣಾಂ ।
ತಸ್ಮಿಂಚ್ಛಾಸತಿ ಧರ್ಮಜ್ಞೇ ಯಯಾತೌ ನೃಪತೌ ತದಾ ॥ ೧೭ ॥

---

೧೨. ಮಹಾವಿಷ್ಣುವಿನ ಪ್ರಸಾದದಿಂದ ದೇವತೆಗಳೂ, ಮರಣವನ್ನು ತಪ್ಪಿಸಿಕೊಂಡು ಮುಪ್ಪನ್ನು ಕಳೆದುಕೊಂಡು ಧನಧಾನ್ಯಗಳಿಂದ ಕೂಡಿದವರಾಗಿ ಪುತ್ರ ಪೌತ್ರರುಳ್ಳವರಾದರು.

೧೩-೧೪. ಅವರ ಮನೆಯ ಬಾಗಿಲಿನಲ್ಲಿ ಕಲ್ಪವೃಕ್ಷವು ಬೇಕಾದುದನ್ನು ಕೊಡ ತಕ್ಕುದಾಗಿ ಆಯಿತು. ಕಾಮಧೇನುವೂ, ಚಿಂತಾಮಣಿಯೂ, ಅವರಿಗೆ ಬೇಕಾದು ದನ್ನು ಕೊಡುತ್ತಿದ್ದವು.

೧೫-೧೬. ಮನುಷ್ಯರೆಲ್ಲರೂ ಆ ವಿಷ್ಣುವಿನ ಪ್ರಭಾವದಿಂದ ಅಮರರೂ, ಪುತ್ರ ಪೌತ್ರರುಳ್ಳವರೂ, ಸರ್ವದೋಷವಿಹೀನರೂ ಸಮಸ್ತ ಭಾಗ್ಯದಿಂದ ಕೂಡಿದವರೂ, ಮಂಗಳಯುತರೂ, ಜ್ಞಾನಿಗಳೂ, ಧ್ಯಾನಪರಾಯಣರೂ ಆದರು.

೧೭-೧೮. ಯಯಾತಿಯು ರಾಜ್ಯವಾಳುತ್ತಿರಲು, ದುರ್ಭಿಕ್ಷ, ವ್ಯಾಧಿ, ಅಕಾಲ

ವೈಷ್ಣವಾ ಮಾನವಾಸ್ಸರ್ವೇ ವಿಷ್ಣುವ್ರತಪರಾಯಣಾಃ ।
ತದ್ಧ್ಯಾನಾಸ್ತಜ್ಜಪಾಸ್ಸರ್ವೇ ಸಂಜಾತಾ ಭಾವತತ್ಪರಾಃ ॥ ೧೮ ॥

ತೇಷಾಂ ಗೃಹಾಣಿ ದಿವ್ಯಾನಿ ಪುಣ್ಯಾನಿ ದ್ವಿಜಸತ್ತಮ ।
ಪತಾಕಾಭಿಸ್ತು ಶುಭ್ರಾಭಿಃ ಶಂಕಯುಕ್ತಾನಿ ತಾನಿ ಚ ॥ ೧೯ ॥

ಗದಾಂಕಿತಧ್ವಜಾಶ್ಚಿತ್ರಚಕ್ರಾಂಕಿತಾನಿ ನಿತ್ಯಂ ವೈ ।
ಪದ್ಮಾಂಕಿತಾನಿ ಭಾಸ್ವಂತಿ ವಿಮಾನಪ್ರತಿಮಾನಿ ಚ ।
ಗೃಹಾಣಿ ಭಿತ್ತಿಭಾಗೇಷು ಚಿತ್ರಿತಾನಿ ಸುಚಿತ್ರಕೈಃ ॥ ೨೦ ॥

ಸರ್ವತ್ರ ಗೃಹದ್ವಾರೇಷು ಪುಣ್ಯಸ್ಥಾನೇಷು ಸರ್ವಶಃ ।
ವನಾನಿ ಸಂತಿ ದಿವ್ಯಾನಿ ಶ್ರದ್ಧಾಲಾಭಯುತಾನಿ ಚ ॥ ೨೧ ॥

ತುಲಸ್ಯಾ ಚ ದ್ವಿಜಶ್ರೇಷ್ಠ ಯುಕ್ತಾನಿ ಹರಿಮಂದಿರೈಃ ।
ಭಾಸ್ವಂತಿ ಗುಣದಿವ್ಯಾನಿ ಗೃಹಾಣಿ ಪ್ರಾಣಿನಾಂ ಸದಾ ॥ ೨೨ ॥

---

ಮರಣಗಳು ಯಾವುವೂ ಇರುತ್ತಿರಲಿಲ್ಲ. ಎಲ್ಲರೂ ವೈಷ್ಣವರಾಗಿ, ವಿಷ್ಣುಧ್ಯಾನ ತತ್ಪರರಾದರು.

೧೯-೨೦. ಅವರ ಮನೆಗಳೆಲ್ಲವೂ ಶುಭ್ರವಾಗಿಯೂ, ಉತ್ತಮವಾಗಿಯೂ, ಇದ್ದುವು. ಅವೆಲ್ಲಕ್ಕೂ, ತೋರಣಗಳನ್ನೂ ಪತಾಕೆಗಳನ್ನೂ ಕಟ್ಟಿ, ಶಂಖ, ಗದೆ, ಧ್ವಜ, ಚಕ್ರ, ಪದ್ಮ ಮೊದಲಾದ ವಿಷ್ಣು ಚಿಹ್ನೆಗಳಿಂದ, ಚಿತ್ರಿಸಲ್ಪಟ್ಟು ಮಹಡಿಯುಳ್ಳವಾಗಿದ್ದುವು. ಗೋಡೆಗಳೆಲ್ಲವೂ ಚಿತ್ರಬರೆಯಲ್ಪಟ್ಟಿದ್ದುವು.

೨೧. ಮನೆಯ ಬಾಗಿಲಿನಲ್ಲೂ ಪವಿತ್ರವಾದ ದೇವಸ್ಥಾನಾದಿಗಳಲ್ಲೂ ಶ್ರದ್ಧೆಯಿಂದ ಗಿಡಗಳನ್ನು ಬೆಳೆಸಿದ್ದರು.

೨೨. ಅಲ್ಲಿನ ಜನರ ಮನೆಗಳು ತುಲಸಿಯ ಗಿಡಗಳಿಂದಲೂ, ಹರಿದೇವನ ಮಂದಿರಗಳಿಂದಲೂ ಕೂಡಿ ಕಂಗೊಳಿಸುತ್ತಿದ್ದವು.

**ಸರ್ವತ್ರ ವೈಷ್ಣವೋ ಭಾವೋ ಮಂಗಳಂ ಬಹು ದೃಶ್ಯತೇ ।**
**ಶಂಖಶಬ್ದಾಶ್ಚ ಭೂಲೋಕೇ ಮಿಥಃ ಸ್ಫೋಟಕರೈ ರವೈಃ ॥ ೨೩ ॥**

**ಶ್ರೂಯಂತೇ ತತ್ರ ವಿಪ್ರೇಂದ್ರ ದೋಷಪಾಪವಿನಾಶಕಾಃ ।**
**ಶಂಖಸ್ವಸ್ತಿಕಪದ್ಮಾನಿ ಗೃಹದ್ವಾರೇಷು ತಾನಿ ಚ ।**
**ವಿಷ್ಣುಭಕ್ತಾಭಿರ್ನಾರೀಭಿರ್ಲಿಖಿತಾನಿ ದ್ವಿಜೋತ್ತಮ ॥ ೨೪ ॥**

**ಗೀತರಾಗೈಶ್ಚ ತಾನೈಶ್ಚ ಮೂರ್ಛನಾತಾಳಸುಸ್ವರೈಃ ।**
**ಗಾಯಂತಿ ಕೇಶವಂ ಲೋಕಾ ವಿಷ್ಣುಧ್ಯಾನಪರಾಯಣಾಃ ॥ ೨೫ ॥**

**ಹರಿಂ ಮುರಾರಿಂ ಪ್ರವದಂತಿ ಕೇಚಿ-**
**ಚ್ಛ್ರೀಶಾಚ್ಯುತಂ ಮಾಧವಮೇವ ಚಾನ್ಯೇ ।**
**ಶ್ರೀನಾರಸಿಂಹಂ ಕಮಲೇಕ್ಷಣಂ ತಂ**
**ಗೋವಿಂದಮೇಕಂ ಕಮಲಾಪತಿಂ ಚ ॥ ೨೬ ॥**

---

೨೩. ಎಲ್ಲ ಕಡೆಯಲ್ಲೂ, ವೈಷ್ಣವಭಾವದ ಮಂಗಳವೇ ಕಾಣುತ್ತಿದ್ದವು. ಶಂಖ, ಜಾಗಟೆ, ತಾಳಗಳ ಶಬ್ದಗಳೇ ಎಲ್ಲೆಲ್ಲೂ ಕೇಳಿ ಬರುತ್ತಿದ್ದುವು. ಆ ಶಬ್ದಗಳು ದೋಷಗಳನ್ನೂ, ಪಾಪಗಳನ್ನೂ ನಾಶಮಾಡುತ್ತ ಎಲ್ಲೆಲ್ಲೂ ಕೇಳುತ್ತಿದ್ದುವು.

೨೪. ಮನೆಯ ಬಾಗಲಿನಲ್ಲಿ ವಿಷ್ಣುಭಕ್ತರಾದ ನಾರಿಯರು ಶಂಖ, ಸ್ವಸ್ತಿಕ, ಪದ್ಮಗಳನ್ನು ರಂಗವಲ್ಲಿಗಳಲ್ಲಿ ಬರೆದಿರುತ್ತಿದ್ದರು.

೨೫. ವಿಷ್ಣುಧ್ಯಾನಾಸಕ್ತರಾದ ಜನರು, ಹಾಡು, ರಾಗ, ತಾಳ, ಮೂರ್ಛನೆ, ಸ್ವರಗಳಿಂದ ವಿಷ್ಣುವನ್ನು ಕುರಿತು ಗಾನಮಾಡುತ್ತಿದ್ದರು.

೨೬. ಕೆಲವರು ಮುರಾರಿ ದೊಡ್ಡವನೆಂದೂ, ಕೆಲವರು ಶ್ರೀಶನೇ ಉತ್ಕೃಷ್ಟ ನೆಂದೂ, ಮತ್ತೆ ಕೆಲವರು ಮಾಧವನು ಮಹಿಮನೆಂದೂ, ಇನ್ನು ಕೆಲವರು ನಾರ ಸಿಂಹನು, ಕಮಲೇಕ್ಷಣನು, ಗೋವಿಂದನು, ಇವರು ದೊಡ್ಡವರೆಂದೂ ಎನ್ನುತ್ತಿದ್ದರು.

ಕೃಷ್ಣಂ ಚ ರಾಮಂ ಶರಣಂ ವ್ರಜನ್ತಿ
ಜಪಂತಿ ಜಾಪ್ಯೈಃ ಪರಿಪೂಜಯನ್ತಿ ।
ದಂಡಪ್ರಣಾಮೈಃ ಪ್ರಣಮಂತಿ ವಿಷ್ಣುಂ
ತದ್ಧ್ಯಾನಯುಕ್ತಾಃ ಪರಿವೈಷ್ಣವಾಸ್ತೇ ॥ ೨೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಮಾತಾಪಿತೃತೀರ್ಥಕಥನೇ ಚತುಃಸಪ್ತತಿತಮೋಽಧ್ಯಾಯಃ



---

೨೭. ಕೃಷ್ಣ, ರಾಮ, ಎಂದು ಕೆಲವರು ಶರಣುಹೋಗುವರು. ಅದೇ ರೀತಿ ಜಪಮಾಡಿ ಪೂಜಿಸುವವರು ಕೆಲವರು ; ದಂಡನಮಸ್ಕಾರಗಳಿಂದ ನಮಸ್ಕಾರ ಮಾಡುವವರು ಕೆಲವರು ; ಹೀಗೆ ವಿಷ್ಣುವನ್ನೇ ಸರ್ವಭಾವದಿಂದಲೂ ಜನಗಳು ಪೂಜಿಸುತ್ತಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಪಂಚಸಪ್ತತಿತಮೋऽಧ್ಯಾಯಃ

॥ ಸುಕರ್ಮೋವಾಚ ॥

ಕೃಷ್ಣಂ ವಿಷ್ಣುಂ ಹರಿಂ ರಾಮಂ ಮುಕುಂದಂ ಮಧುಸೂದನಂ ।
ನಾರಾಯಣಂ ಹೃಷಿಕೇಶಂ ನಾರಸಿಂಹಂ ತಮಚ್ಯುತಂ ॥ ೧ ॥

ಕೇಶವಂ ಪದ್ಮನಾಭಂ ತು ವಾಸುದೇವಂ ಚ ವಾಮನಂ ।
ವಾರಾಹಂ ಕಮಠಂ ಮತ್ಸ್ಯಂ ಕಪಿಲಂ ಚ ಸುರಾಧಿಪಂ ॥ ೨ ॥

ವಿಶ್ವೇಶಂ ವಿಶ್ವರೂಪಂ ಚ ಹ್ಯನಂತಮನಘಂ ಶುಚಿಂ ।
ಪುರುಷಂ ಪುಷ್ಕರಾಕ್ಷಂ ಚ ಶ್ರೀಧರಂ ಶ್ರೀಪತಿಂ ಹರಿಂ ॥ ೩ ॥

ಶ್ರೀದಂ ಶ್ರೀಶಂ ಶ್ರೀನಿವಾಸಂ ಸುಮೋಕ್ಷಂ ಮೋಕ್ಷದಂ ಪ್ರಭುಂ ।
ಇತ್ಯೇವಮುಚ್ಚರಂತೋ ಹಿ ನಾಮಾನಿ ಮಾನವಾ ಭುವಿ ।
ಪ್ರಭಜಂತಿ ಜನಾಸ್ಸರ್ವೇ ಬಾಲವೃದ್ಧಕುಮಾರಕಾಃ ॥ ೪ ॥

---

## ಎಪ್ಪತ್ತೈದನೆಯ ಅಧ್ಯಾಯವು

೧-೪. ಸುಕರ್ಮನು ಹೇಳಿದನು:—ಕೃಷ್ಣ, ವಿಷ್ಣು, ಮುಕುಂದ, ಮಧುಸೂದನ, ನಾರಾಯಣ, ಹೃಷೀಕೇಶ, ನಾರಸಿಂಹ, ಅಚ್ಯುತ, ಕೇಶವ, ಪದ್ಮನಾಭ, ವಾಸುದೇವ, ವಾಮನ, ವಾರಾಹ, ಕೂರ್ಮ, ಮತ್ಸ್ಯ, ಕಪಿಲ, ದೇವದೇವ, ವಿಶ್ವೇಶ, ವಿಶ್ವರೂಪ, ಅನಂತ, ಅನಘ, ನಿರ್ಮಲ, ಪುರುಷ, ಕಮಲಾಕ್ಷ, ಶ್ರೀಧರ, ಲಕ್ಷ್ಮೀಪತಿ, ಹರಿ, ಸಂಪತ್ಕರ, ಶ್ರೀಶ, ಶ್ರೀನಿವಾಸ, ಮೋಕ್ಷಸ್ವರೂಪ, ಮೋಕ್ಷದಾಯಕ, ಪ್ರಭು, ಇವೇ ಮೊದಲಾದ ವಿಷ್ಣುವಿನ ಅನೇಕ ಹೆಸರುಗಳನ್ನು ಉಚ್ಚರಿಸುತ್ತ, ಆಬಾಲ ವೃದ್ಧರೂ ಪರಮಾತ್ಮನನ್ನು ಭಜಿಸುತ್ತಿದ್ದರು.

**ಪ್ರಣಮಂತಿ ಹರಿಂ ನಾರ್ಯೋ ಗೃಹಕರ್ಮರತಾಃ ಸದಾ ।**
**ಆಸನೇ ಶಯನೇ ಯಾನೇ ಧ್ಯಾನೇ ಜ್ಞಾನೇ ಚ ಮಾಧವಂ　　　॥ ೫ ॥**

**ಕ್ರೀಡಮಾನಾಸ್ತಥಾ ಬಾಲಾ ಗೋವಿಂದಂ ಪ್ರಣಮಂತಿ ಚ ।**
**ದಿವಾರಾತ್ರೌ ಸುಮಧುರಂ ಬ್ರುವಂತಿ ಹರಿನಾಮ ಚ　　　॥ ೬ ॥**

**ವಿಷ್ಣೂಚ್ಚಾರೋ ಹಿ ಸರ್ವತ್ರ ಶ್ರೂಯತೇ ಹಿ ದ್ವಿಜೋತ್ತಮ ।**
**ವೈಷ್ಣವೇನ ಪ್ರಭಾವೇನ ಮರ್ತ್ಯಾ ವರ್ತಂತಿ ಭೂತಲೇ　　　॥ ೭ ॥**

**ಪ್ರಾಸಾದಕಲಶಾಗ್ರೇಷು ದೇವತಾಯತನೇಷು ಚ ।**
**ಯಥಾ ಸೂರ್ಯಸ್ಯ ಬಿಂಬಾನಿ ತಥಾ ಚಕ್ರಾಣಿ ಭಾಂತಿ ವೈ　　　॥ ೮ ॥**

**ಕೃಷ್ಣಸ್ಯ ದೃಶ್ಯತೇ ಭಾವಃ ಸರ್ವತ್ರ ಜಗತೀತಲೇ ।**
**ತೇನ ರಾಜ್ಞಾ ಕೃತಂ ವಿಪ್ರ ಪುಣ್ಯಂ ಚಾಪಿ ಮಹಾತ್ಮನಾ　　　॥ ೯ ॥**

---

೫. ಮನೆಯ ಕೆಲಸದಲ್ಲಿ ಆಸಕ್ತರಾದ ಹೆಂಗಸರು ಕುಳಿತರೆ, ಎದ್ದರೆ, ಮಲಗಿದರೆ, ಎಲ್ಲಾ ಕೆಲಸ, ಎಲ್ಲಾಕಾಲಗಳಲ್ಲೂ ಹರಿಯನ್ನು ನಮಸ್ಕರಿಸುತ್ತಿದ್ದರು.

೬. ಆಡುವಾಗ ಹುಡುಗರೂ ಕೂಡ, ಗೋವಿಂದನನ್ನೇ ನಮಸ್ಕರಿಸುತ್ತಿದ್ದರು, ಹಗಲು ರಾತ್ರಿಯು ಹರಿನಾಮವನ್ನೇ ಉಚ್ಚರಿಸುತ್ತಿದ್ದರು.

೭. ಎಲ್ಲಿ ನೋಡಿದರೂ ವಿಷ್ಣುನಾಮೋಚ್ಚಾರಣೆಯೇ ಕೇಳಿಬರುತ್ತಿತ್ತು. ಮನುಷ್ಯರೆಲ್ಲರೂ ವಿಷ್ಣುಪ್ರಭಾವದಿಂದ ಸನ್ಮಾರ್ಗದಲ್ಲಿ ನಡೆಯುವವರಾದರು.

೮. ಮಹಡಿಯ ಕಲಶದ ತುದಿಯಲ್ಲಿಯೂ ದೇವಸ್ಥಾನಗಳಲ್ಲಿಯೂ ಸೂರ್ಯ ಬಿಂಬಗಳು ಕಾಣುವಂತೆ ಎಲ್ಲೆಲ್ಲೂ ವಿಷ್ಣುವಿನ ಆಯುಧವಾದ ಚಕ್ರಗಳು ಕಂಗೊಳಿಸುತ್ತಿದ್ದವು.

೯. ಭೂಲೋಕದಲ್ಲಿ ಎಲ್ಲಿ ನೋಡಿದರೂ ಕೃಷ್ಣನ ಭಕ್ತಿಯೇ ಕಂಡುಬರುತ್ತಿತ್ತು. ಆ ರೀತಿ ಆ ಮಹಾತ್ಮನಾದ ಯಯಾತಿ ರಾಜನು ಮಾಡಿದನು.

ವಿಷ್ಣುಲೋಕಸ್ಯ ಸಮತಾಂ ತಥಾ ನೀತಂ ಮಹೀತಳಂ ।
ನಹುಷಸ್ಯಾಪಿ ಪುತ್ರೇಣ ವೈಷ್ಣವೇನ ಯಯಾತಿನಾ ॥ ೧೦ ॥

ಉಭಯೋರ್ಲೋಕಯೋರ್ಭಾವಮೇಕೀಭೂತಂ ಮಹೀತಲೇ ।
ಭೂತಲಸ್ಯಾಪಿ ವಿಷ್ಣೋಶ್ಚ ಹ್ಯಂತರಂ ನೈವ ದೃಶ್ಯತೇ ॥ ೧೧ ॥

ವಿಷ್ಣೂಚ್ಚಾರಂ ಹಿ ವೈಕುಂಠೇ ಪ್ರಕುರ್ವಂತಿ ಚ ವೈಷ್ಣವಾಃ ।
ಭೂತಲೇ ತಾದೃಶೋಚ್ಚಾರಂ ಪ್ರಕುರ್ವಂತಿ ಚ ಮಾನವಾಃ ॥ ೧೨ ॥

ಉಭಯೋರ್ಲೋಕಯೋರ್ಭಾವ ಏಕೋಹಿ ವಿಪ್ರ ದೃಶ್ಯತೇ ।
ಜರಾರೋಗಭಯಂ ನಾಸ್ತಿ ಮೃತ್ಯುಹೀನಾ ನರಾ ಯತಃ ॥ ೧೩ ॥

ದಾನಭೋಗಪ್ರಭಾವಸ್ತು ಅಧಿಕೋ ದೃಶ್ಯತೇ ಭುವಿ ।
ಪುತ್ರಾಣಾಂ ಚ ಸುಖಂ ಪುಣ್ಯಮಧಿಕಂ ಪೌತ್ರಜಂ ತಥಾ ॥ ೧೪ ॥

ಸ್ವರ್ಗ ಭೋಕ್ಷ್ಯಂತಿ ಸುಖೇನಾಪಿ ಮಾನವಾ ಭುವಿ ಸತ್ತಮಾಃ ।
ವಿಷ್ಣೋಃ ಪ್ರಸಾದದಾನೇನ ಉಪದೇಶೇ ನ ತಸ್ಯ ಚ ॥ ೧೫ ॥

---

೧೦. ನಹುಷನ ಮಗನಾದ ಯಯಾತಿಯು ಭೂಲೋಕವನ್ನು ವಿಷ್ಣುಲೋಕಕ್ಕೆ ಸಮವಾಗಿ ಮಾಡಿದನು.

೧೧. ವಿಷ್ಣುಲೋಕ ಭೂಲೋಕಗಳ ಭಾವವು ಒಂದಾಗಿ ಮಾಡಲ್ಪಟ್ಟಿತು. ಭೂಲೋಕಕ್ಕೂ ವೈಕುಂಠಕ್ಕೂ ವ್ಯತ್ಯಾಸವೇ ಕಂಡುಬರುತ್ತಿರಲಿಲ್ಲ.

೧೨-೧೩. ವೈಕುಂಠದಲ್ಲಿ ವೈಷ್ಣವರು ವಿಷ್ಣುನಾಮೋಚ್ಚಾರಣೆ ಮಾಡುತ್ತಾರೆ. ಆದುದರಿಂದ ಎರಡು ಲೋಕಗಳ ರೀತಿಯೂ ಒಂದಾಗಿ ಕಾಣುತ್ತದೆ, ಏಕೆಂದರೆ ಎರಡು ಲೋಕಗಳಲ್ಲೂ ಮುಪ್ಪು, ರೋಗ, ಸಾವುಗಳ ಭಯವೇ ಇಲ್ಲದೇ ಹೋಯಿತು.

೧೪. ದಾನದ ಭೋಗವೂ, ಪುತ್ರಪೌತ್ರರ ಸುಖವೂ, ವೈಕುಂಠಕ್ಕಿಂತಲೂ ಇಲ್ಲಿ ಹೆಚ್ಚಾಗಿ ಕಾಣುತ್ತಿತ್ತು.

೧೫. ವಿಷ್ಣುವಿನ ಅನುಗ್ರಹದಿಂದಲೂ ರಾಜನ ಉಪದೇಶದಿಂದಲೂ, ಈ ಮಾನವರು ಸುಖದಿಂದ ತಮ್ಮ ದ್ರವ್ಯವನ್ನು ಅನುಭವಿಸುತ್ತಾರೆ.

ಸರ್ವವ್ಯಾಧಿವಿನಿರ್ಮುಕ್ತಾ ಮಾನವಾ ವೈಷ್ಣವಾಸ್ತಥಾ ।
ಸ್ವರ್ಗಲೋಕತಿರಸ್ಕಾರಃ ಕೃತೋ ರಾಜ್ಞಾ ಮಹೀತಲೇ ॥ ೧೬ ॥

ಪಂಚವಿಂಶಪ್ರಮಾಣೇನ ವರ್ಷಾಣಾಂ ನೃಪಸತ್ತಮ ।
ವೇದವಿಜ್ಞಾ ನರಾಸ್ಸರ್ವೇ ಜ್ಞಾನಧ್ಯಾನಪರಾಯಣಾಃ ॥ ೧೭ ॥

ಯಜ್ಞದಾನಪರಾಸ್ಸರ್ವೇ ದಯಾಭಾವಾಶ್ಚ ಮಾನವಾಃ ।
ಉಪಕಾರರತಾಃ ಸರ್ವೇ ಪುಣ್ಯಾ ಧನ್ಯಾಃ ಶುಭಾ ನರಾಃ ॥ ೧೮ ॥

ಸರ್ವೇ ಧರ್ಮಪರಾ ವಿಪ್ರ ವಿಷ್ಣುಧ್ಯಾನಪರಾಯಣಾಃ ।
ರಾಜ್ಞಾ ತೇನೋಪದಿಷ್ಟಾಸ್ತೇ ಸಂಜಾತಾ ವೈಷ್ಣವಾ ಭುವಿ ॥ ೧೯ ॥

॥ ವಿಷ್ಣುರುವಾಚ ॥

ಶ್ರೂಯತಾಂ ನೃಪಶಾರ್ದೂಲ ಚರಿತ್ರಂ ತಸ್ಯ ಭೂಪತೇಃ ।
ಸರ್ವಧರ್ಮಪರೋ ನಿತ್ಯಂ ವಿಷ್ಣುಭಕ್ತಶ್ಚ ನಾಹುಷಿಃ ॥ ೨೦ ॥

---

೧೬. ವೈಷ್ಣವರಾದ ಮಾನವರಿಗೆ ರೋಗಬಾಧೆಯೇ ತಪ್ಪಿಹೋಯಿತು. ಸ್ವರ್ಗಲೋಕವನ್ನು ಜನರು ತಿರಸ್ಕರಿಸುನಂತೆ ಆ ರಾಜನು ಮಾಡಿದನು.

೧೭. ಎಲ್ಲರೂ ಇಪ್ಪತ್ತೈದು ವರ್ಷದವರಾಗಿರುವರೇ ಹೊರತು ಮೇಲಿನ ವಯಸ್ಸೇ ಇಲ್ಲ. ಎಂದರೆ ದೇಹವು ಆ ರೀತಿ ಇರುತ್ತಿತ್ತೆಂದು ಭಾವವು. ಎಲ್ಲರೂ ವೇದ ಓದಿ ಜ್ಞಾನಿಗಳೂ ಧ್ಯಾನಿಗಳೂ ಆಗಿರುತ್ತಿದ್ದರು.

೧೮. ಆ ಮಾನವರೆಲ್ಲರೂ ಯಜ್ಞ ದಾನಗಳಲ್ಲಾಸಕ್ತರು. ದಯಾವಂತರು. ಸರ್ವರಿಗೂ ಉಪಕಾರಮಾಡುತ್ತಾ ಧನ್ಯರೂ, ಪುಣ್ಯವಂತರೂ ಆಗಿದ್ದರು.

೧೯. ಎಲ್ಲರೂ ಧರ್ಮಪರರು. ವಿಷ್ಣುಧ್ಯಾನಿಗಳು. ಅವರು ರಾಜನಿಂದ ಈ ರೀತಿ ಉಪದೇಶಿಸಲ್ಪಟ್ಟವರಾಗಿ ವೈಷ್ಣವರಾದರು.

೨೦. ವಿಷ್ಣುವು ಹೇಳಿದನು:—ಎಲೈ ರಾಜನೇ, ಆ ರಾಜನ ಚರಿತ್ರೆಯನ್ನು ಕೇಳು, ಅವನು ಸರ್ವಧರ್ಮಪರನಾಗಿ ವಿಷ್ಣುಭಕ್ತನಾದನು.

ಅಬ್ದಾನಾಂ ಚೈವ ಲಕ್ಷೈಕಂ ತಸ್ಯಾಪಿ ಸುಗತಂ ಭುವಿ ।
ನೂತನೋ ದೃಶ್ಯತೇ ಕಾಯಃ ಪಂಚವಿಂಶಾಬ್ದಕೋ ಯಥಾ ॥ ೨೧ ॥

ಪಂಚವಿಂಶಾತ್ಮಕೋ ಭಾತಿ ರೂಪೇಣ ವಯಸಾ ತದಾ ।
ಪ್ರಶಸ್ತಃ ಪ್ರೌಢಿಸಂಪನ್ನಃ ಪ್ರಸಾದಾತ್ತಸ್ಯ ಚಕ್ರಿಣಃ ॥ ೨೨ ॥

ಮಾನವಾ ಭೂಮಿಲೋಕಸ್ಥಾ ಯಮಂ ನೈವಾನುಯಾನ್ತಿ ತೇ ।
ರಾಗದೋಷವಿನಿರ್ಮುಕ್ತಾಃ ಕಾಮಪಾಶವಿವರ್ಜಿತಾಃ ॥ ೨೩ ॥

ಸುಖಿತಾ ದಾನಪುತ್ರೈಶ್ಚ ಸರ್ವಧರ್ಮಪರಾಯಣಾಃ ।
ವಿಸ್ತಾರಂ ತೇ ಜನಾಸ್ಸರ್ವೇ ಸಂತತ್ಯಾಪಿ ಗತಾ ನೃಪ । ॥ ೨೪ ॥

ಯಥಾ ದೂರ್ವಾ ವಟಾಶ್ಚೈವ ವಿಸ್ತಾರಂ ಯಾಂತಿ ಭೂತಲೇ ।
ತಥಾ ತೇ ಮಾನವಾಸ್ಸರ್ವೇ ಪುತ್ರಪೌತ್ರೈಃ ಪ್ರವಿಸ್ತೃತಾಃ ॥ ೨೫ ॥

---

೨೧. ಈ ರೀತಿ ಆ ಯಯಾತಿಗೆ ಲಕ್ಷವರ್ಷಗಳು ಕಳೆದುವು. ಹಾಗಾದರೂ ಅವನ ದೇಹವು ಇಪ್ಪತ್ತೈದು ವರ್ಷದವನ ದೇಹದಂತಿತ್ತು.

೨೨. ಆ ವಿಷ್ಣುವಿನ ಪ್ರಸಾದದಿಂದ ರೂಪದಲ್ಲಿಯೂ, ವಯಸ್ಸಿನಲ್ಲಿಯೂ, ಇಪ್ಪತ್ತೈದು ವರ್ಷದವನಂತೆಯೇ ಕಾಣುತ್ತಿದ್ದನು ಯೋಗ್ಯನಾಗಿಯೂ ಬುದ್ಧಿವಂತನಾಗಿಯೂ ಸಹ ಇದ್ದನು.

೨೩-೨೪. ಭೂಲೋಕದ ಮಾನವರು ಕೆಟ್ಟಕೆಲಸಗಳನ್ನು ಮಾಡಿ ಯಮಲೋಕಕ್ಕೆ ಒಬ್ಬರೂ ಹೋಗುತ್ತಲೇ ಇರಲಿಲ್ಲ. ಇವರು ರಾಗದ್ವೇಷಗಳನ್ನು ಬಿಟ್ಟು ಕಾಮನನ್ನು ತೊರೆದು ಸುಖವುಳ್ಳವರಾಗಿಯೂ ಧರ್ಮಿಷ್ಠರಾಗಿಯೂ ಪುತ್ರಪೌತ್ರರುಗಳಿಂದ ದೊಡ್ಡದಾದ ಸಂಸಾರವನ್ನು ಹೊಂದಿ ಸುಖಿಸುತ್ತಿದ್ದರು.

೨೫. ಗರಿಕೆಯೂ, ಆಲದಮರವೂ, ಹೇಗೆ ತಮ್ಮ ಸಂತತಿಯಿಂದ ವಿಸ್ತಾರವಾಗುತ್ತವೆಯೋ ಅದರಂತೆ ಜನರು ಭೂಮಿಯಲ್ಲಿ ಮಕ್ಕಳು ಮೊಮ್ಮಕ್ಕಳಿಂದ ವಿಸ್ತಾರವನ್ನು ಹೊಂದಿದರು.

ಮೃತ್ಯುದೋಷವಿಹೀನಾಸ್ತೇ ಚಿರಂ ಜೀವಂತಿ ತೇ ಜನಾಃ ।
ಸ್ಥಿರಕಾಯಾಶ್ಚ ಸುಖಿನೋ ಜರಾರೋಗವಿವರ್ಜಿತಾಃ ॥ ೨೬ ॥

ಏವಂ ಹಿ ಸರ್ವೇ ಮರ್ತ್ಯಾಸ್ತೇ ಪ್ರಸಾದಾತ್ತಸ್ಯ ಚಕ್ರಿಣಃ ।
ಸಂಜಾತಾ ಮಾನವಾಸ್ಸರ್ವೇ ದಾನಭೋಗಪರಾಯಣಾಃ ॥ ೨೭ ॥

ಪಂಚವಿಂಶಾಬ್ದಿಕಾಸ್ಸರ್ವೇ ನರಾ ದೃಶ್ಯನ್ತಿ ಭೂತಳೇ ।
ಸತ್ಯಾಚಾರಪರಾಸ್ಸರ್ವೇ ವಿಷ್ಣುಧ್ಯಾನಪರಾಯಣಾಃ ॥ ೨೮ ॥

ಮೃತೋ ನ ಶ್ರೂಯತೇ ಲೋಕೇ ಸರ್ವಸ್ಮಿನ್ ಜಗತೀತಲೇ ।
ಶೋಕಂ ನೈವ ಪ್ರಪಶ್ಯಂತಿ ದೋಷಂ ನೈವ ಪ್ರಯಾಂತಿ ತೇ ॥ ೨೯ ॥

ಸ್ವರ್ಗಲೋಕಸ್ಯ ಯದ್ರೂಪಂ ತದ್ರೂಪಂ ಭೂತಲಸ್ಯ ಚ ।
ಸಂಜಾತಾ ವಿಷ್ಣುಭಕ್ತಾಸ್ತೇ ಪ್ರಸಾದಾತ್ತಸ್ಯ ಚಕ್ರಿಣಃ ॥ ೩೦ ॥

ಯಮದೂತಾ ವಿಧಿಭ್ರಷ್ಟಾ ವಿಷ್ಣುದೂತೈಸ್ತು ತಾಡಿತಾಃ ।
ರುದಮಾನಾ ಗತಾಃ ಸರ್ವೇ ಧರ್ಮರಾಜಂ ಪರಸ್ಪರಂ ॥ ೩೧ ॥

---

೨೬. ಇಲ್ಲಿ ಜನಗಳು ಮರಣವಿಲ್ಲದೇ ಚಿರಜೀವಿಗಳಾಗಿಯೂ, ಸ್ಥಿರಕಾಯರಾಗಿಯೂ, ಮುಪ್ಪು ರೋಗಗಳಿಂದ ರಹಿತರಾಗಿಯೂ ಇರುತ್ತಾ ಸುಖದಿಂದಿರುತ್ತಿದ್ದರು.

೨೭. ಭೂಮಿಯಲ್ಲಿ ಜನರು ಸತ್ಯಾಚಾರಪರರೂ ವಿಷ್ಣುಧ್ಯಾನಾಸಕ್ತರೂ ಆಗಿ ವಿಷ್ಣುವಿನ ಅನುಗ್ರಹದಿಂದ ದಾನಭೋಗಪರಾಯಣರೂ ಆದರು.

೨೮. ಭೂಮಿಯಲ್ಲಿ ಜನರೆಲ್ಲರೂ ಇಪ್ಪತ್ತೈದು ವರ್ಷದವರಂತೆ ಕಾಣುತ್ತಿದ್ದರು. ಎಲ್ಲರೂ ಸತ್ಕರ್ಮನಿರತರೂ, ವಿಷ್ಣುಧ್ಯಾನಪರಾಯಣರೂ ಆದರು.

೨೯. ಭೂಲೋಕದಲ್ಲೆಲ್ಲೂ ಸತ್ತನೆಂಬ ಮಾತೇ ಕೇಳಿಬರುತ್ತಿರಲಿಲ್ಲ. ಶೋಕವನ್ನೇ ಒಬ್ಬರೂ, ಕಂಡರಿಯರು. ದೋಷವಂತೂ ಇಲ್ಲವೇ ಇಲ್ಲ.

೩೦. ಭೂಮಿಯು ಸ್ವರ್ಗಲೋಕದ ರೂಪವನ್ನೇ ಹೊಂದಿತು. ಆ ವಿಷ್ಣುವಿನ ಅನುಗ್ರಹದಿಂದ ಎಲ್ಲರೂ ವಿಷ್ಣುಭಕ್ತರೇ ಆದರು.

೩೧. ಯಮದೂತರು ಕರ್ತವ್ಯಭ್ರಷ್ಟರಾಗಲು, ವಿಷ್ಣುಭಕ್ತರು (ದೂತರು) ಅವರನ್ನು ಹೊಡೆದು ಓಡಿಸಿದರು. ಅವರು ಅಳುತ್ತಾ ಯಮಧರ್ಮರಾಜನ ಬಳಿಗೆ ಹೋದರು.

ತತ್ಸರ್ವಂ ಕಥಿತಂ ದೂತೈಶ್ಚೇಷ್ಟಿತಂ ಭೂತಲೇ ಚ ತೈಃ ।
ಅಮೃತ್ಯು ಭೂತಲಂ ಜಾತಂ ದಾನಭೋಗೇನ ಭಾಸ್ಕರೇ ॥ ೩೨ ॥

ನಹುಷಸ್ಯಾತ್ಮಜೇನಾಪಿ ಕೃತಂ ದೇವ ಯಯಾತಿನಾ ।
ವಿಷ್ಣುಭಕ್ತೇನ ಪುಣ್ಯೇನ ಸ್ವರ್ಗರೂಪಂ ಪ್ರದರ್ಶಿತಂ ॥ ೩೩ ॥

ಏವಮಾಕರ್ಣಿತಂ ಸರ್ವಂ ಧರ್ಮರಾಜೇನ ವೈ ತದಾ ।
ಧರ್ಮರಾಜಸ್ತದಾ ತತ್ರ ದೂತೇಭ್ಯಃ ಶ್ರುತವಿಸ್ತರಃ ।
ಚಿಂತಯಾಮಾಸ ಸತ್ಯಾರ್ಥಂ ಕ್ಷಣೈಕಂ ನೃಪಚೇಷ್ಟಿತಂ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಯಯಾತಿಚರಿತೇ ಪಂಚಸಪ್ತತಿತಮೋಽಧ್ಯಾಯಃ



---

೩೨. ಭೂತಳದಲ್ಲಿ ಮಾಡುವುದೆಲ್ಲವನ್ನೂ ಅವರು ಯಮನಿಗೆ ಹೇಳಿದರು. ಎಲೈ ಯಮನೇ, ಭೂತಳವು ಮರಣವರ್ಜಿತವಾಯಿತೆಂದರು.

೩೩. ನಹುಷನ ಮಗನಾದ ಯಯಾತಿಯು ವಿಷ್ಣುಭಕ್ತನಾಗಿ ಭೂಮಿಯನ್ನು ಸ್ವರ್ಗರೂಪವನ್ನಾಗಿ ಮಾಡಿದ್ದಾನೆ ಎಂದರು.

೩೪. ಇದೆಲ್ಲವನ್ನೂ ಧರ್ಮರಾಜನು ಕೇಳಿ ಸತ್ಯಾರ್ಥವೇನಿರಬಹುದೆಂದು ಕ್ಷಣ ಕಾಲ ಯೋಚಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಷಟ್‌ಸಪ್ತತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ಸೌರಿರ್ದೂತೈಸ್ತಥಾ ಸರ್ವೈಃ ಸಹ ಸ್ವರ್ಗಂ ಜಗಾಮಹ ।
ದ್ರಷ್ಟುಂ ತತ್ರ ಸಹಸ್ರಾಕ್ಷಂ ದೈವವೃಂದೈಃ ಸಮಾವೃತಂ ॥ ೧ ॥

ಧರ್ಮರಾಜಂ ಸಮಾಯಾಂತಂ ದದರ್ಶ ಸುರರಾಟ್ ತದಾ ।
ಸಮುತ್ಥಾಯ ತ್ವರಾಯುಕ್ತೋ ದದಾವರ್ಘಮನುತ್ತಮಂ ।
ಪಪ್ರಚ್ಛಾಗಮನಂ ತಸ್ಯ ಕಥಯಸ್ವ ಮಮಾಗ್ರತಃ ॥ ೨ ॥

ತದಾಕರ್ಣ್ಯ ಮಹದ್ವಾಕ್ಯಂ ದೇವರಾಜೇನ ಭಾಷಿತಂ ।
ಧರ್ಮರಾಜೋಽಬ್ರವೀತ್ಸರ್ವಂ ಯಯಾತೇಶ್ಚರಿತಂ ಮಹತ್ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು:—ಯಮಧರ್ಮರಾಜನು ತನ್ನ ದೂತರೊಡನೆ ಕೂಡಿಕೊಂಡು ದೇವತೆಗಳಿಂದ ಪರಿವೃತನಾದ ಇಂದ್ರನನ್ನು ನೋಡಲು ಹೋದನು.

೨. ಧರ್ಮರಾಜನು ಬರುತ್ತಿರುವುದನ್ನು ಇಂದ್ರನು ದೂರದಲ್ಲಿಯೇ ನೋಡಿ ಅವಸರದಿಂದ ಮೇಲಕ್ಕೆದ್ದು, ಅರ್ಘ್ಯ ಪಾದ್ಯಗಳಿಂದ ಅರ್ಚಿಸಿ, ಎಲೈ ಧರ್ಮರಾಜನೇ, ನೀನು ಬಂದುದಕ್ಕೆ ಕಾರಣವೇನು ? ದಯವಿಟ್ಟು ಹೇಳು ಎಂದು ಕೇಳಿದನು.

೩. ಇಂದ್ರನು ಹೇಳಿದ್ದನ್ನು ಕೇಳಿ, ಯಮನು ಯಯಾತಿಯ ಚರಿತ್ರೆಯೆಲ್ಲ ವನ್ನೂ ಅವನಿಗೆ ವಿವರಿಸಿದನು.

ಶ್ರೂಯತಾಂ ದೇವದೇವೇಶ ಯಸ್ಮಾದಾಗಮನಂ ಮಮ ।
ಕಥಯಾಮ್ಯಹಮತ್ರಾಪಿ ಯೇನ ಚೈವಾಗತಸ್ತವ ॥ ೪ ॥

ನಹುಷಸ್ಯಾತ್ಮಜೇನಾಪಿ ವೈಷ್ಣವೇನ ಮಹಾತ್ಮನಾ ।
ಕಾರಿತಾ ವೈಷ್ಣವಾಸ್ಸರ್ವೇ ಯೇ ವಸನ್ತಿ ಮಹೀತಲೇ ॥ ೫ ॥

ವೈಕುಂಠಸ್ಯ ಸಮಂ ರೂಪಂ ಮರ್ತ್ಯಲೋಕಸ್ಯ ವೈ ಕೃತಂ ।
ಅಮರಾ ಮಾನವಾ ಜಾತಾ ಜರಾರೋಗೈರ್ವಿವರ್ಜಿತಾಃ ॥ ೬ ॥

ಪಾಪಮೇವ ನ ಕುರ್ವಂತಿ ಅಸತ್ಯಂ ನ ವದನ್ತಿ ತೇ ।
ಕಾಮಕ್ರೋಧವಿಹೀನಾಸ್ತೇ ಲೋಭಮೋಹವಿವರ್ಜಿತಾಃ ॥ ೭ ॥

ದಾನಶೀಲಾ ಮಹಾತ್ಮಾನಃ ಸರ್ವೇ ಧರ್ಮಪರಾಯಣಾಃ ।
ಸರ್ವಕಾಮ್ಯೈಃ ಸಮರ್ಚಂತಿ ನಾರಾಯಣಮನಾಮಯಂ ॥ ೮ ॥

---

೪. ಧರ್ಮರಾಜನು ಹೇಳಿದನು:—ಎಲೈ ದೇವೇಂದ್ರನೇ, ನಾನು ನಿನ್ನ ಬಳಿಗೆ ಬಂದ ಕಾರಣವನ್ನು ಹೇಳುತ್ತೇನೆ ಕೇಳು.

೫. ವೈಷ್ಣವನಾದ ಯಯಾತಿಯಿಂದ ಭೂಮಿಯಲ್ಲಿರುವ ಮನುಜರೆಲ್ಲರೂ, ವೈಷ್ಣವರಾಗಿ ಮಾಡಲ್ಪಟ್ಟಿದ್ದಾರೆ.

೬. ಆ ರಾಜನು ಭೂಲೋಕದ ರೂಪವನ್ನು ವೈಕುಂಠಕ್ಕೆ ಸಮವಾಗಿ ಮಾಡಿದ್ದಾನೆ. ಮನುಷ್ಯರು ಮುಪ್ಪು ರೋಗಗಳಿಂದ ವರ್ಜಿತರಾಗಿ ಅಮರರಾಗಿದ್ದಾರೆ.

೭. ಅವರು ಪಾಪವನ್ನು ಮಾಡುವುದೇ ಇಲ್ಲ. ಸುಳ್ಳನ್ನಾಡುವುದಿಲ್ಲ. ಕಾಮಕ್ರೋಧಗಳನ್ನು ಬಿಟ್ಟಿದ್ದಾರೆ. ಲೋಭಮೋಹಗಳನ್ನು ತ್ಯಜಿಸಿದ್ದಾರೆ.

೮. ಎಲ್ಲರೂ ದಾನಶೀಲರು. ಮಹಾತ್ಮರು. ಧರ್ಮಾಸಕ್ತರು. ನಾರಾಯಣನನ್ನು ಸಮಸ್ತಭಾವದಿಂದಲೂ ಪೂಜಿಸುತ್ತಾರೆ.

**ತೇನ ವೈಷ್ಣವಧರ್ಮೇಣ ಮಾನವಾ ಜಗತೀತಲೇ ।**
**ನಿರಾಮಯಾ ವೀತಭಯಾ ಸರ್ವೇ ಚ ಸ್ಥಿರಯೌವನಾಃ ॥ ೯ ॥**

**ದೂರ್ವಾ ವಟಾ ಯಥಾ ದೇವ ವಿಸ್ತಾರಂ ಯಾಂತಿ ಭೂತಳೇ ।**
**ತಥಾ ತೇ ವಿಸ್ತರಂ ಪ್ರಾಪ್ತಾಃ ಪುತ್ರಪೌತ್ರೈಃ ಪ್ರಪೌತ್ರಕೈಃ ।**
**ತೇಷಾಂ ಪುತ್ರೈಶ್ಚ ಪೌತ್ರೈಶ್ಚ ವಂಶಾದ್ವಂಶಾಂತರಂ ಗತಾಃ ॥ ೧೦ ॥**

**ಏವಂ ವೈಷ್ಣವಧರ್ಮೇಣ ಜರಾಮೃತ್ಯುವಿವರ್ಜಿತಃ ।**
**ಮರ್ತ್ಯಲೋಕಃ ಕೃತಸ್ತೇನ ನಹುಷಸ್ಯಾತ್ಮಜೇನ ಚ ।**
**ಪದಭ್ರಷ್ಟೋಽಸ್ಮಿ ಸಂಜಾತೋ ವ್ಯಾಪಾರೇಣ ವಿವರ್ಜಿತಃ ॥ ೧೧ ॥**

**ಏವಂ ತೇ ಸರ್ವಮಾಖ್ಯಾತಮಾತ್ಮಕರ್ಮವಿನಾಶನಂ ।**
**ಏವಂ ಜ್ಞಾತ್ವಾ ಸಹಸ್ರಾಕ್ಷ ಲೋಕಸ್ಯಾಸ್ಯ ಹಿತಂ ಕುರು ॥ ೧೨ ॥**

**ಏತತ್ತೇ ಸರ್ವಮಾಖ್ಯಾತಂ ಯಥಾ ಪೃಷ್ಟೋಽಸ್ಮಿ ವೈ ತ್ವಯಾ ।**
**ಏತಸ್ಮಾತ್ಕಾರಣಾದಿಂದ್ರ ಆಗತಸ್ತವ ಸನ್ನಿಧೌ ॥ ೧೩ ॥**

---

೯. ಆ ವೈಷ್ಣವಧರ್ಮಪ್ರಭಾವದಿಂದ ಭೂಮಿಯ ಮನುಷ್ಯರೆಲ್ಲಾ ರೋಗವಿಲ್ಲದೇ ಭಯವನ್ನು ಬಿಟ್ಟು ಸ್ಥಿರವಾದ ಯೌವನವನ್ನು ಹೊಂದಿದ್ದಾರೆ.

೧೦. ಗರಿಕೆ, ಆಲಗಳು ಹೇಗೆ ಭೂಮಿಯಲ್ಲಿ ಬೆಳೆದು ಸರ್ವತ್ರ ವ್ಯಾಪಿಸಿ ವಿಸ್ತಾರವಾಗುತ್ತವೆಯೋ ಹಾಗೆ ಮನುಷ್ಯರು, ತಮ್ಮ ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳು, ಅವರ ಮಕ್ಕಳು, ಮೊದಲಾದ ಸಂತತಿಯವರಿಂದ ವಂಶವಂಶಗಳಾಗಿ ವೃದ್ಧಿಹೊಂದುತ್ತಿದ್ದಾರೆ.

೧೧. ಈ ರೀತಿ ವೈಷ್ಣವಧರ್ಮದಿಂದ ಮುಪ್ಪು ಸಾವುಗಳಿಲ್ಲದವರಾಗಿದ್ದಾರೆ, ಆ ರೀತಿ ಆ ಯಯಾತಿಯು ಮಾಡಿರುವನು. ನನಗೆ ಕೆಲಸವಿಲ್ಲದಿರುವುದರಿಂದ ನಾನು ಸ್ಥಾನಭ್ರಷ್ಟನಾಗಿದ್ದೇನೆ.

೧೨. ನನ್ನ ಕೆಲಸವು ನಿಂತು ಹೋಗಿರುವುದರ ಕಾರಣವನ್ನೆಲ್ಲಾ ಹೇಳಿದೆನು. ಇದನ್ನು ತಿಳಿದು ಈ ಲೋಕಕ್ಕೆ ಹಿತವಾಗುವಂತೆ ಮಾಡು.

೧೩. ನೀನು ಕೇಳಿದುದಕ್ಕೆ ಕಾರಣವನ್ನೆಲ್ಲಾ ಹೇಳಿದೆ. ಇದಕ್ಕೋಸ್ಕರಲೇ ನಿನ್ನ ಬಳಿಗೆ ಬಂದಿರುವೆನು. ಎಂದನು.

॥ ಇಂದ್ರ ಉವಾಚ ॥

ಪೂರ್ವಮೇವ ಮಯಾ ದೂತ ಆಗಮಾರ್ಥಂ ಮಹಾತ್ಮನಃ ।
ಪ್ರೇಷಿತೋ ಧರ್ಮರಾಜೇಂದ್ರ ದೂತೇನಾಸ್ಯಾಪಿ ಭಾಷಿತಂ ॥ ೧೪ ॥

ನಾಹಂ ಸ್ವರ್ಗಸ್ಯ ಚೈವಾರ್ಥೀ ನಾಗಮಿಷ್ಯೇ ದಿವಂ ಪುನಃ ।
ಸ್ವರ್ಗರೂಪಂ ಕರಿಷ್ಯಾಮಿ ಸರ್ವಂ ತದ್ಭೂಮಿಮಂಡಲಂ ॥ ೧೫ ॥

ಇತ್ಯಾಚಚಕ್ಷೇ ಭೂಪಾಲಃ ಪ್ರಜಾಪಾಲ್ಯಂ ಕರೋತಿ ಚ ।
ತಸ್ಯ ಧರ್ಮಪ್ರಭಾವೇನ ಭೀತಸ್ತಿಷ್ಠಾಮಿ ಸರ್ವತಃ ॥ ೧೬ ॥

॥ ಧರ್ಮರಾಜ ಉವಾಚ ॥

ಯೇನ ಕೇನಾಪ್ಯುಪಾಯೇನ ತಮಾನಯಸ್ವ ಭೂಪತಿಂ ।
ದೇವರಾಜ ಮಹಾಭಾಗ ಯದಿ ಚೇಚ್ಛಸಿ ಮತ್ಪ್ರಿಯಂ ॥ ೧೭ ॥

ಇತ್ಯಾಕರ್ಣ್ಯ ವಚಸ್ತಸ್ಯ ಧರ್ಮಸ್ಯಾಪಿ ಸುರಾಧಿಪಃ ।
ಚಿನ್ತಯಾಮಾಸ ಮೇಧಾವೀ ಸರ್ವತತ್ತ್ವೇನ ಪಿಪ್ಪಲ ॥ ೧೮ ॥

---

೧೪-೧೫. ಇಂದ್ರನು ಹೇಳಿದನು:—ಎಲೈ ಯಮನೇ, ಮೊದಲೇ ಅವನನ್ನು ಇಲ್ಲಿಗೆ ಕರೆತರುವುದಕ್ಕೋಸ್ಕರ ದೂತನನ್ನು ಕಳುಹಿಸಿದ್ದೆ, ದೂತನೂ ಅವನಿಗೆ ನಾನಾ ವಿಧವಾಗಿ ಹೇಳಿದನು. ಆದರೂ ಆ ರಾಜನು ನನಗೆ ಸ್ವರ್ಗ ಬೇಕಿಲ್ಲ. ನಾನು ಸ್ವರ್ಗಕ್ಕೆ ಬರುವುದೂ ಇಲ್ಲ. ಭೂಮಂಡಲವನ್ನೇ ಸ್ವರ್ಗರೂಪವನ್ನಾಗಿ ಮಾಡುತ್ತೇನೆ.

೧೬. ಹೀಗೆಂದು ಹೇಳಿದನು. ಪ್ರಜೆಗಳನ್ನು ಹಾಗೆಯೇ ಕಾಪಾಡುತ್ತಾನೆ. ಅವನ ಧರ್ಮದ ಪ್ರಭಾವದಿಂದ ಎಲ್ಲಾ ವಿಷಯಗಳಲ್ಲೂ ನಾನು ಹೆದರಿದ್ದೇನೆ.

೧೭. ಧರ್ಮರಾಜನು ಹೇಳಿದನು:—ಎಲೈ ಮಹಾನುಭಾವನೇ, ನನಗೆ ಇಷ್ಟವಾದುದನ್ನು ಮಾಡಬೇಕೆಂದು ನಿನಗಿಷ್ಟವಿದ್ದರೆ ಯಾವದಾದರೂ ಉಪಾಯದಿಂದ ಅವನನ್ನು ಇಲ್ಲಿಗೆ ಬರಮಾಡು ಎನ್ನಲು,

೧೮. ಧರ್ಮರಾಜನ ಮಾತನ್ನು ಇಂದ್ರನು ಕೇಳಿ ತನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸಿ ಯೋಚಿಸಿದನು.

ಕಾಮಮಾಹ ಸಮಾಹೂಯ ಗಂಧರ್ವಾಂಶ್ಚ ಪುರಂದರಃ ।
ಮಕರಂದಂ ರತಿಂ ದೇವ ಆನಿನಾಯ ಮಹಾತ್ಮನಃ ॥ ೧೯ ॥

ತಥಾ ಕುರುತ ವೈ ಯೂಯಂ ಯಥಾಽಗಚ್ಛತಿ ಭೂಪತಿಃ ।
ಯೂಯಂ ಗಚ್ಛನ್ತು ಭೂಲೋಕಂ ಮಯಾದಿಷ್ಟಾ ನ ಸಂಶಯಃ ॥ ೨೦ ॥

ಏವಮುಕ್ತ್ವಾ ಗತಾಸ್ಸರ್ವೇ ಯತ್ರ ರಾಜಾ ಸ ನಾಹುಷಿಃ ।
ನಟರೂಪೇಣ ತೇ ಸರ್ವೇ ಕಾಮಾದ್ಯಾಃ ಕರ್ಮಣಾ ದ್ವಿಜ ॥ ೨೧ ॥

ಆಶೀರ್ಭಿರಭಿನಂದ್ಯೈವ ತೇ ಚ ಊಚುಃ ಸುನಾಟಕಂ ।
ತೇಷಾಂ ತದ್ವಚನಂ ಶ್ರುತ್ವಾ ಯಯಾತಿಃ ಪೃಥಿವೀಪತಿಃ ॥ ೨೨ ॥

ಸಭಾಂ ಚಕಾರ ಮೇಧಾವೀ ದೇವರೂಪಾಂ ಸುಪಂಡಿತೈಃ ।
ಸಮಾಯಾತಃ ಸ್ವಯಂ ಭೂಪೋ ಜ್ಞಾನವಿಜ್ಞಾನಕೋವಿದಃ ॥ ೨೩ ॥

ತೇಷಾಂ ತು ನಾಟಕಂ ರಾಜಾ ಪಶ್ಯಮಾನಃ ಸ ನಾಹುಷಿಃ ।
ಚರಿತ್ರಂ ವಾಮನಸ್ಯಾಪಿ ಉತ್ಪತ್ತಿಂ ವಿಪ್ರರೂಪಿಣಃ ॥ ೨೪ ॥

---

೧೯-೨೧. ಆಗ ಇಂದ್ರನು, ಕಾಮ, ಗಂಧರ್ವರು, ಮಕರಂದ, ರತಿ, ಇವರನ್ನು ಕರೆಸಿ ನೀವು ನನ್ನ ಅಪ್ಪಣೆಯಂತೆ ಭೂಲೋಕಕ್ಕೆ ಹೋಗಿ ಆ ಯಯಾತಿರಾಜನು ಸ್ವರ್ಗಕ್ಕೆ ಬರುವಂತೆ ಮಾಡಿರಿ. ಎಂದು ಅಪ್ಪಣೆ ಮಾಡಲು, ಅವರೆಲ್ಲರೂ ಆ ಯಯಾತಿ ಇರುವಲ್ಲಿಗೆ ನಟರೂಪವನ್ನು ಹೊಂದಿ ಹೋದರು.

೨೨-೨೩. ಆ ಕಾಮಾದಿಗಳು ಆ ಯಯಾತಿಯನ್ನು ಆಶೀರ್ವದಿಸಿ, ನಾಟಕ ವಾಡುತ್ತೇವೆಂದು ಹೇಳಿದರು. ಅವರ ಆ ಮಾತನ್ನು ಕೇಳಿ ಯಯಾತಿಯು ಪಂಡಿತ ರೊಡನೆ ಕೂಡಿದ ಸಭೆಯನ್ನು ಮಾಡಿಸಿ ತಾನೇ ಅಲ್ಲಿಗೆ ಬಂದನು.

೨೪. ಆ ಯಯಾತಿಯು ಅವರ ನಾಟಕದಲ್ಲಿ ವಾಮನ ಚರಿತ್ರೆಯನ್ನು ನೋಡುತ್ತಾ ಆ ವಾಮನನ ವಿಪ್ರರೂಪವನ್ನೂ, ಉತ್ಪತ್ತಿಯನ್ನೂ ನೋಡಿದನು.

ರೂಪೇಣಾಪ್ರತಿಮಾ ಲೋಕೇ ಸುಸ್ವರಂ ಗೀತ್ತಮುತ್ತಮಂ ।
ಗಾಯಮಾನಾ ಜರಾ ರಾಜನ್ನಾರ್ಯಾರೂಪೇಣ ವೈ ತದಾ ।
ತಸ್ಯಾ ಗೀತೇನ ಲಾಸ್ಯೇನ ಹಾಸ್ಯೇನ ಲಲಿತೇನ ಚ ॥ ೨೫ ॥

ಮಧುರಾಲಾಪತಸ್ತಸ್ಯ ಕಂದರ್ಪಸ್ಯ ಚ ಮಾಯಯಾ ।
ಮೋಹಿತಸ್ತೇನ ಭಾವೇನ ದಿವ್ಯೇನ ಚರಿತೇನ ಚ ॥ ೨೬ ॥

ಬಲಶ್ಚೈವ ಯಥಾರೂಪಂ ಬಲಿರ್ಬದ್ಧೋ ಯಥಾ ಪುರಾ ।
ವಾಮನಸ್ಯ ಯಥಾ ರೂಪಂ ಚಕ್ರೇ ಮನ್ಮಥಸ್ತಾದೃಶಂ ॥ ೨೭ ॥

ಸೂತ್ರಧಾರಃ ಸ್ವಯಂ ಕಾಮೋ ಮಾಧವಃ ಪಾರಿಪಾರ್ಶ್ವಕಃ ।
ನಟೀವೇಷಧರಾ ಜಾತಾ ಸಾ ರತಿರ್ಹೃಷ್ಟವಲ್ಲಭಾ ॥ ೨೮ ॥

ನೇಪಥ್ಯಾಭಿಚರಾಃ ಸರ್ವೇ ತಸ್ಮಿನ್ವೈ ನಾಟ್ಯಕರ್ಮಣಿ ।
ಮಕರಂದೋ ಮಹಾಪ್ರಾಜ್ಞಃ ಕ್ಷೋಭಯಾಮಾಸ ಭೂಪತಿಂ ॥ ೨೯ ॥

---

೨೫. ಅಲ್ಲಿ ಜರೆಯು ಆರ್ಯಾರೂಪದಿಂದ ರೂಪವತಿಯಾಗಿ ಸುಸ್ವರವಾಗಿ ಗೀತವನ್ನು ಹಾಡಿದಳು. ಆಕೆಯು ಗೀತದಿಂದಲೂ, ಲಲಿತಕರವಾದ ಹಾಸ್ಯದಿಂದಲೂ, ನೃತ್ಯದಿಂದಲೂ ಕೂಡಿ, ಅಭಿನಯಿಸಿದಳು.

೨೬. ಮನ್ಮಥನು, ಮಾಯೆಯಿಂದಲೂ, ಮಧುರಾಲಾಪದಿಂದಲೂ, ಆ ದಿವ್ಯ ಚರಿತೆಯಿಂದಲೂ ಮೋಹಿಸುವಂತೆ ಮಾಡಿದನು.

೨೭. ಬಲಿಯು ಹಿಂದೆ ಕಟ್ಟಲ್ಪಟ್ಟ ರೀತಿಯಲ್ಲಿ ಬಲನೂ ಕೂಡ ಯಥಾರೂಪವಾಗಿ ಅಭಿನಯಿಸಿದನು. ಬಲಿಯು ಕಟ್ಟಲ್ಪಟ್ಟ ರೀತಿಯು ಬಹು ಸ್ವಾರಸ್ಯವಾಗಿರುವಂತೆ ವಾಮನನ ಪಾತ್ರವನ್ನು ಧರಿಸಿದ್ದ ಮನ್ಮಥನು ನಟಿಸಿದನು.

೨೮. ಕಾಮನು ಸೂತ್ರಧಾರನಾದನು. ಮಾಧವನು ಪಾರಿಪಾರ್ಶ್ವಕನಾದನು. ರತಿಯು ನಟೀವೇಷವನ್ನು ಧರಿಸಿದಳು.

೨೯. ಮಿಕ್ಕವರೆಲ್ಲರೂ ನಾಟ್ಯದಲ್ಲಿ ಬೇರೆಬೇರೆ ಪಾತ್ರವನ್ನು ಧರಿಸಿ ನಟಿಸಿದರು. ಮಕರಂದನು ರಾಜನ ಮನಸ್ಸನ್ನು ಕಲಕಿಸಿದನು.

ಯಥಾ ಯಥಾ ಪಶ್ಯತಿ ನೃತ್ಯಮುತ್ತಮಂ
ಗೀತಂ ಸಮಾಕರ್ಣ್ಯ ಚ ಭೂಪತಿಃ ಸಃ
ತಥಾ ತಥಾ ಮೋಹವಶಂ ಪ್ರಣೀತಃ
ಸಾಧುಪ್ರಣೀತೇನ ಮಹಾನುಭಾವಃ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಯಯಾತಿಚರಿತೇ ಷಟ್ಸಪ್ತತಿತಮೋಽಧ್ಯಾಯಃ



---

೩೦. ರಾಜನು ಗೀತವನ್ನು ಕೇಳುತ್ತಲೂ ಉತ್ತಮವಾದ ನೃತ್ಯವನ್ನು ನೋಡುತ್ತಲೂ ಇದ್ದು ನಾಟಕವನ್ನು ನೋಡಿದಹಾಗೆಲ್ಲಾ ಮೋಹವನ್ನು ಹೊಂದುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಸಪ್ತಸಪ್ತತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ಕಾಮಸ್ಯ ಗೀತಲಾಸ್ಯೇನ ಹಾಸ್ಯೇನ ಲಲಿತೇನ ಚ ।
ಮೋಹಿತಸ್ತೇನ ರಾಜೇಂದ್ರೋ ನಟರೂಪೇಣ ಪಿಪ್ಪಲ ॥ ೧ ॥

ಕೃತ್ವಾ ಮೂತ್ರಪುರೀಷಂ ಚ ಸ ರಾಜಾ ನಹುಷಾತ್ಮಜಃ ।
ಅಕೃತ್ವಾ ಪಾದಯೋಃ ಶೌಚಮಾಸನೇ ಉಪವಿಷ್ಟವಾನ್ ॥ ೨ ॥

ತದಂತರಂ ತು ಸಂಪ್ರಾಪ್ಯ ಸಂಚಚಾರ ಜರಾ ನೃಪಂ ।
ಕಾಮಶ್ಚಾಪಿ ನೃಪಶ್ರೇಷ್ಠ ಇಂದ್ರಕಾರ್ಯಂ ಕೃತಂ ಹಿ ತೈಃ ॥ ೩ ॥

ನಿವೃತ್ತೇ ನಾಟಕೇ ತಸ್ಮಿನ್ ಗತೇಷು ತೇಷು ಭೂಪತಿಃ ।
ಜರಾಭಿಭೂತೋ ಧರ್ಮಾತ್ಮಾ ಕಾಮಸಂಸಕ್ತಮಾನಸಃ ॥ ೪ ॥

---

## ಎಪ್ಪತ್ತೇಳನೆಯ ಅಧ್ಯಾಯವು

೧-೨. ಸುಕರ್ಮನು ಹೇಳಿದನು:—ಕಾಮನ ಆ ನೃತ್ಯದಿಂದಲೂ ಹಾಸ್ಯದಿಂದಲೂ, ರೂಪದಿಂದಲೂ, ಆ ರಾಜನು ಮೋಹಗೊಂಡನು. ಹೀಗೆ ನಾಟಕ ನೋಡುವುದರಲ್ಲಿ ಆಸಕ್ತನಾಗಿದ್ದ ಆ ರಾಜನು ಜಲಮಲಬಾಧೆಗಳನ್ನು ತೀರಿಸಿಕೊಂಡು ಅವಸರದಿಂದ ಕೈಕಾಲುಗಳನ್ನು ತೊಳೆದುಕೊಳ್ಳದೇ ಆಸನದಲ್ಲಿ ಕುಳಿತನು.

೩. ಈ ಸಂದರ್ಭವನ್ನೇ ಕಾಯುತ್ತಿದ್ದ ಜರೆಯು ಅವನನ್ನು ಪ್ರವೇಶಿಸಿದಳು. ಕಾಮನೂ ಕೂಡ ಇಂದ್ರನ ಅಪ್ಪಣೆಯನ್ನು ಪಾಲಿಸಿದಂತಾಯಿತು.

೪. ನಾಟಕವೂ ಮುಗಿಯಿತು. ಆ ಕಾಮಾದಿಗಳೆಲ್ಲರೂ ತಮ್ಮ ಲೋಕಕ್ಕೆ ಹೊರಟುಹೋದರು. ರಾಜನು ಮುಪ್ಪಿನಿಂದ ಕೂಡಿದವನಾಗಿ ಕಾಮಿಯಾದನು.

**ಮೋಹಿತಃ ಕಾಮದೇವೇನ ವಿಹ್ವಲೋ ವಿಕಲೇಂದ್ರಿಯಃ ।**
**ಅತೀವ ಮುಗ್ಧೋ ಧರ್ಮಾತ್ಮಾ ವಿಷಯೈಶ್ಚ ಪರಾಜಿತಃ ॥ ೫ ॥**

**ಏಕದಾ ಮೃಗಯಾ ಶೀಲಃ ಸಂಪ್ರಾಪ್ತಃ ಕಾಮಸಂಯುತಃ**
**ವನೇ ಚ ಕ್ರೀಡತೇ ವಿಪ್ರ ಮೋಹರಾಗವಶಂ ಗತಃ ॥ ೬ ॥**

**ಕ್ರೀಡಮಾನಸ್ಯ ತಸ್ಯಾಪಿ ನೃಪತೇಶ್ಚ ಮಹಾತ್ಮನಃ ।**
**ಮೃಗಶ್ಚೈತಃ ಸಮಾಯಾತಃ ಚತುಶ್ಶೃಂಗೋ ಹ್ಯನೌಪಮಃ ॥ ೭ ॥**

**ಸರ್ವಾಂಗಸುಂದರೋ ವಿಪ್ರ ಹೇಮವರ್ಣತನೂರುಹಃ ।**
**ರತ್ನಮೌಳಿಸ್ಸುಚಿತ್ರಾಂಗೋ ದರ್ಶನೀಯಮನೋಹರಃ ॥ ೮ ॥**

**ಅಭ್ಯಧಾವತ್ಸ ವೇಗೇನ ತಂ ದೃಷ್ಟ್ವಾ ಚಾಪಬಾಣವಾನ್ ।**
**ಇತ್ಯಾಶಶಂಕ ಮೇಧಾವೀ ಕೋಽಪಿ ದೈತ್ಯೋಽ ಯಮಾಗತಃ ॥ ೯ ॥**

---

೫. ಕಾಮದಿಂದ ಮೋಹಿತನಾಗಿಯೂ ದುಃಖಿಯಾಗಿಯೂ ಆದನು. ಇಂದ್ರಿಯಗಳು ತಮ್ಮ ಪಾಟವವನ್ನು ಬಿಡುವಂತಾದವು. ಬಹು ಆಸೆಯಿಂದ ಕೂಡಿ ವಿಷಯ ಸುಖಗಳಿಗಧೀನನಾದನು.

೬. ಒಂದುಸಾರಿ ಬೇಟೆಯಲ್ಲಾಸಕ್ತನಾಗಿ ಕಾಮದಿಂದ ಮೋಹಪರವಶನಾಗಿ ಕಾಡಿನಲ್ಲಿ ಕ್ರೀಡಿಸುತ್ತಿದ್ದನು.

೭. ಆ ರಾಜನು ಬೇಟೆಯಾಡುತ್ತಿದ್ದಾಗ ಒಂದು ನಾಲ್ಕುಕೊಂಬಿನ ಮೃಗವು ಅಲ್ಲಿಗೆ ಬಂತು.

೮. ಅದು ಸರ್ವಾಂಗಗಳಲ್ಲೂ ಸುಂದರವಾಗಿದ್ದಿತು. ಅದಕ್ಕೆ ಚಿನ್ನದ ಬಣ್ಣದ ಮೈಕೂದಲುಗಳು ಇದ್ದುವು. ತಲೆಯು ರತ್ನದ್ದಾಗಿತ್ತು. ಚಿತ್ರವಿಚಿತ್ರವಾದ ಅವಯವವುಳ್ಳದ್ದಾಗಿ ನೋಡುವುದಕ್ಕೆ ಬಹು ಚೆನ್ನಾಗಿದ್ದಿತು.

೯. ಅದು ಬಂದುದನ್ನು ನೋಡಿ ಧನುರ್ಬಾಣಗಳನ್ನು ತೆಗೆದುಕೊಂಡು ಓಡಿಸಿಕೊಂಡು ಹೋದನು. ಯಾವನೋ ರಾಕ್ಷಸನಿರಬಹುದೆಂಬ ಶಂಕೆಯು ಉತ್ಪನ್ನವಾಯಿತು.

ತೇನ ರಾಜಾ ಮೃಗೇಣಾಪಿ ದೂರಮಾಕರ್ಷಿತಸ್ತದಾ ।
ಗತಸ್ಸ ರಥವೇಗೇನ ಶ್ರಮೇಣ ಪರಿಖೇದಿತಃ ॥ ೧೦ ॥

ಪಶ್ಯಮಾನಸ್ಯ ತಸ್ಯಾಪಿ ಮೃಗಸ್ತ್ವನ್ತರಧೀಯತ ।
ಸ ಪಶ್ಯತಿ ವನಂ ತತ್ರ ನಂದನೋಪಮದ್ಭುತಂ ॥ ೧೧ ॥

ಚಾರುವೃಕ್ಷಸಮಾಕೀರ್ಣಂ ಭೂತಪಂಚಕಶೋಭಿತಂ ।
ಗುರುಭಿಶ್ಚಂದನೈಃ ಪುಣ್ಯೈಃ ಕದಳೀಖಂಡಮಂಡಿತೈಃ ॥ ೧೨ ॥

ವಕುಳಾಶೋಕಪುನ್ನಾಗೈರ್ನಾರಿಕೇಳೈಶ್ಚ ತಿಂದುಕೈಃ ।
ಪೂಗೀಫಲೈಶ್ಚ ಖರ್ಜೂರೈಃ ಕುಮುದೈಃ ಸಪ್ತಪರ್ಣಕೈಃ ॥ ೧೩ ॥

ಪುಷ್ಪಿತೈಃ ಕರ್ಣಿಕಾರೈಶ್ಚ ನಾನಾವೃಕ್ಷೈಸ್ಸದಾಫಲೈಃ ।
ಪುಷ್ಪಿತಾಮೋದಸಂಯುಕ್ತೈಃ ಕೇತಕೈಃ ಪಾಟಲೈಸ್ತಥಾ ॥ ೧೪ ॥

ಪಶ್ಯಮಾನೋ ಮಹಾರಾಜೋ ದದರ್ಶ ಸರ ಉತ್ತಮಂ ।
ಪುಣ್ಯೋದಕೇನ ಸಂಪೂರ್ಣಂ ವಿಸ್ತೀರ್ಣಂ ಪಂಚಯೋಜನಂ ॥ ೧೫ ॥

---

೧೦. ಆ ಮೃಗವು ರಾಜನನ್ನು ಬಹುದೂರ ಎಳೆದುಕೊಂಡುಹೋಯಿತು. ಅವನು ಶ್ರಮವಾಗುತ್ತಿದ್ದರೂ ರಥದ ವೇಗದಿಂದ ಹೊರಟುಹೋದನು.

೧೧. ರಾಜನು ನೋಡುತ್ತಿದ್ದಂತೆಯೇ ಆ ಮೃಗವು ಅಲ್ಲಿಯೇ ಅದೃಶ್ಯವಾಯಿತು. ಅಲ್ಲಿ ನಂದನವನದಂತಿರುವ ಒಂದು ಉದ್ಯಾನವನವಿದ್ದಿತು.

೧೨-೧೪. ಆ ವನವು ಚಂದನ, ಬಾಳೆ, ವಕುಳ, ಅಶೋಕ, ಪುನ್ನಾಗ, ತೆಂಗು, ಕುಮುದ, ಸಪ್ತಪರ್ಣ, ಅಡಕೆ, ಕರ್ಣಿಕಾರ, ಇವೇ ಮೊದಲಾದ ವೃಕ್ಷಗಳಿಂದಲೂ, ಹೂ ಬಿಟ್ಟು ವಾಸನೆಯನ್ನು ಬೀರುತ್ತಿರುವ, ಕೇತಕಿ, (ತಾಳೆ) ಪಾದರಿಗಳಿಂದಲೂ ಕೂಡಿ, ಪಂಚಭೂತಗಳಿಂದಲೂ ಕಂಗೊಳಿಸುತ್ತಿತ್ತು.

೧೫. ಹೀಗೆಯೇ ಅಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ಒಂದು ಸರೋವರವನ್ನು ಕಂಡನು. ಆ ಸರೋವರವು ಉತ್ತಮವಾದ ಜಲದಿಂದ ಕೂಡಿ ಐದು ಯೋಜನಗಳ ವಿಸ್ತಾರವಾಗಿದ್ದಿತು.

**ಹಂಸಕಾರಂಡವಾಕೀರ್ಣಂ ಜಲಪಕ್ಷಿನಿನಾದಿತಂ ।**
**ಕಮಲೈಶ್ಚಾಪಿ ಮುದಿತಂ ಶ್ವೇತೋತ್ಪಲವಿರಾಜಿತಂ** ॥ ೧೬ ॥

**ರಕ್ತೋತ್ಪಲೈಃ ಶೋಭಮಾನಂ ಹಾಟಕೋತ್ಪಲಮಂಡಿತಂ ।**
**ನಿಲೋತ್ಪಲೈಃ ಪ್ರಕಾಶನ್ತಂ ಕಲ್ಹಾರೈರತಿಶೋಭಿತಂ** ॥ ೧೭ ॥

**ಮತ್ತೈರ್ಮಧುಕರೈಶ್ಚಾಪಿ ಸರ್ವತ್ರ ಪರಿನಾದಿತಂ**
**ಏವಂ ಸರ್ವಗುಣೋಪೇತಂ ದದರ್ಶ ಸರ ಉತ್ತಮಂ** ॥ ೧೮ ॥

**ಪಂಚಯೋಜನವಿಸ್ತೀರ್ಣಂ ದಶಯೋಜನದೀರ್ಘಕಂ ।**
**ತಟಾಕಂ ಸರ್ವತೋಭದ್ರಂ ದಿವ್ಯಭಾವೈರಲಂಕೃತಂ** ॥ ೧೯ ॥

**ರಥವೇಗೇನ ಸಂಖಿನ್ನಃ ಕಿಂಚಿಚ್ಛ್ರಮೇಣ ಪೀಡಿತಃ ।**
**ನಿಷಸಾದ ತಟೇ ತಸ್ಯ ಶ್ರಿತಚ್ಛಾಯಾಂ ಸುಶೀತಲಾಂ** ॥ ೨೦ ॥

**ಸ್ನಾತ್ವಾ ಪೀತ್ವಾ ಜಲಂ ಶೀತಂ ಪದ್ಮಸೌಗಂಧ್ಯವಾಸಿತಂ ।**
**ಸರ್ವಶ್ರಮೋಪಶಮನಮಮೃತೋಪಮೇವ ಚ** ॥ ೨೧ ॥

---

೧೬-೧೯. ಹಂಸ, ಬಕ ಮುಂತಾದ ನೀರಿನ ಹಕ್ಕಿಗಳು ರಮ್ಯವಾಗಿ ಕಲಕಲ ಧ್ವನಿಮಾಡುತ್ತಿದ್ದವು. ಆ ಸರೋವರವು ಕಮಲಗಳಿಂದಲೂ, ಬಿಳಿಯ ನೈದಿಲೆಗಳಿಂದಲೂ, ಕೆಂದಾವರೆಗಳಿಂದಲೂ, ಕನ್ನೈದಿಲೆಗಳಿಂದಲೂ, ನೀಲೋತ್ಪಲಗಳಿಂದಲೂ, ಕಲ್ಹಾರಗಳಿಂದಲೂ, ಶೋಭಿತವಾಗಿದ್ದಿತು. ಮದಿಸಿದ ದುಂಬಿಗಳು ಶ್ರಾವ್ಯವಾಗಿ ಧ್ವನಿಮಾಡುತ್ತಿದ್ದುವು. ಐದು ಯೋಜನ ಅಗಲವೂ ಹತ್ತು ಯೋಜನ ಉದ್ದವೂ, ಉಳ್ಳದ್ದಾಗಿ ಸರ್ವಾಲಂಕಾರಗಳಿಂದಲೂ, ಕೂಡಿ ಶೋಭಿಸುತ್ತಿದ್ದಿತು, ಇಂತಹ ದಿವ್ಯವಾದ ಆ ಸರಸ್ಸನ್ನು ನೋಡಿದನು.

೨೦. ರಥದ ವೇಗದಿಂದ ಆಯಾಸಪಟ್ಟಿದ್ದ ಈತನು ಆ ಸರೋವರದ ದಡದಲ್ಲಿದ್ದ ಒಂದು ಮರದ ನೆರಳಲ್ಲಿ ಕುಳಿತುಕೊಂಡನು.

೨೧. ಪದ್ಮದ ವಾಸನೆಯುಳ್ಳ ಆ ನೀರಿನಲ್ಲಿ ಸ್ನಾನಮಾಡಿ, ಅದನ್ನು ಕುಡಿದು ಆಯಾಸಪರಿಹಾರ ಮಾಡಿಕೊಂಡನು. ಆಗ ಬಹು ಆನಂದಕರವಾಗಿದ್ದಿತು.

ಶೀತಚ್ಛಾಯಾಶ್ರಿತೇನಾಪಿ ರಾಜ್ಞಾ ತೇನ ಚ ಭೂತಳೇ ।
ಗೀತಧ್ವನಿಂ ಸಮಾಕರ್ಣ್ಯ ಗೀಯಮಾನಂ ಯಥಾ ತಥಾ ॥ ೨೨ ॥

ಯಥಾ ಸ್ತ್ರೀ ಗಾಯತೇ ದಿವ್ಯಾ ತಥಾಯಂ ಶ್ರೂಯತೇ ಧ್ವನಿಃ ।
ಗೀತಪ್ರಿಯೋ ಮಹಾರಾಜ ಏವಂ ಚಿಂತಾಂ ಪರಾಂ ಗತಃ ॥ ೨೩ ॥

ಚಿಂತಾಕುಲಸ್ತು ಧರ್ಮಾತ್ಮಾ ಯಾವಚ್ಚಿಂತಯತೇ ಕ್ಷಣಂ ।
ತಾವನ್ನಾರೀ ವರಾ ಕಾಚಿತ್ಪೀನೋನ್ನತ್ತಪಯೋಧರಾ ॥ ೨೪ ॥

ನೃಪತೇಃ ಪಶ್ಯಮಾನಸ್ಯ ಗತಾ ದೃಷ್ಟಿಪಥಂ ವನೇ ।
ಸರ್ವಾಭರಣಶೋಭಾಂಗೀ ಶೀಲಲಕ್ಷಣಸಂಪದಾ ॥ ೨೫ ॥

ತಸ್ಮಿನ್ ವನೇ ಸಮಾಯಾತಾ ನೃಪತೇಃ ಪುರತಸ್ಸ್ಥಿತಾ ।
ಸಾ ಪೃಷ್ಟಾ ತೇನ ವೈ ರಾಜ್ಞಾ ಕಾ ತ್ವಂ ಕಿಂಕರಣಾಗತಾ ॥ ೨೬ ॥

ವದ ಸರ್ವಂ ವಿಶಾಲಾಕ್ಷಿ ತಚ್ಛ್ರುತ್ವಾ ವಚನಂ ತು ಸಾ ।
ನೋವಾಚ ಕಿಂಚಿದ್ಭೂಪಾಲಂ ಲಜ್ಜಮಾನಾ ವರಾನನಾ ॥ ೨೭ ॥

---

೨೨. ಆ ನೆರಳಿನಲ್ಲಿ ಕುಳಿತಿರುವಾಗ ಹಾಡುತ್ತಿರುವಂತೆ ಸಂಗೀತ ಧ್ವನಿಯು ಕೇಳಿಬಂದಿತು.

೨೩. ಸಂಗೀತದಲ್ಲಿ ಆಸೆಯುಳ್ಳ ಆತನು ಆ ದಿವ್ಯವಾದ ಧ್ವನಿಯು ಹೆಂಗಸು ಗಾನಮಾಡುತ್ತಿರುವಂತೆ ತೋರುವುದೆಂದು ಯೋಚಿಸಿದನು.

೨೪-೨೫. ರಾಜನು ಹೀಗೆ ಯೋಚನೆ ಮಾಡುವಷ್ಟರಲ್ಲಿ ಅವನು ನೋಡುತ್ತಿರುವಂತೆಯೇ ಸರ್ವಾಭರಣಭೂಷಿತಳೂ ಶೀಲಲಕ್ಷಣಗಳಿಂದ ಕೂಡಿ ಉನ್ನತವಾಗಿಯೂ ದಪ್ಪವಾಗಿಯೂ ಇರುವ ಸ್ತನಗಳುಳ್ಳ ಒಬ್ಬ ಹೆಂಗಸು ಕಂಡುಬಂದಳು.

೨೬-೨೭. ಆ ಕಾಡಿನಲ್ಲಿ ಆಕೆಯು ಬಂದು ರಾಜನ ಎದುರಿಗೆ ನಿಂತುಕೊಂಡಳು. ಅವನು ಆಕೆಯನ್ನು ನೋಡಿ, ಎಲೈ ವಿಶಾಲಾಕ್ಷಿ, ನೀನು ಯಾರು? ಏಕೆ ಬಂದೆ? ಅದೆಲ್ಲವನ್ನೂ ಹೇಳು ಎಂದು ಕೇಳಲು ಅದನ್ನು ಕೇಳಿ ಆಕೆಯು ಲಜ್ಜೆಪಟ್ಟುಕೊಂಡು ಏನನ್ನೂ ಹೇಳಲಿಲ್ಲ.

ಪ್ರಹಸ್ಯೈವಂ ಗತಾ ಶೀಘ್ರಂ ವೀಣಾವಾದನತತ್ಪರಾ ।
ವಿಸ್ಮಯೇನಾಪಿ ರಾಜೇಂದ್ರೋ ಮಹತಾ ವ್ಯಾವೃತಸ್ತದಾ ॥ ೨೮ ॥

ಮಯಾ ಸಂಭಾಷಿತಾ ಚಾಪಿ ನ ಸಾ ಬ್ರೂತೇ ತಥೋತ್ತರಂ ।
ತತಶ್ಚಿಂತಾಂ ಸಮಾಪೇದೇ ಯಯಾತಿಃ ಪೃಥಿವೀಪತಿಃ ॥ ೨೯ ॥

ಯೋಽಸೌ ಮೃಗೋ ಯಥಾ ದೃಷ್ಟಶ್ಚತುಶ್ಶೃಂಗಸುವರ್ಣಕಃ ।
ತಸ್ಮಾನ್ನಾರೀ ಸಮುದ್ಭೂತಾ ತತ್ಸತ್ಯಂ ಪ್ರತಿಭಾತಿ ಮೇ ॥ ೩೦ ॥

ಮಾಯಾರೂಪಮಿದಂ ಸತ್ಯಂ ದಾನವಾನಾಂ ಭವಿಷ್ಯತಿ ।
ಚಿಂತಯಿತ್ವಾ ಕ್ಷಣಂ ರಾಜಾ ಯಯಾತಿರ್ನಹುಷಾತ್ಮಜಃ ॥ ೩೧ ॥

ಯಾವಚ್ಚಿಂತಯತೇ ರಾಜಾ ತಾವನ್ನಾರೀ ಮಹಾವನೇ ।
ಅನ್ತರ್ಧಾನಂ ಗತಾ ವಿಪ್ರ ಪ್ರಹಸ್ಯ ನೃಪನಂದನಂ ॥ ೩೨ ॥

---

೨೮. ಆಕೆಯು ನಗುತ್ತಾ ವೀಣೆಯನ್ನು ಬಾರಿಸಲು ಹೊರಟುಹೋದಳು. ರಾಜನೂ ಕೂಡ ಬಹಳವಾದ ಆಶ್ಚರ್ಯದಿಂದ ಯುಕ್ತನಾದನು.

೨೯. ನಾನು ಮಾತನಾಡಿಸಿದರೂ ಉತ್ತರವನ್ನು ಈಕೆಯು ಹೇಳಲೇ ಇಲ್ಲವಲ್ಲ. ಎಂದು ರಾಜನು ಚಿಂತೆಹೊಂದಿದನು.

೩೦. ನಾನು ನಾಲ್ಕುಕೊಂಬಳ್ಳ ಸುವರ್ಣಮೃಗವನ್ನು ನೋಡಿದೆನಲ್ಲಾ ಅದರಿಂದಲೇ ಈ ಹೆಂಗಸು ಅವತರಿಸಿರಬಹುದೆಂದು ನಿಶ್ಚಯವಾಗಿಯೂ ನನಗೆ ತೋರುತ್ತದೆ.

೩೧. ಇದು ಖಂಡಿತವಾಗಿಯೂ ರಾಕ್ಷಸರ ಮಾಯಾರೂಪವಿರಬೇಕು. ಎಂದು ಆ ಯಯಾತಿಯು ಕ್ಷಣಕಾಲ ಚಿಂತಿಸಿದನು.

೩೨. ಆ ಕಾಡಿನಲ್ಲಿ ರಾಜನು ಯೋಚಿಸುತ್ತಿರುವಷ್ಟರಲ್ಲಿ ಆಕೆಯು ನಗುತ್ತಾ ಅಲ್ಲಿಯೇ ಅಂತರ್ಧಾನಳಾದಳು.

ಏತಸ್ಮಿನ್ನಂತರೇ ಗೀತಂ ಸುಸ್ವರಂ ನೃಪತಿಃ ಪುನಃ ।
ಶುಶ್ರಾವ ಪರಮಂ ದಿವ್ಯಂ ಮೂರ್ಛನಾತಾಳಸಂಯುತಂ ॥ ೩೩ ॥

ಜಗಾಮ ಸತ್ವರಂ ರಾಜಾ ಯತ್ರ ಗೀತಧ್ವನಿರ್ಮಹಾನ್ ।
ಜಲಾನ್ತೇ ಪುಷ್ಕಲೆ ಚೈವ ಮಹತ್ಸದನಮುತ್ತಮಂ ॥ ೩೪ ॥

ತಸ್ಯೋಪರಿ ವರಾ ನಾರೀ ಶೀಲರೂಪಗುಣಾನ್ವಿತಾ ।
ದಿವ್ಯಲಕ್ಷಣಸಂಪನ್ನಾ ದಿವ್ಯಾಭರಣಭೂಷಿತಾ ॥ ೩೫ ॥

ದಿವ್ಯೈರ್ಭಾವೈಃ ಪ್ರಭಾತ್ಯೇಕಾ ವೀಣಾದಂಡಕಧಾರಿಣೀ ।
ಗಾಯಂತೀ ಸುಂದರಂ ಗೀತಂ ತಾಲಮಾನಲಯಾನ್ವಿತಂ ॥ ೩೬ ॥

ತೇನ ಗೀತಪ್ರಭಾವೇನ ಮೋಹಯಂತೀ ಚರಾಚರಂ ।
ದೇವಾನ್ಮುನಿಗಣಾನ್ ಸರ್ವಾನ್ ದೈತ್ಯಾನ್ಗಂಧರ್ವಕಿಂನರಾನ್ ॥ ೩೭ ॥

ತಾಂ ಚ ದೃಷ್ಟ್ವಾ ವಿಶಾಲಾಕ್ಷೀ ರೂಪತೇಜೋಪಶಾಲಿನೀಂ ।
ಸಂಸಾರೇ ನಾಸ್ತಿ ಚೈವಾನ್ಯಾ ನಾರೀದೃಶೀ ಚರಾಚರೇ ॥ ೩೮ ॥

---

೩೩. ಅವಳು ಅಂತರ್ಧಾನಳಾದೊಡನೆಯೇ ರಾಜನು ಉತ್ತಮವಾದ ಸಂಗೀತವನ್ನು ಕೇಳಿದನು.

೩೪. ಸಂಗೀತದ ಧ್ವನಿಬರುವಲ್ಲಿಗೆ ರಾಜನು ಜಾಗ್ರತೆಯಾಗಿ ಹೋದನು. ಅಲ್ಲಿ ನೀರಿನ ಮಧ್ಯದಲ್ಲಿ ದೊಡ್ಡದೊಂದು ಮನೆಯು ಕಂಡುಬಂದಿತು.

೩೫-೩೬. ಆ ಮಂದಿರದಲ್ಲಿ ಶೀಲರೂಪಾದಿಗುಣಗಳಿಂದ ಕೂಡಿ ಸರ್ವಲಕ್ಷಣಸಂಪನ್ನೆಯಾದ ಓರ್ವ ಸ್ತ್ರೀಯನ್ನು ಕಂಡನು. ಅವಳು ಸರ್ವಾಭರಣಭೂಷಿತಳಾಗಿ ವೀಣೆಯನ್ನು ಹಿಡಿದು ತಾಳಕ್ಕೆ ತಕ್ಕಂತೆ ವೀಣೆಯನ್ನು ನುಡಿಸುತ್ತ ಶ್ರಾವ್ಯವಾಗಿ ಗಾನಮಾಡುತ್ತಿದ್ದಳು.

೩೭. ಆ ಸಂಗೀತದ ಪ್ರಭಾವದಿಂದ ದೇವತೆಗಳು, ಮುನಿಗಳು, ದೈತ್ಯರು, ಗಂಧರ್ವರು, ಕಿನ್ನರರು ಇವರೆಲ್ಲರನ್ನೂ ಪರವಶರನ್ನಾಗಿ ಮಾಡುತ್ತಿದ್ದಳು.

೩೮. ಇಂತಹ ಲಾವಣ್ಯಗಳಿಂದ ಕೂಡಿದ ಸ್ತ್ರೀಯನ್ನು ನೋಡಿ ಸಂಸಾರದಲ್ಲಿ ಈ ಚರಾಚರವಸ್ತುಗಳಲ್ಲಿ ಇಂಥವಳು ಮತ್ತೊಬ್ಬಳಿಲ್ಲವೆಂದು ಯೋಚಿಸಿದನು.

**ಪುರಾ ನಟೋ ಜರಾಯುಕ್ತೋ ನೃಪತೇಃ ಕಾಮ ಏವ ಹಿ ।**
**ಸಂಚರಂಶ್ಚ ಮಹಾಕಾಮಸ್ತದಾಸೌ ಪ್ರಕಟೋಽಭವತ್ ॥ ೩೯ ॥**

**ಘೃತಂ ದೃಷ್ಟ್ವಾ ಯಥಾ ವಹ್ನೀ ರಶ್ಮಿಮಾನ್ಸಂಪ್ರಜಾಯತೇ ।**
**ತಾಂ ಚ ದೃಷ್ಟ್ವಾ ತಥಾ ಕಾಮಸ್ತತ್ಕಾಯಾತ್ಪ್ರಕಟೋಽಭವತ್ ॥ ೪೦ ॥**

**ಮನ್ಮಥಾವಿಷ್ಟಧರ್ಮಾತ್ಮಾ ತಾಂ ದೃಷ್ಟ್ವಾ ಚಾರುಲೋಚನಾಂ ।**
**ಈದೃಗ್ರೂಪಾ ನ ದೃಷ್ಟಾ ಮೇ ಯಾವತೀ ವಿಶ್ವಮೋಹಿನೀ ॥ ೪೧ ॥**

**ಚಿಂತಯಿತ್ವಾ ಕ್ಷಣಂ ರಾಜಾ ಕಾಮಸಂಸಕ್ತಮಾನಸಃ ।**
**ತಸ್ಯಾಃ ಸ ವಿರಹೇಣಾಪಿ ಲುಬ್ಧೋಽಭೂನ್ನೃಪತಿಸ್ತದಾ ॥ ೪೨ ॥**

**ಕಾಮಾಗ್ನಿನಾ ದಹ್ಯಮಾನಃ ಕಾಮಜ್ವರೇಣ ಪೀಡಿತಃ ।**
**ಕಥಂ ಸ್ಯಾನ್ಮಮ ಚೈವೇಯಂ ಕಥಂ ಭಾವೋ ಭವಿಷ್ಯತಿ ॥ ೪೩ ॥**

---

೩೯. ಮೊದಲು ಜರೆಯಿಂದ ಕೂಡಿದ ಕಾಮನು ನಟಿಸಿದಾಗ ಆ ಕಾಮನು ರಾಜನನ್ನು ಪ್ರವೇಶಿಸಿದ್ದನು. ಈಗ ಅವನು ಪ್ರಕಟವಾದನು.

೪೦. ತುಪ್ಪದ ಸಂಪರ್ಕದಿಂದ ಬೆಂಕಿಯು ಹೇಗೆ ಜಾಜ್ವಲ್ಯಮಾನವಾಗಿ ಉರಿಯುವುದೋ ಹಾಗೆ ರಾಜನು ಆಕೆಯನ್ನು ನೋಡಿ ಕಾಮಪರವಶನಾದನು.

೪೧. ಮೊದಲೇ ಮನ್ಮಥನಿಂದ ಕೂಡಿದವನಾದ್ದರಿಂದ ಆ ಹುಡುಗಿಯನ್ನು ನೋಡಿದ ಮೇಲೆ ಇಂತಹ ರೂಪವತಿಯಾದ ವಿಶ್ವಮೋಹಿನಿಯನ್ನು ನಾನು ನೋಡಿಯೇ ಇಲ್ಲವೆಂದು ಯೋಚಿಸಿದನು.

೪೨. ಕಾಮದಿಂದ ದುಃಖಗೊಂಡವನಾಗಿ ಕ್ಷಣಕಾಲ ಯೋಚಿಸಿ ಅವಳ ವಿರಹವನ್ನು ತಡೆಯಲಸಮರ್ಥನಾದನು.

೪೩. ಕಾಮಜ್ವರದಿಂದಲೂ ಕಾಮಾಗ್ನಿಯಿಂದಲೂ ಪರಿತಪಿಸುತ್ತಾ ಈಕೆಯು ನನಗೆ ಹೇಗೆ ವಶಳಾದಾಳೆಂದೂ, ಈಕೆಗೆ ನನಲ್ಲಿ ಹೇಗೆ ಅಭಿಪ್ರಾಯವುಂಟಾಗುವುದೆಂದೂ ಯೋಚಿಸಿದನು.

ಯದೀಯಂ ಪ್ರಾಪ್ಯತೇ ತರ್ಹಿ ಸಫಲ ಜೀವಿತಂ ಭವೇತ್ ।
ಯದಾ ಮಾಂ ಗೂಹತೇ ಬಾಲಾ ಪದ್ಮಾಸ್ಯಾ ಪದ್ಮಲೋಚನಾ ॥ ೪೪ ॥

ಏವಂ ವಿಚಿಂತ್ಯ ಧರ್ಮಾತ್ಮಾ ಯಯಾತಿಃ ಪೃಥಿವೀಪತಿಃ ।
ತಾಮುವಾಚ ವರಾರೋಹಾಂ ಕಾ ತ್ವಂ ಕಸ್ಯಾಸಿ ವಾ ಶುಭೇ ॥ ೪೫ ॥

ಪೂರ್ವಂ ದೃಷ್ಟಾ ತು ಯಾ ನಾರೀ ಸಾ ದೃಷ್ಟಾ ಪುನರೇವ ಚ ।
ತಾಂ ಚ ಪಪ್ರಚ್ಛ ಧರ್ಮಾತ್ಮಾ ಕಾ ಚೇಯಂ ತವ ಪಾರ್ಶ್ವಗಾ ॥ ೪೬ ॥

ಸರ್ವಂ ಕಥಯ ಕಲ್ಯಾಣಿ ಅಹಂ ಹಿ ನಹುಷಾತ್ಮಜಃ ।
ಸೋಮವಂಶಪ್ರಸೂತಶ್ಚ ಸಪ್ತದ್ವೀಪಾಧಿಪಃ ಶುಭೇ ॥ ೪೭ ॥

ಯಯಾತಿರ್ನಾಮ ಮೇ ದೇವಿ ಖ್ಯಾತೋಽಹಂ ಭುವನತ್ರಯೇ ।
ತ್ವಯಿ ಸಂಗಚ್ಛತೇ ಚೇತೋ ಭಾವಮೇವಂ ಪ್ರವಾಂಛತೇ ॥ ೪೮ ॥

---

೪೪. ಇವಳು ನನಗೆ ಸಿಕ್ಕಿದರೆ ನನ್ನ ಜೀವಿತವು ಸಫಲವಾದೀತು. ಈ ಪದ್ಮಲೋಚನೆಯು ನನ್ನನ್ನು ಅಪ್ಪಿಕೊಂಡರೆ ಆಗ ನನ್ನ ಜನ್ಮ ಸಫಲವು.

೪೫. ಯಯಾತಿಯು ಹೀಗೆಂದು ಯೋಚಿಸಿ ಆಕೆಯನ್ನು ಕುರಿತು ನೀನು ಯಾರು? ಯಾವನಿಗೆ ಸೇರಿದವಳು? ಎಂದು ಕೇಳಿದನು.

೪೬. ಮೊದಲು ನೋಡಿದ ಹೆಂಗಸು ಅಲ್ಲಿದ್ದುದನ್ನು ನೋಡಿ ಆಕೆಯನ್ನು ಕುರಿತು ನಿನ್ನ ಪಕ್ಕದಲ್ಲಿರುವ ಈಕೆ ಯಾರೆಂದು ಕೇಳಿದನು.

೪೭. ನಾನು ಸೋಮವಂಶದಲ್ಲಿ ಹುಟ್ಟಿದ್ದೇನೆ. ನಾನು ಸಪ್ತದ್ವೀಪಗಳಿಗೂ ಅಧಿಪತಿಯು.

೪೮. ನಾನು ಯಯಾತಿಯೆಂಬ ಹೆಸರಿನಿಂದ ಮೂರು ಲೋಕದಲ್ಲೂ ಪ್ರಸಿದ್ಧನಾಗಿದ್ದೇನೆ. ನಿನ್ನಲ್ಲಿ ನನ್ನ ಮನಸ್ಸು ಅಂಟಿದೆ. ನಿನ್ನ ಅಭಿಪ್ರಾಯವನ್ನು ನಾನು ಅಪೇಕ್ಷಿಸುತ್ತೇನೆ.

**ದೇಹಿ ಮೇ ಸಂಗಮಂ ಭದ್ರೇ ಕುರುಷ್ವ ಪ್ರಿಯಮೇವ ಮೇ ।**
**ಯಂ ಯಂ ಹಿ ವಾಂಛಸೇ ಕಾಮಂ ತಂ ತಂ ದದ್ಮಿ ನ ಸಂಶಯಃ ॥ ೪೯ ॥**

**ದುರ್ಜಯೇನಾಪಿ ಕಾಮೇನ ಹತೋಽಹಂ ವರವರ್ಣಿನಿ ।**
**ತಸ್ಮಾತ್ತ್ರಾಹಿ ಸುಶೀಲಂ ಮಾಂ ಪ್ರಸನ್ನಂ ಶರಣಂ ತವ ॥ ೫೦ ॥**

**ರಾಜ್ಯಂ ಚ ಸಕಲಾಮುರ್ವೀಂ ಶರೀರಂ ಚಾಪಿ ಚಾತ್ಮನಃ ।**
**ಸಂಗಮೇ ತವ ದಾಸ್ಯಾಮಿ ತ್ರೈಲೋಕ್ಯಮಿದಮೇವ ತೇ ॥ ೫೧ ॥**

**ತಸ್ಯ ರಾಜ್ಞೋ ವಚಶ್ಶ್ರುತ್ವಾ ಸಾ ಸ್ತ್ರೀ ಪದ್ಮನಿಭಾನನಾ ।**
**ವಿಶಾಲಾಂ ಸ್ವಸಖೀಂ ಪ್ರಾಹ ಬ್ರೂಹಿ ರಾಜಾನಮಾಗತಂ ॥ ೫೨ ॥**

**ನಾಮ ಚೋತ್ಪತ್ತಿಸ್ಥಾನಂ ಚ ಪಿತರಂ ಮಾತರಂ ಶುಭೇ ।**
**ಮಾಮಾಪಿ ಭವತೇ ಕಾಮೋ ಅಸ್ಯಾಗ್ರೇ ಚ ನಿವೇದಯ ॥ ೫೩ ॥**

---

೪೯. ನನಗೆ ನಿನ್ನ ಸಂಗಮಸುಖವನ್ನು ಕೊಟ್ಟು ನನಗೆ ಪ್ರಿಯವನ್ನು ಮಾಡು. ನೀನು ಏನೇನನ್ನು ಅಪೇಕ್ಷಿಸುತ್ತೀಯೋ ಅವೆಲ್ಲವನ್ನೂ ಕೊಡುತ್ತೇನೆ ಸಂಶಯವಿಲ್ಲ.

೫೦. ದುರ್ಜಯನಾದ ಕಾಮನು ನನ್ನನ್ನು ಕೊಲ್ಲುತ್ತಿದ್ದಾನೆ. ಸುಶೀಲನಾದ ನನ್ನನ್ನು ಕಾಪಾಡು. ನಾನು ನಿನಗೆ ಶರಣಾಗತನಾಗಿದ್ದೇನೆ.

೫೧, ರಾಜ್ಯವನ್ನೂ, ಭೂಮಿಯೆಲ್ಲವನ್ನೂ, ಕೊನೆಗೆ ಈ ಶರೀರ ಈ ಆತ್ಮಗಳನ್ನೂ ನಿನ್ನ ಸಂಗಮಸುಖಕ್ಕೋಸ್ಕರ ಕೊಡುತ್ತೇನೆ. ಕೊನೆಗೆ ಈ ಮೂರು ಲೋಕವನ್ನೂ ಕೊಡಲು ಸಿದ್ಧನಾಗಿದ್ದೇನೆ ಎಂದು ಹೇಳಿದನು.

೫೨-೫೩. ಪದ್ಮಾಕ್ಷಿಯಾದ ಆಕೆಯು ರಾಜನ ಆ ಮಾತುಗಳನ್ನು ಕೇಳಿ ತನ್ನ ಸಖಿಯನ್ನು ಕುರಿತು, ಎಲೌ ಸಖಿ, ಈ ರಾಜನ ತಾಯಿತಂದೆಗಳನ್ನೂ ಅಧಿಕಾರ ಹೆಸರುಗಳನ್ನೂ ಕೇಳಿ ನನಗೆ ತಿಳಿಸು. ಈತನಲ್ಲಿ ನನಗೆ ಕಾಮವುಂಟಾಗುತ್ತದೆ. ಇದೆಲ್ಲವನ್ನೂ ಅವನಿಗೆ ತಿಳಿಸಿ ಅವನು ಹೇಳುವುದನ್ನು ನನಗೆ ಬಂದರುಹು ಎನ್ನಲು,

ತಸ್ಯಾಶ್ಚ ಕಾಂಕ್ಷಿತಂ ಜ್ಞಾತ್ವಾ ವಿಶಾಲಾ ಭೂಪತಿಂ ತದಾ ।
ಉವಾಚ ಮಧುರಾಲಾಪೈಃ ಶ್ರೂಯತಾಂ ನೃಪನಂದನ ॥ ೫೪ ॥

॥ ವಿಶಾಲೋವಾಚ ॥

ಕಾಮ ಏಷ ಪುರಾ ದಗ್ಧೋ ದೇವದೇವೇನ ಶಂಭುನಾ ।
ರುರೋದ ಸಾ ರತಿರ್ದುಃಖಾದ್ಭರ್ತೃಹೀನಾಹಿ ಸುಸ್ವರಂ ॥ ೫೫ ॥

ಅಸ್ಮಿನ್ಸರಸಿ ರಾಜೇಂದ್ರ ರತಿರ್ಹಿ ನ್ಯವಸತ್ಸದಾ ।
ತಸ್ಯಾಶ್ಚ ವಿಪ್ರಲಾಪಂ ತು ಸುಸ್ವರಂ ಕರುಣಾನ್ವಿತಂ ॥ ೫೬ ॥

ಸಮಾಕರ್ಣ್ಯ ತತೋ ದೇವೀ ಕೃಪಯಾ ಪರಯಾನ್ವಿತಾ ।
ಸಂಜಾತಾ ರಾಜರಾಜೇಂದ್ರ ಶಂಕರಂ ವಾಕ್ಯಮಬ್ರವೀತ್ ॥ ೫೭ ॥

ಜೀವಯಸ್ವ ಮಹಾದೇವ ಪುನರೇವ ಮನೋಭವಂ ।
ವರಾಕೀಯಂ ಮಹಾಭಾಗಾ ಭರ್ತೃಹೀನಾ ಹಿ ದುಃಖಿತಾ ॥ ೫೮ ॥

---

೫೪. ವಿಶಾಲೆಯೆಂಬ ಆಕೆಯ ಸಖಿಯು ಆಕೆಯ ಆಶಯವನ್ನು ತಿಳಿದು, ರಾಜನನ್ನು ಕುರಿತು ಒಳ್ಳೆಯ ಮಾತುಗಳಿಂದ ಇಂತೆಂದಳು.

೫೫. ವಿಶಾಲೆಯು ಹೇಳಿದಳು:—ಎಲೈ ರಾಜನೇ, ಹಿಂದೆ ದೇವದೇವನಾದ ಶಂಭುವು ಕಾಮನನ್ನು ಸುಡಲು ರತಿಯು ಗಂಡನನ್ನು ಕಳೆದುಕೊಂಡು ದುಃಖಿಸಿದಳು.

೫೬-೫೭. ಈ ಸರೋವರದಲ್ಲಿ ರತಿಯು ಯಾವಾಗಲೂ ವಾಸಿಸುತ್ತಿದ್ದಳು. ಅವಳ ದುಃಖಜನಕವಾದ ಗೋಳನ್ನು ಕೇಳಿ ಪಾರ್ವತಿಯು ಶಂಕರನನ್ನು ಕುರಿತು ಇಂತೆಂದಳು.

೫೮. ಎಲೈ ಮಹಾಭಾಗನೇ ಕಾಮನನ್ನು ಪುನಃ ಬದುಕಿಸು. ಪಾಪ, ಈಕೆಯು ಕರುಣಜನಕಳಾಗಿದ್ದಾಳೆ. ಗಂಡನಿಲ್ಲದೇ ದುಃಖಗೊಂಡಿದ್ದಾಳೆ.

ಕಾಮೇನಾಥ ಸಮಾಯುಕ್ತಾಮಸ್ಮತ್ಸ್ನೇಹಾತ್ಕುರುಷ್ವ ವೈ ।
ತಚ್ಛ್ರುತ್ವಾ ಚ ವಚಃ ಪ್ರಾಹ ಜೀವಯಾಮಿ ಮನೋಭವಂ ॥ ೫೯ ॥

ಕಾಯೇನಾಪಿ ವಿಹೀನೋಽಯಂ ಪಂಚಬಾಣೋ ಮನೋಭವಃ ।
ಭವಿಷ್ಯತಿ ನ ಸಂದೇಹೋ ಮಾಧವಸ್ಯ ಸಖಾ ಪುನಃ ॥ ೬೦ ॥

ದಿವ್ಯೇನಾಪಿ ಶರೀರೇಣ ವರ್ತಯಿಷ್ಯತಿ ನಾನ್ಯಥಾ ।
ಮಹಾದೇವಪ್ರಸಾದೇನ ಮೀನಕೇತುಃ ಸ ಜೀವಿತಃ ॥ ೬೧ ॥

ಆಶೀರ್ಭಿರಭಿನಂದ್ಯೈವ ದೇವ್ಯಾಃ ಕಾಮಂ ಮನೋಭವಂ ।
ಗಚ್ಛ ಕಾಮ ಪ್ರವರ್ತಸ್ವ ನಿತ್ಯಂ ಹಿ ಪ್ರಿಯಯಾ ಸಹ ॥ ೬೨ ॥

ತಾವನ್ಮರ್ತ್ಯೇ ಮಹಾತೇಜಾಃ ಸ್ಥಿತಿಸಂಹಾರಕಾರಕಃ ।
ಪುನಃ ಕಾಮಃ ಸರಃ ಪ್ರಾಪ್ತೋ ಯತ್ರಾಸ್ತೇ ದುಃಖಿತಾ ರತಿಃ ॥ ೬೩ ॥

---

೫೯. ನನ್ನ ಮೇಲಿರುವ ಸ್ನೇಹಕ್ಕಾಗಿ ಈಕೆಯನ್ನು ಕಾಮನೊಡನೆ ಸೇರಿಸು ಎಂದಳು. ಆ ಮಾತನ್ನು ಕೇಳಿ ಮನ್ಮಥನನ್ನು ಜೀವಿಸುವಂತೆ ಮಾಡುತ್ತೇನೆಂದನು

೬೦. ಈ ಕಾಮನನ್ನು ಬದುಕಿಸುತ್ತೇನೆ. ಆದರೆ ಈ ಪಂಚಬಾಣನು ಈಗ ದೇಹವಿಲ್ಲದಿರುತ್ತಾನೆ. ಸಂದೇಹವಿಲ್ಲ.

೬೧. ಈಗ ಈ ಕಾಮನು ನನ್ನ ಅನುಗ್ರಹದಿಂದ ಶರೀರವುಳ್ಳವನಾಗುವನು, ಸಂಶಯವಿಲ್ಲ. ಎಂದು ಹೇಳಿ ಮಹಾದೇವನು ಆ ಕಾಮನನ್ನು ಬದುಕಿಸಿದನು.

೬೨. ದೇವಿಯು ಆ ಕಾಮನನ್ನು ಆಶೀರ್ವದಿಸಿದಳು. ಶಿವನು ಸಹ ಅವನನ್ನು ಆಶೀರ್ವದಿಸಿ ಎಲೈ ಕಾಮನೇ ಹೋಗು, ಯಾವಾಗಲೂ ನಿನ್ನ ಪ್ರಿಯೆಯೊಡನಿರು.

೬೩. ಮರ್ತ್ಯರಲ್ಲಿ ಸ್ಥಿತಿ ಸಂಹಾರಕಾರಕನಾಗಿರು ಎಂದು ಹೇಳಲು, ರತಿಯಿರುವ ಜಾಗವಾದ ಈ ಸರೋವರಕ್ಕೆ ಆ ಕಾಮನೂ ಬಂದನು.

ಇದಂ ಕಾಮಸರೋ ರಾಜನ್ನತ್ರ ಸಾ ಸಂಸ್ಥಿತಾ ರತಿಃ ।
ದಗ್ಧೇ ತಸ್ಮಿನ್ಮಹಾಭಾಗೇ ಮನ್ಮಥೇ ದುಃಖಧರ್ಷಿಣಿ ॥ ೬೪ ॥

ರತ್ಯಾಃ ಕೋಪಾತ್ಸಮುತ್ಪನ್ನಃ ಪಾವಕೋ ದಾರುಣಾಕೃತಿಃ ।
ಅತೀವ ದಗ್ಧಾ ತೇನಾಪಿ ಸಾ ರತಿರ್ಮೋಹಮೂರ್ಛಿತಾ ॥ ೬೫ ॥

ಅಶ್ರುಪಾತಂ ಮುಮೋಚಾಥ ಭರ್ತೃಹೀನಾ ನರೋತ್ತಮ ।
ನೇತ್ರಾಭ್ಯಾಂ ಹಿ ಜಲೇ ತಸ್ಯಾಃ ಪತಿತಾ ಅಶ್ರುಬಿಂಬವಃ ॥ ೬೬ ॥

ತೇಭ್ಯೋ ಜಾತೋ ಮಹಾಶೋಕಃ ಸರ್ವಸೌಖ್ಯಪ್ರಣಾಶಕಃ ।
ಕ್ಷಣಾತ್ಪಶ್ಚಾತ್ಸಮುದ್ಭೂತೇ ಅಶ್ರುಭ್ಯೋ ನೃಪಸತ್ತಮ ॥ ೬೭ ॥

ವಿಯೋಗಾ ನಾಮ ದುರ್ಮೇಧಾಸ್ತೇಭ್ಯೋ ಜಜ್ಞೇ ಪ್ರಣಾಶಕಃ ।
ದುಃಖಸಂತಾಪಕೌ ಚೋಭೌ ಜಜ್ಞಾತೇ ದಾರುಣೌ ತದಾ ॥ ೬೮ ॥

ಮೂರ್ಛಾ ನಾಮ ತತೋ ಜಜ್ಞೇ ದಾರುಣಾ ಸುಖನಾಶಿನೀ ।
ಶೋಕಾಜ್ಜಜ್ಞೇ ಮಹಾರಾಜ ಕಾಮಜ್ವರೋऽಥ ವಿಭ್ರಮಃ ॥ ೬೯ ॥

---

೬೪. ಇದೇ ಆ ಕಾಮಸರೋವರವು. ಇಲ್ಲೇ ರತಿಯಿದ್ದುದು. ಆ ಕಾಮನು ಸುಟ್ಟು ಹೋದ ಮೇಲೆ ದುಃಖಪಡುತ್ತಾ ಇಲ್ಲೇ ಇದ್ದಳು.

೬೫ ಆಕೆಯ ಕೋಪದಿಂದ ಕ್ರೂರವಾದ ಬೆಂಕಿಯು ಉತ್ಪನ್ನವಾಯಿತು. ಅದರಿಂದಲೂ ಆ ರತಿಯು ಮೋಹಗೊಂಡು ಮೂರ್ಛಿತಳಾದಳು.

೬೬. ಗಂಡನಿಲ್ಲದೇ ದುಃಖಪಡುತ್ತಾ ಕಣ್ಣೀರನ್ನು ಬಿಟ್ಟಳು. ಆಕೆಯ ಕಣ್ಣುಗಳಿಂದ ನೀರಿನ ಹನಿಗಳು ಆ ಸರೋವರದ ನೀರಿನಲ್ಲಿ ಬಿದ್ದವು.

೬೭. ಆ ಹನಿಗಳಿಂದ ಸರ್ವಸೌಖ್ಯವನ್ನೂ ನಾಶಮಾಡುವ ಮಹಾ ಶೋಕವು ಹುಟ್ಟಿತು.

೬೮. ಅವುಗಳಿಂದಲೇ ವಿಯೋಗನೆಂಬ ಅಯೋಗ್ಯನೂ ಹುಟ್ಟಿದನು. ಅವರಿಬ್ಬರೂ ದುಃಖಸಂತಾಪಗಳನ್ನು ಕೊಡುವರಾದರು.

೬೯. ಸುಖನಾಶಿನಿಯೂ ಕೆಟ್ಟವಳೂ ಆದ ಮೂರ್ಛೆಯೆಂಬವಳು ಹುಟ್ಟಿದಳು. ಶೋಕದಿಂದಲೇ ಕಾಮಜ್ವರವೂ ವಿಭ್ರಮವೂ ಹುಟ್ಟಿದುವು.

ಪ್ರಲಾಪೋ ಬಹುಲಶ್ಚೈವ ಉನ್ಮಾದೋ ಮೃತ್ಯುರೇವ ಚ ।
ತಸ್ಯಾಸ್ತದಾಶ್ರುಬಿಂದುಭ್ಯೋ ಜಜ್ಞಿರೇ ವಿಶ್ವನಾಶಕಾಃ ॥ ೭೦ ॥

ತಸ್ಯಾಃ ಪಾರ್ಶ್ವೇ ಸಮುತ್ತಸ್ಥುಃ ಸರ್ವೇ ತೇ ದುಃಖಕಾರಿಣಃ ।
ಮೂರ್ತಿಮಂತೋ ಮಹಾರಾಜ ಸದ್ಭಾವಗುಣಸಂಯುತಾಃ ॥ ೭೧ ॥

ಕಾಮ ಏಷ ಸಮಾಯಾತಃ ಕೇನಾಪ್ಯುಕ್ತಂ ತದಾ ನೃಪ ।
ಮಹಾನಂದೇನ ಸಂಯುಕ್ತಾ ದೃಷ್ಟ್ವಾ ಕಾಮಂ ಸಮಾಗತಂ ॥ ೭೨ ॥

ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂ ಪತಿತಾ ಅಶ್ರುಬಿಂದವಃ ।
ಅಪ್ಸು ಮಧ್ಯೇ ಮಹಾರಾಜ ಚಾಪಲ್ಯಾಜ್ಜಜ್ಞಿರೇ ಪ್ರಜಾಃ ॥ ೭೩ ॥

ಪ್ರೀತಿರ್ನಾಮ ತದಾ ಜಜ್ಞೇ ಖ್ಯಾತಿರ್ಲಜ್ಜಾ ನರೋತ್ತಮ ।
ತೇಭ್ಯೋ ಜಜ್ಞೇ ಮಹಾನಂದಃ ಶಾನ್ತಿಶ್ಚಾನ್ಯಾ ನೃಪೋತ್ತಮ ॥ ೭೪ ॥

ಜಜ್ಞಾತೇ ದ್ವೇ ಶುಭೇ ಕನ್ಯೇ ಸುಖಸೌಭಾಗ್ಯದಾಯಕೇ ।
ಲೀಲಾ ಕ್ರೀಡಾ ಮನೋಭಾವಸಂಭೋಗಸ್ತು ಮಹಾನ್ನೃಪ ॥ ೭೫ ॥

---

೭೦. ಪ್ರಲಾಪ, ಉನ್ಮಾದ, ಮೃತ್ಯುಗಳು, ಆ ಅಶ್ರುಜಲಗಳಿಂದಲೇ ಹುಟ್ಟಿದುವು.

೭೧. ಆ ದುಃಖಕಾರಿಗಳಾದ ಅವೆಲ್ಲವೂ ಹುಟ್ಟಿ ಆಕಾರವನ್ನು ಹೊಂದಿ ನಮ್ರತೆಯಿಂದ ಆಕೆಯ ಮುಂದೆ ನಿಂತವು.

೭೨. ಕಾಮನು ಬಂದನೆಂದು ಯಾರೋ ಹೇಳಿದರು. ಆಗ ಕಾಮನನ್ನು ನೋಡಿ ಆಕೆಯು ಮಹಾನಂದದಿಂದ ಕೂಡಿದಳು.

೭೩. ಅವಳ ಆ ಸಂತೋಷದಿಂದ ಆನಂದಬಾಷ್ಪಗಳು ನೀರಿನ ಮಧ್ಯದಲ್ಲಿ ಬೀಳಲು ಅಲ್ಲಿ ಚಾಪಲ್ಯರೆಂಬ ಪ್ರಜೆಗಳು ಹುಟ್ಟಿದರು.

೭೪-೭೫. ಪ್ರೀತಿ, ಖ್ಯಾತಿ, ಮಹಾನಂದ, ಶಾನ್ತಿ, ಲೀಲೆ, ಕ್ರೀಡೆ, ಮನೋಭಾವ, ಸಂಭೋಗ ಎಂಬವರು ಹುಟ್ಟಿದರು.

ರತ್ಯಾಸ್ತು ವಾಮನೇತ್ರಾದ್ವೈ ಹ್ಯಾನಂದಾದಶ್ರುಬಿಂದವಃ ।
ಜಲಾಂತೇ ಪತಿತಾ ರಾಜಂಸ್ತಸ್ಮಾಜ್ಜಜ್ಞೇ ಸುಪಕಂಜಂ ॥ ೭೬ ॥

ತಸ್ಮಾತ್ಸುಪಂಕಜಾಜ್ಜಾತಾ ಚೇಯಂ ನಾರೀ ವರಾನನಾ ।
ಅಶ್ರುಬಿಂದುಮತೀ ನಾಮ ರಾಜಪುತ್ರೀ ನರೋತ್ತಮ ॥ ೭೭ ॥

ಅಸ್ಯಾಃ ಪ್ರೀತ್ಯಾ ಸುಸೌಹಾರ್ದಾದಹಂ ವರ್ತೇ ಹಿ ನಿತ್ಯದಾ ।
ಸಖಿಭಾವಸ್ವಭಾವೇವ ಸಂಹೃಷ್ಟಾ ಸರ್ವದಾ ಶುಭಾ ॥ ೭೮ ॥

ವಿಶಾಲಾನಾಮ ಮೇ ಖ್ಯಾತಂ ವರುಣಸ್ಯ ಸುತಾ ನೃಪ ।
ಅಸ್ಯಾಃ ಸ್ವಾಂತೇ ಪ್ರವರ್ತೇಽಹಂ ಸ್ನೇಹಾತ್ ಸ್ನಿಗ್ಧಾಸ್ಮಿ ಸರ್ವದಾ ॥ ೭೯ ॥

ಏತತ್ತೇ ಸರ್ವಮಾಖ್ಯಾತಮಸ್ಯಾಶ್ಚಾತ್ಮನ ಏವ ಚ ।
ವರಾರ್ಥಮೇಷಾ ರಾಜೇಂದ್ರ ತಪಶ್ಚರತಿ ಶೋಭನಾ ॥ ೮೦ ॥

॥ ಯಯಾತಿರುವಾಚ ॥

ಸರ್ವಮೇವ ತ್ವಯಾ ಖ್ಯಾತಂ ಮಯಾ ಜ್ಞಾತಂ ಶುಭೇ ಶೃಣು ।
ಮಾಮೇವ ಹಿ ಭಜತ್ವೇಷಾ ರತಿಪುತ್ರೀ ವರಾನನಾ ॥ ೮೧ ॥

---

೭೬. ರತಿಯ ಬಲಗಣ್ಣಿನಿಂದ ಬಿದ್ದ ಆನಂದಜಲದಿಂದ ಉತ್ತಮವಾದ ಕಮಲವು ಹುಟ್ಟಿತು.

೭೭. ಆ ಕಮಲದಿಂದ ಅಶ್ರುಬಿಂದುಮತಿಯೆಂಬ ಹೆಂಗಸು ಹುಟ್ಟಿದಳು.

೭೮. ಇವಳಲ್ಲಿರುವ ಸ್ನೇಹದಿಂದ ನಾನು ಯಾವಾಗಲೂ ಸಂತೋಷದಿಂದ ಸಖೀಭಾವದಿಂದಿದ್ದೇನೆ.

೭೯. ನನ್ನ ಹೆಸರು ವಿಶಾಲೆಯು. ನಾನು ವರುಣನ ಮಗಳು. ಅವಳಲ್ಲಿ ನನಗೆ ಅತಿಯಾದ ಪ್ರೀತಿವಿಶ್ವಾಸಗಳಿರುವವು.

೮೦. ಹೀಗೆ ಅವಳ, ಮತ್ತು ನನ್ನ ವಿಷಯಗಳೆಲ್ಲವನ್ನೂ ಹೇಳಿದ್ದೇನೆ. ಈಕೆಯು ವರಾರ್ಥಿಯಾಗಿ ತಪಸ್ಸು ಮಾಡುತ್ತಿದ್ದಾಳೆ ಎಂದಳು.

೮೧. ಯಯಾತಿಯು ಹೇಳಿದನು :—ನೀನು ಎಲ್ಲವನ್ನೂ ಹೇಳಿದೆ. ಅದೆಲ್ಲವನ್ನೂ ನಾನು ಕೇಳಿದೆನು. ಈ ರತಿಪುತ್ರಿಯು ನನ್ನನ್ನೇ ಹೊಂದಿ ಸುಖಿಸಲಿ.

**ಯಥ್ಯೈಷಾ ವಾಂಛತೇ ಬಾಲಾ ತಂ ಚ ಕಾಮಂ ದದಾಮ್ಯಹಂ ।**
**ತಥಾ ಕುರುಷ್ವ ಕಲ್ಯಾಣಿ ಯಥಾ ಮೇ ವಶಗಾ ಭವೇತ್ ॥ ೮೨ ॥**

**॥ ವಿಶಾಲೋವಾಚ ॥**

**ಅಸ್ಯಾ ವ್ರತಂ ಪ್ರವಕ್ಷ್ಯಾಮಿ ತದಾಕರ್ಣಯ ಭೂಪತೇ ।**
**ಪುರುಷಂ ಯೌವನೋಪೇತಂ ಸರ್ವಜ್ಞಂ ವೀರಲಕ್ಷಣಂ ॥ ೮೩ ॥**

**ದೇವರಾಜಸಮಂ ರಾಜನ್ ಧರ್ಮಾಚಾರಸಮನ್ವಿತಂ ।**
**ತೇಜಸ್ವಿನಂ ಮಹಾಪ್ರಾಜ್ಞಂ ದಾತಾರಂ ಯಜ್ವನಾಂ ವರಂ ॥ ೮೪ ॥**

**ಗುಣಾನಾಂ ಧರ್ಮಭಾವಸ್ಯ ಜ್ಞಾತಾರಂ ಪುಣ್ಯಭಾಜನಂ ।**
**ಲೋಕ ಇಂದ್ರಸಮಂ ರಾಜನ್ ಯಜ್ಞವರ್ತ್ಮನಿ ತತ್ಪರಂ ॥ ೮೫ ॥**

**ಸರ್ವೈಶ್ವರ್ಯಸಮೋಪೇತಂ ನಾರಾಯಣಪರಾಯಣಂ ।**
**ದೇವಾನಾಂ ಸುಪ್ರಿಯಂ ನಿತ್ಯಂ ಬ್ರಾಹ್ಮಣಾನಾಮತಿಪ್ರಿಯಂ ।**
**ಬ್ರಹ್ಮಣ್ಯಂ ವೇದತತ್ತ್ವಜ್ಞಂ ತ್ರೈಲೋಕ್ಯೇ ಖ್ಯಾತವಿಕ್ರಮಂ ॥ ೮೬ ॥**

---

೮೨. ಇವಳು ಅಪೇಕ್ಷಿಸುವುದೆಲ್ಲವನ್ನೂ ನಾನು ತಂದುಕೊಡುತ್ತೇನೆ. ಅವಳು ನನ್ನ ವಶಳಾಗುವಂತೆ ಮಾಡು ಎನ್ನಲು,

೮೩-೮೬. ವಿಶಾಲೆಯು ಹೇಳಿದಳು:—ಎಲೈ ರಾಜನೇ, ಕೇಳು, ಇವಳು ಒಂದು ನಿಯಮವನ್ನು ಮಾಡಿಕೊಂಡಿರುವಳು. ಇವಳ ಆ ವ್ರತವನ್ನು ಹೇಳುತ್ತೇನೆ, ಕೇಳು. ಇವಳು ಅಪೇಕ್ಷಿಸುವ ಪುರುಷನು ರೂಪಯೌವನಸಂಪನ್ನನಾಗಿಯೂ ವೀರನಾಗಿಯೂ ವೈಭವದಲ್ಲಿ ಇಂದ್ರನಿಗೆ ಸಮನಾಗಿಯೂ ಇರಬೇಕು. ಧರ್ಮಾಚಾರ ಪ್ರವೃತ್ತಕನಾಗಿ ಪ್ರಾಜ್ಞನೂ, ತೇಜಸ್ವಿಯೂ, ದಾನಿಯೂ, ಯಾಗಾದಿಗಳನ್ನು ಮಾಡುವವನೂ ಆಗಿರಬೇಕು. ಧರ್ಮಾಧರ್ಮವಿಚಾರಗಳನ್ನು ತಿಳಿದಿರಬೇಕು. ವಿಷ್ಣುಭಕ್ತನಾಗಿಯೂ, ದೇವಬ್ರಾಹ್ಮಣ ಪ್ರಿಯನಾಗಿಯೂ, ಬ್ರಾಹ್ಮಣಾಚಾರಪರನಾಗಿಯೂ ಇರಬೇಕು. ವೇದಾದಿಗಳನ್ನು ತಿಳಿದು ಲೋಕಪೂಜ್ಯನೂ, ಪ್ರಸಿದ್ಧನೂ ಆಗಿರಬೇಕು.

ಏವಂಗುಣೈಃ ಸಮೋಪೇತಂ ತ್ರೈಲೋಕ್ಯೇ ಚ ಪ್ರಪೂಜಿತಂ ।
ಸುಮತಿಂ ಸುಪ್ರಿಯಂ ಕಾನ್ತಂ ವಾಂಛತ್ಯೇಷಾ ನೃಪೋತ್ತಮ ॥ ೮೭ ॥

॥ ಯಯಾತಿರುವಾಚ ॥

ಏಭಿರ್ಗುಣೈಃ ಸಮೋಪೇತಂ ವಿದ್ಧಿ ಮಾಮಿಹ ಚಾಗತಂ ।
ಅಸ್ಯಾ ಅನುರೂಪೋ ಭರ್ತಾಹಂ ಸೃಷ್ಟೋ ಧಾತ್ರಾ ನ ಸಂಶಯಃ ॥ ೮೮ ॥

॥ ವಿಶಾಲೋವಾಚ ॥

ಭವಂತಂ ಪುಣ್ಯಸಂನದ್ಧಂ ಜಾನೇ ರಾಜನ್ ಜಗತ್ತ್ರಯೇ ।
ಪೂರ್ವಂ ತು ಯೇ ಗುಣಾಸ್ಸರ್ವೇ ಮಯೋಕ್ತಾಃ ಸಂತಿ ತೇ ತ್ವಯಿ ॥ ೮೯ ॥

ಏಕೇನಾಪಿ ಚ ದೋಷೇಣ ತ್ವಾಮೇಷಾ ಹಿ ನ ಮನ್ಯತೇ ।
ಏಷ ಮೇ ಸಂಶಯೋ ಜಾತೋ ಭವಾನ್ ವಿಷ್ಣುಸಮೋ ನೃಪಃ ॥ ೯೦ ॥

॥ ಯಯಾತಿರುವಾಚ ॥

ಸಮಾಚಕ್ಷ್ವ ಮಹಾದೋಷಂ ಯೇನೈಷಾ ಮಾಂ ನ ಮನ್ಯತೇ ।
ತತ್ತ್ವೇನ ಚಾರುಸರ್ವಾಂಗಿ ಪ್ರಸಾದಸುಮುಖೀ ಭವ ॥ ೯೧ ॥

---

ಒಳ್ಳೆಯ ಬುದ್ಧಿಯಿಂದಲೂ ಒಳ್ಳೆಯ ರೂಪಿನಿಂದಲೂ ಕೂಡಿರುವ ಇಂತಹ ಪುರುಷನನ್ನು ಈಕೆಯು ಅಪೇಕ್ಷಿಸುತ್ತಾಳೆ. ಎಂದಳು.

೮೮. ಯಯಾತಿಯು ಇದನ್ನು ಕೇಳಿ ಇಲ್ಲಿ ಬಂದಿರುವ ನಾನು ಆ ಗುಣಗಳಿಂದೆಲ್ಲ ಕೂಡಿದ್ದೇನೆ. ನನ್ನನ್ನೇ ಇವಳಿಗೆ ಅನುರೂಪನಾದ ಗಂಡನನ್ನಾಗಿ ಬ್ರಹ್ಮನು ಸೃಷ್ಟಿಮಾಡಿದ್ದಾನೆ, ಎಂದನು.

೮೯. ನೀನು ಪುಣ್ಯವಂತನೆಂದೂ, ಮೂರುಲೋಕದಲ್ಲೂ ಪ್ರಸಿದ್ಧನಾಗಿರುವುದನ್ನೂ ನಾನು ಬಲೆ. ನಾನು ಮೊದಲು ಹೇಳಿದ ಗುಣಗಳೆಲ್ಲಾ ನಿನ್ನಲ್ಲಿವೆ.

೯೦. ನೀನೇನೋ ವಿಷ್ಣುಸಮನಾದ ದೊರೆಯೇ ಹೌದು. ನಿನ್ನಲ್ಲಿ ಒಂದು ದೋಷ ಮಾತ್ರ ಇರುವುದರಿಂದ ಈಕೆ ಒಪ್ಪುವುದಿಲ್ಲ. ಇದೊಂದೇ ನನಗೆ ಸಂಶಯ. ಎಂದಳು.

೯೧. ಯಯಾತಿಯು ಹೇಳಿದನು:—ಈಕೆಯು ಒಪ್ಪದಿರುವ ಮಹಾದೋಷವಾದರೂ ನನ್ನಲ್ಲೇನಿದೆ? ಯಥಾರ್ಥವನ್ನು ಹೇಳಿ ಅನುಗ್ರಹಿಸು ಎನ್ನಲು,

॥ ವಿಶಾಲೋವಾಚ ॥

ಆತ್ಮದೋಷಂ ನ ಜಾನಾಸಿ ಕಸ್ಮಾತ್ತ್ವಂ ಜಗತೀಪತೇ ।
ಜರಯಾ ವ್ಯಾಪ್ತಕಾಯೋऽಸಿ ಕಾಮೇನಾಪಿ ನ ಪಶ್ಯಸೇ ॥ ೯೨ ॥

ಏವಂ ಶ್ರುತ್ವಾ ಮಹದ್ವಾಕ್ಯಮಪ್ರಿಯಂ ಜಗತೀಪತಿಃ ।
ದುಃಖೇನ ಮಹತಾವಿಷ್ಟಸ್ತಾಮುವಾಚ ಪುನರ್ನೃಪಃ ॥ ೯೩ ॥

ಜರಾದೋಷೋ ನ ಮೇ ಭದ್ರೇ ಸಂಸರ್ಗಾತ್ಕಸ್ಯ ಚಿತ್ಕದಾ ।
ಸಮುದ್ಭೂತೋ ಮಮಾಂಗೇ ವೈ ತಂ ನ ಜಾನೇ ಜರಾಗಮಂ ॥ ೯೪ ॥

ಯಂ ಯಂ ಹಿ ವಾಂಛತೇ ಬಾಲಾ ತ್ರೈಲೋಕ್ಯೇ ದುರ್ಲಭಂ ಶುಭೇ ।
ತಮಸ್ಯೈ ದಾತುಕಾಮೋऽಹಂ ಪ್ರಿಯತಾಂ ವರ ಉತ್ತಮಃ ॥ ೯೫ ॥

॥ ವಿಶಾಲೋವಾಚ ॥

ಜರಾಹೀನೋ ಯದಾ ಸ್ಯಾಸ್ತ್ವಂ ತದಾ ತೇ ಸುಪ್ರಿಯಾ ಭವೇತ್ ।
ಏತದ್ವಿನಿಶ್ಚಯಂ ರಾಜನ್ ಸತ್ಯಂ ಸತ್ಯಂ ವದಾಮ್ಯಹಂ ॥ ೯೬ ॥

---

೯೨. ವಿಶಾಲೆಯು ಹೇಳಿದಳು:—ಎಲೈ ದೊರೆಯೇ! ನೀನು ನಿನ್ನ ದೋಷವನ್ನೇ ಏಕೆ ತಿಳಿದುಕೊಂಡಿಲ್ಲ? ಮುಪ್ಪು ನಿನ್ನ ದೇಹದಲ್ಲಿ ಆವರಿಸಿಕೊಂಡಿದೆ· ಕಾಮದಿಂದ ನೀನು ಅದನ್ನು ತಿಳಿಯದವನಾಗಿದ್ದೀಯೆ ಎಂದಳು.

೯೩-೯೪. ಆ ರಾಜನು ಈ ಅಪ್ರಿಯವಾಕ್ಯವನ್ನು ಕೇಳಿ ಬಹು ದುಃಖಿತನಾಗಿ ಆಕೆಯನ್ನು ಕುರಿತು ಅಮ್ಮ, ನನಗೆ ಜರಾದೋಷವು ಯಾರ ಸಂಗದಿಂದಲೂ, ನನ್ನ ಅವಯವದಲ್ಲಿ ಬಂದಿಲ್ಲ.

೯೫. ಮೂರುಲೋಕದಲ್ಲಿಯೂ, ದುರ್ಲಭವಾದ ಯಾವುದನ್ನು ಈಕೆಯು ಅಪೇಕ್ಷಿಸಿದರೂ ಅದನ್ನು ಈಕೆಗೆ ಕೊಡುತ್ತೇನೆ. ವರವನ್ನು ಕೇಳು, ಎನ್ನಲು

೯೬. ವಿಶಾಲೆಯು ಹೇಳಿದಳು:—ನೀನು ಜರೆಯಿಂದ (ಮುಪ್ಪು) ಬಿಡಪ್ಪಟ್ಟರೆ ಆಗ ಅವಳು ನಿನ್ನನ್ನು ವರಿಸುವಳು. ಇದು ನಿಶ್ಚಯವು, ಸತ್ಯವಾದುದು.

ಶ್ರುತಿರೇವಂ ವದೇದ್ರಾಜನ್ ಪುತ್ರೇ ಭ್ರಾತಂ ಭೃತ್ಯಕೇ ।
ಜರಾ ಸಂಕ್ರಾಮ್ಯತೇ ಯಸ್ಯ ತಸ್ಯಾಂಗಂ ಪರಿಸಂಚರೇತ್ ॥ ೯೭ ॥

ತಾರುಣ್ಯಂ ಯಸ್ಯ ವೈ ಗೃಹ್ಯ ತಸ್ಮೈ ದತ್ವಾ ಜರಾಂ ಪುನಃ ।
ಉಭಯೋಃ ಪ್ರೀತಿಸಂವಾದಃ ಸುರುಚ್ಯಾ ಜಾಯತೇ ಶುಭಃ ॥ ೯೮ ॥

ಯಥಾತ್ಮದಾನಪುಣ್ಯಸ್ಯ ಕೃಪಯಾ ಯೋ ದದಾತಿ ಚ ।
ಫಲಂ ರಾಜನ್ ಸ್ಥಿರಂ ತಸ್ಯ ಜಾಯತೇ ನಾತ್ರ ಸಂಶಯಃ ॥ ೯೯ ॥

ದುಃಖೈಶ್ಚೋಪಾರ್ಜಿತಂ ಪುಣ್ಯಮನ್ಯಸ್ಮೈ ಹಿ ಪ್ರದೀಯತೇ ।
ಸುಪುಣ್ಯಂ ತದ್ಭವೇತ್ತಸ್ಯ ಪುಣ್ಯಸ್ಯ ಫಲಮಶ್ನುತೇ ॥ ೧೦೦ ॥

ಪುತ್ರಾಯ ದೀಯತಾಂ ರಾಜಂಸ್ತಸ್ಮಾತ್ತಾರುಣ್ಯಮೇವ ಚ ।
ಪ್ರಗೃಹ್ಯೈವ ಸಮಾಯುಕ್ತಃ ಸುಂದರತ್ವೇನ ಭೂಪತೇ ॥ ೧೦೧ ॥

---

೯೭. ಮಗ, ಸೋದರ, ಆಳುಗಳಲ್ಲಿ ಜರೆಯನ್ನಿಟ್ಟು ಅವರ ಯೌವನವನ್ನು ತೆಗೆದುಕೊಳ್ಳಬಹುದೆಂದು ಶ್ರುತಿಯು ಹೇಳುತ್ತದೆ.

೯೮. ಒಬ್ಬನ ತಾರುಣ್ಯವನ್ನು ತೆಗೆದುಕೊಂಡು ಅವನಿಗೆ ಜರೆಯನ್ನು ಕೊಟ್ಟು ಬದಲಾಯಿಸಿಕೊಳ್ಳಬಹುದು. ಆದರೆ ಇದರಿಂದ ಇಬ್ಬರಿಗೂ ಸಂತೋಷ ಮಾತ್ರ ಆಗಬೇಕು. ದುಃಖ ಕೂಡದು.

೯೯. ಯಾವನು ದಯೆಯಿಂದ ತಾರುಣ್ಯವನ್ನು ಕೊಡುತ್ತಾನೋ ಅವನಿಗೆ ತೆಗೆದುಕೊಳ್ಳುವವನು ತನ್ನ ಫಲಗಳನ್ನು ಕೊಡಬೇಕು. ಆ ಫಲವು ಅವನಿಗೆ ಉಂಟು. ಸಂಶಯವಿಲ್ಲ.

೧೦೦. ಕಷ್ಟದಿಂದ ಸಂಪಾದಿಸಿದ ಪುಣ್ಯವನ್ನು ಇನ್ನೊಬ್ಬನಿಗೆ ಕೊಟ್ಟರೆ ಆ ಕೊಟ್ಟವನಿಗೆ ಒಳ್ಳೆಯ ಪುಣ್ಯಬರುತ್ತದೆ. ಅವನು ಆ ಪುಣ್ಯದ ಫಲವನ್ನು ಭೋಗಿಸುತ್ತಾನೆ.

೧೦೧. ನಿನ್ನ ಮಗನಿಗೆ ಈ ನಿನ್ನ ಜರೆಯನ್ನು ಕೊಡು. ಅವನಿಂದ ತಾರುಣ್ಯವನ್ನು ನೀನು ತೆಗೆದುಕೋ. ಆಗ ನೀನು ಸುಂದರನಾಗುತ್ತೀಯೆ.

**ಯಥಾ ತ್ವಾಮಿಚ್ಛತೇ ಭೋಕ್ತುಂ ತಥಾ ತ್ವಂ ಕುರು ಭೂಪತೇ ।**
**ಏವಮಾಭಾಷ್ಯ ತಂ ಭೂಪಂ ವಿಶಾಲಾ ವಿರರಾಮ ಹ　　　　॥ ೧೦೨ ॥**

**॥ ವಾಸುದೇವ ಉವಾಚ ॥**

**ಏವಮಾಕರ್ಣ್ಯ ರಾಜೇಂದ್ರೋ ವಿಶಾಲಾವಚನಂ ತದಾ ।**
**ಏವಮಸ್ತು ಮಹಾಭಾಗೇ ಕರಿಷ್ಯೇ ವಚನಂ ತವ　　　　॥ ೧೦೩ ॥**

**ಕಾಮಾಸಕ್ತಃ ಸ ಮೂಢಸ್ತು ಯಯಾತಿಃ ಪೃಥಿವೀಪತಿಃ ।**
**ಗೃಹಂ ಗತ್ವಾ ಸಮಾಹೂಯ ಸುತಾನ್ ವಾಕ್ಯಮುವಾಚ ಹ　　　　॥ ೧೦೪ ॥**

**ತುರುಂ ಪುರುಂ ಕುರುಂ ರಾಜಾ ಯದುಂ ಚ ಪಿತೃವತ್ಸಲಂ ।**
**ಕುರುಧ್ವಂ ಪುತ್ರಕಾಃ ಸೌಖ್ಯಂ ಯೂಯಂ ಹಿ ಮಮ ಶಾಸನಾತ್ ॥ ೧೦೫ ॥**

**॥ ಪುತ್ರಾ ಊಚುಃ ॥**

**ಪಿತೃವಾಕ್ಯಂ ಪ್ರಕರ್ತವ್ಯಂ ಪುತ್ರೈಶ್ಚಾಪಿ ಶುಭಾಶುಭಂ ।**
**ಉಚ್ಯತಾಂ ತಾತ ತಚ್ಛೀಘ್ರಂ ಕೃತಂ ವಿದ್ಧಿ ನ ಸಂಶಯಃ　　　　॥ ೧೦೬ ॥**

---

೧೦೨. ಅವಳು ನಿನ್ನನ್ನು ಭೋಗಿಸುವುದಕ್ಕೆ ಹೇಗೆ ಮಾಡಬೇಕೋ ಹಾಗೆ ಮಾಡು ಎಂದು ಆ ವಿಶಾಲೆಯು ಹೇಳಿದಳು.

೧೦೩. ವಾಸುದೇವನು ಹೇಳಿದನು:—ರಾಜನು ವಿಶಾಲೆಯ ಮಾತನ್ನು ಕೇಳಿ ಹಾಗೇ ಆಗಲಮ್ಮ. ನಿನ್ನ ಮಾತಿನಂತೆ ಮಾಡುತ್ತೇನೆಂದು ಹೇಳಿ,

೧೦೪-೧೦೫. ಮನೆಗೆ ಹೋಗಿ, ಕಾಮದಿಂದ ಮೂಢನಾದ ಆ ಯಯಾತಿಯು ತುರು, ಪುರು, ಕುರು, ಯದುವೆಂಬ ತನ್ನ ಮಕ್ಕಳನ್ನು ಕರೆದು ನೀವು ನನ್ನ ಅಪ್ಪಣೆ ಯಂತೆ ನನಗೆ ಸೌಖ್ಯವನ್ನುಂಟುಮಾಡಿ. ಎಂದು ಹೇಳಿದನು.

೧೦೬. ಮಕ್ಕಳು ಹೇಳಿದರು:—ಓ ತಂದೆಯೇ, ತಂದೆಯು ಹೇಳುವ ಮಾತು, ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ಅದನ್ನು ಮಕ್ಕಳು ಅವಶ್ಯಕವಾಗಿ ಪಾಲಿಸ ಬೇಕು. ಪಿತೃವಾಕ್ಯಪರಿಪಾಲನೆ ಮಾಡುವವರೇ ಮಕ್ಕಳು. ಈಗ ನಾವು ಏನು ಮಾಡಬೇಕು ಅದನ್ನು ಹೇಳು. ಅದನ್ನು ನಾವು ಮಾಡಿದೆವೆಂದೇ ತಿಳಿ. ಸಂಶಯ ಪಡಬೇಡ ಎಂದರು.

ಏವಮಾಕರ್ಣ್ಯ ತದ್ವಾಕ್ಯಂ ಪುತ್ರಾಣಾಂ ಪೃಥಿವೀಪತಿಃ ।
ಆಚಚಕ್ಷೇ ಪುನಸ್ತೇಷು ಹರ್ಷೇಣಾಕುಲಮಾನಸಃ ॥ ೧೦೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಯಯಾತಿಚರಿತೇ ಸಪ್ತಸಪ್ತತಿತಮೋಽಧ್ಯಾಯಃ



---

೧೦೭. ಮಕ್ಕಳ ಈ ಮಾತನ್ನು ಕೇಳಿ ರಾಜನು ಸಂತೋಷದಿಂದ ಅವರಿಗೆ ಹೀಗೆ ಹೇಳಿದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಷ್ಟಸಪ್ತತಿತಮೋಽಧ್ಯಾಯಃ

॥ ಯಯಾತಿರುವಾಚ ॥

ಏಕೋಽಪಿ ಗೃಹ್ಯತಾಂ ಪುತ್ರಾ ಜರಾ ಮೇ ದುಃಖದಾಯಿನೀ ।
ಧೀರೋ ಭೂತ್ವಾ ತತಶ್ಚೈವ ತಾರುಣ್ಯಂ ಮಮ ದೀಯತಾಂ ॥ ೧ ॥

ಸ್ವಕೀಯಂ ಹಿ ಮಹಾಭಾಗಾಃ ಸುರೂಪಮತುಲಂ ತತಃ ।
ಸಂತಪ್ತಂ ಮಾನಸಂ ಮೇಽದ್ಯ ಸ್ತ್ರಿಯಾಸಕ್ತಂ ಸುಚಂಚಲಂ ॥ ೨ ॥

ಭಾಜನಸ್ಥಾ ಯಥಾಪಶ್ಚ ಆವರ್ತಯತಿ ಪಾವಕಃ ।
ತಥಾ ಮೇ ಮಾನಸಂ ಪುತ್ರಾಃ ಕಾಮಾನಲೇನ ಚಾಲಿತಂ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯವು

೧. ಯಯಾತಿಯು ಹೇಳಿದನು:—ನನಗೆ ದುಃಖವನ್ನುಂಟುಮಾಡುತ್ತಿರುವ ಈ ಜರೆಯನ್ನು ನಿಮ್ಮಲ್ಲಿ ಯಾರಾದರೂ ಒಬ್ಬರು ತೆಗೆದುಕೊಂಡು ನನಗೆ ತಾರುಣ್ಯವನ್ನು ಕೊಡಿರಿ.

೨. ಅಲ್ಲದೆ ನಿಮ್ಮ ಆ ಉತ್ತಮವಾದ ರೂಪವನ್ನೂ ಕೊಡಿರಿ. ನನ್ನ ಮನಸ್ಸು ಓರ್ವ ಸ್ತ್ರೀಯಲ್ಲಿ ಆಸಕ್ತವಾಗಿ ದುಃಖಗೊಂಡಿದೆ.

೩. ಪಾತ್ರೆಯಲ್ಲಿರುವ ನೀರನ್ನು ಬೆಂಕಿಯು ಕುದಿಸುವಂತೆ ಕಾಮವು ನನ್ನ ಮನಸ್ಸನ್ನು ಕುದಿಸುತ್ತಿದೆ.

ಏಕೋ ಗೃಹ್ಣಾತು ಮೇ ಪುತ್ರಾ ಜರಾಂ ದುಃಖಪ್ರದಾಯಿನೀಂ ।
ಸ್ವೀಯಂ ದದಾತು ತಾರುಣ್ಯಂ ಯಥಾಕಾಮಂ ಚರಾಮ್ಯಹಂ ॥ ೪ ॥

ಜರಾಯಾಶ್ಚೋಪಗ್ರಹಣಂ ಕರಿಷ್ಯತಿ ಸುತೋತ್ತಮಃ ।
ಸ ಭುನಕ್ತಿ ಚ ಮೇ ರಾಜ್ಯಂ ಧನುಸ್ಸಂಧಾರಯಿಷ್ಯತಿ ॥ ೫ ॥

ತಸ್ಯ ಸೌಖ್ಯಂ ಸುಸಂಪತ್ತಿರ್ಧನಂ ಧ್ಯಾನಂ ಭವಿಷ್ಯತಿ ।
ವಿಪುಲಾ ಸಂತತಿಸ್ತಸ್ಯ ಯಶಃಕೀರ್ತಿರ್ಭವಿಷ್ಯತಿ ॥ ೬ ॥

॥ ಪುತ್ರಾ ಊಚುಃ ॥

ಭವಾನ್ ಧರ್ಮಪರೋ ರಾಜನ್ ಪ್ರಜಾಸ್ಸತ್ಯೇನ ಪಾಲಕಃ ।
ತಸ್ಮಾತ್ತೇ ಹೀದೃಶೋ ಭಾವೋ ಜಾತಃ ಪ್ರಕೃತಿಚಾಲನಃ ॥ ೭ ॥

॥ ಯಯಾತಿರುವಾಚ ॥

ಆಗತಾ ನರ್ತಕಾಃ ಪೂರ್ವಂ ಪುರೇ ಮೇ ನಾಟ್ಯವರ್ತನಾಃ ।
ತೇಭ್ಯೋ ಮೇ ಕಾಮಸಂದೋಹಃ ಸಂಜಾತೋ ಮೋಹ ಈದೃಶಃ ॥ ೮ ॥

---

೪. ನಿಮ್ಮಲ್ಲಿ ಯಾವನಾದರೂ ಒಬ್ಬನು ಈ ದುಃಖಕರವಾದ ನನ್ನ ಜರೆಯನ್ನು ತೆಗೆದುಕೊಂಡು ಅವನ ತಾರುಣ್ಯವನ್ನು ಕೊಡಿ. ನಾನು ಯಥೇಚ್ಛವಾಗಿ ಸುಖಪಡಬೇಕು.

೫-೬. ನನ್ನ ಮುಪ್ಪನ್ನು ತೆಗೆದುಕೊಂಡವನು ಈ ರಾಜ್ಯವನ್ನು ಅನುಭವಿಸುವನು. ಅದನ್ನು ಅವನಿಗೆ ಕೊಡುತ್ತೇನೆ. ಧನುಗ್ರ್ರಹಣಮಾಡಿ ಅವನೇ ಕಾಪಾಡಬೇಕು. ಅವನಿಗೆ ಸಂಪತ್ತೂ, ಧನ, ಧಾನ್ಯ, ಸಂತತಿ, ಕೀರ್ತಿ, ಯಶಸ್ಸುಗಳುಂಟಾಗುತ್ತವೆ.

೭. ಮಕ್ಕಳು ಹೇಳಿದರು :—ನೀನು ಧರ್ಮವಂತನಾಗಿ ರಾಜ್ಯವನ್ನು ಸತ್ಯದಿಂದ ಪಾಲಿಸುತ್ತಿರುತ್ತೀಯೆ. ನಿನಗೆ ಪ್ರಕೃತಿವಿರುದ್ಧವಾದ ಈ ಬುದ್ಧಿ ಏತಕ್ಕೆ ಬಂದಿತು ?

೮. ಯಯಾತಿಯು ಹೇಳಿದನು :—ಪೂರ್ವದಲ್ಲಿ ನಮ್ಮ ಊರಿಗೆ ನಾಟ್ಯಮಾಡುವವರು ಬಂದಿದ್ದರು. ಅವರು ಇಲ್ಲಿ ನಾಟಕವಾಡಿ ನನಗೆ ಕಾಮವನ್ನು ಹುಟ್ಟಿಸಿದರು. ಅದರಿಂದ ಈ ರೀತಿಯಾದ ಮೋಹವುಂಟಾಗಿದೆ.

ಜರಯಾ ವ್ಯಾವೃತಃ ಕಾಯೋ ಮಮ ಸಂಕ್ಲಿಷ್ಟಮಾನಸಂ ।
ಸಂಬಭೂವ ಸುತಶ್ಚೈರೇಷ್ಯಾಃ ಕಾಮೇನ ಚ ಸಮಾಕುಲಂ ॥ ೯ ॥

ಕಾಚಿದ್ದೃಷ್ಟಾ ಮಯಾ ನಾರೀ ದಿವ್ಯರೂಪಾ ವರಾನನಾ ।
ಮಯಾ ಸಂಭಾಷಿತಾ ಪುತ್ರಾಃ ಕಿಂಚಿನ್ನೋವಾಚ ಮಾನಿನೀ ॥ ೧೦ ॥

ವಿಶಾಲಾ ನಾಮ ತಸ್ಯಾಶ್ಚ ಸಖೀ ಚಾರುವಿಲಕ್ಷಣಾ ।
ಸಾ ಮಾಮಾಹ ಶುಭಂ ವಾಕ್ಯಂ ಸರ್ವಸೌಖ್ಯಪ್ರದಾಯಕಂ ॥ ೧೧ ॥

ಜರಾಹೀನೋ ಯದಾ ಸ್ಯಾಸ್ತ್ವಂ ತದಾ ತೇ ಸುಪ್ರಿಯಂ ಭವೇತ್ ।
ಏವಂ ಮಮ ಕೃತೇ ವಾಕ್ಯಂ ತಯೋಕ್ತಂ ಹಿ ಶಿವಾಗಮಂ ॥ ೧೨ ॥

ಮಯಾ ಜರಾಪನೋದಾರ್ಥಂ ತ್ವದಗ್ರೇ ಸಮುದಾಹೃತಂ ।
ಏವಂ ಜ್ಞಾತ್ವಾ ಪ್ರಕರ್ತವ್ಯಂ ಯತ್ಸುಖಂ ಹಿ ಸುಪುತ್ರಕಾಃ ॥ ೧೩ ॥

॥ ತುರುರುವಾಚ ॥

ಶರೀರಂ ಪ್ರಾಪ್ಯತೇ ಪುತ್ರೈಃ ಪಿತುರ್ಮಾತುಃ ಪ್ರಸಾದತಃ ।
ಧರ್ಮಶ್ಚ ಕ್ರಿಯತೇ ರಾಜರ್ ಶರೀರೇಣ ವಿಪಶ್ಚಿತಾ ॥ ೧೪ ॥

---

೯. ಈಗ ಮುಪ್ಪಿನಿಂದ ನನ್ನ ಶರೀರವು ಕೂಡಿದೆ. ಮನಸ್ಸು ಕ್ಲೇಶಪಡುತ್ತಿದೆ. ಆದರೆ ಆಶೆಯು ಮಾತ್ರ ಈಗ ಬಹಳವಾಗಿದೆ.

೧೦. ಒಳ್ಳೆಯ ರೂಪವತಿಯಾದ ಒಬ್ಬ ಹೆಂಗಸು ಕಣ್ಣಿಗೆ ಬಿದ್ದಳು. ನಾನು ಆಕೆಯನ್ನು ಮಾತನಾಡಿಸಿದೆನು. ಆಕೆಯು ಮಾತನಾಡಲೇ ಇಲ್ಲ.

೧೧. ಅವಳ ಸಖಿಯೊಬ್ಬಳು ವಿಶಾಲೆಯೆಂಬುವಳು. ಆಕೆಯು ಸರ್ವಸೌಖ್ಯವನ್ನೂ ಕೊಡುವ ಒಳ್ಳೆಯ ಮಾತನ್ನು ನನಗೆ ಹೇಳಿದಳು.

೧೨. ನಿನಗೆ ಮುಪ್ಪು ಹೋದರೆ ಆಗ ನಿನ್ನ ಇಷ್ಟನೆರವೇರುತ್ತದೆ, ಎಂದು ಆಕೆಯು ನನಗೆ ಒಳ್ಳೆಯ ಮಾತನ್ನು ಹೇಳಿದಳು.

೧೩. ನನಗೆ ಜರೆಯು ಹೋಗಿ ಯೌವನ ಉಂಟಾಗಲು ಇದನ್ನು ನಿಮಗೆ ಹೇಳಿದ್ದೇನೆ. ಇದನ್ನು ತಿಳಿದು ನನಗೆ ಸುಖವಾಗುವಂತೆ ಮಾಡಿರಿ. ಎಂದನು.

೧೪-೧೫. ಅದನ್ನು ಕೇಳಿ ತುರುವೆಂಬ ಮಗನು ಹೇಳಿದನು:— ತಾಯಿ ತಂದೆಗಳ ಅನುಗ್ರಹದಿಂದ ಈ ಶರೀರವನ್ನು ಮಕ್ಕಳು ಹೊಂದುತ್ತಾರೆ. ಬುದ್ಧಿ

ಪಿತ್ರೋಶ್ಚ ಶುಶ್ರೂಷಣಂ ಕಾರ್ಯಂ ಪುತ್ರೈಶ್ಚಾಪಿ ವಿಶೇಷತಃ ।
ನ ಚ ಯೌವನದಾನಸ್ಯ ಕಾಲೋಽಯಂ ಮೇ ನರಾಧಿಪ ॥ ೧೫ ॥

ಪ್ರಥಮೇ ವಯಸಿ ಭೋಕ್ತವ್ಯಂ ವಿಷಯಂ ಮಾನವೈರ್ನೃಪ ।
ಇದಾನೀಂ ತನ್ನ ಕಾಲೋಽಯಂ ವರ್ತತೇ ತವ ಸಾಂಪ್ರತಂ ॥ ೧೬ ॥

ಜರಾಂ ತಾಂ ಚ ಪ್ರದತ್ವಾ ವೈ ಪುತ್ರೇ ತಾತ ಮಹದ್ಭೃಶಂ ।
ಪಶ್ಚಾತ್ಸುಖಂ ಪ್ರಭೋಕ್ತವ್ಯಂ ನ ತು ಸ್ಯಾತ್ತವ ಜೀವಿತಂ ॥ ೧೭ ॥

ತಸ್ಮಾದ್ವಾಕ್ಯಂ ಮಹಾರಾಜ ಕರಿಷ್ಯೇ ನೈವ ತೇ ಹ್ಯಹಂ ।
ಏವಮಾಭಾಷ್ಯ ತು ನೃಪಂ ತುರುರ್ಜ್ಯೇಷ್ಠಸುತಸ್ತದಾ ॥ ೧೮ ॥

ತುರೋರ್ವಾಕ್ಯಂ ತತಃ ಶ್ರುತ್ವಾ ಕ್ರುದ್ಧೋ ರಾಜಾಽಭ್ಯಭಾಷತ ।
ತುರುಂ ಶಶಾಪ ಧರ್ಮಾತ್ಮಾ ರೋಷೇಣಾರುಣಲೋಚನಃ ॥ ೧೯ ॥

ಅಪಧ್ವಸ್ತಸ್ತ್ವಯಾ ದೇಶೋ ಮಮೈವಂ ಪಾಪಚೇತನ ।
ತಸ್ಮಾತ್ಪಾಪೀ ಭವಸ್ಯ ತ್ವಂ ಸರ್ವಧರ್ಮಬಹಿಷ್ಕೃತಃ ॥ ೨೦ ॥

---

ವಂತನು ಆ ಶರೀರದಿಂದ ಧರ್ಮವನ್ನು ಗಳಿಸುತ್ತಾನೆ. ಮಗನು ತಾಯಿತಂದೆಗಳ ಶುಶ್ರೂಷೆಯನ್ನು ಅತಿಶಯವಾಗಿ ಮಾಡಬೇಕು. ಅದನ್ನು ಎಲ್ಲರೂ ಒಪ್ಪತಕ್ಕದ್ದೇ. ಆದರೆ ಇದು ಯೌವನವನ್ನು ಕೊಡುವ ಕಾಲವಲ್ಲ.

೧೬. ಮೊದಲನೆಯ ವಯಸ್ಸಿನಲ್ಲಿ ವಿಷಯಗಳನ್ನು ಭೋಗಿಸಬೇಕು. ಈಗ ನಿನಗೆ ಅದಕ್ಕೆ ಕಾಲವಲ್ಲ.

೧೭-೧೮. ಮಗನಿಗೆ ಆ ಮುಪ್ಪನ್ನು ಕೊಟ್ಟು ಆ ಮೇಲೆ ಸುಖವನ್ನನುಭವಿಸಬೇಕು. ಕೊನೆಗೆ ನೀನು ಬದುಕುವುದೂ ನಿರ್ಧರವಿಲ್ಲ. ಆದ್ದರಿಂದ ನಿನ್ನ ಮಾತನ್ನು ನಾನು ನಡೆಸಲು ಸಾಧ್ಯವಿಲ್ಲ, ಎಂದು ತುರುವು ಈ ರೀತಿ ತಂದೆಗೆ ಉತ್ತರಕೊಟ್ಟನು.

೧೯-೨೧. ರಾಜನು ಈ ತುರುವಿನ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ, ಅಯೋಗ್ಯನೇ, ನೀನು ನನ್ನ ಅಪ್ಪಣೆಯನ್ನು ತಿರಸ್ಕರಿಸಿದೆ. ಸರ್ವ

**ಶಿವಶಾಸ್ತ್ರವಿಹೀನಶ್ಚ ವೇದವೇದಾಂಗವರ್ಜಿತಃ ।**
**ಸರ್ವಾಚಾರವಿಹೀನಸ್ತ್ವಂ ಭವಿಷ್ಯಸಿ ನ ಸಂಶಯಃ ॥ ೨೦ ॥**

**ಬ್ರಹ್ಮಘ್ನಸ್ತ್ವಂ ದೇವದುಷ್ಟಃ ಸುರಾಪಃ ಸತ್ಯವರ್ಜಿತಃ ।**
**ಚಂಡಕರ್ಮಪ್ರಕರ್ತಾ ತ್ವಂ ಭವಿಷ್ಯಸಿ ನರಾಧಮಃ ॥ ೨೨ ॥**

**ಸುರಾಲೀನಕ್ಷುಧಃ ಪಾಪೀ ಗೋಘ್ನಶ್ಚೈವ ಭವಿಷ್ಯಸಿ ।**
**ದುಷ್ಕರ್ಮಾ ಮುಕ್ತಕಕ್ಷಶ್ಚ ಬ್ರಹ್ಮದ್ವೇಷ್ಟಾಽಶಿವಾಕೃತಿಃ ॥ ೨೩ ॥**

**ಪರದಾರಾಭಿಗಾಮೀ ತ್ವಂ ಮಹಾದುಷ್ಟಶ್ಚ ಲಂಪಟಃ ।**
**ಸರ್ವಭಕ್ಷಶ್ಚ ದುರ್ಮೇಧಾಃ ಸದಾ ತ್ವಂ ಚ ಭವಿಷ್ಯಸಿ ॥ ೨೪ ॥**

**ಸಗೋತ್ರಾಂ ರಮಸೇ ನಾರೀಂ ಸರ್ವಧರ್ಮಪ್ರಣಾಶಕಃ ।**
**ಪುಣ್ಯಜ್ಞಾನವಿಹೀನಾತ್ಮಾ ಕುಷ್ಠವಾಂಶ್ಚ ಭವಿಷ್ಯಸಿ ॥ ೨೫ ॥**

---

ಧರ್ಮದಿಂದ ರಹಿತನಾಗಿ ಪಾಪಿಯಾಗು. ಶಾಸ್ತ್ರಗಳಿಂದಲೂ, ವೇದವೇದಾಂಗಗಳಿಂದಲೂ ಬಹಿಷ್ಕೃತನಾಗು. ಸಮಸ್ತ ಸದಾಚಾರಗಳೂ ನಿನ್ನನ್ನು ಬಿಟ್ಟುಹೋಗಲಿ.

೨೨. ಬ್ರಹ್ಮಘ್ನನೂ, ದೇವದುಷ್ಟನೂ, ಮದ್ಯಪಾಯಿಯೂ, ಸತ್ಯಹೀನನೂ, ಕ್ರೂರಕರ್ಮಕರ್ತನೂ, ನೀಚನೂ ಆಗು.

೨೩. ಹೆಂಡದಿಂದ ಹಸಿವಡಗಿಸುವವನಾಗಿಯೂ, ಪಾಪಿಯಾಗಿಯೂ, ಗೋಘ್ನನಾಗಿಯೂ, ಕೆಟ್ಟಕೆಲಸಮಾಡುವವನಾಗಿಯೂ, ನಿನ್ನ ಸಮೂಹದಲ್ಲಿ ಸೇರದವನಾಗಿಯೂ, ಬ್ರಹ್ಮದ್ವೇಷಿಯೂ, ಅಮಂಗಳವಾದ ಆಕಾರವುಳ್ಳವನೂ ಆಗು.

೨೪. ಪರರ ಹೆಂಡರಲ್ಲಿ ರತಿಯುಳ್ಳವನೂ, ದುಷ್ಟನೂ, ಲಂಪಟನೂ, ಸರ್ವಭಕ್ಷಕನೂ, ಯಾವಾಗಲೂ, ಅಯೋಗ್ಯನೂ ಆಗು.

೨೫. ನಿನ್ನ ಗೋತ್ರದ ಹೆಂಗಸನ್ನು ರಮಿಸು. ಧರ್ಮನಾಶಕನಾಗು. ಪುಣ್ಯಜ್ಞಾನ ನಿನಗಿಲ್ಲದೇ ಹೋಗಲಿ. ಕುಷ್ಠರೋಗವುಳ್ಳವನಾಗು.

ತವ ಪುತ್ರಾಶ್ಚ ಪೌತ್ರಾಶ್ಚ ಈದೃಶಾಶ್ಚ ನ ಸಂಶಯಃ ।
ಭವಿಷ್ಯನ್ತಿ ಹ್ಯಪುಣ್ಯಾಶ್ಚ ಮಚ್ಛಾಪಕಲುಷೀಕೃತಾಃ ॥ ೨೬ ॥

ಏವಂ ತರುಂ ಸ ಶಪ್ತ್ವಾ ವೈ ಯದುಂ ಪುತ್ರಮಥಾಬ್ರವೀತ್ ।
ಜರಾಂ ವೈ ಧಾರಯಸ್ವೇಹ ಭುಂಕ್ಷ್ವ ರಾಜ್ಯಮಕಂಟಕಂ ॥ ೨೭ ॥

ಬದ್ಧಾಂಜಲಿಪುಟೋ ಭೂತ್ವಾ ತದಾ ರಾಜಾನಮಬ್ರವೀತ್ ।

॥ ಯದುರುವಾಚ ॥

ಜರಾಭಾರಂ ನ ಶಕ್ನೋಮಿ ವೋಢುಂ ತಾತ ಕೃಪಾಂ ಕುರು ॥ ೨೮ ॥

ಶೀತಮಧ್ವಾಕದನ್ನಂ ಚ ವಯೋಽತೀತಾ ಶ್ಚ ಯೋಷಿತಃ ।
ಮನಸಃ ಪ್ರಾತಿಕೂಲ್ಯಂ ಚ ಜರಾಯಾಃ ಪಂಚ ಹೇತವಃ ॥ ೨೯ ॥

ಜರಾಭಾರಂ ನ ಶಕ್ನೋಮಿ ವಯಸಿ ಪ್ರಥಮೇ ನೃಪ ।
ಕಃ ಸಮರ್ಥೋಽಹಿ ವೈ ಧರ್ತುಂ ಕ್ಷಮ ತಾತ ಮಮಾಧುನಾ ॥ ೩೦ ॥

---

೨೬. ನಿನ್ನ ಮಕ್ಕಳು, ಮೊಮ್ಮಕ್ಕಳೂ, ಸಹ ಈ ರೀತಿಯೇ ಆಗಲಿ. ನನ್ನ ಶಾಪದಿಂದ ಕಲ್ಮಷರಾಗಿ ಅಯೋಗ್ಯರಾಗಿ ಆಗಲಿ ಸಂಶಯವಿಲ್ಲ.

೨೭. ರಾಜನು ತುರುವನ್ನು ಇಂತು ಶಪಿಸಿ ಯದುವನ್ನು ಕುರಿತು ನನ್ನ ಜರೆಯನ್ನು ನೀನು ತೆಗೆದುಕೋ. ರಾಜ್ಯವನ್ನು ಬಾಧೆಯಿಲ್ಲದೇ ಅನುಭವಿಸು. ಎಂದನು. ಆಗ ಯದುವು ಕೈಮುಗಿದುಕೊಂಡು ರಾಜನನ್ನು ಕುರಿತು ಇಂತೆಂದನು.

೨೮-೨೯. ಯದುವೆಂಬ ಮತ್ತೊಬ್ಬ ಮಗನಿಂತೆಂದನು :—ಶೀತ, ದಾರಿ ನಡೆವುದು, ಕೆಟ್ಟ ಆಹಾರ, ತನಗಿಂತ ಹೆಚ್ಚು ವಯಸ್ಸಿನ ಸ್ತ್ರೀಸಂಗ, ಮನಸ್ಸಿಗೆ ಪ್ರತಿಕೂಲವಾಗಿರುವುದು. ಈ ಐದೂ ಮುಪ್ಪಿನ ಕಾರಣಗಳು. ಇವುಗಳನ್ನು ತಡೆಯಲು ಮುಪ್ಪಿನಲ್ಲಾಗುವುದಿಲ್ಲ. ಆದ್ದರಿಂದ ಜರೆಯ ಭಾರವನ್ನು ತಡೆಯಲಾರೆ. ಕೃಪೆಯಿಡು.

೩೦. ಮೊದಲನೇ ವಯಸ್ಸಿನಲ್ಲಿ ಮುಪ್ಪನ್ನು ಧರಿಸಲಾರೆ. ಮೊದಲನೆಯ ವಯಸ್ಸಿನಲ್ಲಿ ಮುಪ್ಪನ್ನು ಧರಿಸಲು ಯಾರಿಂದ ತಾನೇ ಸಾಧ್ಯ? ನನ್ನನ್ನು ಕ್ಷಮಿಸು, ಎಂದನು.

ಅಥ ಕ್ರುದ್ಧೋ ಮಹಾರಾಜೋ ಯದುಂ ಚಾಪಿ ಶಶಾಪ ಹ ।
ರಾಜ್ಯಹೀನೋ ಹಿ ತೇ ವಂಶಃ ಕದಾಚಿದ್ವೈ ಭವಿಷ್ಯತಿ ॥ ೩೧ ॥

ಕಾಲೇ ತ್ವಂ ತೇಜಸಾ ಹೀನಃ ಕ್ಷತ್ರಧರ್ಮವಿವರ್ಜಿತಃ ।
ಭವಿಷ್ಯಸಿ ನ ಸಂದೇಹಃ ಸಂಕ್ರೋಶನಪರಸ್ಸ್ವಯಂ ॥ ೩೨ ॥

॥ ಯದುರುವಾಚ ॥

ನಿರ್ದೋಷೋಽಹಂ ಮಹಾರಾಜ ಕಸ್ಮಾಚ್ಛಪ್ತಸ್ತ್ವಯಾಽಧುನಾ ।
ದಯಾಂ ಕುರು ಸುದೀನಸ್ಯ ಪ್ರಸಾದಸುಮುಖೋ ಭವ ॥ ೩೩ ॥

॥ ಯಯಾತಿರುವಾಚ ॥

ಮಹಾದೇವಃ ಕುಲೇ ತೇ ವೈ ಸ್ವಾಂಶೇನಾಪಿ ಹಿ ಪುತ್ರಕ ।
ಕರಿಷ್ಯತಿ ವಿಸೃಷ್ಟಿಂ ಚ ತದಾ ಪೂತಂ ಕುಲಂ ತವ ॥ ೩೪ ॥

॥ ಯದುರುವಾಚ ॥

ಶಪ್ತಃ ಪುತ್ರೋ ಮಹಾರಾಜ ವಿನಿರ್ದೋಷಃ ಪಿತಸ್ತ್ವಯಾ ।
ಅನುಗ್ರಹೋ ದೀಯತಾಂ ಮೇ ಯದಿ ವೈ ವರ್ತತೇ ದಯಾ ॥ ೩೫ ॥

---

೩೧-೩೨. ಅದನ್ನು ಕೇಳಿ ದೊರೆಯು ಕೋಪಿಸಿಕೊಂಡು ನಿನ್ನ ವಂಶಕ್ಕೆ ರಾಜ್ಯವಿಲ್ಲದೇ ಹೋಗಲಿ. ಕಾಲದಲ್ಲಿ ನಿನ್ನ ಪರಾಕ್ರಮವು ಫಲಿಸಬೇಡ. ಕ್ಷತ್ರ ಧರ್ಮದಿಂದ ಬಾಹಿರನಾಗು. ಯಾವಾಗಲೂ ದುಃಖಿಯಾಗೆಂದು ಶಪಿಸಿದನು.

೩೩. ಯದುವು ಹೇಳಿದನು:—ಅದನ್ನು ಕೇಳಿ ಯದುವು ರಾಜನನ್ನು ಕುರಿತು ಎಲೈ ದೊರೆಯೇ! ನಾನು ನಿರ್ದೋಷಿಯು. ನನ್ನನ್ನೇಕೆ ಶಪಿಸಿದೆ? ನನ್ನಲ್ಲಿ ದಯೆಯಿಡು. ಅನುಗ್ರಹಮಾಡು ಎಂದು ಕೇಳಿಕೊಂಡನು.

೩೪. ಯಯಾತಿಯು ಹೇಳಿದನು:—ಒಳ್ಳೇದು, ಮಹಾದೇವನು ನಿನ್ನ ಕುಲದಲ್ಲಿ ಹುಟ್ಟಿ ನಿನ್ನ ವಂಶವನ್ನು ಪವಿತ್ರವನ್ನಾಗಿ ಮಾಡುವನು ಎನ್ನಲು,

೩೫. ಯದುವು ಹೇಳಿದನು:—ಎಲೈ ತಂದೆಯೇ ದೋಷವಿಲ್ಲದ ನನ್ನನ್ನು ಶಪಿಸಿರುವೆ. ದಯೆಮಾಡಿ ಅನುಗ್ರಹವನ್ನು ನನ್ನಲ್ಲಿ ತೋರು.

॥ ಯಯಾತಿರುವಾಚ ॥

ಯೋ ಭವೇಚ್ಛ್ರೇಷ್ಠಪುತ್ರಶ್ಚ ಪಿತುರ್ದುಃಖಾಭಿಹಾರಕಃ ।
ರಾಜ್ಯಭೋಗಂ ಸ ವೈ ಭುಂಕ್ತೇ ಭಾರವೋಢಾ ಭವೇತ್ಸ ಹಿ ॥ ೩೬ ॥

ತ್ವಯಾ ಧರ್ಮಂ ನ ಪ್ರವೃತ್ತಂ ಅಭಾಷ್ಯೋಽಸಿ ನ ಸಂಶಯಃ ।
ಭವತಾ ನಾಶಿತಾಜ್ಞಾ ಮೇ ಮಯಾ ದಂಡೇನ ಪಾತಿತಃ ॥ ೩೭ ॥

ತಸ್ಮಾದನುಗ್ರಹೋ ನಾಸ್ತಿ ಯಥೇಷ್ಟಂ ತತ್ತಥಾ ಕುರು ।

॥ ಯದುರುವಾಚ ॥

ಯಸ್ಮಾನ್ಮೇ ನಾಶಿತಂ ರಾಜ್ಯಂ ವಂಶಶ್ಚೈವ ತ್ವಯಾ ನೃಪ ।
ತಸ್ಮಾದ್ದುಷ್ಟೋ ಭವಿಷ್ಯಾಮಿ ತವ ವಂಶಪತಿರ್ನೃಪ ॥ ೩೮ ॥

ತವ ವಂಶೇ ಭವಿತಾರೋ ನಾನಾಭೇದಾ ನೃಪಾಸ್ತು ಯೇ ।
ತೇಷಾಂ ಗ್ರಾಮಾಂಶ್ಚ ದೇಶಾಂಶ್ಚ ಶ್ರಿಯಂ ರತ್ನಾನಿ ಯಾನಿ ವೈ ॥ ೩೯ ॥

---

೩೬. ಯಯಾತಿಯು ಹೇಳಿದನು :—ಶ್ರೇಷ್ಠನಾಗಿ ತಂದೆಯ ದುಃಖವನ್ನು ಹೋಗಲಾಡಿಸುವ ಮಗನು ರಾಜ್ಯಭೋಗಗಳನ್ನು ಅನುಭವಿಸುತ್ತಾನೆ. ಅವನೇ ರಾಜ್ಯಭಾರವನ್ನು ವಹಿಸತಕ್ಕವನು.

೩೭. ನೀನು ಧರ್ಮವನ್ನನುಸರಿಸಲಿಲ್ಲ. ಮಾತನಾಡಿಸಲೂ, ಅಯೋಗ್ಯನಾಗಿದ್ದೀಯೆ. ನೀನು ನನ್ನ ಅಪ್ಪಣೆಯನ್ನು ಉಲ್ಲಂಘಿಸಿದುದರಿಂದ ಶಿಕ್ಷಿಸಿರುವೆನು. ಆದುದರಿಂದ ನಿನ್ನಲ್ಲಿ ಅನುಗ್ರಹಮಾಡಲು ಕಾರಣವಿಲ್ಲ. ಇಷ್ಟಬಂದಂತೆ ಮಾಡು. ಎಂದನು.

೩೮-೪೧. ಯದುವು ಹೇಳಿದನು :—ನನ್ನ ವಂಶ ರಾಜ್ಯಗಳೆರಡನ್ನೂ ನೀನು ನಾಶಮಾಡಿದೆ. ಆದ್ದರಿಂದ ನಾನು ಅಯೋಗ್ಯನಾದೆ. ಇನ್ನು ನಿನ್ನ ವಂಶದಲ್ಲಿ ನಾನಾಜಾತಿಯಾದ ರಾಜರು ಹುಟ್ಟುತ್ತಾರೆ. ಅವರು ಅತಿಕ್ರೂರರಾಗಿ ದೇಶಗಳನ್ನೂ, ಗ್ರಾಮಗಳನ್ನೂ, ಸಂಪತ್ತನ್ನೂ, ಅನುಭವಿಸುತ್ತಾರೆ. ಅವರೆಲ್ಲರೂ ನನ್ನ ವಂಶದಲ್ಲಿ ಹುಟ್ಟುವ ಮ್ಲೇಚ್ಛರಾದ ತುರುಕರೆಂದು ತಿಳಿ. ನಾವಿಬ್ಬರೂ ಒಬ್ಬರಿಗೊಬ್ಬರು ಶಾಪ

**ಭೋಕ್ಷ್ಯಂತಿ ಚ ನ ಸಂದೇಹೋ ಅತಿಚಂಡಾ ಮಹಾಬಲಾಃ ।**
**ಮಮ ವಂಶಸಮುದ್ಭೂತಾಸ್ತುರುಷ್ಕಾ ಮ್ಲೇಚ್ಛರೂಪಿಣಃ ॥ ೪೦ ॥**

**ತ್ವಯಾ ಯೇ ನಾಶಿತಾಸ್ಸರ್ವೇ ಶಪ್ತಾಃ ಶಾಪೈಶ್ಚ ದಾರುಣೈಃ ।**
**ಏವಮಾಭಾಷ್ಯ ರಾಜಾನಂ ಯದುಃ ಕ್ರುದ್ಧೋ ನೃಪಂ ತದಾ ॥ ೪೧ ॥**

**ಅಥ ಕ್ರುದ್ಧೋ ಮಹಾರಾಜಃ ಪುನಶ್ಚೈನಂ ಶಶಾಪ ಹ ।**
**ಮತ್ಪ್ರಜಾನಾಶಕಾಸ್ಸರ್ವೇ ವಂಶಜಾಸ್ತೇ ಚ ವೈ ಶೃಣು ॥ ೪೨ ॥**

**ಯಾವಚ್ಚಂದ್ರಶ್ಚ ಸೂರ್ಯಶ್ಚ ಪೃಥ್ವೀ ನಕ್ಷತ್ರತಾರಕಾಃ ।**
**ತಾವತ್ಸರ್ವೇ ಪ್ರಪಚ್ಯಂತೇ ನರಕೇ ಚೈವ ರೌರವೇ ॥ ೪೩ ॥**

**ಕುರುಂ ದೃಷ್ಟ್ವಾ ತತೋ ಬಾಲಂ ಕ್ರೀಡಮಾನಂ ಸುಖಂಕರಂ ।**
**ಶರ್ಮಿಷ್ಠಾತನಯಂ ರಾಜಾ ನಾಯಚತ ಸ್ತನಂಧಯಂ ।**
**ಶಿಶುಂ ಜ್ಞಾತ್ವಾ ಪರಿತ್ಯಕ್ತಃ ಕುರುಸ್ತೇನೈವ ವೈ ತದಾ ।**
**ಶರ್ಮಿಷ್ಠಾಯಾಃ ಪರಂ ಪುತ್ರಂ ಪುರುಂ ಚ ಜಗದೀಶ್ವರಃ ॥ ೪೪ ॥**

**ಶರ್ಮಿಷ್ಠಾತನಯಂ ರಾಜಾ ನಾಯಾಚತ ಸ್ತನಂಧಯಂ ।**
**ಶಿಶುಂ ಜ್ಞಾತ್ವಾ ಪರಿತ್ಯಕ್ತಃ ಕುರುಸ್ತೇನೈವ ವೈ ತದಾ ॥ ೪೫ ॥**

---

ಕೊಟ್ಟು ಆ ಕೆಟ್ಟಶಾಪನಿಂದ ಕೆಟ್ಟು ಹೋದೆವು ಎಂದು ಯದುವು ಕೋಪಗೊಂಡು ರಾಜನನ್ನು ಕುರಿತು ಹೇಳಿದನು.

೪೨-೪೩. ಯಯಾತಿಯು ಪುನಃ ಕೋಪಗೊಂಡು ನನ್ನ ಪ್ರಜೆಗಳನ್ನು ನಾಶ ಮಾಡುವ ನಿನ್ನ ವಂಶದವರು ಚಂದ್ರ ಸೂರ್ಯರು ಭೂಮಿ, ನಕ್ಷತ್ರಗಳಿರುವವರೆಗೂ, ರೌರವ ನರಕದಲ್ಲಿ ಕ್ಲೇಶಪಡಲಿ ಎಂದು ಮತ್ತೆ ಶಾಪಕೊಟ್ಟನು.

೪೪. ಶರ್ಮಿಷ್ಠೆಯ ಮಗನಾದ ಕುರುವು ಇನ್ನೂ ಮಗುವೆಂದು ಅವನನ್ನು ಕೇಳದೆ ಬಿಟ್ಟುಬಿಟ್ಟನು.

೪೫. ಕುರುವು ಆಟವಾಡುವ ಮಗುವು. ಹಾಲು ಕುಡಿಯುವ ಮಗುವಾದು ದರಿಂದ ಅವನನ್ನು ಕೇಳಲಿಲ್ಲ.

**ತಮಾಹ ಚ ಸಮಾಹೂಯ ಜರಾ ಮೇ ಗೃಹ್ಯತಾಂ ಸುತ ।**
**ಭುಂಕ್ಷ್ವ ರಾಜ್ಯಂ ಮಯಾ ದತ್ತಂ ಸುಪುಣ್ಯಂ ಹತಕಂಟಕಂ ॥ ೪೬ ॥**

**॥ ಪುರುರುವಾಚ ॥**

**ರಾಜ್ಯಂ ದೈವ್ಯೇನ ಭೋಕ್ತ್ರವ್ಯಂ ಪಿತ್ರಾ ಭುಕ್ತಂ ತಥಾ ತವ ।**
**ತವಾದೇಶಂ ಕರಿಷ್ಯಾಮಿ ಜರಾ ಮೇ ದೀಯತಾಂ ನೃಪ ॥ ೪೭ ॥**

**ಕಾರುಣ್ಯೇನ ಮಯಾದ್ಯೈವ ಭೂತ್ವಾ ಸುಂದರರೂಪಧೃಕ್ ।**
**ಭುಂಕ್ಷ್ವ ಭೋಗಾನ್ ಮಹಾಭಾಗ ವಿಷಯಾಸಕ್ತಚೇತಸಾ ॥ ೪೮ ॥**

**ಯಾವದಿಚ್ಛಾ ಮಹಾಭಾಗ ವಿಹರಸ್ವ ತಯಾ ಸಹ ।**
**ಪುರುಮಾಹ ತತೋ ರಾಜಾ ಸುಪ್ರಸನ್ನೋ ಮಹಾಮನಾಃ ॥ ೪೯ ॥**

**ಮಮ ಯಾಚ್ಞಾ ತ್ವಯಾ ವತ್ಸ ನ ಕೃತಾ ವಿಫಲಂ ಯತಃ ।**
**ತಸ್ಮಾದ್ವರಂ ಪ್ರದಾಸ್ಯಾಮಿ ತುಭ್ಯಂ ವತ್ಸ ಮಹಾಭುಜ ॥ ೫೦ ॥**

---

೪೬. ಈ ಶರ್ಮಿಷ್ಠೆಗೆ ಪುರುವೆಂಬವನು ಮತ್ತೊಬ್ಬ ಮಗನಿದ್ದನು. ರಾಜನು ಆ ಪುರುವನ್ನು ಕರೆದು ನೀನು ನನ್ನ ಜರೆಯನ್ನು ತೆಗೆದುಕೋ. ನನ್ನ ರಾಜ್ಯವು ಶತ್ರುಬಾಧೆಯಿಲ್ಲದೇ ಇದೆ. ಅದನ್ನು ಅನುಭವಿಸು ಎಂದನು.

೪೭. ಪುರುವು ಹೇಳಿದನು :—ಎಲೈ ತಂದೆಯೇ, ರಾಜ್ಯವನ್ನು ಇದುವರೆಗೂ ನೀನೇ ಆಳುತ್ತಿದ್ದೆ. ಈಗಲೂ ನೀನೇ ಆಳು ನೀನು ಆಳಿದ ರಾಜ್ಯವನ್ನು ಅದೃಷ್ಟ ದಿಂದ ಕಾಲಾನುಕ್ರಮದಲ್ಲಿ ನಾನಾಳಬೇಕಷ್ಟೆ. ನಿನ್ನ ಅಪ್ಪಣೆಯಂತೆ ಆಚರಿಸುತ್ತೇನೆ. ನಿನ್ನ ಜರೆಯನ್ನು ನನಗೆ ಕೊಡು.

೪೮. ನನ್ನ ತಾರುಣ್ಯವನ್ನು ತೆಗೆದುಕೊಂಡು ಅದರಿಂದ ಸುಂದರವಾದ ಶರೀರವನ್ನು ಧರಿಸಿ ವಿಷಯಾಸಕ್ತಮನಸ್ಸುಳ್ಳವನಾಗಿ, ಭೋಗಗಳನ್ನು ಅನುಭವಿಸು. ನಿನಗೆ ಇಚ್ಛೆಯಿರುವವರೆಗೂ ಅವಳೊಡನೆ ರಮಿಸು. ಎನ್ನಲು,

೪೯-೫೦. ರಾಜನು ಆ ಮಾತನ್ನು ಕೇಳಿ ಎಲೈ ಮಗನೇ, ನನ್ನ ಯಾಚನೆ ಯನ್ನು ತಿರಸ್ಕರಿಸದೆ ಮನ್ನಿಸಿದೆ. ಅದರಿಂದ ನಿನಗೆ ವರವನ್ನು ಕೊಡುತ್ತೇನೆ.

**ಯಸ್ಮಾಜ್ಜರಾ ಗೃಹೀತಾ ಮೇ ದತ್ತಂ ತಾರುಣ್ಯಕಂ ಸ್ವಕಂ ।**
**ತೇನ ರಾಜ್ಯಂ ಪ್ರಭುಂಕ್ಷ್ವ ತ್ವಂ ಮಯಾ ದತ್ತಂ ಮಹಾಮತೇ ॥ ೫೧ ॥**

**ತತಃ ಕೃತೇ ವಿನಿಮಯೇ ವಯಸೋಸ್ತಾತಪುತ್ರಯೋಃ ।**
**ತತ್ಕ್ಷಣಾದ್ವೃದ್ಧಭಾವಶ್ಚ ಪುರೋರಂಗೇ ಪ್ರದೃಶ್ಯತೇ ॥ ೫೨ ॥**

**ನೂತನತ್ವಂ ಗತೋ ರಾಜಾ ಯಥಾ ಷೋಡಶವಾರ್ಷಿಕಃ ।**
**ರೂಪೇಣ ಮಹತಾ ಯುಕ್ತೋ ದ್ವಿತೀಯ ಇವ ಮನ್ಮಥಃ ॥ ೫೩ ॥**

**ಧನೂ ರಾಜ್ಯಂ ಚ ಛತ್ರಂ ಚ ಅಶ್ವಂ ಚಾನ್ಯದ್ಧನಂ ಗಜಂ ।**
**ಕೋಶಂ ವೇಷಂ ಬಲಂ ಸರ್ವಂ ಚಾಮರವ್ಯಜನೇ ತಥಾ ।**
**ದದೌ ತಸ್ಮೈ ಮಹಾರಾಜಃ ಪುರೋಶ್ಚೈವ ಮಹಾತ್ಮನಃ ॥ ೫೪ ॥**

**ಕಾಮಸಕ್ತಶ್ಚ ಧರ್ಮಾತ್ಮಾ ತಾಂ ನಾರೀಮನುಚಿಂತಯನ್ ।**
**ಸ್ವವೃತ್ತಂ ನೈವ ಸಸ್ಮಾರ ಕಾಮಾತ್ಮಾ ನಹುಷಾತ್ಮಜಃ ।**
**ಅಶ್ರುಬಿಂದುಮತೀ ಯತ್ರ ಜಗಾಮ ಲಘುವಿಕ್ರಮಃ ॥ ೫೫ ॥**

---

೫೧. ನೀನು ನನ್ನ ಜರೆಯನ್ನು ತೆಗೆದುಕೊಂಡು ನಿನ್ನ ತಾರುಣ್ಯವನ್ನು ಕೊಟ್ಟಿದುದರಿಂದ ನಾನು ನಿನಗೆ ರಾಜ್ಯವನ್ನು ಕೊಡುತ್ತೇನೆ. ಅದನ್ನು ಸುಖವಾಗಿ ಅನುಭವಿಸು. ಎಂದು ಮಗನಿಗೆ ಹೇಳಿ,

೫೨. ತಂದೆ ಮಕ್ಕಳು ಈರೀತಿ ಬದಲಾಯಿಸಿಕೊಳ್ಳಲು ಪುರುವಿನ ಶರೀರದಲ್ಲಿ ಆ ಒಡನೆಯೇ ಮುಪ್ಪು ಕಾಣಬಂದಿತು.

೫೩. ರಾಜನು ಹದಿನಾರು ವರ್ಷದವನಾಗಿ ನವಯೌವನಸಂಪನ್ನನಾದನು. ಎರಡನೆಯ ಮನ್ಮಥನಂತೆ ರೂಪವುಳ್ಳವನಾದನು.

೫೪. ಧನುಸ್ಸು, ರಾಜ, ಛತ್ರ, ಅಶ್ವ, ಹಣ, ಆನೆ, ಕೋಶ, ವೇಷ, ಸೈನ್ಯ, ಚಾಮರ, ವ್ಯಂಜನಗಳನ್ನು ಆ ಪುರುವಿಗೆ ಯಯಾತಿಯು ಸಂತೋಷದಿಂದ ಕೊಟ್ಟನು.

೫೫. ಆ ಧರ್ಮಾತ್ಮನು ಕಾಮಾಸಕ್ತನಾಗಿ ಆಕೆಯನ್ನೇ ಸ್ಮರಿಸುತ್ತ ತನ್ನ ವೃತ್ತಾಂತವನ್ನೇ ಗಮನಿಸದೆ, ಆ ಅಶ್ರುಬಿಂದುಮತಿಯಿರುವಲ್ಲಿಗೆ ಜಾಗ್ರತೆ ಹೋದನು.

**ತಾಂ ಚ ದೃಷ್ಟ್ವಾ ವಿಶಾಲಾಕ್ಷೀಂ ಚಾರುಪೀನಪಯೋಧರಾಂ ।**
**ವಿಶಾಲಾಂ ಚ ಮಹಾರಾಜಃ ಕಂದರ್ಪೋದ್ಘೂರ್ಣಮಾನಸಃ ॥ ೫೬ ॥**

**॥ ರಾಜೋವಾಚ ॥**

**ಉವಾಚ ಚಾಗತೋ ಭದ್ರೇ ವಿಶಾಲೇ ಚಾರುಲೋಚನೇ ।**
**ಜರಾಂ ತ್ಯಕ್ತ್ವಾ ಮಹಾಭಾಗೇ ದೋಷರೂಪಾಂ ಮಹಾಬಲಾಂ ॥ ೫೭ ॥**

**ತಾರುಣ್ಯೇನ ಸಮಾಯುಕ್ತಃ ಕಿಮನ್ಯತ್ಕರವಾಣ್ಯಹಂ ।**
**ತರುಣೋ ಭೂತ್ವಾ ಸಮಾಯಾತೋ ಭಜತ್ವೇಷಾ ಮಮಾಧುನಾ ।**
**ಯಂ ಯಂ ಹಿ ವಾಂಛತೇ ಚೈಷಾ ತಂ ತಂ ದದ್ಮಿ ನ ಸಂಶಯಃ ॥ ೫೮ ॥**

**॥ ವಿಶಾಲೋವಾಚ ॥**

**ಯದಾ ಭವಾನ್ ಸಮಾಯಾತೋ ಜರಾಂ ದುಷ್ಟಾಂ ವಿಹಾಯ ಚ ।**
**ದೋಷೇಣೈಕೇನ ಲಿಪ್ತೋಽಸಿ ಭವಂತಂ ನೈವ ಮನ್ಯತೇ ॥ ೫೯ ॥**

---

೫೬. ಅಲ್ಲಿ ಸುಂದರಿಯಾದ ವಿಶಾಲೆಯನ್ನು ನೋಡಿ ಮನ್ಮಥಾವಿಷ್ಟಶರೀರನಾದ ಆತನು ಅವಳನ್ನು ಕುರಿತು,

೫೭. ರಾಜನು ಹೇಳಿದನು :—ದೋಷರೂಪವಾದ ಜರೆಯನ್ನು ಬಿಟ್ಟು ತಾರುಣ್ಯದಿಂದ ಬಂದಿದ್ದೇನೆ. ಇನ್ನೇನಾಗಬೇಕು ?

೫೮. ಇಗೋ ತರುಣನಾಗಿ ಬಂದಿದ್ದೇನೆ. ಈಕೆಯು ನನ್ನನ್ನು ಹೊಂದಿ ಸುಖಿಸಲಿ ಈಕೆಯು ಕೇಳಿದುದನ್ನೆಲ್ಲಾ ಮಾಡಿಕೊಡುತ್ತೇನೆ. ಸಂಶಯವಿಲ್ಲಾ. ಎಂದು ವಿಶಾಲೆಯನ್ನು ಕೇಳಿದನು.

೫೯. ವಿಶಾಲೆಯು ಹೇಳಿದಳು :—ನೀನು ಜರೆಯನ್ನೇನೋ ಬಿಟ್ಟು ಬಂದೆ. ಆದರೆ ಮತ್ತೊಂದು ದೋಷವು ನಿನ್ನಲ್ಲಿದೆ. ಆದ್ದರಿಂದ ನಿನ್ನನ್ನು ಆಕೆಯು ಅನುಮೋದಿಸುವುದಿಲ್ಲ. ಎನ್ನಲು,

॥ ರಾಜೋವಾಚ ॥

ಮಮ ದೋಷಂ ವದಸ್ವ ತ್ವಂ ಯದಿ ಜಾನಾಸಿ ನಿಶ್ಚಿತಂ ।
ತಂ ತು ದೋಷಂ ತ್ಯಜೇ ತನ್ವಿ ಗುಣರೂಪಂ ನ ಸಂಶಯಃ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಯಯಾತಿಚರಿತೇ ಅಷ್ಟಸಪ್ತತಿತಮೋಽಧ್ಯಾಯಃ



---

೬೦. ರಾಜನು ಹೇಳಿದನು:—ಆ ದೋಷವಾವುದು? ನಿನಗೆ ಗೊತ್ತಿದ್ದರೆ ಆ ನನ್ನ ದೋಷವನ್ನು ಹೇಳು. ಆ ದೋಷವನ್ನೂ ಬಿಟ್ಟುಬಿಡುತ್ತೇನೆ ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಊನಾಶೀತಿತಮೋಽಧ್ಯಾಯಃ

॥ ವಿಶಾಲೋವಾಚ ॥

ಶರ್ಮಿಷ್ಠಾ ದೇವಯಾನೀ ಚ ಯಸ್ಯ ಭಾರ್ಯೇ ಸುಲೋಚನೇ ।
ಸೌಭಾಗ್ಯಂ ತತ್ರ ನೈದೃಷ್ಟಮನ್ಯಥಾ ನಾಸ್ತಿ ಭೂತಳೇ ।
ತತ್ಕಥಂ ತ್ವಂ ಮಹಾಭಾಗ ಅಸ್ಯಾಃ ಕಾರ್ಯವಶೋ ಭವೇಃ ॥ ೧ ॥

ಸಾಪತ್ನಕೇನ ಭಾವೇನ ಭರ್ವಾ ಭರ್ತಾ ಪ್ರತಿಷ್ಠಿತಃ ।
ಸಸರ್ಪೋಽಸಿ ಮಹಾರಾಜ ಭೂತಲೇ ಚಂದನಂ ಯಥಾ ॥ ೨ ॥

ಸರ್ಪೈಶ್ಚ ವೇಷ್ಟಿತಂ ರಾಜನ್ ಮಹಾಚಂದನಮೇವ ಹಿ ।
ತಥಾ ತ್ವಂ ವೇಷ್ಟಿತಂ ಸರ್ಪೈಃ ಸಪತ್ನೀನಾಮಸಂಜ್ಞಕೈಃ ॥ ೩ ॥

---

## ಎಪ್ಪತ್ತೊಂಭತ್ತನೆಯ ಅಧ್ಯಾಯವು

೧. ವಿಶಾಲೆಯು ಹೇಳಿದಳು :—ಶರ್ಮಿಷ್ಠೆ, ದೇವಯಾನಿಯರೆಂಬವರು ನಿನ್ನ ಇಬ್ಬರು ಹೆಂಡಿರು. ಅವರಿಗಿರುವ ಸೌಭಾಗ್ಯವು ಭೂಮಿಯಲ್ಲೇ ಬೇರೆಲ್ಲೂ ಇಲ್ಲ. ಹೀಗೆ ಬೇರೆ ಹೆಂಡರಿರುವುದರಿಂದ ನೀನು ಈ ಕನ್ಯೆಗೆ ಹೇಗೆ ವಶನಾಗಿರಲು ಸಾಧ್ಯ?

೨. ನೀನು ಬೇರೆ ಹೆಂಡಿರನ್ನು ಇಟ್ಟುಕೊಂಡಿರುವುದರಿಂದ ಸವತಿಯ ಭಾವವು ಈಕೆಗೆ ಬಂದಂತಾಯಿತು. ಹೀಗಿರುವುದರಿಂದ ಭೂಮಿಯಲ್ಲಿ ಸರ್ಪದಿಂದ ಕೂಡಿದ ಚಂದನಮರದಂತಿದ್ದೀಯೆ.

೩. ಚಂದನವು ಸರ್ಪಗಳಿಂದ ಸುತ್ತಲ್ಪಟ್ಟಿರುವಂತೆ ನೀನು ಸವತಿ ಎಂಬ ಸರ್ಪಗಳಿಂದ ಕೂಡಿದ್ದೀಯೆ.

ವರಮಗ್ನಿಪ್ರವೇಶಂ ಚ ಶಿಖರಾತ್ಪತನಂ ವರಂ ।
ರೂಪತೇಜಸ್ಸಮಾಯುಕ್ತಂ ಸಪತ್ನೀಸಹಿತಂ ಪ್ರಿಯಂ ॥ ೪ ॥

ನ ವರಂ ತಾದೃಶಂ ಕಾನ್ತಂ ಸಪತ್ನೀವಿಷಸಂಯುತಂ ।
ಇಯಂ ನ ಮನ್ಯತೇ ಕಾನ್ತಂ ಭವಂತಂ ಗುಣಸಾಗರಂ ॥ ೫ ॥

॥ ಯಯಾತಿರುವಾಚ ॥

ದೇವಯಾನ್ಯಾ ನ ಮೇ ಕಾರ್ಯಂ ತಥಾ ಶರ್ಮಿಷ್ಠಯಾ ಶುಭೇ ।
ಇತ್ಯರ್ಥೇಽಹಂ ಸ್ಪೃಶೇ ಕಾಯಂ ಸತ್ಯಧರ್ಮಸಮನ್ವಿತಂ ॥ ೬ ॥

॥ ಅಶ್ರುಬಿಂದುಮತ್ಯುವಾಚ ॥

ಅಹಂ ರಾಜ್ಯಸ್ಯ ಭೋಕ್ತ್ರೀ ಚ ತವ ಕಾಯಸ್ಯ ಭೂಪತೇ ।
ಯದ್ಯದ್ವದಾಮ್ಯಹಂ ಕಾರ್ಯಂ ತತ್ತತ್ಕಾರ್ಯಂ ತ್ವಯಾ ಧ್ರುವಂ ॥ ೭ ॥

ಇತ್ಯರ್ಥೇ ಪ್ರತ್ಯಯಂ ದೇಹಿ ಮಮ ವೈ ಸ್ವಕರಂ ನೃಪ ।
ಬಹುಧರ್ಮಸಮೋಪೇತಂ ಪುಣ್ಯಲಕ್ಷಣಸಂಯುತಂ ॥ ೮ ॥

---

೪-೫. ಮೊದಲೇ ಒಬ್ಬ ಪತ್ನಿಯಿರುವ ಗಂಡಸನ್ನು ಮದುವೆಯಾಗುವುದಕ್ಕಿಂತಲೂ ಹೆಂಗಸಿಗೆ ಅಗ್ನಿಪ್ರವೇಶವು ಉತ್ತಮವಾದುದು. ಶಿಖರದಿಂದ ಬೀಳುವುದೂ ಉತ್ತಮವೇ. ರೂಪ ತೇಜಸ್ಸುಗಳಿಂದ ಕೂಡಿದ್ದರೂ ಸಪತ್ನಿಯಿಂದ ಕೂಡಿದ ಗಂಡನು ಅವಳ ಭಾಗಕ್ಕೆ ವಿಷದಿಂದ ಕೂಡಿರುವನು. ಅವನು ಯೋಗ್ಯನಲ್ಲ. ಅಂಥವನು ಗುಣದಿಂದ ಕೂಡಿದ್ದರೂ ಅವನನ್ನು ಗಂಡನನ್ನಾಗಿ ಯಾರೂ ಅಪೇಕ್ಷಿಸುವುದಿಲ್ಲ. ಎಂದಳು.

೬. ಯಯಾತಿಯು ಹೇಳಿದನು :—ದೇವಯಾನಿಶರ್ಮಿಷ್ಠೆಯರು ನನಗೆ ಬೇಡ. ಈ ವಿಷಯದಲ್ಲಿ ಸತ್ಯ ಧರ್ಮಗಳಿಂದ ಕೂಡಿದ ಈ ದೇಹವನ್ನು ಮುಟ್ಟಿ ಹೇಳುತ್ತೇನೆ.

೭. ಅಶ್ರುಬಿಂದುಮತಿಯು ಹೇಳಿದಳು :—ನಾನೇ ರಾಜ್ಯವನ್ನೂ ನಿನ್ನ ಶರೀರವನ್ನೂ ಭೋಗಿಸುವವಳು. ನಾನು ಏನೇನನ್ನು ಹೇಳುತ್ತೇನೋ ಅದೆಲ್ಲವನ್ನೂ ನೀನು ಖಂಡಿತ ಮಾಡಬೇಕು.

೮. ಈ ವಿಷಯದಲ್ಲಿ ಧರ್ಮದಿಂದಲೂ ಪುಣ್ಯದಿಂದಲೂ ನಡೆಯುವಂತೆ ಮಾಡಲು, ನನ್ನ ಕೈಯನ್ನು ಮುಟ್ಟಿ ಭಾಷೆಕೊಡು ಎಂದು ಕೇಳಿದಳು.

॥ ಯಯಾತಿರುವಾಚ ॥

ಅನ್ಯಾಂ ಭಾರ್ಯಾಂ ನ ವಿಂದಾಮಿ ತ್ವಾಂ ವಿನಾ ನೃಪನಂದಿನಿ ।
ರಾಜ್ಯಂ ಚ ಸಕಲಾಮುರ್ವೀಂ ಮಮ ಕಾಯಂ ವರಾನನೇ ॥ ೯ ॥

ಮತ್ಕೋಶಂ ಭುಂಕ್ಷ್ವ ಚಾರ್ವಂಗಿ ಮಯಾ ದತ್ತೋ ವರಸ್ತವ ।
ಯಂ ಯಂ ಮೇ ಭಾಷಸೇ ಭದ್ರೇ ತಂ ತಂ ಕಾಮಂ ಕರೋಮ್ಯಹಂ ॥೧೦॥

॥ ಅಶ್ರುಬಿಂದುಮತ್ಯುವಾಚ ॥

ಅನೇನಾಪಿ ಮಹಾರಾಜ ತವ ಭಾರ್ಯಾ ಭವಾಮ್ಯಹಂ ।
ಏವ ಮುಕ್ತಃ ಸ ರಾಜೇಂದ್ರೋ ಹರ್ಷವ್ಯಾಕುಲಲೋಚನಃ ।
ಗಾಂಧರ್ವೇಣ ವಿವಾಹೇನ ಯಯಾತಿಃ ಪೃಥಿವೀಪತಿಃ ॥ ೧೧ ॥

ಉಪಯೇಮೇ ಶುಭಾಂ ಪುಣ್ಯಾಂ ಮನ್ಮಥಸ್ಯಾತ್ಮಜಾಂ ನೃಪಃ ।
ತಯಾ ಸಾರ್ಧಂ ಮಹಾತ್ಮಾ ವೈ ಸ ರೇಮೇ ದ್ವಿಜಪುಂಗವ ॥ ೧೨ ॥

ಸಾಗರಸ್ಯ ಚ ತೀರೇಷು ವನೇಷೂಪವನೇಷು ಚ ।
ಪರ್ವತೇಷು ಚ ರಮ್ಯೇಷು ಸರಿತ್ಸು ಚ ತಯಾ ಸಹ ॥ ೧೩ ॥

---

೯-೧೦. ಯಯಾತಿಯು ಹೇಳಿದನು:—ನಿನ್ನನ್ನು ಬಿಟ್ಟು ಬೇರೆ ಹೆಂಡತಿಯನ್ನು ಮಾಡಿಕೊಳ್ಳುವುದಿಲ್ಲ. ಸಮಸ್ತ ರಾಜ್ಯ, ನನ್ನ ದೇಹ, ಕೋಶ, ಇವೆಲ್ಲವನ್ನೂ ನೀನು ಅನುಭವಿಸು. ನೀನು ಏನೇನನ್ನು ಹೇಳುತ್ತೀಯೋ ಅವೆಲ್ಲವನ್ನೂ ಮಾಡುತ್ತೇನೆ. ಎಂದನು.

೧೧. ಅಶ್ರುಬಿಂದುಮತಿಯು ಹೇಳಿದಳು:—ಸರಿ, ಹಾಗಾದರೆ ನಿನಗೆ ನಾನು ಹೆಂಡತಿಯಾಗುತ್ತೇನೆ. ಎಂದು ಆಕೆಯು ಹೇಳುತ್ತಲೂ ಸಂತೋಷಪಟ್ಟು, ಗಾಂಧರ್ವ ವಿವಾಹದಿಂದ ಆ ಮನ್ಮಥನ ಪುತ್ರಿಯನ್ನೇ ಮದುವೆಯಾದನು.

೧೨-೧೩. ಆ ರಾಜನು ಸಮುದ್ರತೀರ, ವನ, ಉಪವನ, ಪರ್ವತ, ನದಿಗಳ ಸಮೀಪದಲ್ಲಿ ತಾರುಣ್ಯಭಾವದಿಂದ ಅವಳೊಡನೆ ಕ್ರೀಡಿಸುತ್ತಿದ್ದನು.

**ರಮತೇ ರಾಜರಾಜೇಂದ್ರಸ್ತ್ವಾರುಣ್ಯೇನ ಮಹೀಪತಿಃ ।**
**ಏವಂ ವಿಂಶತ್ಸಹಸ್ರಾಣಿ ಗತಾನಿ ನಿರತಸ್ಯ ಚ ।**
**ಭೂಪಸ್ಯ ತಸ್ಯ ರಾಜೇಂದ್ರ ಯಯಾತೇಸ್ತು ಮಹಾತ್ಮನಃ ॥ ೧೪ ॥**

**॥ ವಿಷ್ಣುರುವಾಚ ॥**

**ಏವಂ ತಯಾ ಮಹಾರಾಜೋ ಯಯಾತಿರ್ಮೋಹಿತಸ್ತದಾ ।**
**ಕಂದರ್ಪಸ್ಯ ಪ್ರಯೋಗೇಣ ಇಂದ್ರಸ್ಯಾರ್ಥೇ ಮಹಾಮನಾಃ ॥ ೧೫ ॥**

**॥ ಸುಕರ್ಮೋವಾಚ ॥**

**ಏವಂ ಪಿಪ್ಪಲ ಮುಗ್ಧೋಽಸೌ ಯಯಾತಿಃ ಪೃಥಿವೀಪತಿಃ ।**
**ತಸ್ಯಾ ಮೋಹೇನ ಕಾಮೇನ ರತೇನ ಲಲಿತೇನ ಚ ।**
**ನ ಜಾನಾತಿ ದಿನಂ ರಾತ್ರಿಂ ಮುಗ್ಧಃ ಕಾಮಸ್ಯ ಕನ್ಯಯಾ ॥ ೧೬ ॥**

**ಏಕದಾ ಮೋಹಿತಂ ಭೂಪಂ ಯಯಾತಿಂ ಕಾಮನಂದಿನೀ ।**
**ಉವಾಚ ಪ್ರಣತಂ ನಮ್ರಂ ವಶಗಂ ಚಾರುಲೋಚನಾ ॥ ೧೭ ॥**

**॥ ಅಶ್ರುಬಿಂದುಮತ್ಯುವಾಚ ॥**

**ಸಂಜಾತಂ ದೋಹದಂ ಕಾಂತ ತನ್ಮೇ ಕುರು ಮನೋರಥಂ ।**
**ಅಶ್ವಮೇಧಂ ಮುಖಶ್ರೇಷ್ಠಂ ಯಜಸ್ವ ಪೃಥಿವೀಪತೇ ॥ ೧೮ ॥**

---

೧೪. ಹೀಗೆ ಕ್ರೀಡಿಸುತ್ತಿರಲು ಇಪ್ಪತ್ತುಸಾವಿರ ವರ್ಷಗಳು ಕಳೆದುವು.

೧೫. ವಿಷ್ಣುವು ಹೇಳಿದನು :—ಇಂದ್ರನಿಗೋಸ್ಕರ ಮಾಡಿದ, ಕಂದರ್ಪನ ಈ ಉಪಾಯದಿಂದ ಯಯಾತಿಯು ಮೋಹಿತನಾದನು.

೧೬. ಸುಕರ್ಮನು ಹೇಳಿದನು :—ಪ್ರಜ್ಞಾಶೂನ್ಯನಾದ ಯಯಾತಿಯು ಅವಳಲ್ಲಿನ ಮೋಹದಿಂದಲೂ, ಕಾಮದಿಂದಲೂ, ಸರಸದಿಂದಲೂ, ಕಾಮನ ಮಗಳಲ್ಲಿ ಮೋಹಿತನಾಗಿ ಹಗಲು ರಾತ್ರಿಗಳನ್ನೇ ತಿಳಿಯದಾದನು.

೧೭. ಒಂದುಸಾರಿ ಅಶ್ರುಬಿಂದುಮತಿಯು ತನ್ನಲ್ಲಿ ಪ್ರಣತನೂ, ನಮ್ರನೂ ಆದ ಗಂಡನನ್ನು ಕುರಿತು ಹೀಗೆಂದಳು.

೧೮. ಅಶ್ರುಬಿಂದುಮತಿಯು ಹೇಳಿದಳು :—ಅಶ್ವಮೇಧವನ್ನು ನೀನು ಮಾಡಬೇಕೆಂದು ನನಗೆ ಆಸೆಯುಂಟಾಗಿದೆ ಅದನ್ನು ಮಾಡು. ಎಂದಳು.

॥ ರಾಜೋವಾಚ ॥

ಏವಮಸ್ತು ಮಹಾಭಾಗೇ ಕರೋಮಿ ತವ ಸುಪ್ರಿಯಂ ।
ಸಮಾಹೂಯ ಸುತಂ ಪೂರುಂ ರಾಜಭೋಗೇ ವಿನಿಃ ಸ್ಪೃಹಂ ॥ ೧೯ ॥

ಸ ಆಹೂತಸ್ಸಮಾಯಾತೋ ಭಕ್ತ್ಯಾ ನಮಿತಕಂಧರಃ ।
ಬದ್ಧಾಂಜಲಿಪುಟೋ ಭೂತ್ವಾ ಪ್ರಣಾಮಮಕರೋತ್ತದಾ ॥ ೨೦ ॥

ತಸ್ಯಾಶ್ಚ ಪಾದೌ ಸುಶ್ರೋಣ್ಯಾ ಸನಾಮ ಭಕ್ತಿಪೂರ್ವಕಂ ।
ಆದೇಶಂ ದೀಯತಾಂ ರಾಜನ್ನಾಹೂತೋಽಹಂ ಸಮಾಗತಃ ॥ ೨೧ ॥

ಕಿಂ ಕರೋಮಿ ಮಹಾಪ್ರಾಜ್ಞ ದಾಸೋಽಹಂ ತವ ಸುವ್ರತ ।

॥ ರಾಜೋವಾಚ ॥

ಅಶ್ವಮೇಧಸ್ಯ ಯಜ್ಞಸ್ಯ ಸಂಭಾರಂ ಕುರು ಪುತ್ರಕ ।
ಸಮೂಹೂಯ ದ್ವಿಜಾನ್ ಪುಣ್ಯಾನೃತ್ವಿಜೋ ಭೂಮಿಪಾಂಸ್ತಥಾ ॥ ೨೨ ॥

ಏವಮುಕ್ತೋ ಮಹಾತೇಜಾಃ ಪುರುಃ ಪರಮಧಾರ್ಮಿಕಃ ।
ಸರ್ವಂ ಚಕಾರ ಸಂಪೂರ್ಣಂ ಯಚ್ಚೋಕ್ತಂ ತು ಮಹಾತ್ಮನಾ ॥ ೨೩ ॥

---

೧೯. ರಾಜನು ಹೇಳಿದನು:—ಹಾಗೇ ಆಗಲಿ. ನಿನ್ನಿಷ್ಟದಂತೆ ಮಾಡಿಸು ತ್ತೇನೆ ಎಂದು ರಾಜ್ಯಸುಖದಲ್ಲಿ ನಿಸ್ಪೃಹನಾದ ಪೂರುವನ್ನು ಕರೆಯಲು,

೨೦-೨೧. ಪೂರುವು ಬಂದು ನಮ್ರನಾಗಿ ಕೈಮುಗಿದುಕೊಂಡು ತಂದೆಯಾದ ಯಯಾತಿಗೂ ಆಕೆಗೂ ನಮಸ್ಕರಿಸಿ, ಎಲೈ ತಂದೆಯೇ ನನ್ನನ್ನೇಕೆ ಕರೆದೆ? ಅಪ್ಪಣೆ ಮಾಡು, ಏನುಮಾಡಲಿ? ನಾನು ನಿನ್ನ ದಾಸನು ಎಂದನು.

೨೨. ರಾಜನು ಹೇಳಿದನು:—ಅಶ್ವಮೇಧಯಜ್ಞಕ್ಕೆ ಬೇಕಾದ ಸಾಮಗ್ರಿ ಗಳನ್ನು ಸಿದ್ಧಮಾಡು. ಯೋಗ್ಯರಾದ ಬ್ರಾಹ್ಮಣರನ್ನೂ, ರಾಜರನ್ನೂ ಕರೆಸು. ಎಂದು ಹೇಳಲು,

೨೩. ಇದನ್ನು ಕೇಳಿ ಪುರುವು ಆ ತಂದೆಯು ಹೇಳಿದಂತೆ ಎಲ್ಲವನ್ನೂ ಸಿದ್ಧ ಮಾಡಿದನು.

ತಯಾ ಸಾರ್ಧಂ ಸ ಯಜ್ಞಾಯ ದೀಕ್ಷಿತಃ ಕಾಮಕನ್ಯಯಾ ।
ಅಶ್ವಮೇಧೇ ಮಹಾಯಜ್ಞೇ ದತ್ವಾ ದಾನಾನ್ಯನೇಕಶಃ ॥ ೨೪ ॥

ಬ್ರಾಹ್ಮಣೇಭ್ಯೋ ಮಹಾರಾಜೋ ಭೂರಿದಾನಮನಂತಕಂ ।
ದೀನೇಷು ಚ ವಿಶೇಷೇಣ ಯಯಾತಿರ್ಹೃಷ್ಟಮಾನಸಃ ॥ ೨೫ ॥

ಯಜ್ಞಾಂತೇ ಚ ಮಹಾರಾಜಸ್ತಾಮುವಾಚ ವರಾನನಾಂ ।
ಅನ್ಯಚ್ಚ ಸುಪ್ರಿಯಂ ಬಾಲೇ ಕಿಂ ಕರೋಮಿ ವದಸ್ವ ಮೇ ।
ತತ್ಸರ್ವಂ ದೇವಿ ಕರ್ತಾಸ್ಮಿ ಯಥಾಸಾಧ್ಯಂ ವರಾನನೇ ॥ ೨೬ ॥

॥ ಸುಕರ್ಮೋವಾಚ ॥

ಇತ್ಯುಕ್ತಾ ತೇನ ಸಾ ರಾಜ್ಞಾ ಭೂಪಾಲಂ ಪ್ರತ್ಯುವಾಚ ಹ ।
ಜಾತಂ ಮೇ ದೋಹದಂ ರಾಜಂಸ್ತತ್ಕುರುಷ್ವ ಮಮಾನಘ ॥ ೨೭ ॥

ಇಂದ್ರಲೋಕಂ ಬ್ರಹ್ಮಲೋಕಂ ಶಿವಲೋಕಂ ತಥೈವ ಚ ।
ವಿಷ್ಣುಲೋಕಂ ಮಹಾರಾಜ ದ್ರಷ್ಟುಮಿಚ್ಛಾಮಿ ಸುಪ್ರಿಯ ॥ ೨೮ ॥

---

೨೪. ರಾಜನು ಅವಳೊಡನೆ ದೀಕ್ಷಿತನಾಗಿ ಅಶ್ವಮೇಧದಲ್ಲಿ ಅನೇಕವಾಗಿ ದಾನಗಳನ್ನು ಮಾಡಿದನು.

೨೫. ಬ್ರಾಹ್ಮಣರಿಗೆ ಭೂರಿದಾನವನ್ನೂ ದೀನಾನಾಥರಿಗೆ ಇನ್ನೂ ವಿಶೇಷ ದಾನಗಳನ್ನೂ ಕೊಟ್ಟನು.

೨೬. ಯಜ್ಞಾನಂತರದಲ್ಲಿ ಆಕೆಯನ್ನು ಕುರಿತು ನೀನು ಹೇಳಿದುದನ್ನೆಲ್ಲಾ ಮಾಡಿರುವೆನು. ನಿನಗೆ ಇಷ್ಟವಾದ ಮತ್ತೇನನ್ನು ಮಾಡಲಿ ಹೇಳು, ಅದೆಲ್ಲವನ್ನೂ ಮಾಡುತ್ತೇನೆಂದನು.

೨೭. ಸುಕರ್ಮನು ಹೇಳಿದನು :—ಹೀಗೆ ಹೇಳುತ್ತಲೂ ಆಕೆಯು ರಾಜನನ್ನು ಕುರಿತು ನನಗೆ ಕೆಲವು ಇಚ್ಛೆಗಳಿವೆ. ಅವನ್ನು ನಡಿಸೆಂದಳು.

೨೮. ಇಂದ್ರಲೋಕ, ಬ್ರಹ್ಮಲೋಕ, ಶಿವಲೋಕ, ವಿಷ್ಣುಲೋಕಗಳನ್ನು ನೋಡಬೇಕೆಂಬಾಸೆಯು ನನಗಿದೆ.

**ದರ್ಶಯಸ್ವ ಮಹಾಭಾಗ ಯದಹಂ ಸುಪ್ರಿಯಾ ತವ ।**
**ಏವಮುಕ್ತಸ್ತಯಾ ರಾಜಾ ತಾಮುವಾಚ ಸ ಸುಪ್ರಿಯಾಂ ॥ ೨೯ ॥**

**ಸಾಧು ಸಾಧು ಮಹಾಭಾಗೇ ಪುಣ್ಯೇನೈವಂ ಪ್ರಭಾಷಸೇ ।**
**ಸ್ತ್ರೀಸ್ವಭಾವಾಚ್ಚ ಚಾಪಲ್ಯಾತ್ಕೌತುಕಾಚ್ಚ ವರಾನನೇ ॥ ೩೦ ॥**

**ಯತ್ತ್ವಯೋಕ್ತಂ ಮಹಾಭಾಗೇ ತದಸಾಧ್ಯಂ ವಿಭಾವತಿ ಮೇ ।**
**ತತ್ಸಾಧ್ಯಂ ಪುಣ್ಯದಾನೇನ ಯಜ್ಞೇನ ತಪಸಾಪಿ ಚ ॥ ೩೧ ॥**

**ಅನ್ಯಥಾ ನ ಭವೇತ್ಸಾಧ್ಯಂ ಯತ್ತ್ವಯೋಕ್ತಂ ವರಾನನೇ ।**
**ಅಸಾಧ್ಯಂ ತು ಭವತ್ಯಾ ವೈ ಭಾಷಿತಂ ಪುಣ್ಯಮಿಶ್ರಿತಂ ॥ ೩೨ ॥**

**ಮರ್ತ್ಯಲೋಕಾಚ್ಛರೀರೇಣ ಅನೇನಾಪಿ ಚ ಮಾನವಃ ।**
**ಶ್ರುತೋ ದೃಷ್ಟೋ ನ ಮೇದ್ಯಾಪಿ ಗತಸ್ಸ್ವರ್ಗಂ ಸುಪುಣ್ಯಕೃತ್ ॥ ೩೩ ॥**

---

೨೯. ಇವುಗಳನ್ನು ತೋರಿಸೆಂದಳು. ಹೀಗೆ ಹೇಳುತ್ತಲು, ಆಕೆಯನ್ನು ಕುರಿತು ಯಯಾತಿಯು,

೩೦. ಸರಿಸರಿ, ನೀನು ವಿಶ್ವಾಸದಿಂದಲೂ, ಸ್ತ್ರೀ ಸ್ವಭಾವವಾದ ಚಾಪಲ್ಯ ದಿಂದಲೂ, ಕುತೂಹಲದಿಂದಲೂ ಹೀಗೆ ಹೇಳುತ್ತೀಯೆ.

೩೧. ನೀನು ಹೇಳಿದುದು ಅಸಾಧ್ಯವೆಂದು ನನಗೆ ತೋರುವುದು. ಅದು ಯಜ್ಞದಿಂದಲೂ, ತಪಸ್ಸಿನಿಂದಲೂ ಮಾತ್ರ ಸಾಧ್ಯವು.

೩೨. ಅದಿಲ್ಲದಿದ್ದರೆ ನೀನು ಹೇಳಿದುದು ಸಾಧ್ಯವೇ ಇಲ್ಲ. ಪುಣ್ಯದಿಂದ ಮಾತ್ರ ಅದು ಸಾಧ್ಯವಾಗಬಹುದು, ಈಗ ಅಸಾಧ್ಯವಾಗಿದೆ. ಇಂತಹ ವಿಷಯವನ್ನು ನಡೆಸಬೇಕೆಂದು ಕೇಳುವೆಯಲ್ಲಾ ?

೩೩. ಈ ಮನುಷ್ಯಲೋಕದಿಂದ, ಈ ಶರೀರಸಹಿತವಾಗಿ ಅಲ್ಲಿಗೆ ಹೋದವ ನನ್ನು ನಾನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ.

**ತತೋಽಸಾಧ್ಯಂ ವರಾರೋಹೇ ಯತ್ತ್ವಯಾ ಭಾಷಿತಂ ಮಮ ।**
**ಅನ್ಯದೇವ ಕರಿಷ್ಯಾಮಿ ಪ್ರಿಯಂ ತೇ ತದ್ವದ ಪ್ರಿಯೇ ॥ ೩೪ ॥**

**॥ ದೇವ್ಯುವಾಚ ॥**

**ಅನ್ಯೈಶ್ಚ ಮಾನುಷ್ಯೈ ರಾಜನ್ನಸಾಧ್ಯಂ ಸ್ಯಾನ್ನಸಂಶಯಃ ।**
**ತ್ವಯಿ ಸಾಧ್ಯಂ ಮಹಾರಾಜ ಸತ್ಯಂ ಸತ್ಯಂ ವದಾಮ್ಯಹಂ ॥ ೩೫ ॥**

**ತಪಸಾ ಯಶಸಾ ವೀರ್ಯೈರ್ಜ್ಞಾನೈರ್ದಾನೈರ್ಮಖೈರ್ನೃಪ ।**
**ಭವಾದೃಶೋಽನ್ಯೋ ನೈವಾಸ್ತಿ ಲೋಕೇಽಸ್ಮಿನ್ನೃಪ ಮಾನವಃ ॥ ೩೬ ॥**

**ಕ್ಷಾತ್ರಂ ಬಲಂ ಸುತೇಜಶ್ಚ ತ್ವಯಿ ಸರ್ವಂ ಪ್ರತಿಷ್ಠಿತಂ ।**
**ತಸ್ಮಾತ್ತ್ವಯಾ ಪ್ರಕರ್ತವ್ಯಂ ಮತ್ಪ್ರಿಯಂ ನಹುಷಾತ್ಮಜ ॥ ೩೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಯಯಾತಿಚರಿತೇ ಊನಾಶೀತಿತಮೋಽಧ್ಯಾಯಃ**



೩೪. ಆದುದರಿಂದ ನೀನು ಹೇಳಿದುದು ಅಸಾಧ್ಯವು. ಇನ್ನಾವುದಾದರೂ ಹೇಳು. ಅದನ್ನು ಮಾಡಿಕೊಡುತ್ತೇನೆ. ಎಂದನು.

೩೫. ದೇವಿಯು ಹೇಳಿದಳು:—ಎಲೈ ರಾಜನೇ, ಇನ್ನಾರಿಗಾದರೂ ಅದು ಅಸಾಧ್ಯವಾಗಬಹುದು. ನಿನಗೆ ಅಸಾಧ್ಯವಲ್ಲ. ಸತ್ಯವಾಗಿ ಹೇಳುತ್ತೇನೆ, ಕೇಳು.

೩೬. ತಪಸ್ಸು, ಯಶಸ್ಸು, ವಿದ್ಯೆ, ಜ್ಞಾನ, ದಾನಗಳಿಂದ ಕೂಡಿದ ನಿನ್ನಂತಹವನು ಮತ್ತೊಬ್ಬನು ಈ ಲೋಕದಲ್ಲಿಲ್ಲವೇ ಇಲ್ಲ.

೩೭. ಕ್ಷತ್ರಿಯಬಲ, ತೇಜಸ್ಸು ಇವೆಲ್ಲವೂ ನಿನ್ನಲ್ಲಿವೆ. ಆದುದರಿಂದ ನೀನು ಈ ಕಾರ್ಯವನ್ನು ಮಾಡಿಯೇ ತೀರಬೇಕು. ಎಂದಳು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಅಶೀತಿತಮೋಽಧ್ಯಾಯಃ

---

॥ ಪಿಪ್ಪಲ ಉವಾಚ ॥

ಕಾಮಕನ್ಯಾಂ ಯದಾ ರಾಜಾ ಉಪಯೇಮೇ ದ್ವಿಜೋತ್ತಮ ।
ಕಿಂ ಚಕ್ರಾತೇ ತದಾ ತೇ ದ್ವೇ ಪೂರ್ವಭಾರ್ಯೇ ಸುಪುಣ್ಯಕೇ ॥ ೧ ॥

ದೇವಯಾನೀ ಮಹಾಭಾಗಾ ಶರ್ಮಿಷ್ಠಾ ವಾರ್ಷಪರ್ವಣೀ ।
ತಯೋಶ್ಚರಿತ್ರಂ ಯತ್ಸರ್ವಂ ಕಥಯಸ್ವ ಮಮಾಗ್ರತಃ ॥ ೨ ॥

॥ ಸುಕರ್ಮೋವಾಚ ॥

ಯದಾಽನೀತಾ ಕಾಮಕನ್ಯಾ ಸ್ವಗೃಹಂ ತೇನ ಭೂಭುಜಾ ।
ಅತ್ಯರ್ಥಂ ಸ್ಪರ್ಧತೇ ಸಾ ತು ದೇವಯಾನೀ ತಪಸ್ವಿನೀ ॥ ೩ ॥

---

## ಎಂಭತ್ತನೆಯ ಅಧ್ಯಾಯವು

೧-೨. ಪಿಪ್ಪಲನು ಕೇಳಿದನು :—ಯಯಾತಿಯು ಕಾಮಕನ್ಯೆಯನ್ನು ಮದುವೆಯಾದಮೇಲೆ ಶರ್ಮಿಷ್ಠಾದೇವಯಾನಿಯರೇನು ಮಾಡಿದರು? ಅವರ ಕಥೆಯನ್ನು ಹೇಳು. ಎಂದನು.

೩. ಸುಕರ್ಮನು ಹೇಳಿದನು :—ಬಳಿಕ ರಾಜನು ಕಾಮಕನ್ಯೆಯನ್ನು ಕರೆದುಕೊಂಡುಬಂದು, ತನ್ನ ಅರಮನೆಯಲ್ಲಿಟ್ಟುಕೊಂಡು ವಾಸಮಾಡಲು ಪ್ರಾರಂಭಿಸಿದ ಮೇಲೆ ರಾಜನ ಹಿಂದಿನ ಪತ್ನಿಯಾದ ದೇವಯಾನಿಯು ತನ್ನ ಸವತಿಯಾದ ಕಾಮಕನ್ಯೆಯ ಮೇಲೆ ಅಸೂಯೆಪಡುವವಳಾದಳು.

ತಸ್ಯಾರ್ಥೇ ತು ಸುತೌ ಶಪ್ತೌ ಕ್ರೋಧೇನಾಕುಲಿತಾತ್ಮನಾ ।
ಶರ್ಮಿಷ್ಠಾ ಚ ಸಮಾಹೂಯ ಶಬ್ದಂ ಚಕ್ರೇ ಯಶಸ್ವಿನೀ ॥ ೪ ॥

ರೂಪೇಣ ತೇಜಸಾ ದಾನೈಃ ಸತ್ಯಪುಣ್ಯವ್ರತೈಸ್ತದಾ ।
ಶರ್ಮಿಷ್ಠಾ ದೇವಯಾನೀ ತೇ ಸ್ಪರ್ಧೇತೇ ತು ತಯಾ ಸಹ ॥ ೫ ॥

ದುಷ್ಟಭಾವಂ ತಯೋಶ್ಚಾಪಿ ಸಾ ಜ್ಞಾತ್ವಾ ಕಾಮಜಾ ತದಾ ।
ರಾಜ್ಞೇ ಸರ್ವಂ ತಯಾ ವಿಪ್ರಂ ಕಥಿತಂ ತತ್ಕ್ಷಣಾದಿ ಹ ॥ ೬ ॥

ಯದುಂ ಪುತ್ರಂ ಸಮಾಹೂಯ ನೃಪೋ ವಾಕ್ಯಮಥಾಬ್ರವೀತ್ ।
ಮಾತ್ರೋಸ್ತ್ವಮುಭಯೋಸ್ತಾತ ಶಿರಶ್ಛಿನ್ಧಿ ಸುಪುತ್ರಕ ।
ಸುಪ್ರಿಯಂ ಕುರು ಮೇ ವತ್ಸ ಯದಿ ಶ್ರೇಯೋ ಹಿ ಮನ್ಯಸೇ ॥ ೭ ॥

ಏವಮಾಕರ್ಣ್ಯ ತಸ್ಯಾಪಿ ಪಿತುರ್ವಾಕ್ಯಂ ಯದುಸ್ತದಾ ।
ಪ್ರತ್ಯುವಾಚ ನೃಪಶ್ರೇಷ್ಠಂ ಪಿತರಂ ಪ್ರತಿ ನಿಗ್ರಹೀ ॥ ೮ ॥

---

೪. ಆ ಕಾಮಕನ್ಯೆಗೋಸ್ಕರ ಮಕ್ಕಳಿಗೆ ಕೋಪದಿಂದ ಶಾಪವನ್ನು ಕೊಟ್ಟನು. ಆದ್ದರಿಂದ ಶರ್ಮಿಷ್ಠೆಯನ್ನು ಕೂಗಿ ದೇವಯಾನಿಯು ಇಬ್ಬರೂ ತೀರ ಬಹಳವಾಗಿ ಜಗಳವಾಡಿದರು.

೫. ರೂಪು, ತೇಜಸ್ಸು, ದಾನ, ಸತ್ಯ, ಪುಣ್ಯವ್ರತಗಳು ಇವುಗಳಲ್ಲಿ ಶರ್ಮಿಷ್ಠಾ ದೇವಯಾನಿಯರು ಸ್ವಲ್ಪವೂ ಆ ಕಾಮಕನ್ಯೆಗಿಂತ ಕಡಿಮೆಯಾದವರಲ್ಲ.

೬. ಅವರ ಆ ದುಷ್ಟಭಾವವನ್ನು ಕಾಮಕನ್ಯೆಯು ತಿಳಿದು ರಾಜನಿಗೆ ಅದೆಲ್ಲವನ್ನೂ ಹೇಳಿದಳು.

೭. ಯದುವನ್ನು ಆ ಯಯಾತಿಯು ಕರೆದು, ನನ್ನ ಮಾತನ್ನು ಕೇಳು, ನನಗೆ ಒಳ್ಳೆಯದನ್ನು ಮಾಡಬೇಕೆಂದಿದ್ದರೆ ನಿನ್ನ ಇಬ್ಬರು ತಾಯಿಯರ ತಲೆಯನ್ನೂ ಕಡಿ ಎಂದನು.

೮. ತಂದೆಯ ಮಾತನ್ನು ಕೇಳಿ ಯದುವು ಅವನನ್ನು ಕುರಿತು,

**ನ ಹನ್ತವ್ಯೇ ತು ಮೇ ತಾತ ಮಾತರೌ ದೋಷವರ್ಜಿತೇ ।**
**ಮಾತೃಘಾತೇ ಮಹಾನ್ದೋಷಃ ಕಥಿತೋ ವೇದಪಂಡಿತೈಃ ।**
**ತಸ್ಮಾದ್ಘಾತಂ ಮಹಾರಾಜ ಏತಯೋರ್ನ ಕರೋಮ್ಯಹಂ ॥ ೯ ॥**

**ದೋಷಾಣಾಂ ತು ಸಹಸ್ರೇಣ ಯುಕ್ತಾ ಮಾತಾ ಯದಾ ಭವೇತ್ ।**
**ಭಗಿನೀ ಚಾಪಿ ರಾಜೇಂದ್ರ ದುಹಿತಾ ಚ ತಥಾತ್ಮನಃ ॥ ೧೦ ॥**

**ಪುತ್ರೈಶ್ಚ ಭ್ರಾತ್ರಭಿಶ್ಚೈವ ನೈವ ವಧ್ಯಾ ಭವೇತ್ಕದಾ ।**
**ಏವಂ ಜ್ಞಾತ್ವಾ ಮಹಾರಾಜ ಮಾತರೌ ನೈವ ಘಾತಯೇ ॥ ೧೧ ॥**

**ಯದೋರ್ವಾಕ್ಯಂ ತಥಾ ಶ್ರುತ್ವಾ ಸ ಚ ಕ್ರುದ್ಧೋऽಭ್ಯಭಾಷತ ।**
**ಶಶಾಪ ತಂ ಸುತಂ ಪಶ್ಚಾದ್ಯಯಾತಿಃ ಪೃಥಿವೀಪತಿಃ ॥ ೧೨ ॥**

**ಯತ್ತ್ವಯಾऽವಮತೋऽಹಂ ವೈ ತಸ್ಮಾತ್ಪಾಪಮವಾಪ್ಸ್ಯಸಿ ।**
**ಮಾತುರಂಶಂ ಭಜಸ್ವ ತ್ವಂ ಮಚ್ಛಾಪಕಲುಷೀಕೃತಃ ॥ ೧೩ ॥**

**ಏವಂ ಶಪ್ತ್ವಾ ಯದುಂ ಪುತ್ರಂ ಯಯಾತಿಃ ಪೃಥಿವೀಪತಿಃ ।**
**ಪುತ್ರಂ ಶಪ್ತ್ವಾ ಮಹಾರಾಜಸ್ತಯಾ ಸಾರ್ಧಂ ಮಹಾಯಶಾಃ ।**
**ರಮತೇ ಸುಖಭೋಗೇನ ವಿಷ್ಣುಧ್ಯಾನಪರಾಯಣಃ ॥ ೧೪ ॥**

---

೯. ಎಲೈ ತಂದೆಯೇ ಈ ತಾಯಿಯರು ದೋಷರಹಿತರು. ಇವರನ್ನು ಕೊಲ್ಲಬಾರದು. ಅವರನ್ನು ಕೊಂದರೆ ಮಹಾಪಾಪವೆಂದು ವೇದದಲ್ಲಿ ಹೇಳಿದೆ. ಆದುದರಿಂದ ಅವರನ್ನು ನಾನು ಕೊಲ್ಲುವುದಿಲ್ಲ.

೧೦-೧೧. ಒಂದುಸಾವಿರ ದೋಷಗಳು ತಾಯಿಯಲ್ಲಿದ್ದರೂ ಆಕೆಯನ್ನೂ, ತಂಗಿಯನ್ನೂ, ಮಗಳನ್ನೂ, ಮಗನಾಗಲಿ, ಸೋದರನಾಗಲಿ, ವಧೆಮಾಡಬಾರದು. ಇದನ್ನು ನಾನು ತಿಳಿದಿರುವುದರಿಂದ ಅವರನ್ನು ಕೊಲ್ಲಲಾರೆನು.

೧೨ ಯದುವಿನ ಈ ಮಾತನ್ನು ಕೇಳಿ ಕೋಪಗೊಂಡು ಯಯಾತಿಯು ಆ ಯದುವಿಗೆ ಶಾಪಕೊಟ್ಟನು.

೧೩. ನೀನು ನನ್ನ ಮಾತನ್ನು ತಿರಸ್ಕರಿಸಿ ನನಗೆ ಅವಮಾನ ಮಾಡಿದುದ ರಿಂದ ತಾಯಿಯ ಅಂಶವನ್ನೇ ಹೊಂದು ಎಂದು ಶಪಿಸಿದನು.

೧೪. ಆ ರೀತಿ ಯದುವಿಗೆ ಶಾಪಕೊಟ್ಟು ವಿಷ್ಣುಧ್ಯಾನಪರಾಯಣನಾಗಿ ಆ ಕಾಮಕನ್ಯೆಯೊಡನೆ ರಮಿಸುತ್ತಿದ್ದನು.

**ಅಶ್ರುಬಿಂದುಮತೀ ಸಾ ಚ ತೇನ ಸಾರ್ಧಂ ಸುಲೋಚನಾ ।**
**ಬುಭುಜೇ ಚಾರುಸರ್ವಾಂಗೀ ದಿವ್ಯಾನ್ ಭೋಗಾನ್ಮನೋನುಗಾನ್ ।**
**ಏವಂ ಕಾಲೋ ಗತಸ್ತಸ್ಯ ಯಯಾತೇಸ್ಸುಮಹಾತ್ಮನಃ ॥ ೧೫ ॥**

**ಅಕ್ಷಯಾ ನಿರ್ಜರಾಸ್ಸರ್ವಾ ಅಮರಾಶ್ಚ ಪ್ರಜಾಸ್ತದಾ ।**
**ಸರ್ವೇ ಲೋಕಾ ಮಹಾಭಾಗ ವಿಷ್ಣುಧ್ಯಾನಪರಾಯಣಾಃ ॥ ೧೬ ॥**

**ತಪಸಾ ಸತ್ಯಭಾವೇನ ವಿಷ್ಣೋರ್ಧ್ಯಾನೇನ ಪಿಪ್ಪಲ ।**
**ಸರ್ವೇ ಲೋಕಾ ಮಹಾಭಾಗ ಸುಖಿನಸ್ಸಾಧುಸೇವಕಾಃ ॥ ೧೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ**
**ಯಯಾತಿಚರಿತೇ ಅಶೀತಿತಮೋಽಧ್ಯಾಯಃ**



---

೧೫. ಅಶ್ರುಬಿಂದುಮತಿಯೂ ಕೂಡ ಅವನೊಡನೆ ಉತ್ತಮ ಭೋಗಗಳನ್ನು ಅನುಭವಿಸುತ್ತಿದ್ದಳು. ಈ ರೀತಿ ಯಯಾತಿಯು ಕಾಲಕಳೆಯುತ್ತಿದ್ದನು.

೧೬. ಎಲ್ಲಾ ಜನರೂ ವಿಷ್ಣುಧ್ಯಾನ ಪರಾಯಣರಾಗಿದ್ದುದರಿಂದ ಅಕ್ಷಯರೂ, ಮುಪ್ಪಿಲ್ಲದವರೂ, ಸಾವಿಲ್ಲದವರೂ, ಆದರು.

೧೭. ತಪಸ್ಸು, ಸತ್ಯ, ವಿಷ್ಣುಧ್ಯಾನ ಇವುಗಳ ಆಚರಣೆಯಿಂದ ಎಲ್ಲ ಜನರೂ, ಸುಖಿಗಳಾಗಿ ಸಾಧುಸೇವಕರಾಗಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಏಕಾಶೀತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ಅಥೇಂದ್ರೋಽಸೌ ಮಹಾಪ್ರಾಜ್ಞಃ ಸದಾ ಭೀತೋ ಮಹಾತ್ಮನಃ ।
ಯಯಾತೇರ್ವಿಕ್ರಮಂ ದೃಷ್ಟ್ವಾ ದಾನಪುಣ್ಯಾದಿಕಂ ಬಹು ॥ ೧ ॥

ಮೇನಕಾಂ ಪ್ರೇಷಯಾಮಾಸ ಸ್ವರ್ವೇಶ್ಯಾಂ ದೌತ್ಯಕರ್ಮಣಿ ।
ಗಚ್ಛ ಭದ್ರೇ ಮಹಾಭಾಗೇ ಮಮಾದೇಶಂ ವದಸ್ವ ಹಿ ॥ ೨ ॥

ಕಾಮಕನ್ಯಾಮಿತೋ ಗತ್ವಾ ದೇವರಾಜವಚೋ ವದ ।
ಯೇನಕೇನಾಪ್ಯುಪಾಯೇನ ರಾಜಾನಂ ತ್ವಮಿಹಾನಯ ।
ಏವಂ ಶ್ರುತ್ವಾ ಗತಾ ಸಾ ತು ಮೇನಕಾ ತತ್ರ ಪ್ರೇಷಿತಾ ।
ಸಮಾಚಕ್ಷೇ ತು ತತ್ಸರ್ವಂ ದೇವರಾಜವಿಭಾಷಿತಂ ।
ಏವಮುಕ್ತ್ವಾ ಗತಾ ಸಾ ತು ಮೇನಕಾ ತತ್ಪ್ರಣೋದಿತಾ ॥ ೩ ॥

---

## ಎಂಭತ್ತೊಂದನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು :—ಇಂದ್ರನು ಯಯಾತಿಯ ವಿಕ್ರಮ, ದಾನ, ಪುಣ್ಯಾದಿಗಳನ್ನು ನೋಡಿ ಅದರಿಂದ ಹೆದರಿ, ಅದನ್ನು ನಾಶಮಾಡಲು ಸ್ವರ್ಗದ ವೇಶ್ಯೆಯಾದ ಮೇನಕೆಯನ್ನು ದೂತಳನ್ನಾಗಿ ಕಳುಹಿಸಿದನು.

೨. ಎಲೈ ಮೇನಕಿಯೇ, ನೀನು ಹೋಗಿ ಕಾಮಕನ್ಯೆಗೆ ಆ ರಾಜನನ್ನು ಸ್ವರ್ಗಕ್ಕೆ ಬರುವಂತೆ ಮಾಡೆಂದು ದೇವರಾಜನು ಹೇಳಿದನೆಂದು ಆಕೆಗೆ ಪೇಳು.

೩. ಇದನ್ನು ಕೇಳಿ ಮೇನಕೆಯು ಹಾಗೆಯೇ ಆಗಲೆಂದು ಅಲ್ಲಿಗೆ ಹೋಗಿ ದೇವರಾಜನು ಹೇಳಿದುದನ್ನೆಲ್ಲಾ ಅವಳಿಗೆ ಹೇಳಿ ಹೊರಟುಹೋದಳು.

ಗತಾಯಾಂ ಮೇನಕಾಯಾಂ ತು ರತಿಪುತ್ರೀ ಮನಸ್ವಿನೀ ।
ರಾಜಾನಂ ಧರ್ಮಸಂಕೇತಂ ಪ್ರತ್ಯುವಾಚ ಯಶಸ್ವಿನೀ ॥ ೪ ॥

ತ್ವಯಾಹಂಮಾನಿನಾ ರಾಜನ್ ಸತ್ಯವಾಕ್ಯೇನ ವೈ ಪುರಾ ।
ಸ್ವಕರಂ ಮತ್ಕರೇ ದತ್ವಾ ಸತ್ಯಧರ್ಮಸಮನ್ವಿತಂ ॥ ೫ ॥

ಯದ್ಯದ್ವದಾಮ್ಯಹಂ ರಾಜಸ್ತತ್ತತ್ಕಾರ್ಯಂ ಹಿ ವೈ ತ್ವಯಾ ।
ತದೇವ ತು ತ್ವಯಾ ವೀರ ನ ಕೃತಂ ಭಾಷಿತಂ ಮಮ ।
ತಸ್ಮಾತ್ತ್ವಾಂ ತು ಪರಿತ್ಯಕ್ಷ್ಯೇ ಯಾಸ್ಯಾಮಿ ಪಿತೃಮಂದಿರಂ ॥ ೬ ॥

॥ ರಾಜೋವಾಚ ॥

ಯಥೋಕ್ತಂ ಹಿ ಮಯಾ ಭದ್ರೇ ತತ್ತೇ ಕರ್ತಾ ನ ಸಂಶಯಃ ।
ಅಸಾಧ್ಯಂ ತು ಪರಿತ್ಯಜ್ಯ ಸಾಧ್ಯಮೇವ ವದಸ್ವ ಮೇ ॥ ೭ ॥

॥ ಅಶ್ರುಬಿಂದುಮತ್ಯುವಾಚ ॥

ಏತದರ್ಥಂ ಮಯಾ ಕಾನ್ತೋ ಭವಾನ್ವೈ ಸಮುಪಾಶ್ರಿತಃ ।
ಸರ್ವಲಕ್ಷಣಸಂಪನ್ನಃ ಸರ್ವಧರ್ಮಸಮನ್ವಿತಃ ॥ ೮ ॥

ಸರ್ವಂ ಸಾಧ್ಯಂ ತವ ಜ್ಞಾತ್ವಾ ಭೋಕ್ತಾರಂ ಸರ್ವಸಂಪದಾಂ ।
ಕರ್ತಾರಂ ಸರ್ವಧರ್ಮಾಣಾಂ ಸ್ರಷ್ಟಾರಂ ಪುಣ್ಯಕರ್ಮಣಾಂ ॥ ೯ ॥

---

೪-೬. ಮೇನಕೆಯು ಹೋದಮೇಲೆ ರತಿಯ ಮಗಳು ರಾಜನನ್ನು ಕುರಿತು ಎಲೈ ರಾಜನೇ, ನೀನು ಸತ್ಯವಾಕ್ಯದಿಂದ ಕೈಯಲ್ಲಿ ಕೈಹಾಕಿ ನಾನು ಕೇಳಿದುದನ್ನೆಲ್ಲಾ ಕೊಡುತ್ತೇನೆಂದೆಯಷ್ಟೆ. ಅದನ್ನು ನೀನು ಇದುವರಿಗೂ ನಡೆಸಲಿಲ್ಲ. ಆದುದರಿಂದ ನಿನ್ನನ್ನು ನಾನು ಬಿಟ್ಟುಬಿಡುತ್ತೇನೆ. ತಂದೆಯ ಮನೆಗೆ ಹೋಗುತ್ತೇನೆ, ಎಂದಳು.

೭. ರಾಜನು ಹೇಳಿದನು:—ನಾನು ಹೇಳಿದಂತೆಯೇ ಮಾಡುತ್ತಿದ್ದೇನೆ. ಅಸಾಧ್ಯವಾದುದನ್ನು ಬಿಟ್ಟು ಸಾಧ್ಯವಾದುದನ್ನು ಹೇಳು. ಅದನ್ನು ಖಂಡಿತವಾಗಿಯೂ ಮಾಡುವೆನು ಎಂದನು.

೮-೧೦. ಅಶ್ರುಬಿಂದುಮತಿಯು ಹೇಳಿದಳು :—ನೀನು ಸರ್ವಲಕ್ಷಣವಂತನೂ, ಧರ್ಮವಂತನೂ ಆಗಿರುವೆಯೆಂದು ನಿನ್ನನ್ನು ಪತಿಯನ್ನಾಗಿ ವರಿಸಿದೆನೇ? ನಿನಗೆ

**ತ್ರೈಲೋಕ್ಯಸಾಧಕಂ ಜ್ಞಾತ್ವಾ ತ್ರೈಲೋಕ್ಯೇಽಪ್ರತಿಮಂ ಚ ವೈ ।**
**ವಿಷ್ಣುಭಕ್ತಮಹಂ ಜಾನೇ ವೈಷ್ಣವಾನಾಂ ಮಹಾವರಂ । ॥ ೧೦ ॥**

**ಇತ್ಯಾಶಯಾ ಮಯಾ ಭರ್ತಾ ಸ ತ್ವ ಮಂಗೀಕೃತಃ ಪುರಾ ।**
**ಯಸ್ಯ ವಿಷ್ಣುಪ್ರಸಾದೋಽಸ್ತಿ ಸ ಸರ್ವತ್ರ ಪರಿವ್ರಜೇತ್ ॥ ೧೧ ॥**

**ದುರ್ಲಭಂ ನಾಸ್ತಿ ರಾಜೇಂದ್ರ ತ್ರೈಲೋಕ್ಯೇ ಸಚರಾಚರೇ ।**
**ಸರ್ವೇಷು ಚೈವ ಲೋಕೇಷು ವಿದ್ಯತೇ ನ ಚ ಸುವ್ರತ ।**
**ತವ ವಿಷ್ಣೋಃ ಪ್ರಸಾದೇನ ಸ್ವರ್ಗಂ ಚ ನೃಪಸತ್ತಮ ॥ ೧೨ ॥**

**ಮರ್ತ್ಯಲೋಕಂ ಸಮಾಸಾದ್ಯ ತ್ವಯೈವ ವಸುಧಾಧಿಪ ।**
**ಜರಾಪೀಡಾವಿಹೀನಾಶ್ಚ ಮೃತ್ಯುಹೀನಾ ನರಾಃ ಕೃತಾಃ ॥ ೧೩ ॥**

**ಗೃಹದ್ವಾರೇಷು ಸರ್ವೇಷಾಂ ಮರ್ತ್ಯಾನಾಂ ತು ನರರ್ಷಭ ।**
**ಅನೇಕೇ ಕಲ್ಪವೃಕ್ಷಾಶ್ಚ ತ್ವಯೈವ ಪರಿಕಲ್ಪಿತಾಃ ॥ ೧೪ ॥**

---

ಎಲ್ಲವೂ ಸಾಧ್ಯವು, ಸರ್ವಸಂಪತ್ತನ್ನೂ ಅನುಭವಿಸುತ್ತೀಯೆ, ಎಲ್ಲಾ ಧರ್ಮಕ್ಕೂ ನೀನೇ ಕರ್ತನು. ಪುಣ್ಯಗಳನ್ನು ಮಾಡಬಲ್ಲೆ. ತ್ರಿಲೋಕವನ್ನೂ ಸಾಧಿಸಬಲ್ಲೆ. ತ್ರಿಲೋಕದಲ್ಲಿ ನಿನ್ನಂತವರೂ ಬೇರೊಬ್ಬರಿಲ್ಲ. ನೀನು ವಿಷ್ಣುಭಕ್ತ. ವಿಷ್ಣುಭಕ್ತರಲ್ಲಿ ಶ್ರೇಷ್ಠನಾದವನು. ಹೀಗೆಂಬ ಆಸೆಯಿಂದ ನಿನ್ನನ್ನು ನಾನು ಮೊದಲು ಗಂಡನನ್ನಾಗಿ ವರಿಸಿದೆನು.

೧೧-೧೨. ವಿಷ್ಣುಪ್ರಸಾದವಿರುವವನು ಎಲ್ಲಾ ಕಡೆಗೂ ಹೋಗಬಲ್ಲನು. ಎಲೈ ರಾಜನೇ, ಚರಚರಾತ್ಮಕವಾದ ಮೂರುಲೋಕಗಳಲ್ಲಿಯೂ, ನಿನಗೆ ದುರ್ಲಭವಾದುದಿಲ್ಲ. ಯಾವ ಲೋಕದಲ್ಲಿಯೂ ನಿನಗೆ ಅಡ್ಡಿಯೆಂಬುದಿಲ್ಲವೇ ಇಲ್ಲ. ನಿನಗೆ ವಿಷ್ಣುವಿನ ಅನುಗ್ರಹವಿರುವುದರಿಂದ ಸ್ವರ್ಗಲೋಕವೇನೂ ಅಸಾಧ್ಯವಲ್ಲ.

೧೩. ನೀನು ಮರ್ತ್ಯಲೋಕದಲ್ಲಿದ್ದುಕೊಂಡೇ ಜನರನ್ನು ಮುಪ್ಪು, ತೊಂದರೆ ಇಲ್ಲದಂತೆಯೂ ಮೃತ್ಯುಹೀನರನ್ನಾಗಿಯೂ ಮಾಡಿದೆ

೧೪. ಮನುಷ್ಯರ ಮನೆಬಾಗಿಲಿನಲ್ಲೆಲ್ಲಾ ಕಲ್ಪವೃಕ್ಷಗಳನ್ನು ಕಲ್ಪಿಸಿರುತ್ತೀಯೆ.

**ಯೇಷಾಂ ಗೃಹೇಷು ಮರ್ತ್ಯಾನಾಂ ಮುನಯಃ ಕಾಮಧೇನವಃ ।**
**ತ್ವಯ್ಯೈವ ಪ್ರೇಷಿತಾ ರಾಜನ್ ಸ್ಥಿರೀಭೂತಾಃ ಕೃತಾಸ್ಸದಾ ।**
**ಸುಖಿನಃ ಸರ್ವಕಾಮ್ಯೈಶ್ಚ ಮಾನವಾಶ್ಚ ತ್ವಯಾ ಕೃತಾಃ ॥ ೧೫ ॥**

**ಗೃಹೈಕಮಧ್ಯೇ ಸಾಹಸ್ರಂ ಕುಲೀನಾನಾಂ ಪ್ರದೃಶ್ಯತೇ ।**
**ಏವಂ ವಂಶವಿವೃದ್ಧಿಶ್ಚ ಮಾನವಾನಾಂ ತ್ವಯಾ ಕೃತಾ ॥ ೧೬ ॥**

**ಯಮಸ್ಯಾಪಿ ವಿರೋಧೇನ ಇಂದ್ರಸ್ಯಾಪಿ ನರೋತ್ತಮ ।**
**ವ್ಯಾಧಿಪಾಪವಿಹೀನಸ್ತು ಮರ್ತ್ಯಲೋಕಸ್ತ್ವಯಾ ಕೃತಃ ॥ ೧೭ ॥**

**ಸ್ವತೇಜಸಾಽಹಂಕಾರೇಣ ಸ್ವರ್ಗರೂಪಂ ತು ಭೂತಳಂ ।**
**ದರ್ಶಿತಂ ಹಿ ಮಹಾರಾಜ ತ್ವತ್ಸಮೋ ನಾಸ್ತಿ ಭೂಪತಿಃ ॥ ೧೮ ॥**

**ಪುರಾಣೇಽಪಿ ಪ್ರಭೂತೇ ಹಿ ನಾನ್ಯಶ್ಚಾಸ್ತಿ ಭವಾದೃಶಃ ।**
**ಭವಂತಮಿತ್ಯಹಂ ಜಾನೇ ಸರ್ವಧರ್ಮಪ್ರದಾಯಕಂ ॥ ೧೯ ॥**

---

೧೫. ಆ ಮರ್ತ್ಯರ ಮನೆಯ ಮುಂದೆ ಕಾಮಧೇನುಗಳು ತಪಸ್ಸು ಮಾಡುತ್ತಿರುವಂತೆ ನಿಂತುಕೊಂಡಿದ್ದು, ಇಷ್ಟಾರ್ಥವನ್ನು ಕೊಡುವಂತೆ ನೀನೇ ಮಾಡಿರುತ್ತೀಯಲ್ಲವೆ? ಹೀಗೆ ಮಾಡಿ ಮರ್ತ್ಯರನ್ನೆಲ್ಲಾ ಸುಖಿಗಳನ್ನಾಗಿ ಮಾಡಿದ್ದೀಯೆ.

೧೬. ಒಂದೊಂದು ಮನೆಯಲ್ಲಿಯೂ ಸಾವಿರಾರು ಜನರು ಯೋಗ್ಯರಾಗಿ ಅನ್ಯೋನ್ಯವಾಗಿದ್ದುಕೊಂಡಿದ್ದಾರೆ. ಈ ರೀತಿ ಜನರ ವಂಶವನ್ನು ವೃದ್ಧಿಪಡಿಸಿದ್ದೀಯೆ.

೧೭. ಇಂದ್ರನಿಗೂ, ಯಮನಿಗೂ, ವಿರೋಧವಾಗಿ ಮರ್ತ್ಯಲೋಕದಲ್ಲಿ ವ್ಯಾಧಿ, ಪಾಪಗಳೇ ಇಲ್ಲದಂತೆ ಮಾಡಿದ್ದೀಯೆ.

೧೮. ನಿನ್ನ ತೇಜಸ್ಸಿನಿಂದಲೂ, ಅಹಂಕಾರದಿಂದಲೂ, ಭೂಮಿಯನ್ನೇ ಸ್ವರ್ಗವನ್ನಾಗಿ ಮಾಡಿದ್ದೀಯೆ. ಆ ರೀತಿ ತೋರಿಸಿದ ನಿನ್ನಂತಹ ರಾಜನು ಮತ್ತೊಬ್ಬನಿಲ್ಲ.

೧೯. ಬಹುವಾದ ಪುರಾಣಗಳಲ್ಲೂ ಕೂಡ ನಿನ್ನಂತಹ ರಾಜನಿದ್ದನೆಂದು ಕೇಳಿಯೇ ಇಲ್ಲ. ಸರ್ವಧರ್ಮವನ್ನೂ ಕೊಡತಕ್ಕವನು ನೀನೇ ಎಂಬುದಾಗಿ ನಾನು ತಿಳಿದಿದ್ದೇನೆ.

ತಸ್ಮಾನ್ಮಯಾ ಕೃತೋ ಭರ್ತಾ ವದಸ್ವೈವ ಮಮಾಗ್ರತಃ ।
ನರ್ಮಮುಕ್ತಂ ನೃಪೇಂದ್ರ ತ್ವಂ ವದ ಸತ್ಯಂ ಮಮಾಗ್ರತಃ ॥ ೨೦ ॥

ಯದಿ ತೇ ಸತ್ಯಮಸ್ತೀತಿ ಧರ್ಮಂ ಚಾಪಿ ನರಾಧಿಪ ।
ದೇವಲೋಕೇಷು ಮೇ ನಾಸ್ತಿ ಗಮನೇ ಗತಿರುತ್ತಮಾ ॥ ೨೧ ॥

ಸತ್ಯಂ ತ್ಯಕ್ತ್ವಾ ಯದಾ ಚ ತ್ವಂ ನೈವ ಸ್ವರ್ಗಂ ಗಮಿಷ್ಯಸಿ ।
ತದಾ ಕೂಟಂ ತವ ವಚೋ ಭವಿಷ್ಯತಿ ನ ಸಂಶಯಃ
ಪೂರ್ವಂ ಕೃತಂ ತು ಯಚ್ಛ್ರೇಯೋ ಭಸ್ಮಭೂತಂ ಭವಿಷ್ಯತಿ ॥ ೨೨ ॥

॥ ರಾಜೋವಾಚ ॥

ಸತ್ಯಮುಕ್ತಂ ತ್ವಯಾ ಭದ್ರೇ ಸಾಧ್ಯಾಸಾಧ್ಯಂ ಚ ನಾಸ್ತಿ ಮೇ ।
ಸರ್ವಂ ಸಾಧ್ಯಂ ಸ್ವರ್ಗಲೋಕೇ ಪ್ರಸಾದಾಜ್ಜಗತಾಂ ಪತೇಃ ॥ ೨೩ ॥

ನ ಯಾಮ್ಯಹಂ ಯಥಾ ಸ್ವರ್ಗಂ ತಚ್ಚ ಮೇ ಕಾರಣಂ ಶೃಣು ।
ಭಾಗಂ ತು ತೇ ನ ದಾಸ್ಯಂತಿ ಮಮ ಮೃತ್ಯುಶ್ಚ ದೇವತಾಃ ॥ ೨೪ ॥

---

೨೦. ಆದುದರಿಂದಲೇ ನಿನ್ನನ್ನು ನಾನು ಗಂಡನನ್ನಾಗಿ ಮಾಡಿಕೊಂಡದುದು. ನನ್ನೆದುರಿಗೆ ಮನಚುಚ್ಚುವ ಮಾತನಾಡುತ್ತೀಯೆ. ಸತ್ಯವನ್ನು ಹೇಳು.

೨೧. ನಿನಗೆ ಸತ್ಯವೂ ಧರ್ಮವೂ ಇದೆಯೆಂದು ಹೇಳಿದೆಯಲ್ಲ. ಹಾಗಾದರೆ ನಾನೇಕೆ ನಿನ್ನ ಜೊತೆಯಲ್ಲಿ ದೇವಲೋಕಕ್ಕೆ ಹೋಗಬಾರದು ?

೨೨. ಮಾತುಕೊಟ್ಟಿರುವುದನ್ನು ಮರೆತು, ನೀನು ಸ್ವರ್ಗಕ್ಕೆ ಹೋಗದಿದ್ದರೆ ಆಗ್ಗೆ ನಿನ್ನ ಮಾತು ಮೋಸವೆಂದು ಖಂಡಿತ ತಿಳಿಯುವುದು. ಮೊದಲು ಹೇಳಿದ ಶ್ರೇಯಸ್ಸಿನ ಮಾತು ಬೂದಿಯಾಯಿತಷ್ಟೆ? ಎಂದು ಮುಂತಾಗಿ ಮಾತನಾಡಲು,

೨೩. ರಾಜನು ಹೇಳಿದನು:—ನೀನು ಹೇಳಿದುದು ನಿಶ್ಚಯವು. ನನಗೆ ಸಾಧ್ಯಾಸಾಧ್ಯವೇ ಇಲ್ಲ. ಜಗತ್ಪತಿಯಾದ ವಿಷ್ಣುವಿನ ಅನುಗ್ರಹದಿಂದ ನನಗೆ ಸರ್ವವೂ ಸಾಧ್ಯವು.

೨೪. ನಾನು ಸ್ವರ್ಗಕ್ಕೆ ಹೋಗದಿರುವುದಕ್ಕೆ ಕಾರಣವನ್ನು ಹೇಳುವೆನು ಕೇಳು. ಅಲ್ಲಿ ದೇವತೆಗಳೂ, ಮೃತ್ಯುವೂ ನನಗೆ ಸರಿಯಾದ ಭಾಗವನ್ನು ಕೊಡುವುದಿಲ್ಲ.

**ತತೋ ವೈ ಮನವೇ ಲೋಕೇ ಪ್ರಜಾಸ್ಸರ್ವಾ ಮಮಾನಘೇ ।**
**ಮೃತ್ಯುಯುಕ್ತಾ ಭವಿಷ್ಯಂತಿ ಮಯಾ ಹೀನಾ ನ ಸಂಶಯಃ ।**
**ಅತಃ ಸ್ವರ್ಗಂ ನ ಗಚ್ಛಾಮಿ ಸತ್ಯಮುಕ್ತಂ ವರಾನನೇ　　॥ ೨೫ ॥**

**॥ ದೇವ್ಯುವಾಚ ॥**

**ಲೋಕಾನ್ ದೃಷ್ಟ್ವಾ ಗಮಿಷ್ಯಾಮಿ ಮರ್ತ್ಯಲೋಕಂ ಚ ವೈ ಪುನಃ ।**
**ರೂಪಂ ಪಶ್ಯ ಮಮಾದ್ಯ ತ್ವಂ ಜಾತಾ ಶ್ರದ್ಧಾ ಮಮಾತುಲಾ　　॥ ೨೬ ॥**

**॥ ರಾಜೋವಾಚ ॥**

**ಸರ್ವಮೇವಂ ಕರಿಷ್ಯಾಮಿ ಯತ್ತ್ವಯೋಕ್ತಂ ನ ಸಂಶಯಃ ।**
**ಏವಮುಕ್ತ್ವಾ ಪ್ರಿಯಾಂ ರಾಜಾ ಚಿಂತಯಾಮಾಸ ವೈ ತದಾ　　॥ ೨೭ ॥**

**ಅನ್ತರ್ಜಲಚರೋ ಮತ್ಸ್ಯಃ ಸೋಽಪಿ ಜಾಲೇನ ಬದ್ಧ್ಯತೇ ।**
**ಮರುತ್ಸಮಾನವೇಗೋಽಪಿ ಮೃಗಃ ಪ್ರಾಪ್ನೋತಿ ಬಂಧನಂ　　॥ ೨೮ ॥**

---

೨೫. ನಾನು ಈ ಲೋಕದಲ್ಲಿಲ್ಲದೇ ಹೋದರೆ ನನ್ನ ಪ್ರಜೆಗಳೆಲ್ಲರೂ ಮೃತ್ಯುವನ್ನು ಹೊಂದಬೇಕಾಗುತ್ತದೆ. ಆದುದರಿಂದ ನಾನು ಸ್ವರ್ಗಕ್ಕೆ ಹೋಗುವುದಿಲ್ಲ. ಇದು ನಿಶ್ಚಯವು ಎಂದನು.

೨೬. ದೇವಿಯು ಹೇಳಿದಳು:—ಲೋಕಗಳನ್ನು ನೋಡಿಕೊಂಡು ಪುನಃ ಮರ್ತ್ಯಲೋಕಕ್ಕೆ ನಿನ್ನೊಡನೆ ಬರುತ್ತೇನೆ. ನನಗೆ ಅವುಗಳನ್ನು ನೋಡಬೇಕೆಂದು ಬಹಳ ಆಸೆ ಹುಟ್ಟಿದೆ. ನನ್ನ ಸ್ಥಿತಿಯನ್ನು ನೋಡು. ಎನ್ನಲು,

೨೭. ರಾಜನು ಹೇಳಿದನು:—ಆಗಲಿ, ನೀನು ಹೇಳಿದಂತೆಯೇ ಮಾಡುತ್ತೇನೆ. ಸಂಶಯವಿಲ್ಲವೆಂದು ಹೇಳಿ ಈ ರೀತಿ ಯೋಚಿಸಿದನು.

೨೮-೨೯. ಯಾರಿಗೂ ಸಿಕ್ಕದಂತೆ ನೀರಿನೊಳಗೆ ಓಡಾಡುವ ಮೀನೂ ಕೂಡ ಬಲೆಯಲ್ಲಿ ಬೀಳುತ್ತದೆ. ಗಾಳಿಯಂತೆ ವೇಗವುಳ್ಳ ಮೃಗವೂ ಕೂಡ ಬಂಧನವನ್ನು ಹೊಂದುತ್ತದೆ. ಸಾವಿರ ಯೋಜನಗಳ ದೂರದಲ್ಲಿ ಆಕಾಶದಲ್ಲಿರುವ ಪಕ್ಷಿಯೂ ಮಾಂಸದಾಸೆಗೆ ಬಂದು ಕಾಲಿಗೆ ಕಟ್ಟುಬಿದ್ದು ಇರುವ ಹುರಿಯನ್ನು ತಿಳಿಯುವುದೇ

**ಯೋಜನಾನಾಂ ಸಹಸ್ರಸ್ಥಮಾಮಿಷಂ ಭಕ್ಷತೇ ಖಗಃ ।**
**ಸ ಪಾಶಂ ಪಾದಸಂಲಗ್ನಂ ನ ಪಶ್ಯೇದ್ದೈವಮೋಹಿತಃ ॥ ೨೯ ॥**

**ಸ ವೈಷಮ್ಯಕರಃ ಕಾಲಃ ಕಾಲಃ ಸಮ್ಮಾನಹಾನಿದಃ ।**
**ಏವಂ ಭಯಂಕರಃ ಕಾಲೋ ಯತ್ರ ಕುತ್ರಾಪಿ ನಿಷ್ಠುರಃ ।**
**ನರಂ ಕರೋತಿ ದಾತಾರಂ ಯಾಚಿತಾರಂ ಚ ವೈ ಪುನಃ ॥ ೩೦ ॥**

**ಭೂತಾನಿ ಸ್ಥಾವರಾದೀನಿ ದಿವಿ ವಾ ಯದಿ ವಾ ಭುವಿ ।**
**ಸರ್ವತ್ರ ಕಲ್ಪತೇ ಕಾಲಃ ಕಾಲೋ ಹ್ಯೇಕ ಇದಂ ಜಗತ್ ॥ ೩೧ ॥**

**ಅನಾದಿನಿಧನೋ ಯೋಽಸೌ ಜಗತಃ ಕಾರಣಂ ಪರಂ ।**
**ಲೋಕೇಷು ಕಾಲಃ ಪಚತಿ ವೃಕ್ಷೇ ಫಲಮಿವಾಹಿತಂ ॥ ೩೨ ॥**

**ನ ಮಂತ್ರಾ ನ ತಪೋ ದಾನಂ ನ ಮಿತ್ರಾಣಿ ನ ಬಾಂಧವಾಃ ।**
**ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ॥ ೩೩ ॥**

---

ಇಲ್ಲ. ಕಾಲವು ವಿಷಮವಾದುದು. ಕಾಲವೇ ಗೌರವವನ್ನೂ, ತೊಂದರೆಯನ್ನೂ, ಉಂಟುಮಾಡುತ್ತದೆ.

೩೦. ಕಾಲವು ಈ ರೀತಿ ಭಯಂಕರವಾದುದು. ಯಾವುದೋ ಒಂದುವೇಳೆಯಲ್ಲಿ ಕೆಟ್ಟದ್ದಾಗಿಯೇ ಇರುತ್ತದೆ. ಆ ಕಾಲವೇ ಮನುಷ್ಯನನ್ನು ಐಶ್ವರ್ಯವಂತನನ್ನಾಗಿ ಮಾಡುತ್ತದೆ. ಅದೇ ಕಾಲವು ಅವನನ್ನೇ ಭಿಕ್ಷುಕನನ್ನಾಗಿಯೂ ಮಾಡುತ್ತದೆ.

೩೧. ಭೂದ್ಯುಅಂತರಿಕ್ಷಗಳು, ಚರಾಚರಪ್ರಾಣಿಗಳು ಎಲ್ಲಕ್ಕೂ ಕಾಲವೊಂದೇ ಗತಿಯು. ಎಲ್ಲಕ್ಕೂ ಕಾಲವೇ ಕಾರಣ. ಈ ಜಗತ್ತು ಕಾಲಕ್ಕೆ ಅಧೀನವು.

೩೨. ಈ ಕಾಲಕ್ಕೆ ಆದ್ಯಂತಗಳಿಲ್ಲ. ಜಗತ್ತಿಗೆ ಮಾತ್ರ ಕಾರಣವಾಗಿರುತ್ತದೆ. ಕಾಲವು, ಮರಗಳಲ್ಲಿ ಹಣ್ಣುಗಳನ್ನು ಬಿಡುವಂತೆ ಕಾಲದಲ್ಲಿ ಎಲ್ಲರಿಗೂ ಫಲ ಕೊಡುತ್ತದೆ.

೩೩. ಮಂತ್ರ, ತಪಸ್ಸು, ದಾನ, ಮಿತ್ರರು, ಬಾಂಧವರೊಬ್ಬರೂ ಕೂಡ ಕಾಲದಿಂದ ಆವರಿಸಲ್ಪಟ್ಟವನನ್ನು ಮರಣಸಮಯದಲ್ಲಿ ರಕ್ಷಿಸಲಾರರು.

ತ್ರಯಃ ಕಾಲಕೃತಾಃ ಪಾಶಾಃ ಶಕ್ಯಂತೇ ನ ನಿವರ್ತಿತುಂ ।
ವಿವಾಹೋ ಜನ್ಮ ಮರಣಂ ಯಥಾ ಯತ್ರ ಚ ಯೇನ ಚ　　॥ ೩೪ ॥

ಯಥಾ ಜಲಧರಾ ವ್ಯೋಮ್ನಿ ಭ್ರಾಮ್ಯಂತೇ ಮಾತರಿಶ್ವನಾ ।
ತಥೇದಂ ಕರ್ಮಯುಕ್ತೇನ ಕಾಲೇನ ಭ್ರಾಮಿತಂ ಜಗತ್　　॥ ೩೫ ॥

॥ ಸುಕರ್ಮೋವಾಚ ॥

ಕಾಲೋಽಯಂ ಕರ್ಮಯುಕ್ತಶ್ಚ ಯೋ ನರೈಸ್ಸಮುಪಾಸಿತಃ ।
ಕಾಲಸ್ತು ಪ್ರೇರಯೇತ್ಕರ್ಮ ತಂ ತಂ ಕಾಲಃ ಕರೋತಿ ಸಃ　　॥ ೩೬ ॥

ಉಪದ್ರವಾಘಾತದೋಷಾಃ ಸರ್ಪಾಶ್ಚ ವ್ಯಾಧಯಸ್ತಥಾ ।
ಸರ್ವೇ ಕರ್ಮಪ್ರಯುಕ್ತಾಸ್ತೇ ಪ್ರಚರಂತಿ ಚ ಮಾನುಷಂ　　॥ ೩೭ ॥

---

೩೪. ಮದುವೆ, ಜನ್ಮ, ಮರಣಗಳು ಎಲ್ಲಿದ್ದರೂ ಯಾವನಿಂದಲೂ ಬದಲಾಯಿಸಲು ಸಾಧ್ಯವಿಲ್ಲ. ಎಂದರೆ ಈ ಮೂರೂ ಆಗಬೇಕಾದ ಕಾಲಗಳಲ್ಲಿ ಆಗಿಯೇ ಆಗುತ್ತವೆ. ಈ ಮೂರೂ ಕಾಲದಿಂದ ಹೂಡಲ್ಪಟ್ಟ ಬಲೆಗಳು.

೩೫. ಗಾಳಿಯು ಆಕಾಶದಲ್ಲಿರುವ ಮೋಡವನ್ನು ಓಡಾಡಿಸುವಂತೆ ಕರ್ಮದೊಡಗೂಡಿದ ಕಾಲದಿಂದ ಈ ಜಗತ್ತು ಸುತ್ತಿಸಲ್ಪಡುತ್ತದೆ.

೩೬. ಸುಕರ್ಮನು ಹೇಳುತ್ತಾನೆ:—ಮನುಷ್ಯರು ಅನುಭವಿಸುತ್ತಿರುವ ಕಾಲವು ಕರ್ಮಯುಕ್ತವಾದುದು. ಕಾಲವೇ ಕರ್ಮವನ್ನು ಪ್ರೇರಿಸುತ್ತದೆ. ತನಗೆ ಬೇಕುಬೇಕಾದ ರೀತಿಯಲ್ಲಿ ಆ ಕಾಲವು ಅವನನ್ನು ಪ್ರೇರಿಸುತ್ತದೆ.

೩೭. ರೋಗ, ಘಾಯ ಮೊದಲಾದ ದೋಷಗಳೂ, ಸರ್ಪದ ಕಡಿತಗಳೂ, ಮಹಾವ್ಯಾಧಿಗಳೂ ಎಲ್ಲವೂ ಕರ್ಮದಿಂದ ಪ್ರೇರಿಸಲ್ಪಟ್ಟು ಮನುಷ್ಯರಿಗೆ ಬರುತ್ತವೆ. ಎಂದರೆ ಪೂರ್ವಾರ್ಜಿತ ಕರ್ಮಾನುಸಾರವಾಗಿಯೇ ರೋಗಾದಿಗಳು ಮನುಷ್ಯರಿಗೆ ಬರುತ್ತವೆ.

**ಸುಖಸ್ಯ ಹೇತವೋ ಯೇ ಚ ಹ್ಯುಪಾಯಾಃ ಪುಣ್ಯಮಿಶ್ರಿತಾಃ ।**
**ತೇ ಸರ್ವೇ ಕರ್ಮಸಂಸಕ್ತಾ ನ ಪಶ್ಯೇಯುಃ ಶುಭಾಶುಭಂ ॥ ೩೮ ॥**

**ಕರ್ಮವಾ ಯದಿ ವಾ ಲೋಕೇ ಕರ್ಮಸಂಬಂಧಿಬಾಂಧವಾಃ ।**
**ಕರ್ಮಾಣಿ ಚೋದಯಂತೀಹ ಪುರುಷಂ ಸುಖದುಃಖಯೋಃ ॥ ೩೯ ॥**

**ಸುವರ್ಣಂ ರಜತಂ ಚಾಪಿ ಯಥಾರೂಪಂ ನಿಬಧ್ಯತೇ ।**
**ತಥಾ ನಿಬಧ್ಯತೇ ಯಸ್ತು ಸ್ವಕರ್ಮಣಿ ವಶಾನುಗಃ ॥ ೪೦ ॥**

**ಪಂಚೈತಾನಿ ವಿಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ।**
**ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ॥ ೪೧ ॥**

**ಯಥಾ ಮೃತ್ಪಿಂಡಕಃ ಕರ್ತಾ ಕುರುತೇ ಯದ್ಯದಿಚ್ಛತಿ ।**
**ತಥಾ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥ ೪೨ ॥**

---

೩೮. ಸುಖಕ್ಕೆ ಕಾರಣವಾದ ಉಪಾಯಗಳು ಪುಣ್ಯದಿಂದ ಬೆರೆತಿವೆ ಅವೆಲ್ಲವು ಕರ್ಮದಿಂದ ಕೂಡಿವೆ. ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು, ಎನ್ನುವುದು ತಿಳಿಯುವುದಿಲ್ಲ.

೩೯. ಆಯಾ ಕರ್ಮಕ್ಕೆ ಸಂಬಂಧಪಟ್ಟ ಬಾಂಧವರು ಕರ್ಮಗಳನ್ನು ಕೊಡುವವರಾಗಿ ಲೋಕದಲ್ಲಿ ಮನುಷ್ಯನನ್ನು ಸುಖದುಃಖಗಳಲ್ಲಿ ಪ್ರೇರೇಪಿಸುತ್ತಾರೆ.

೪೦. ಚಿನ್ನ ಬೆಳ್ಳಿಗಳು ರೂಪದಿಂದ ಹೇಗೆ ಕಟ್ಟಲ್ಪಟ್ಟಿವೆಯೋ ಹಾಗೆ ಪ್ರಾಣಿಗಳು ಕರ್ಮಕ್ಕೆ ಅಧೀನವಾಗಿ ಕಟ್ಟಲ್ಪಟ್ಟಿವೆ. ಎಂದರೆ ಚಿನ್ನಬೆಳ್ಳಿಗಳು ಒಡವೆಗಳಿಗೆ ಅನುರೂಪವಾದ ಆಕಾರವನ್ನು ಹೊಂದುವಂತೆ ಪ್ರಾಣಿಗಳು ತಮ್ಮ ಕರ್ಮಗಳಿಗೆ ಅನುರೂಪವಾದ ದೇಹಾದಿಗಳನ್ನೂ ಫಲಗಳನ್ನೂ ಹೊಂದುವವು.

೪೧. ಆಯುಸ್ಸು, ಕರ್ಮ, ಹಣ, ವಿದ್ಯೆ, ಸಾವು ಈ ಐದೂ ಗರ್ಭದಲ್ಲಿರುವಾಗಲೇ ಪ್ರಾಣಿಗೆ ಸೇರಿಕೊಳ್ಳುತ್ತವೆ. ಎಂದರೆ ಹೀಗೆಯೇ ಆಗಬೇಕೆಂದು ಮೊದಲೇ ನಿಶ್ಚಯಿಸಲ್ಪಟ್ಟಿರುತ್ತವೆ.

೪೨. ಕುಂಬಾರನು ಮಣ್ಣಿನಮುದ್ದೆಯಿಂದ ಬೇಕಾದವುಗಳನ್ನು ಮಾಡುವಂತೆ ಪೂರ್ವಜನ್ಮದ ಕರ್ಮವು ಮನುಷ್ಯನ ಸ್ಥಿತಿಗತಿಗಳನ್ನು ನಿರ್ಧರಿಸುತ್ತದೆ.

ದೇವತ್ವಮಥ ಮಾನುಷ್ಯಂ ಪಶುತ್ವಂ ಪಕ್ಷಿತಾ ತಥಾ ।
ತಿರ್ಯಕ್ತ್ವಂ ಸ್ಥಾವರತ್ವಂ ಚ ಪ್ರಾಪ್ಯತೇ ವೈ ಸ್ವಕರ್ಮಭಿಃ ॥ ೪೩ ॥

ಯಥಾಕೃತಂ ತಥಾ ಭುಂಕ್ತೇ ನಿತ್ಯಂ ವಿಹಿತಮಾತ್ಮನಾ ।
ಆತ್ಮನಾ ವಿಹಿತಂ ದುಃಖಮಾತ್ಮನಾ ವಿಹಿತಂ ಸುಖಂ ॥ ೪೪ ॥

ಗರ್ಭಸಂಜ್ಞಾಮುಪಾದಾಯ ಭುಂಕ್ತೇ ವೈ ಪೂರ್ವದೈಹಿಕಂ ।
ಸಂತ್ಯಜಂತಿ ಸ್ವಕಂ ಕರ್ಮ ನ ಕ್ವಚಿತ್ಪುರುಷಾ ಭುವಿ ॥ ೪೫ ॥

ವಿತ್ತೇನ ಪ್ರಜ್ಞಯಾ ವಾಪಿ ಸಮರ್ಥಾಃ ಕರ್ತುಮನ್ಯಥಾ ।
ಸ್ವಕೃತಾನ್ಯುಪಭುಂಜಂತಿ ದುಃಖಾನಿ ಚ ಸುಖಾನಿ ಚ ।
ಹೇತುಂ ಪ್ರಾಪ್ಯ ನರೋ ನಿತ್ಯಂ ಕರ್ಮಪಾಶೈಶ್ಚ ಬಧ್ಯತೇ ॥ ೪೬ ॥

ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।
ತಥಾ ಶುಭಾಶುಭಂ ಕರ್ಮ ಕರ್ತಾರಮನುಗಚ್ಛತಿ ॥ ೪೭ ॥

---

೪೩. ದೇವತೆ, ಮನುಷ್ಯ, ಪಶು, ಪಕ್ಷಿ, ಕೀಳುಪ್ರಾಣಿ, ಸ್ಥಾವರ, ಇವುಗಳಾಗುವಿಕೆಯು ಅವರವರ ಕರ್ಮಗಳಿಂದ ಲಭಿಸುತ್ತವೆ. ಎಂದರೆ ಅವರವರ ಕರ್ಮಾನುಸಾರವಾಗಿ ಆಯಾ ಶರೀರ ಪ್ರಾಪ್ತಿಯಾಗುವುದೆಂದು ಭಾವವು.

೪೪. ತಾನು ಹೇಗೆ ಕರ್ಮಮಾಡಿದ್ದಾನೋ, ಹಾಗೆ ಅದರ ಫಲವನ್ನು ಅನುಭವಿಸುತ್ತಾನೆ. ನಿತ್ಯವೂ ತಾನು ಮಾಡಿದ ಸುಖದುಃಖಗಳನ್ನು ಹಾಗೆಯೇ ಚಾಚೂ ತಪ್ಪದೇ ಅನುಭವಿಸುತ್ತಾನೆ.

೪೫. ಗರ್ಭ ಎಂಬ ಸಂಜ್ಞೆ ಮಾತ್ರವನ್ನು ಹೊಂದಿ ಪ್ರಾಣಿಗಳು ಹಿಂದಿನ ದೇಹದ ಕರ್ಮಗಳನ್ನು ಅನುಭವಿಸುತ್ತವೆ. ಪ್ರಾಣಿಗಳು ತಮ್ಮ ಕರ್ಮಗಳನ್ನು ಬಿಡುವಂತೆಯೇ ಇಲ್ಲ. ಅನುಭವಿಸಿಯೇ ತೀರಬೇಕು.

೪೬. ಬೇಕಾದಷ್ಟು ಹಣವೂ, ಬುದ್ಧಿಶಕ್ತಿಯೂ ಇದ್ದರೂ, ವಿಧಿಯನ್ನು ಮೀರಲಾಗುವುದಿಲ್ಲ. ತಾವು ಮಾಡಿದ ಸುಖದುಃಖಗಳನ್ನು ಅನುಭವಿಸಲೇಬೇಕು. ಮನುಷ್ಯನು ಕಾರಣವನ್ನು ಹೊಂದಿ ಕರ್ಮವೆಂಬ ಪಾಶದಿಂದ ಬಿಗಿಯಲ್ಪಡುತ್ತಾನೆ.

೪೭-೪೮. ಸಾವಿರ ಹಸುಗಳೊಳಗೆ ಕರುವು ಹೇಗೆ ತನ್ನ ತಾಯಿಯನ್ನು ತೀದು ಹೋಗುತ್ತದೋ ಹಾಗೆ ಸುಖದುಃಖಗಳು ಕರ್ಮಕರ್ತನನ್ನು ಯಾವಾಗಲೂ

**ಉಪಭೋಗಾದೃತೇ ತಸ್ಯ ನಾಶ ಏವ ನ ವಿದ್ಯತೇ ।**
**ಪ್ರಾಕ್ತನಂ ಬಂಧನಂ ಕರ್ಮ ಕೋಽನ್ಯಥಾ ಕರ್ತುಮರ್ಹತಿ ॥ ೪೮ ॥**

**ಸುಶೀಘ್ರಮಪಿ ಧಾವಂತಂ ವಿಧಾನಮನುಧಾವತಿ ।**
**ಶೇತೇ ಸಹ ಶಯಾನೇನ ಪುರಾ ಕರ್ಮ ಯಥಾಕೃತಂ ॥ ೪೯ ॥**

**ಉಪತಿಷ್ಠತಿ ತಿಷ್ಠಂತಂ ಗಚ್ಛಂತಮನುಗಚ್ಛತಿ ।**
**ಕರೋತಿ ಕುರ್ವತಃ ಕರ್ಮ ಛಾಯೇವಾನುವಿಧೀಯತೇ ॥ ೫೦ ॥**

**ಯಥಾ ಛಾಯಾತಪೌ ನಿತ್ಯಂ ಸಂಬದ್ಧೌ ಚ ಪರಸ್ಪರಂ ।**
**ತದ್ವತ್ಕರ್ಮ ಚ ಕರ್ತಾ ಚ ಸುಸಂಬದ್ಧೌ ಪರಸ್ಪರಂ ॥ ೫೧ ॥**

**ಗ್ರಹಾ ರೋಗಾ ವಿಷಾಸ್ಸರ್ಪಾ ಡಾಕಿನ್ಯೋ ರಾಕ್ಷಸಾಸ್ತಥಾ ।**
**ಪೀಡಯಂತಿ ನರಂ ಪಶ್ಚಾತ್ಪೀಡಿತಂ ಪೂರ್ವಕರ್ಮಣಾ ॥ ೫೨ ॥**

---

ಕಂಡುಹಿಡಿಯುತ್ತವೆ. ಆ ಕರ್ಮಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಎಷ್ಟೇ ಕಾಲವಾದರೂ ಅನುಭವಿಸಿದ ಹೊರತು ಆ ಕರ್ಮಗಳಿಗೆ, ನಾಶವೇ ಇಲ್ಲ. ಪೂರ್ವ ಜನ್ಮದ ಬಂಧನರೂಪವಾದ ಕರ್ಮವನ್ನು ಯಾರುತಾನೇ ಬೇರೆಮಾಡಬಲ್ಲರು?

೪೯. ಆ ಕರ್ಮವು ಓಡಿಹೋಗುತ್ತಿದ್ದರೂ ಜೊತೆಯಲ್ಲಿ ಬಿಡದೇ ಓಡಿ ಬರುತ್ತದೆ. ಮಲಗಿರುವವನನ್ನು ಅನುಸರಿಸಿ ಮಲಗಿಯೂ ಇರುತ್ತದೆ.

೫೦. ನಿಂತಿರುವವನನ್ನು ಅನುಸರಿಸುತ್ತದೆ. ಹೋಗುವವನನ್ನು ಹಿಂಬಾಲಿಸುತ್ತದೆ. ಕೆಲಸಮಾಡುವವನನ್ನು ಕೆಲಸಮಾಡುವಂತೆಯೇ ಅನುಸರಿಸುತ್ತದೆ. ಅಂತೂ ಕರ್ಮವು ನೆರಳಿನಂತೆ ಬಿಡದೆ ಅನುಸರಿಸುತ್ತದೆ.

೫೧. ಬಿಸಿಲು ನೆರಳುಗಳು ಹೇಗೆ ಸೇರಿಕೊಂಡೇ ಇವೆಯೋ ಹಾಗೆ ಕರ್ಮವೂ ಅದನ್ನು ಮಾಡಿರುವವನನ್ನು ಪರಸ್ಪರ ಸಂಬಂಧಿಸಿಕೊಂಡಿರುತ್ತದೆ.

೫೨. ಗ್ರಹಗಳು, ರೋಗಗಳು, ವಿಷ, ಹಾವು, ಡಾಕಿನೀ, ರಾಕ್ಷಸರು ಮೊದಲು ಕರ್ಮದಿಂದ ಪೀಡಿಸಲ್ಪಟ್ಟವನನ್ನು ಆ ಮೇಲೆ ತಾವೂ ಪೀಡಿಸುತ್ತವೆ.

**ಯೇನ ಯತ್ರೋಪಭೋಕ್ತವ್ಯಂ ಸುಖಂ ವಾ ದುಃಖಮೇವ ಚ ।**
**ಸ ತತ್ರ ಬದ್ಧ್ವಾ ಬಂಧೇನ ಬಲಾದ್ದೈವೇನ ನೀಯತೇ ॥ ೩೩ ॥**

**ದೈವಂ ಪ್ರಾಹುರ್ಹಿ ಭೂತಾನಾಂ ಸುಖದುಃಖೋಪಪಾದನೇ ।**
**ಅನ್ಯತ್ರ ಸಂಚಿತಂ ಕರ್ಮ ಜಾಗ್ರತಸ್ಸ್ವಪತೋಽಪಿ ವಾ ॥ ೩೪ ॥**

**ಅನ್ಯಥಾ ಮುಚ್ಯತೇ ದೈವಾದ್ಬಂಧಮೇವಂ ಜಿಘಾಂಸತಿ ।**
**ಶಸ್ತ್ರಾಗ್ನಿವಿಷದುರ್ಗೇಭ್ಯೋ ರಕ್ಷಿತವ್ಯಂ ಚ ರಕ್ಷತಿ ॥ ೩೫ ॥**

**ಅರಕ್ಷಿತಂ ಭವೇತ್ಸತ್ಯಂ ದೈವಂ ತಮೇವ ರಕ್ಷತಿ ।**
**ದೈವೇನ ನಾಶಿತಂ ಯತ್ತು ತಸ್ಯ ರಕ್ಷಾ ನ ದೃಶ್ಯತೇ ॥ ೩೬ ॥**

**ಯಥಾ ಪೃಥಿವ್ಯಾಂ ಬೀಜಾನಿ ಉಪ್ತಾನಿ ಚ ಧನಾನಿ ಚ ।**
**ತಥೈವಾತ್ಮನಿ ಕರ್ಮಾಣಿ ತಿಷ್ಠಂತಿ ಪ್ರಭವಂತಿ ಚ ॥ ೩೭ ॥**

---

೩೩. ಯಾವನಾಗಲಿ ಸುಖದುಃಖಗಳನ್ನು ಎಲ್ಲಿ ಅನುಭವಿಸಬೇಕೋ ಅಲ್ಲಿಗೆ ಆ ಕರ್ಮವು ಅವನನ್ನು ಕಟ್ಟಿಹಾಕಿ ಕರೆದೊಯ್ಯುತ್ತದೆ.

೩೪. ಬುದ್ಧಿ ಇದ್ದಾಗಲಿ, ಇಲ್ಲದಿದ್ದುದರಿಂದಾಗಲಿ, ಪೂರ್ವದಲ್ಲಿ ಮಾಡಿದ ಕರ್ಮವು ಅನುಸರಿಸಿ ಬಂದೇ ಬರುತ್ತದೆ. ಆದರೆ ಸುಖದುಃಖಗಳನ್ನು ಕೊಡುವುದು ದೈವವೆಂದು ಹೇಳುತ್ತಾರೆ.

೩೫. ಬಂಧವು ಹೋದರೆ ಆಗ ದೈವವು ನಾಶಮಾಡಿತೆಂದೆನ್ನುತ್ತಾರೆ. ದುಃಖ ಕೊಡುವುದೂ ಕರ್ಮವು. ಶಸ್ತ್ರ, ಅಗ್ನಿ, ವಿಷ, ದುರ್ಗಗಳಿಂದ ಕಾಪಾಡುವುದೂ ಆ ಕರ್ಮವೇ.

೩೬. ಆದರೆ ನಾವು ಸತ್ಯವನ್ನು ಕಾಪಾಡದಿದ್ದರೂ ದೈವವು ಅದನ್ನು ಜೋಪಾನವಾಗಿಟ್ಟಿರುತ್ತದೆ. ದೈವವೇ ನಾಶಮಾಡಿದರೆ ಅದಕ್ಕೆ ರಕ್ಷಕರು ಬೇರಿಲ್ಲ.

೩೭. ಭೂಮಿಯಲ್ಲಿ ಬಿತ್ತಿದ ಬೀಜವೂ, ಜನರಿಗೆ ಕೊಟ್ಟ ಹಣವೂ, ಹೇಗೆ ಹುಟ್ಟಿ ವೃದ್ಧಿಹೊಂದುತ್ತಿವೆಯೋ ಹಾಗೆ ಆತ್ಮನಲ್ಲಿ ಬಿತ್ತಿದ ಕರ್ಮಗಳು ಅವನಲ್ಲೇ ಹುಟ್ಟಿ ಬೆಳೆಯುತ್ತವೆ.

ತೈಲಕ್ಷಯೇ ಯಥಾ ದೀಪೋ ನಿರ್ವಾಣಮಧಿಗಚ್ಛತಿ ।
ಕರ್ಮಕ್ಷಯಾತ್ತಥಾ ಜಂತುಃ ಶರೀರಾನ್ನಾಶಮೃಚ್ಛತಿ ॥ ೫೮ ॥

ಕರ್ಮಕ್ಷಯಾತ್ತಥಾ ಮೃತ್ಯುಸ್ತತ್ತ್ವವಿದ್ಭಿರುದಾಹೃತಃ ।
ವಿವಿಧಾಃ ಪ್ರಾಣಿನಾಮಸ್ಯ ಸ್ಮೃತಾ ರೋಗಾಶ್ಚ ಹೇತವಃ ॥ ೫೯ ॥

ತಥಾ ಮಮ ವಿಪಾಕೋಽಯಂ ಪೂರ್ವಂ ಕೃತಸ್ಯ ನಾನ್ಯಥಾ ।
ಸಂಪ್ರಾಪ್ತೋ ನಾತ್ರ ಸಂದೇಹಃ ಸ್ತ್ರೀರೂಪೋ ದೈವಸಂಜ್ಞಕಃ ॥ ೬೦ ॥

ಮಮ ಗೇಹೇ ಸಮಾಯಾತಾ ನಾಟಕಾ ನಟನರ್ತಕಾಃ ।
ತೇಷಾಂ ಸಂಗಪ್ರಸಂಗೇನ ಜರಾ ಕಾಯಂ ಸಮಾಶ್ರಿತಾ ॥ ೬೧ ॥

ಸರ್ವಂ ಕರ್ಮಕೃತಂ ಮನ್ಯೇ ಯನ್ಮೇ ಸಂಭಾವಿತಂ ಧ್ರುವಂ ।
ತಸ್ಮಾತ್ಕರ್ಮ ಪ್ರಧಾನಂ ಚ ಉಪಾಯಾಶ್ಚ ನಿರರ್ಥಕಾಃ ॥ ೬೨ ॥

---

೫೮. ಎಣ್ಣೆಯು ಮುಗಿದುಹೋದರೆ ದೀಪವಾರುವಂತೆ, ಕರ್ಮಕ್ಷಯವಾದರೆ ಶರೀರದಿಂದ ನಾಶವನ್ನು ಅಪೇಕ್ಷಿಸುತ್ತಾನೆ. ಎಂದರೆ ಸಾಯುತ್ತಾನೆ.

೫೯. ಕರ್ಮಕ್ಷಯವಾದರೆ ಮೃತ್ಯುಬರುತ್ತದೆಂದು ತತ್ತ್ವಬಲ್ಲವರು ಹೇಳುತ್ತಾರೆ. ರೋಗಾದಿಗಳು ಮರಣಕ್ಕೆ ಕಾರಣಮಾತ್ರ.

೬೦. ಹಾಗೆಯೇ ನಾನು ಹಿಂದೆ ಮಾಡಿದ ಪಾಪದ ಫಲವಿದು. ಕರ್ಮವೇ ಹೆಂಗಸಿನ ರೂಪದಿಂದ ನನ್ನನ್ನು ಆವರಿಸಿರುವುದು.

೬೧. ಪೂರ್ವದಲ್ಲಿ ನನ್ನ ಮನೆಗೆ ನಟರು ಆಟವಾಡಲು ಬಂದು ಆಡಿದರು. ಅವರ ಸಹವಾಸದಿಂದ ಜರೆಯು (ಮುಪ್ಪು) ನನ್ನ ದೇಹವನ್ನು ಪ್ರವೇಶಿಸಿತು.

೬೨. ನನ್ನಲ್ಲಿ ಬಂದಿರುವುದೆಲ್ಲ ಪೂರ್ವ ಕರ್ಮಕೃತವೇ ಹೊರತು ಬೇರೆಯಲ್ಲ! ಆದ್ದರಿಂದ ಕರ್ಮವೇ ಮುಖ್ಯವು. ಉಪಾಯಗಳು ಉಪಯೋಗವಿಲ್ಲ.

ಪೂರ್ವಂ ವೈ ದೇವರಾಜೇನ ಮದರ್ಥೇ ದೂತ ಉತ್ತಮಃ ।
ಮಾತಲಿಃ ಪ್ರೇಷಿತಃ ಪುಣ್ಯೋ ನ ಕೃತಂ ತಸ್ಯ ತದ್ವಚಃ ॥ ೬೩ ॥

ತಸ್ಯ ಕರ್ಮವಿಪಾಕೋಽಯಂ ದೃಶ್ಯತೇ ಸಂಪ್ರತಂ ಮಮ ।
ಇತಿ ಚಿಂತಾಪರೋ ಭೂತ್ವಾ ದುಃಖೇನ ಮಹತಾನ್ವಿತಃ ॥ ೬೪ ॥

ಯದಾಸ್ಯಾ ಹಿ ವಚಃ ಪ್ರೀತ್ಯಾ ನ ಕರೋಮಿ ಚ ಸರ್ವಥಾ ।
ಸತ್ಯಧರ್ಮಾವುಭಾವೇತೌ ಯಾಸ್ಯತಸ್ತೌ ನ ಸಂಶಯಃ ॥ ೬೫ ॥

ಸದೃಶಂ ಚ ಸಮಾಯಾತಂ ಯದ್ದೃಷ್ಟಂ ಮಮ ಕರ್ಮಣಾ ।
ಭವಿಸ್ಯತಿ ನ ಸಂದೇಹೋ ದೈವೋ ಹಿ ದುರತಿಕ್ರಮಃ ॥ ೬೬ ॥

ಏವಂ ಚಿಂತಾಪರೋ ಭೂತ್ವಾ ಯಯಾತಿಃ ಪೃಥಿವೀಪತಿಃ ।
ಕೃಷ್ಣಂ ಕ್ಲೇಶಾಪಹಂ ದೇವಂ ಜಗಾಮ ಶರಣಂ ಹರಿಂ ॥ ೬೭ ॥

---

೬೩. ಮೊದಲೇ ನನಗೋಸ್ಕರ ದೇವೇಂದ್ರನು ಮಾತಲಿಯನ್ನು ಕಳುಹಿಸಿದ್ದನು. ಆಗ ನಾನು ಅವನ ಮಾತನ್ನು ನಡೆಸಲಿಲ್ಲ.

೬೪. ಅದರ ಕರ್ಮದ ಫಲವೇ ಈಗ ಕಾಣುತ್ತಿದೆ. ಎಂಬುದಾಗಿ ಯೋಚಿಸಿ ಬಹು ದುಃಖಪಡುತ್ತಾ,

೬೫. ಈಕೆಯ ಮಾತಿನಂತೆ ನಡೆಯದಿದ್ದರೆ, ಆಗ ಸತ್ಯ, ಧರ್ಮಗಳೆರಡೂ ನಾಶವಾಗುತ್ತದೆ. ಆಡಿದ ಮಾತಿನಂತೆ ನಡಿಯಲೇಬೇಕು. ಸಂಶಯವಿಲ್ಲ.

೬೬. ಇದೆಲ್ಲವೂ ನನ್ನ ಕರ್ಮಕ್ಕೆ ಅನುಸಾರವಾಗಿಯೇ ಬಂದಿದೆ. ಅದರಂತೆಯೇ ಆಗುತ್ತದೆ ಸಂಶಯವಿಲ್ಲ. ದೈವವನ್ನು ಮೀರಲಾಗುವುದಿಲ್ಲ.

೬೭. ಯಯಾತಿಯು ಹೀಗೆ ಯೋಚಿಸುತ್ತ ಕ್ಲೇಶನಾಶಕವಾದ ಆ ದೇವದೇವನಾದ ಹರಿಯನ್ನು ಶರಣು ಹೊಂದಿದನು

**ಧ್ಯಾತ್ವಾ ನತ್ವಾ ತತಃ ಸ್ತುತ್ವಾ ಮನಸಾ ಮಧುಸೂದನಂ ।**
**ತ್ವಾಮಹಂ ಶರಣಂ ಪ್ರಾಪ್ತಸ್ತ್ರಾಹಿ ಮಾಂ ಕಮಲಾಪ್ರಿಯ ॥ ೬೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಯಯಾತಿಚರಿತೇ ಏಕಾಶೀತಿತಮೋಽಧ್ಯಾಯಃ**



---

೬೮. ಆ ಕಷ್ಣನನ್ನು ಮನಸ್ಸಿನಲ್ಲಿಯೇ ಧ್ಯಾನಿಸಿ, ನಮಸ್ಕರಿಸಿ, ಸ್ತೋತ್ರ ಮಾಡಿ, ಎಲೈ ಮಧುಸೂದನನೇ, ನಾನು ನಿನ್ನನ್ನೇ ಶರಣುಹೊಂದಿದ್ದೇನೆ. ಎಲೈ ಲಕ್ಷ್ಮೀನಾಥನೇ, ನನ್ನನ್ನು ಕಾಪಾಡು ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ದ್ವ್ಯಶೀತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ಏವಂ ಚಿಂತಯತೇ ಯಾವದ್ರಾಜಾ ಪರಮಧಾರ್ಮಿಕಃ ।
ತಾವತ್ಪ್ರೋವಾಚ ಸಾ ದೇವೀ ರತಿಪುತ್ರೀ ವರಾನನಾ ॥ ೧ ॥

ಕಿಂ ತ್ವಂ ಚಿಂತಯಸೇ ರಾಜಂಸ್ತಮುದ್ದ್ಯೈವ ಮಹಾಮತೇ ।
ಪ್ರಾಯೇಣಾಪಿ ಸ್ತ್ರಿಯಸ್ಸರ್ವಾಶ್ಚಪಲಾಃ ಸ್ಯುರ್ನ ಸಂಶಯಃ ॥ ೨ ॥

ನಾಹಂ ಚಾಪಲ್ಯಭಾವೇನ ತ್ವಾಮೇವಂ ವಿನಿಯೋಜಯೇ ।
ನಾಹಂ ಹಿ ಕಾರಯಾಮ್ಯದ್ಯ ಭವತ್ಪಾರ್ಶ್ವಂ ನರೋತ್ತಮ ॥ ೩ ॥

ಅನ್ಯಾಃ ಸ್ತ್ರಿಯೋ ಯಥಾ ಲೋಕೇ ಚಾಪಲ್ಯಾಚ್ಚೋದಯಂತಿ ಚ ।
ಅಕಾರ್ಯಂ ರಾಜರಾಜೇಂದ್ರ ಮೋಹಾಲ್ಲೋಭಾಚ್ಚ ಲಂಪಟಾಃ ॥ ೪ ॥

---

## ಎಂಭತ್ತೆರಡನೆಯ ಅಧ್ಯಾಯವು

೧-೨. ಸುಕರ್ಮನು ಹೇಳಿದನು:—ಹೀಗೆ ರಾಜನು ಯೋಚಿಸುತ್ತಿರುವಷ್ಟರಲ್ಲಿ ಆ ರತಿಯ ಮಗಳು, ಎಲೈ ರಾಜನೇ, ನೀನು ಈಗ ಏನನ್ನು ಯೋಚಿಸುತ್ತಿದ್ದೀಯೆ? ಹೆಂಗಸರು ಸಾಧಾರಣವಾಗಿ ಚಪಲಚಿತ್ತರು, ಸಂಶಯವಿಲ್ಲ.

೩. ನಾನು ಚಪಲದಿಂದ ನಿನಗೆ ಈ ರೀತಿ ಹೇಳುತ್ತಿಲ್ಲ. ನಾನು ನಿನ್ನ ಪಾರ್ಶ್ವದಲ್ಲಿದ್ದುಕೊಂಡು ಕಾಮಕ್ಕೋಸ್ಕರವಾಗಿ ವಿನೋದಕ್ಕಾಗಿ ಹೇಳುವವಳಲ್ಲ.

೪. ಬೇರೆ ಸ್ತ್ರೀಯರು ಲೋಕದಲ್ಲಿ ಅಕಾರ್ಯದಲ್ಲಿ ಪ್ರೇರಿಸುವಂತೆ ನಾನು ಮೋಹದಿಂದಾಗಲಿ, ಆಸೆಯಿಂದಾಗಲಿ, ಆಸಕ್ತಳಾಗಿ ಹೀಗೆ ಹೇಳುತ್ತಿಲ್ಲ.

ಲೋಕಾನಾಂ ದರ್ಶನಾಯೈವ ಜಾತಾ ಶ್ರದ್ಧಾ ಮನೋರಸಿ ।
ದೇವಾನಾಂ ದರ್ಶನಂ ಪುಣ್ಯಂ ದುರ್ಲಭಂ ಹಿ ಸುಮಾನುಷೈಃ ॥ ೫ ॥

ತೇಷಾಂ ಚ ದರ್ಶನಂ ರಾಜನ್ ಕಾರಯಾಮಿ ವದಸ್ವ ಮೆ ।
ದೋಷಂಪಾಪಕರಂ ಯತ್ತು ಮತ್ಸಗಾದಿಹ ಯದ್ಭವೇತ್ ॥ ೬ ॥

ಕಥಂ ಚಿಂತಯಸೇ ದುಃಖಂ ಯಥಾನ್ಯಃ ಪ್ರಾಕೃತೋ ಜನಃ ।
ಮಹಾಭಯಾದ್ಯಥಾ ಭೀತೋ ಮೋಹಗರ್ಭೇ ಗತೋ ಯಥಾ ॥ ೭ ॥

ತ್ಯಜ ಚಿಂತಾಂ ಮಹಾರಾಜ ಗಂತವ್ಯಂ ಹಿ ತ್ವಯಾ ದಿವಿ ।
ಯೇನೋದ್ದೇಶೇನ ದುಃಖಂ ತು ತನ್ನ ಕಾರ್ಯಂ ಮಯಾ ಕದಾ ॥ ೮ ॥

ಏವಮುಕ್ತಸ್ತಯಾ ರಾಜಾ ತಾಮುವಾಚ ವರಾಂಗನಾಂ ।
ಚಿಂತಿತಂ ಯನ್ಮಯಾ ದೇವಿ ತನ್ಮೇ ತ್ವಂ ಶೃಣು ಸಾಂಪ್ರತಂ ॥ ೯ ॥

---

೫. ಲೋಕಗಳನ್ನು ನೋಡಬೇಕೆಂಬ ಆಸೆಯು ನನ್ನ ಮನಸ್ಸಿನಲ್ಲಿ ಹುಟ್ಟಿತು. ಪುಣ್ಯಕರವಾದ ದೇವದರ್ಶನವು ಮನುಷ್ಯರಿಗೆ ದುರ್ಲಭವಲ್ಲವೇ?

೬. ಆ ದೇವತೆಗಳ ದರ್ಶನವನ್ನು ಮಾಡುತ್ತೇನೆ. ಅದು ದೋಷಪಾಪಹರವಾದುದು. ನನ್ನ ಸಹವಾಸದಿಂದ ನಿನಗೆ ಬಂದಿರುವ ಪಾಪವೆಲ್ಲವೂ ದೇವದರ್ಶನದಿಂದ ಹೋಗುತ್ತದೆ.

೭. ಮೂಢಜನರಂತೆ ಕೆಟ್ಟದ್ದನ್ನು ಏಕೆ ಯೋಚಿಸುತ್ತಿರುವಿ? ಮೋಹದಲ್ಲಿ ಬಿದ್ದಿರುವ ಜನವು ಭಯಪಡುವಂತೆ ಕೆಟ್ಟದ್ದನ್ನೇ ಯೋಚಿಸುತ್ತಿರುವೆಯಲ್ಲ?

೮. ನೀನು ಸ್ವರ್ಗಕ್ಕೆ ತಾನೇ ಹೋಗುತ್ತೀಯೆ. ಅದಕ್ಕೆ ಯೋಚನೆ ಏತಕ್ಕೆ? ದುಃಖವುಂಟಾಗುವ ಕೆಲಸವನ್ನು ನಾನು ಯಾವಾಗಲೂ ಮಾಡುವುದಿಲ್ಲ.

೯. ಆಕೆಯು ಹೀಗೆ ಹೇಳಲು, ತಾನು ಅವಳಿಗೆ ಹೇಳಿದನು:—ಎಲೈ ದೇವಿಯೇ, ನಾನು ಯೋಚಿಸಿದುದರ ಕಾರಣವನ್ನು ಹೇಳುವೆನು, ಕೇಳು.

ಮಾನಭಂಗೋ ಮಯಾ ದೃಷ್ಟೋ ಮಯ್ಯೈವ ಚಾತ್ಮನಃ ಪ್ರಿಯೇ ।
ಮಯಿ ಸ್ವರ್ಗಂ ಗತೇ ಕಾಂತೇ ಪ್ರಜಾ ದೀನಾ ಭವಿಷ್ಯತಿ ॥ ೧೦ ॥

ಗ್ರಾಸಯಿಷ್ಯತಿ ದುಷ್ಟಾತ್ಮಾ ಯಮಸ್ತು ವ್ಯಾಧಿಭಿಃ ಪ್ರಜಾಂ ।
ತ್ವಯಾ ಸಾರ್ಧಂ ಪ್ರಯಾಸ್ಯಾಮಿ ಸ್ವರ್ಲೋಕಂ ಚ ವರಾನನೇ ॥ ೧೧ ॥

ಏವಮಾಭಾಷ್ಯ ತಾಂ ರಾಜಾ ಸಮಾಹೂಯ ಸುತೋತ್ತಮಂ ।
ಪುರುಂ ತಂ ಸರ್ವಧರ್ಮಜ್ಞಂ ಜರಾಯುಕ್ತಂ ಮಹಾಮತಿಂ ॥ ೧೨ ॥

ಏಹ್ಯೇಹಿ ಸರ್ವಧರ್ಮಜ್ಞ ಧರ್ಮ ಜಾನಾಸಿ ನಿಶ್ಚಿತಂ ।
ಮಮಾಜ್ಞಯಾ ಹಿ ಧರ್ಮಾತ್ಮನ್ಧರ್ಮಃ ಸಂಪಾಲಿತಸ್ತ್ವಯಾ ॥ ೧೩ ॥

ಜರಾ ಮೇ ದೀಯತಾಂ ತಾತ ತಾರುಣ್ಯಂ ಗೃಹ್ಯ ಚಾತ್ಮನಃ ॥ ೧೪ ॥

ರಾಜ್ಯಂ ಕುರು ಮಮೇದಂ ತ್ವಂ ಸಕೋಶಬಲವಾಹನಂ ।
ಆಸಮುದ್ರಂ ಪ್ರಭುಂಕ್ಷ್ವ ತ್ವಂ ವಸುಪೂರ್ಣಾಂ ವಸುಂಧರಾಂ ॥ ೧೫ ॥

---

೧೦. ನನಗೆ ನಾನೇ ಅವಮಾನಮಾಡಿಕೊಳ್ಳುವ ರೀತಿಯಾಯಿತೆಂದು ಯೋಚಿಸುತ್ತಿದ್ದೇನೆ. ಅಲ್ಲದೆ ನಾನು ಸ್ವರ್ಗಕ್ಕೆ ಹೋದರೆ ಪ್ರಜೆಗಳು ರಕ್ಷಕರಿಲ್ಲದೆ ಅನಾಥರಾಗುತ್ತಾರೆ.

೧೧. ನಾನು ಹೋದರೆ ಯಮನು ರೋಗಗಳಿಂದ ಪ್ರಜೆಗಳನ್ನು ಪೀಡಿಸುತ್ತಾನೆ. ಇದಕ್ಕಾಗಿ ನಾನು ಯೋಚಿಸುತ್ತಿದ್ದೆನು. ಆದರೂ ಈಗ ನಾನು ನಿನ್ನ ಜೊತೆಯಲ್ಲಿ ಸ್ವರ್ಗಕ್ಕೆ ಬರುತ್ತೇನೆ.

೧೨. ಆಕೆಗೆ ಹೀಗೆ ಹೇಳಿ, ಧರ್ಮಜ್ಞನೂ, ಮುದುಕನೂ ಆದ ತನ್ನ ಮಗ ಪುರುವನ್ನು ಕರೆದು,

೧೩-೧೪. ಎಲೈ ಪುರುವೇ, ನೀನು ಸರ್ವಧರ್ಮಗಳನ್ನೂ ಬಲ್ಲವನಾಗಿದ್ದೀಯೆ. ನನ್ನ ಅಪ್ಪಣೆಯಂತೆ ಧರ್ಮವನ್ನು ಪಾಲಿಸಿದ್ದೀಯೆ. ನನಗೆ ಮುಪ್ಪನ್ನು ಹಿಂದಕ್ಕೆ ಕೊಡು. ನಿನ್ನ ಯೌವನವನ್ನು ನೀನು ತೆಗೆದುಕೋ ಎಂದನು.

೧೫. ಕೋಶ, ಬಲ, ವಾಹನ, ಹಣಗಳಿಂದ ಕೂಡಿ ಸಮುದ್ರಪರ್ಯಂತವಾಗಿರುವ ನನ್ನ ರಾಜ್ಯವನ್ನು ನೀನು ಅನುಭವಿಸು.

**ಮಯಾ ದತ್ತಾಂ ಮಹಾಭಾಗ ಸಗ್ರಾಮವನಪತ್ತನಾಂ ।**
**ಪ್ರಜಾನಾಂ ಪಾಲನಂ ಪುಣ್ಯಂ ಕರ್ತವ್ಯಂ ಸರ್ವದಾ ತ್ವಯಾ ॥ ೧೬ ॥**

**ದುಷ್ಕೃತಾಂ ಶಾಸನಂ ನಿತ್ಯಂ ಸಾಧೂನಾಂ ಪ್ರತಿಪಾಲನಂ ।**
**ಕರ್ತವ್ಯಂ ಚ ತ್ವಯಾ ತಾತ ಧರ್ಮಶಾಸ್ತ್ರಪ್ರಮಾಣತಃ ॥ ೧೭ ॥**

**ಬ್ರಹ್ಮಣ್ಯೇನ ಪ್ರಭಾವೇನ ವಿಧಿದೃಷ್ಟೇನ ಕರ್ಮಣಾ ।**
**ಭಕ್ತಾನಾಂ ಪಾಲನಂ ಕಾರ್ಯಂ ಯಸ್ಮಾತ್ಪೂಜ್ಯಾ ಜಗತ್ತ್ರಯೇ ॥ ೧೮ ॥**

**ಪಂಚಮೇ ಸಪ್ತಮೇ ಘಸ್ರೇ ಕೋಶಂ ಪಶ್ಯ ವಿಪಶ್ಚಿತ ।**
**ಕಾರ್ಯೈಷಾಂ ನಿತ್ಯದಾ ಪೂಜಾ ಪ್ರಸಾದ್ಯ ಧನಭೋಜನೈಃ ॥ ೧೯ ॥**

**ಚಾರಚಕ್ಷುರ್ಭವಸ್ವ ತ್ವಂ ನಿತ್ಯಂ ದಾನರತೋ ಭವ ।**
**ಮಾ ಭವ ತ್ವಂ ರತಃ ಶತ್ರೌ ಸದಾ ಗೋಪ್ಯಾಸ್ತು ಪಂಡಿತೈಃ ॥ ೨೦ ॥**

---

೧೬. ಗ್ರಾಮ ಪತ್ತನಗಳಿಂದ ಕೂಡಿದ ಈ ರಾಜ್ಯವೆಲ್ಲವನ್ನೂ ನಿನಗೆ ಕೊಟ್ಟಿದ್ದೇನೆ. ಯಾವಾಗಲೂ ಪ್ರಜಾಪಾಲನೆಯನ್ನು ಮಾಡು.

೧೭. ದುಷ್ಟರ ಶಿಕ್ಷೆಯನ್ನೂ, ಸಾಧುಗಳ ಪಾಲನವನ್ನೂ, ಧರ್ಮಶಾಸ್ತ್ರದ ರೀತಿಯಿಂದ ಮಾಡು.

೧೮. ಧರ್ಮಮಾರ್ಗವನ್ನನುಸರಿಸಿ, ಶಾಸ್ತ್ರೋಕ್ತವಾದ ರೀತಿಯಿಂದ, ಭಕ್ತರನ್ನೂ, ಪ್ರಜೆಗಳನ್ನು ಪಾಲಿಸು.

೧೯. ಐದು ದಿನಕ್ಕೆ ಅಥವಾ ಏಳು ದಿನಕ್ಕೆ ಒಂದುಬಾರಿ ಹೋಗಿ ಕೋಶವನ್ನು ನೋಡು. ಅವರಿಗೆ ಊಟಉಪಚಾರಗಳಿಂದ ಗೌರವವನ್ನು ನಿತ್ಯವೂ ತೋರಿಸು.

೨೦. ಚಾರರೇ ನಿನಗೆ ಕಣ್ಣುಗಳು, ಎಂದರೆ ಅವರಿಂದ ಸಕಲವನ್ನೂ ತಿಳಿದು ಕರ್ತವ್ಯವನ್ನು ಮಾಡು. ನಿತ್ಯವೂ ದಾನಮಾಡು. ಶತ್ರುವಿನಲ್ಲಿ ಸ್ನೇಹ ಬೆಳೆಸಬೇಡ ಪಂಡಿತರನ್ನು ಯಾವಾಗಲೂ ಕಾಪಾಡು.

**ನಿಯತಾತ್ಮಾ ಭವಸ್ವ ತ್ವಂ ಮಾ ಗಚ್ಛ ಮೃಗಯಾಂ ಸುತ ।**
**ವಿಶ್ವಾಸಸ್ತು ತ್ವಯಾ ತ್ಯಾಜ್ಯಃ ಸ್ತ್ರೀಷು ಕೋಶೇ ಬಲೇ ರಿಪೌ ॥ ೨೧ ॥**

**ಪಾತ್ರಾಣಾಂ ಚೈವ ಸರ್ವೇಷಾಂ ಬಲಾನಾಂ ಸಂಗ್ರಹಂ ಕುರು ।**
**ಯಜ್ಞೈರ್ಯಜ ಹೃಷಿಕೇಶಂ ಪುಣ್ಯಾತ್ಮಾ ಭವ ಸರ್ವದಾ ॥ ೨೨ ॥**

**ಪ್ರಜಾನಾಂ ವಾಂಛಿತಂ ಸರ್ವಮರ್ಪಯಸ್ವ ದಿನೇ ದಿನೇ ।**
**ಪ್ರಜಾಸೌಖ್ಯಂ ಪ್ರಕರ್ತವ್ಯಂ ಪ್ರಜಾಂ ಪೋಷಯ ಪುತ್ರಕ ॥ ೨೩ ॥**

**ಸ್ವೀಯವಂಶಃ ಪ್ರಕರ್ತವ್ಯಃ ಪರದಾರೇಷು ಮಾ ಕೃಥಾಃ ।**
**ಮತಿಂ ದುಷ್ಟಾಂ ಪರಸ್ವೇಷು ರಿಪೂಣಾಂ ಬಲಮೇವ ಚ ॥ ೨೪ ॥**

**ಚಿಂತಯಸ್ವ ಸದಾ ವತ್ಸ ಮದ್ವಾಕ್ಯೇ ನಿರತೋ ಭವ ।**
**ವೇದಾನಾಂ ಹಿ ಸದಾ ಚಿಂತಾ ಶಾಸ್ತ್ರಾಣಾಂ ಹಿ ಚ ಸರ್ವದಾ ।**
**ಕುರುಷ್ವೈವಂ ಸದಾ ವತ್ಸ ಶಾಸ್ತ್ರಾಭ್ಯಾಸರತೋ ಭವ ॥ ೨೫ ॥**

---

೨೧. ಮನಸ್ಸನ್ನು ಬಿಗಿಹಿಡಿದಿರು. ಬೇಟೆಗೆ ಹೋಗಬೇಡ. ಹೆಂಗಸರು, ಕೋಶ, ಸೈನ್ಯ, ಶತ್ರುಗಳಲ್ಲಿ ವಿಶ್ವಾಸವಿಡಬೇಡ.

೨೨. ಪಾತ್ರೆ, ಸೇನೆಗಳ ಸಂಗ್ರಹವನ್ನು ಯಾವಾಗಲೂ ಮಾಡು. ವಿಷ್ಣುವನ್ನು ಯಾಗದಿಂದ ತೃಪ್ತಿಪಡಿಸು. ಯಾವಾಗಲೂ ಪುಣ್ಯಾತ್ಮನಾಗಿರು.

೨೩. ಪ್ರಜೆಗಳಿಗೆ ಬೇಕಾದುದನ್ನು ಪ್ರತಿದಿನವೂ ಮಾಡು. ಪ್ರಜೆಗಳಿಗೆ ಸೌಖ್ಯವನ್ನು ಮಾಡುತ್ತ ಪ್ರಜೆಗಳನ್ನು ಕಾಪಾಡು,

೨೪. ನಿನ್ನ ವಂಶವನ್ನು ವೃದ್ಧಿಪಡಿಸಿಕೋ. ಪರರ ಹೆಂಡತಿಯಲ್ಲಿ ರಮಿಸಬೇಡ. ಪರರ ಧನದಲ್ಲಿ ಆಸೆಪಡಬೇಡ. ಶತ್ರುಗಳ ಬಲಾಬಲಗಳನ್ನು ಯೋಚಿಸು. ನನ್ನ ಮಾತಿನಲ್ಲಿ ಗಮನವಿಡು.

೨೫. ವೇದಶಾಸ್ತ್ರಗಳಲ್ಲಿ ಯಾವಾಗಲೂ ಮನಸ್ಸಿಟ್ಟು ಅಧ್ಯಯನಮಾಡು. ಯಾವಾಗಲೂ ಸನ್ಮಾರ್ಗದಲ್ಲಿಯೇ ಆಚರಿಸು.

**ಸಂತುಷ್ಟಸ್ಸರ್ವದಾ ವತ್ಸ ಸ್ವಶಯ್ಯಾನಿರತೋ ಭವ ।**
**ಗಜಾಭ್ಯಾಸಸ್ತು ಕರ್ತವ್ಯಃ ಸ್ಯಂದನಸ್ಯ ಚ ಸರ್ವದಾ ॥ ೨೬ ॥**

**ಏವಮಾದಿಶ್ಯ ತಂ ಪುತ್ರಮಾಶೀರ್ಭಿರಭಿನಂದ್ಯ ಚ ।**
**ಸ್ವಹಸ್ತೇನ ಪರಿಸ್ಥಾಪ್ಯ ಸ್ವಾಸನೇ ನೃಪಸತ್ತಮಃ ॥ ೨೭ ॥**

**ಸ್ವಾಂ ಜರಾಂ ತು ಸಮಾಶ್ರಿತ್ಯ ದತ್ವಾ ತಾರುಣ್ಯಮಸ್ಯ ಚ ।**
**ಗಂತು ಕಾಮಸ್ತದಾ ಸ್ವರ್ಗಂ ಯಯಾತಿಃ ಪೃಥಿವೀಪತಿಃ ॥ ೨೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಯಯಾತಿಚರಿತೇ ದ್ವ್ಯಶೀತಿತಮೋಽಧ್ಯಾಯಃ**



---

೨೬. ಯಾವಾಗಲೂ ಸಂತೋಷದಿಂದ ನಿನ್ನ ಹೆಂಡತಿಯಲ್ಲಿ ನಿರತನಾಗು. ಆನೆ ರಥಗಳಲ್ಲಿ ಕುಳಿತುಕೊಳ್ಳುವುದನ್ನು ಅಭ್ಯಾಸಮಾಡು.

೨೭. ಈ ರೀತಿ ಮಗನಿಗೆ ಬುದ್ಧಿಹೇಳಿ ಅವನನ್ನು ಆಶೀರ್ವದಿಸಿ, ತನ್ನ ಕೈಯಿಂದಲೇ ಅವನನ್ನು ಸಿಂಹಾಸನದಲ್ಲಿ ಸ್ಥಾಪಿಸಿದನು.

೨೮. ಯೌವನವನ್ನು ಪುರುವಿಗೆ ಕೊಟ್ಟು ತನ್ನ ಮುಪ್ಪನ್ನು ತಾನು ತೆಗೆದುಕೊಂಡು, ಆ ಯಯಾತಿಯು ಸ್ವರ್ಗಕ್ಕೆ ಹೊರಡಲು ಸಿದ್ಧನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ, ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ತ್ರ್ಯಶೀತಿತಮೋಽಧ್ಯಾಯಃ

॥ ಸುಕರ್ಮೋವಾಚ ॥

ಸಮಾಹೂಯ ಪ್ರಜಾಸ್ಸರ್ವಾ ದ್ವೀಪಾನಾಂ ವಸುಧಾಧಿಪಃ ।
ಹರ್ಷೇಣ ಮಹತಾವಿಷ್ಟ ಇದಂ ವಚನಮಬ್ರವೀತ್ ॥ ೧ ॥

ಇಂದ್ರಲೋಕಂ ಬ್ರಹ್ಮಲೋಕಂ ಶಿವಲೋಕಂ ತತಃ ಪರಂ ।
ವೈಷ್ಣವಂ ಸರ್ವಪಾಪಘ್ನಂ ಪ್ರಾಣಿನಾಂ ಗತಿದಾಯಕಂ ।
ವ್ರಜಾಮ್ಯಹಂ ನ ಸಂದೇಹೋ ಹ್ಯನಯಾ ಸಹ ಸತ್ತಮಾಃ ॥ ೨ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ಪ್ರಜಾ ಮಮ ।
ಸಕುಟುಂಬೈಃ ಸುಖೇನಾಪಿ ಸ್ಥಾತವ್ಯಮಾಜ್ಞಯೈವ ಹಿ ॥ ೩ ॥

---

## ಎಂಭತ್ತಮೂರನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು:—ದೇಶದ ಪ್ರಜೆಗಳನ್ನೂ ದ್ವೀಪದ ಪ್ರಜೆಗಳನ್ನೂ ಕರೆಸಿ ಯಯಾತಿಯು ಈ ಮಾತುಗಳನ್ನು ಹೇಳಿದನು.

೨. ನಾನು ಇವಳೊಡನೆ ಇಂದ್ರ, ಬ್ರಹ್ಮ, ಶಿವ, ವಿಷ್ಣುಗಳ ಲೋಕಕ್ಕೆ ಹೋಗುತ್ತೇನೆ, ಸಂದೇಹವಿಲ್ಲ.

೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೂ ತಮ್ಮ ತಮ್ಮ ಕರ್ಮಗಳನ್ನು ಮಾಡುತ್ತಾ ತಮ್ಮ ಮನೆಯವರೊಡನೆ ನನ್ನ ಆಜ್ಞೆಯನ್ನು ಪಾಲಿಸುತ್ತಿರಬೇಕು.

ಪುರುರೇಷ ಮಹಾಬಾಹುರ್ಭವತಾಂ ಪ್ರತಿಪಾಲಕಃ ।
ಸ್ಥಾಪಿತೋಽಸ್ತಿ ಮಯಾ ಲೋಕಾ ರಾಜಾಧೀರಸ್ಸದಂಡಕಃ ॥ ೪ ॥

ಏವಮುಕ್ತಾಸ್ತು ತಾಸ್ಸರ್ವಾಃ ಪ್ರಜಾ ರಾಜಾನಮಬ್ರವೀತ್ ।
ಶ್ರೂಯತೇ ಸರ್ವವೇದೇಷು ಪುರಾಣೇಷು ನೃಪೋತ್ತಮ ॥ ೫ ॥

ಧರ್ಮಮೇವ ಪರಿಖ್ಯಾತಂ ನ ದೃಷ್ಟಂ ಕೇನ ವೈ ಪುರಾ ।
ದೃಷ್ಟೋಽಸ್ಮಾಭಿರಸೌ ಧರ್ಮೋ ದಶಾಂಗಃ ಸತ್ಯವಲ್ಲಭಃ ॥ ೬ ॥

ಸೋಮವಂಶಸಮುತ್ಪನ್ನೋ ನಹುಷಸ್ಯ ಮಹಾಗೃಹೇ ।
ಹಸ್ತಪಾದಮುಖೈರ್ಯುಕ್ತಃ ಸರ್ವಾಚಾರಪ್ರಚಾರಕಃ ॥ ೭ ॥

ಜ್ಞಾನವಿಜ್ಞಾನಸಂಪನ್ನಃ ಪುಣ್ಯಾನಾಂ ಚ ಮಹಾನಿಧಿಃ ।
ಗುಣಾನಾಂ ಹಿ ಮಹಾರಾಜ ಆಧಾರಃ ಸತ್ಯಪಂಡಿತಃ ॥ ೮ ॥

ಕುರ್ವಂತಿ ಚ ಮಹಾಧರ್ಮಂ ಸತ್ಯವಂತೋ ಮಹೌಜಸಃ ।
ನಾಧಿಕಂ ದೃಷ್ಟಮಸ್ಮಾಭಿರ್ಭವತಃ ಕಾಮರೂಪಿಣಃ ॥ ೯ ॥

---

೪. ಈ ಪುರುವು ಮಹಾಬಲಪರಾಕ್ರಮಿಯು. ನಿಮ್ಮಗಳನ್ನು ಪಾಲಿಸಲು ಇವನನ್ನು ಈ ರಾಜ್ಯದಲ್ಲಿ ಪಟ್ಟಕಟ್ಟಿದ್ದೇನೆ. ಎಂದನು.

೫. ಇದನ್ನು ಕೇಳಿದ ಪ್ರಜೆಗಳು ಹೀಗೆಂದರು :—ವೇದಪುರಾಣಗಳಲ್ಲೆಲ್ಲಾ ಧರ್ಮವೇ ಉತ್ತಮವೆಂದು ಹೇಳಿದೆ. ಇದು ಎಲ್ಲರಿಗೂ ಗೊತ್ತಿರುವ ವಿಷಯ.

೬–೭. ಆ ಧರ್ಮವು ಹತ್ತು ಅಂಗ ಅಥವಾ ಭಾಗಗಳಿಂದ ಕೂಡಿದ್ದರೆ ಸಂಪೂರ್ಣ ಧರ್ಮವೆನಿಸುವುದು. ದಶಾಂಗಗಳಿಂದ ಕೂಡಿದ ಅಂತಹ ಧರ್ಮವನ್ನು ನಹುಷ ಚಕ್ರವರ್ತಿಯ ಮನೆಯಲ್ಲಿ ನೋಡಿದೆವು.

೮. ಆ ಧರ್ಮವು ಜ್ಞಾನವಿಜ್ಞಾನಗಳಿಂದ ಕೂಡಿಯೂ ಪುಣ್ಯನಿಧಿಯಾದ ಗುಣಕ್ಕೆ ಆಧಾರವಾಗಿಯೂ ಸತ್ಯಸ್ವರೂಪಿಯಾದುದೂ ಆಗಿದ್ದಿತು.

೯. ಸತ್ಯವಂತರೂ ತೇಜಸ್ವಿಗಳೂ ಆದ ಎಷ್ಟೋ ಜನರು ದಾನವೇ ಮೊದಲಾದ ಧರ್ಮಗಳನ್ನು ಮಾಡುತ್ತಾರೆ. ಆದರೆ ಧರ್ಮಮಾಡುವ ವಿಚಾರದಲ್ಲಿ ನಿನಗಿಂತಲೂ ಹೆಚ್ಚಿನವನನ್ನು ನಾವು ನೋಡಲೇ ಇಲ್ಲ.

ಭವಂತಂ ಧರ್ಮಕರ್ತಾರಮೀದೃಶಂ ಸತ್ಯವಾದಿನಂ ।
ಕರ್ಮಣಾ ತ್ರಿವಿಧೇನಾಪಿ ವಯಂ ತ್ಯಕ್ತುಂ ನ ಶಕ್ನುಮಃ ॥ ೧೦ ॥

ಯತ್ರ ತ್ವಂ ತತ್ರ ಚ ವಯಂ ಸುಖಂ ವಾ ದುಃಖಮೇವ ವಾ ।
ನರಕೇಽಪಿ ಭವಾನ್ಯತ್ರ ವಯಂ ತತ್ರ ನ ಸಂಶಯಃ ॥ ೧೧ ॥

ಕಿಂ ದಾರೈರ್ಧನಭೋಗೈಶ್ಚ ಕಿಂ ಚೈವ ಜೀವಿತೇನ ಚ ।
ತ್ವಾಂ ವಿನಾಪಿ ಮಹಾರಾಜ ಕೇನ ನಾಸ್ತ್ಯತ್ರ ಕಾರಣಂ ।
ತ್ವಯೈವ ಸಹ ರಾಜೇಂದ್ರ ವಯಂ ಯಾಸ್ಯಾಮ ನಾನ್ಯಥಾ ॥ ೧೨ ॥

ಏವಂ ಶ್ರುತ್ವಾ ವಚಸ್ತಾಸಾಂ ಪ್ರಜಾನಾಂ ಪೃಥಿವೀಪತಿಃ ।
ಹರ್ಷೇಣ ಮಹತಾವಿಷ್ಟಃ ಪ್ರಜಾ ವಾಕ್ಯಮುವಾಚ ಹ ॥ ೧೩ ॥

ಆಗಚ್ಛಂತು ಮಯಾ ಸಾರ್ಧಂ ಸರ್ವೇ ಲೋಕಾ ಸ್ಸುಪುಣ್ಯಕಾಃ ।
ನೃಪೋ ರಥಂ ಸಮಾರುಹ್ಯ ತಯಾ ವೈ ಕಾಮಕನ್ಯಯಾ ॥ ೧೪ ॥

---

೧೦. ಮನೋವಾಕ್ಕಾಯಗಳಿಂದ ಸತ್ಯವಾದಿಯಾಗಿಯೂ, ಧರ್ಮಪ್ರವರ್ತಕನಾಗಿಯೂ ಇರುವ ನಿನ್ನನ್ನು ಬಿಟ್ಟಿರಲು ನಮಗೆ ಸಾಧ್ಯವಿಲ್ಲ.

೧೧. ನೀನೆಲ್ಲಿರುವೆಯೋ ಅಲ್ಲಿಯೇ ನಾವಿರುವೆವು. ದುಃಖವಾಗಲಿ ಸುಖವಾಗಲಿ ಅದನ್ನೇ ಅನುಭವಿಸುವೆವು. ನೀನು ನರಕದಲ್ಲಿದ್ದರೂ ನಾವು ಅಲ್ಲೇ ಇರುವೆವು. ಸಂಶಯವಿಲ್ಲ.

೧೨. ನೀನಿಲ್ಲದಿದ್ದರೆ ಹೆಂಡತಿ, ಧನ, ಭೋಗ ಜೀವಿತಗಳು ನಮಗೆ ಬೇಕಿಲ್ಲ. ನಾವೂ ನಿನ್ನೊಡನೆಯೇ ಬರುತ್ತೇವೆ. ನಮಗೆ ಬೇರೆ ಮಾರ್ಗವೇ ಇಲ್ಲ ಎಂದರು.

೧೩. ಪ್ರಜೆಗಳ ಈ ಮಾತನ್ನು ಕೇಳಿ ರಾಜನು ಸಂತೋಷಪಟ್ಟು ಅವರನ್ನು ಕುರಿತು ಹೀಗೆಂದನು.

೧೪-೧೬. ನೀವೆಲ್ಲರು ಪುಣ್ಯವಂತರಾದ ಜನರು, ನಮ್ಮವರು, ಬನ್ನಿ ಹೋಗೋಣವೆಂದನು. ತಾನೂ ಕೂಡ ಹಂಸವರ್ಣದಂತೆ ಬೆಳ್ಳಗಿರುವ ರಥದಲ್ಲಿ ಕಾಮಕನ್ಯೆಯೊಡನೆ ಕುಳಿತನು. ಸೇವಕರು ಚಾಮರಗಳನ್ನು ಬೀಸುತ್ತಿದ್ದರು.

ರಥೇನ ಹಂಸವರ್ಣೇನ ಚಂದ್ರಬಿಂಬಾನುಕಾರಿಣಾ ।
ಚಾಮರೈರ್ವ್ಯಜನೈಶ್ಚಾಪಿ ವೀಜ್ಯಮಾನೋ ಗತವ್ಯಥಃ ॥ ೧೫ ॥

ಕೇತುನಾ ತೇನ ಪುಣ್ಯೇನ ಶುಭ್ರೇಣಾಪಿ ಮಹಾಯಶಾಃ ।
ಶೋಭಮಾನೋ ಯಥಾ ದೇವೋ ದೇವರಾಜಃ ಪುರಂದರಃ ॥ ೧೬ ॥

ಋಷಿಭಿಸ್ತೂಯಮಾನಶ್ಚ ವಂದಿಭಿಶ್ಚಾರಣೈಸ್ತಥಾ ।
ಪ್ರಜಾಭಿಸ್ತೂಯಮಾನಶ್ಚ ಯಯಾತಿರ್ನಹುಷಾತ್ಮಜಃ ॥ ೧೭ ॥

ಪ್ರಜಾಸ್ಸರ್ವಾ ಮುದಾಯುಕ್ತಾಃ ಸಮಾಯಾತಾ ನರೇಶ್ವರಂ ।
ಗಜೈರಶ್ವೈರಥೈಶ್ಚಾನ್ಯೈಃ ಪ್ರಸ್ಥಿತಾಶ್ಚ ದಿವಂ ಪ್ರತಿ ॥ ೧೮ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನ್ಯೇ ಪೃಥಗ್ಜನಾಃ ।
ಸರ್ವೇ ತೇ ವೈಷ್ಣವಾ ಲೋಕಾ ವಿಷ್ಣುಧ್ಯಾನಪರಾಯಣಾಃ ॥ ೧೯ ॥

ತೇಷಾಂ ತು ಕೇತವಶ್ಶುಕ್ಲಾ ಹೇಮದಂಡೈರಲಂಕೃತಾಃ ।
ಶಂಖಚಕ್ರಾಂಕಿತಾಸ್ಸರ್ವೇ ಸದಂಡಾಸ್ಸಪತಾಕಿನಃ ॥ ೨೦ ॥

---

ರಥವನ್ನು ಧ್ವಜಪತಾಕೆಗಳಿಂದ ಅಲಂಕರಿಸಿದ್ದರು. ಇಂತಹ ವೈಭವದಿಂದ ಕೂಡಿದ ಯಯಾತಿಯು ಕಾಣುತ್ತಿದ್ದನು.

೧೭-೧೮. ಋಷಿಗಳೂ, ವಂದಿಗಳೂ, ಪ್ರಜೆಗಳೂ ಸ್ತೋತ್ರಮಾಡುತ್ತಿದ್ದರು. ಪ್ರಜೆಗಳೆಲ್ಲರೂ ಸಂತೋಷದಿಂದ ರಾಜನನ್ನು ಅನುಸರಿಸಿದರು. ಕೆಲವರು ಆನೆಗಳ ಮೇಲೂ ಕೆಲವರು ಕುದುರೆ, ರಥಗಳ ಮೇಲೂ ಸ್ವರ್ಗಕ್ಕೆ ಹೊರಟರು.

೧೯. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರೂ ಕೂಡ ವೈಷ್ಣವ ರಾದರು. ವಿಷ್ಣುಧ್ಯಾನ ಮಾಡುತ್ತ ಎಲ್ಲರೂ ವೈಷ್ಣವಲೋಕಕ್ಕೆ ಹೊರಟರು.

೨೦. ಅವರ ಧ್ವಜಪಟಗಳು ಬಿಳಿಯವು. ಚಿನ್ನದ ದಂಡಗಳು. ಶಂಖ ಚಕ್ರ ಗಳ ಚಿಹ್ನೆಗಳುಳ್ಳವು. ಗಾಳಿಗೆ ಅಲ್ಲಾಡುತ್ತಿರುವ ಆ ಪತಾಕೆಗಳು ಪ್ರಜೆಗಳ ಗುಂಪಿ ನಲ್ಲಿ ಅಲ್ಲಲ್ಲಿ ಕಾಣುತ್ತಿದ್ದವು. ಈ ರೀತಿ ವೈಭವದಿಂದ ರಾಜನನ್ನನುಸರಿಸಿ ಹೊರಟರು.

ಪ್ರಜಾವೃಂದೇಷು ಭಾಸಂತಿ ಪತಾಕಾ ಮಾರುತೇರಿತಾಃ ।
ದಿವ್ಯಮಾಲಾಧರಾಸ್ಸರ್ವೇ ಶೋಭಿತಾಸ್ತುಲಸೀದಳೈಃ ॥ ೨೧ ॥

ದಿವ್ಯಚಂದನದಿಗ್ಧಾಂಗಾ ದಿವ್ಯಗಂಧಾನುಲೇಪನಾಃ ।
ದಿವ್ಯವಸ್ತ್ರಕೃತಾಶೋಭಾಃ ಸರ್ವಾಭರಣಭೂಷಿತಾಃ ॥ ೨೨ ॥

ಸರ್ವೇ ಲೋಕಾಸ್ಸುರೂಪಾಸ್ತೇ ರಾಜಾನಮನುಜಗ್ಮಿರೇ ।
ಪ್ರಜಾನಾಂ ಚ ಸಹಸ್ರಾಣಿ ಲಕ್ಷಕೋಟಿಶತಾನಿ ಚ ॥ ೨೩ ॥

ಅರ್ವಖರ್ವಸಹಸ್ರಾಣಿ ತೇ ಜನಾಃ ಪರಿಜಗ್ಮಿರೇ ।
ತೇನ ರಾಜ್ಞಾ ಸಮಂ ಸರ್ವೇ ವೈಷ್ಣವಾಃ ಪುಣ್ಯಕಾರಿಣಃ ।
ವಿಷ್ಣುಧ್ಯಾನಪರಾಸ್ಸರ್ವೇ ಜಪದಾನಪರಾಯಣಾಃ ॥ ೨೪ ॥

॥ ಸುಕರ್ಮೋವಾಚ ॥

ಏವಂ ತೇ ಪ್ರಸ್ಥಿತಾಸ್ಸರ್ವೇ ಹರ್ಷೇಣ ಮಹತಾನ್ವಿತಾಃ ।
ಪುರುಂ ಪುತ್ರಂ ಮಹಾರಾಜಃ ಸ್ವರಾಜ್ಯೇ ಪ್ರತಿಷಿಚ್ಯ ತಂ ॥ ೨೫ ॥

ಇಂದ್ರಲೋಕಂ ಜಗಾಮಾಥ ಯಯಾತಿಃ ಪೃಥಿವೀಪತಿಃ ।
ತೇಜಸಾ ತಸ್ಯ ಪುಣ್ಯೇನ ಧರ್ಮೇಣ ತಪಸಾ ತದಾ ।
ತೇ ಜನಾಃ ಪ್ರಸ್ಥಿತಾಸ್ಸರ್ವೇ ವೈಷ್ಣವಂ ಲೋಕಮುತ್ತಮಂ ॥ ೨೬ ॥

---

೨೧-೨೪. ಜಪತಪಗಳಲ್ಲಿಯೂ ವಿಷ್ಣುಧ್ಯಾನದಲ್ಲಿಯೂ ಆಸಕ್ತರಾದ ಮತ್ತು ವಿಷ್ಣುಭಕ್ತರಾದ ಆ ಪ್ರಜೆಗಳೆಲ್ಲರೂ ತಮ್ಮ ಕಂಠದಲ್ಲಿ ತುಳಸಿಯ ಮಾಲೆಯನ್ನು ಹಾಕಿಕೊಂಡು ಚಂದನವನ್ನು ಪೂಸಿಕೊಂಡಿದ್ದರು. ಉತ್ತಮವಾದ ವಸ್ತ್ರಾಲಂಕಾರ ಭೂಷಿತರಾಗಿ ಸಾವಿರ, ಲಕ್ಷ, ಕೋಟಿ, ಅರ್ವ, ಖರ್ವ ಗಟ್ಟಲೆಯಲ್ಲಿ ರಾಜನನ್ನನುಸರಿಸಿ ಹೊರಟರು.

೨೫. ಸುಕರ್ಮನು ಹೇಳಿದನು :—ಈ ರೀತಿ ಜನರೆಲ್ಲರೂ ಸಂತೋಷದಿಂದ ರಾಜನ ಜೊತೆಯಲ್ಲಿ ಹೊರಟರು. ಪುರುವೆಂಬ ಮಗನನ್ನು ತನ್ನ ರಾಜ್ಯದಲ್ಲಿ ಅಭಿಷೇಕ ಮಾಡಿ ರಾಜನು ಇಂದ್ರಲೋಕವನ್ನು ಕುರಿತು ಹೊರಟನು.

೨೬. ಆ ರಾಜನು ತನ್ನ ತೇಜಸ್ಸು, ಪುಣ್ಯ, ಧರ್ಮ, ತಪಸ್ಸುಗಳೊಡನೆ ಯುಕ್ತನಾಗಿ, ಎಲ್ಲರೂ ಕೂಡ ದಾನಧರ್ಮದ ಶಕ್ತಿಯಿಂದ ವಿಷ್ಣುಲೋಕವನ್ನು ಕುರಿತು ಹೊರಟರು.

ತತೋ ದೇವಾಸ್ಸಗಂಧರ್ವಾಃ ಕಿನ್ನರಾಶ್ಚಾರಣಾಸ್ತಥಾ ।
ಸಹಿತಾ ದೇವರಾಜೇನ ಆಗತಾಃ ಸಮ್ಮುಖಂ ತದಾ ।
ತೈಸ್ಸಹಾಪಿ ಚ ಸರ್ವೈಶ್ಚ ಪೂಜಯಂತೋ ನೃಪೋತ್ತಮಂ ॥ ೨೭ ॥

॥ ಇಂದ್ರ ಉವಾಚ ॥

ಸ್ವಾಗತಂ ತೇ ಮಹಾಭಾಗ ಮಮ ಗೇಹಂ ಸಮಾವಿಶ ।
ಅತ್ರ ಭೋಗಾನ್ ಪ್ರಭುಂಕ್ಷ್ವ ತ್ವಂ ದಿವ್ಯಾನ್ ಪುಣ್ಯಾನ್ ಮನೋರಮಾನ್ ॥ ೨೮ ॥

॥ ರಾಜೋವಾಚ ॥

ಸಹಸ್ರಾಕ್ಷ ಮಹಾರಾಜ ತವ ಪಾದಾಂಬುಜಂ ವಯಂ ।
ನಮಸ್ಕೃತ್ವಾ ವ್ರಜಾಮೋಽದ್ಯ ಬ್ರಹ್ಮಲೋಕಂ ಸನಾತನಂ ॥ ೨೯ ॥

ದೇವೈಃ ಪ್ರಸ್ತೂಯಮಾನಶ್ಚ ಬ್ರಹ್ಮಲೋಕಂ ಜಗಾಮ ಹ ।
ಪದ್ಮಯೋನಿರ್ಮಹಾತೇಜಾಃ ಸಾರ್ಧಂ ಮುನಿವರೈಸ್ತದಾ ॥ ೩೦ ॥

ಆತಿಥ್ಯಂ ಚ ಚಕಾರಾಸ್ಯ ಅರ್ಘ್ಯಾದಿಭಿಸ್ಸುವಿಸ್ತರೈಃ ।
ಉವಾಚ ವಿಷ್ಣುಲೋಕಂ ಹಿ ಪ್ರಯಾಹಿ ತ್ವಂ ಸ್ವಕರ್ಮಣಾ ॥ ೩೧ ॥

---

೨೭. ಆಗ ದೇವತೆಗಳು, ಗಂಧರ್ವರು ಕಿನ್ನರರು, ಚಾರಣರು ಇವರು ಇಂದ್ರನೊಡನೆ ಆ ರಾಜನನ್ನು ಎದುರುಗೊಂಡು ಗೌರವಿಸಿದರು.

೨೮. ಇಂದ್ರನು ಹೇಳಿದನು:—ಅಯ್ಯಾ ರಾಜನೆ. ನಿನಗೆ ಸ್ವಾಗತವೇ! ಇಲ್ಲೇ ಇದ್ದು ಉತ್ತಮವಾದ ಭೋಗಗಳನ್ನು ಅನುಭವಿಸು ಎಂದನು.

೨೯. ರಾಜನು ಹೇಳಿದನು:—ಎಲೈ ಇಂದ್ರನೇ, ನಿನ್ನ ಪಾದಕಮಲಕ್ಕೆ ನಮಸ್ಕರಿಸಿ ಸನಾತನವಾದ ಬ್ರಹ್ಮಲೋಕಕ್ಕೆ ನಾವು ಹೋಗುತ್ತೇವೆ. ಎಂದು ಹೇಳಿ,

೩೦-೩೧. ದೇವತೆಗಳು ಸ್ತೋತ್ರಮಾಡುತ್ತಿರಲು ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ಬ್ರಹ್ಮನು ಋಷಿಗಳೊಡನೆ ಅವನನ್ನು ಎದುರುಗೊಂಡು ಅರ್ಘ್ಯಪಾದ್ಯಾದಿಗಳಿಂದ ಅತಿಥಿಸತ್ಕಾರ ಮಾಡಿದನು. ಮತ್ತು ನಿನ್ನ ಪುಣ್ಯಫಲದಿಂದ ನೀನು ವಿಷ್ಣುಲೋಕಕ್ಕೆ ಹೋಗೆಂದು ಬೀಳ್ಕೊಟ್ಟನು.

**ಬ್ರಹ್ಮಣಾ ಭಾಷಿತಶ್ಚೈವಂ ಜಗಾಮ ಶಿವಮಂದಿರಂ ।**
**ಚಕ್ರೆ ಆತಿಥ್ಯಪೂಜಾಂ ಚ ಶಂಕರಶ್ಚೋಮಯಾ ಸಹ ॥ ೩೨ ॥**

**ಶಿವಸ್ಸಂಪೂಜ್ಯ ತಂ ಚಾಪಿ ರಾಜಾನಮಿದಮಬ್ರವೀತ್ ।**
**ಕೃಷ್ಣಭಕ್ತೋಽಸಿ ರಾಜೇಂದ್ರ ಮಮಾಪಿ ಸುಪ್ರಿಯೋ ಭವಾನ್ ॥ ೩೩ ॥**

**ಸ್ಥಾತವ್ಯಮತ್ರ ರಾಜೇಂದ್ರ ತ್ವಯೈವ ಮಮ ಮಂದಿರೇ ।**
**ಸರ್ವಭೋಗಾನ್ ಪ್ರಭುಂಕ್ಷ್ವ ತ್ವಂ ಸದುಷ್ಪ್ರಾಪ್ಯಾ ಹಿ ಮಾನುಷೈಃ ॥ ೩೪ ॥**

**ಅಂತರಂ ನಾಸ್ತಿ ರಾಜೇಂದ್ರ ಮಮ ವಿಷ್ಣೋರ್ನಸಂಶಯಃ ।**
**ಯೋಽಸೌ ವಿಷ್ಣುಸ್ವರೂಪೇಣ ಸ ಚ ರುದ್ರೋ ನ ಸಂಶಯಃ ॥ ೩೫ ॥**

**ರುದ್ರೋ ಯಸ್ಸ ಚ ವೈ ವಿಷ್ಣುರ್ಜಾನೀಹಿ ತ್ವಂ ನರೇಶ್ವರ ।**
**ಉಭಯೋರಂತರಂ ನಾಸ್ತಿ ತಸ್ಮಾದೇವಂ ವದಾಮ್ಯಹಂ ॥ ೩೬ ॥**

**ವಿಷ್ಣುಭಕ್ತಸ್ಯ ಪುಣ್ಯಸ್ಯ ಸ್ಥಾನಮೇವಂ ನ ಸಂಶಯಃ ।**
**ತಸ್ಮಾದತ್ರ ಮಹಾರಾಜ ಸ್ಥಾತವ್ಯಂ ಹಿ ತ್ವಯಾನಘ ॥ ೩೭ ॥**

---

೩೨. ಬ್ರಹ್ಮನು ಹೀಗೆ ಹೇಳುತ್ತಲೂ ಶಿವಲೋಕಕ್ಕೆ ಹೊರಟನು. ಅಲ್ಲಿ ಶಿವನು ಪಾರ್ವತಿಯೊಡನೆ ಅವನಿಗೆ ಅತಿಥ್ಯವನ್ನು ಮಾಡಿದನು.

೩೩-೩೪. ಶಿವನು ಆ ರಾಜನನ್ನು ಆದರಾತಿಥ್ಯಗಳಿಂದ ತೃಪ್ತಿಪಡಿಸಿ ಎಲೈ ರಾಜನೇ, ನೀನು ಇಲ್ಲೇ ಇದ್ದುಕೊಂಡು ಮನುಷ್ಯರಿಗೆ ದುರ್ಲಭವಾದ ಭೋಗಗಳನ್ನು ಅನುಭವಿಸುತ್ತಾ ಇಲ್ಲೇ ಸುಖವಾಗಿರು.

೩೫-೩೬. ಎಲೈ ರಾಜನೇ, ನನಗೂ ವಿಷ್ಣುವಿಗೂ ವ್ಯತ್ಯಾಸವೇ ಇಲ್ಲ. ಯಾವನು ವಿಷ್ಣುವೋ ಅವನೇ ರುದ್ರನು. ಯಾವನು ರುದ್ರನೋ ಅವನೇ ವಿಷ್ಣುವು. ಹೀಗೆಂದು ತಿಳಿ. ಇಬ್ಬರಿಗೂ ವ್ಯತ್ಯಾಸವಿಲ್ಲ. ಆದುದರಿಂದ ನಾನು ಹೀಗೆ ಹೇಳುತ್ತೇನೆ.

೩೭. ವಿಷ್ಣುಭಕ್ತನಿಗೆ ಈ ರೀತಿಯಾದ ಉತ್ತಮವಾದ ಸ್ಥಾನವೇ ಲಭಿಸುವುದು. ಇದರಲ್ಲೇನೂ ಸಂಶಯವಿಲ್ಲ. ಆದುದರಿಂದ ನೀನು ಇಲ್ಲಿಯೇ ಸುಖವಾಗಿರಬೇಕು ಎಂದನು.

ಏವಮುಕ್ತಶ್ಶಿವೇನಾಪಿ ಯಯಾತಿರ್ಹರಿವಲ್ಲಭಃ ।
ಭಕ್ತ್ಯಾ ಪ್ರಣಮ್ಯ ದೇವೇಶಂ ಶಂಭುಂ ನಮಿತಕಂಧರಃ ॥ ೩೮ ॥

ಏತತ್ಸತ್ಯಂ ಮಹಾದೇವ ತ್ವಯೋಕ್ತಮಿಹ ಸಾಂಪ್ರತಂ ।
ಯುವಯೋರಂತರಂ ನಾಸ್ತಿ ಏಕಾ ಮೂರ್ತಿಸ್ತ್ರಿಧಾ ಭವೇತ್ ॥ ೩೯ ॥

ವೈಷ್ಣವಂ ಗಂತುಮಿಚ್ಛಾಮಿ ಪಾದೌ ತವ ನಮಾಮ್ಯಹಂ ।
ಏವಮಸ್ತು ಮಹಾರಾಜ ಗಚ್ಛ ಲೋಕಂ ಚ ವೈಷ್ಣವಂ ॥ ೪೦ ॥

ಸಮಾದಿಷ್ಟಶ್ಶಿವೇನಾಪಿ ಪ್ರಣಮ್ಯ ಚ ಶಿವಾಮುಮಾಂ ।
ಪೃಥ್ವೀಶಸ್ತೈರ್ಮಹಾಪುಣ್ಯೈರ್ವೈಷ್ಣವೈರ್ವಿಷ್ಣುವಲ್ಲಭೈಃ ॥ ೪೧ ॥

ನೃತ್ಯಮಾನಾಸ್ತತಸ್ತೇ ತು ಪುರತಸ್ತಸ್ಯ ಭೂಪತೇ ।
ಶಂಖಶಬ್ದೈಸ್ತಥಾ ವಾದ್ಯೈರ್ಘಂಟಾನಾದೈಸ್ಸುಪುಷ್ಕಲೈಃ ॥ ೪೨ ॥

ಅಪ್ಸರೋಭಿರ್ಯುತೋ ರಾಜಾ ಪೂಜ್ಯಮಾನೋಽಥ ಕಿನ್ನರೈಃ ।
ಸುಸ್ವರೈರ್ಗೀಯಮಾನಸ್ತು ಪಾಠಕೈಶ್ಶಾಸ್ತ್ರಕೋವಿದೈಃ ॥ ೪೩ ॥

---

೩೮-೩೯. ಹೀಗೆ ಶಿವನು ಹೇಳುತ್ತಲೂ ಆ ವಿಷ್ಣುಭಕ್ತನು ಆತನನ್ನು ನಮಸ್ಕರಿಸಿ ನಮ್ರನಾಗಿ, ನೀನು ಹೇಳುವುದು ನಿಜ. ನಿಮ್ಮಿಬ್ಬರಿಗೂ ಏನೂ ವ್ಯತ್ಯಾಸವಿಲ್ಲ ಒಂದೇ ಮೂರ್ತಿಯು, ಬ್ರಹ್ಮವಿಷ್ಣು ಶಿವಾತ್ಮಕವೆಂದು ಮೂರು ವಿಧವಾಗಿ ಆಯಿತು.

೪೦-೪೧. ಆದರೂ ವೈಷ್ಣವಲೋಕಕ್ಕೆ ಹೋಗಲು ಇಚ್ಛಿಸುತ್ತೇನೆ. ನಿನ್ನ ಪಾದಗಳಿಗೆ ನಮಸ್ಕರಿಸುತ್ತೇನೆ. ಎನ್ನಲು, ಶಿವನು ಎಲೈ ರಾಜನೇ, ಹಾಗೇ ಆಗಲಿ ವೈಷ್ಣವಲೋಕಕ್ಕೆ ಹೋಗು ಎಂದು ಹೇಳಿ ಅಪ್ಪಣೆಕೊಟ್ಟ ಮೇಲೆ, ಈ ರಾಜನು ಶಿವನನ್ನೂ ಪಾರ್ವತಿಯನ್ನೂ ನಮಸ್ಕರಿಸಿ ವೈಷ್ಣವಲೋಕಕ್ಕೆ ಹೊರಟನು.

೪೨-೪೩. ಪುಣ್ಯವಂತರೂ ಮಹಾವಿಷ್ಣುಭಕ್ತರೂ ಆದ ತನ್ನ ಪ್ರಜೆಗಳಿಂದ ಪರಿವೃತನಾಗಿ ರಾಜನು ಹೊರಡಲು, ಆ ರಾಜನ ಮುಂದೆ ಆ ಭಕ್ತರು ಶಂಖ ಘಂಟೆ ಮೊದಲಾದ ವಾದ್ಯಗಳಿಂದ ಧ್ವನಿಮಾಡುತ್ತಲೂ, ನರ್ತನಮಾಡುತ್ತಲೂ ಮುಂದೆ ಹೊರಟರು. ಅಪ್ಸರಸ್ಸುಗಳೂ, ಕಿನ್ನರರೂ ಸುಸ್ವರದಿಂದ ಗಾನಮಾಡುತ್ತಿದ್ದರು ಶಾಸ್ತ್ರಪಾರಂಗತರು ಹೊಗಳುತ್ತಿದ್ದರು. ಗಂಧರ್ವರೂಕೂಡ ಹಾಡುತ್ತಿದ್ದರು. ಋಷಿಗಳೂ, ದೇವತೆಗಳೂ ಸ್ತೋತ್ರ ಮಾಡುತ್ತಿದ್ದರು.

ಗಾಯನ್ತಿ ಪುರತಸ್ತಸ್ಯ ಗಂಧರ್ವಾ ಗೀತತತ್ಪರಾಃ ।
ಋಷಿಭಿರ್ದೇವವೃಂದೈಶ್ಚ ಸ್ತೂಯಮಾನಸ್ಸಮಂತತಃ ॥ ೪೪ ॥

ಅಪ್ಸರೋಭಿಸ್ಸುರೂಪಾಭಿಃ ಸೇವ್ಯಮಾನಸ್ಸ ನಾಹುಷಿಃ ।
ಗಂಧರ್ವೈಃ ಕಿನ್ನರೈಃ ಸಿದ್ಧೈಶ್ಚಾರಣೈಃ ಪುಣ್ಯಸಂಯುತೈಃ ॥ ೪೫ ॥

ಸಾಧ್ಯೈರ್ವಿದ್ಯಾಧರೈ ರಾಜಾ ಮರುದ್ಭಿರ್ವಸುಭಿಸ್ತಥಾ ।
ರುದ್ರೈಶ್ಚಾದಿತ್ಯವರ್ಗೈಶ್ಚ ಲೋಕಪಾಲೈರ್ದಿಗೀಶ್ವರೈಃ ॥ ೪೬ ॥

ಸ್ತೂಯಮಾನೋ ಮಹಾರಾಜಸ್ತ್ರೈಲೋಕ್ಯೇನ ಸಮಂತತಃ ।
ದದರ್ಶ ವೈಷ್ಣವಂ ಲೋಕಮನೌಪಮ್ಯಮನಾಮಯಂ ।
ವಿಮಾನೈಃ ಕಾಂಚನೈ ರಾಜಾ ಸರ್ವಶೋಭಾಸಮಾಕುಲೈಃ ॥ ೪೭ ॥

ಹಂಸಕುಂದೇಂದುಧವಳೈರ್ವಿಮಾನೈರುಪಶೋಭಿತಂ ।
ಪ್ರಾಸಾದೈಶ್ಶತಶೋಭೈಶ್ಚ ಮೇರುಮಂದರಸನ್ನಿಭೈಃ । ॥ ೪೮ ॥

ಶಿಖರೈರುಲ್ಲಸದ್ಭಿಸ್ತು ಸ್ವರ್ಣ್ಯೇಮಹಾಟಕಾನ್ವಿತೈಃ ।
ಕಲಶೈಶ್ಶೋಭಮಾನೈಶ್ಚ ಶೋಭತೇ ಸುಪುರೋತ್ತಮಂ ॥ ೪೯ ॥

---

೪೪-೪೭. ಗಂಧರ್ವರು ಅವನ ಮುಂದೆ ಗಾನಮಾಡುತ್ತಿದ್ದರು. ಋಷಿಗಳು, ದೇವತೆಗಳು ಸ್ತೋತ್ರಮಾಡುತ್ತಿದ್ದರು. ರೂಪವತಿಯರಾದ ಅಪ್ಸರಸ್ತ್ರೀಯರು ಚಾಮರಾದಿಗಳಿಂದ ಸೇವಿಸುತ್ತಿದ್ದರು. ಗಂಧರ್ವರು, ಕಿನ್ನರರು, ಸಿದ್ಧರು, ಆದಿತ್ಯರು, ಲೋಕಪಾಲರು, ದಿಗೀಶ್ವರರು, ಇವರೆಲ್ಲರೂ ಹೊಗಳುತ್ತಿರಲು, ಮಹಾ ವೈಭವದಿಂದ ಹೋಗುತ್ತಾ ಅಸದೃಶವಾಗಿಯೂ, ರೋಗರಹಿತವಾಗಿಯೂ, ಸುವರ್ಣಪ್ರಾಸಾದಗಳಿಂದಲೂ, ಸರ್ವಾಲಂಕಾರಗಳಿಂದಲೂ ವ್ಯಾಪ್ತವಾದ ವೈಷ್ಣವಲೋಕವನ್ನು ನೋಡಿದನು.

೪೮-೪೯. ಬೆಳ್ಳಗಿರುವ ವಿಮಾನಗಳಿಂದಲೂ ದೊಡ್ಡದೊಡ್ಡದಾಗಿ ಕಾಂತಿಯುಕ್ತವಾದ ಮಹಡಿಮನೆಗಳಿಂದಲೂ ಅಂತರಿಕ್ಷವನ್ನು ಮುಟ್ಟುವಷ್ಟು ಉನ್ನತವಾಗಿರುವ ಸುವರ್ಣಕಲಶಗಳಿಂದಲೂ ಆ ಪಟ್ಟಣವು ಶೋಭಿಸುತ್ತಿದ್ದಿತು.

ತಾರಾಗಣೈರ್ಯಥಾಕಾಶಂ ತೇಜಶ್ಶ್ರಿಯಾ ಪ್ರಕಾಶತೇ ।
ಪ್ರಜ್ವಲತ್ತೇಜಜ್ವಾಲಾಭಿರ್ಲೋಚನೈರಿವ ಲೋಕತೇ ॥ ೫೦ ॥

ನಾನಾರತ್ನೈರ್ಹರೇರ್ಲೋಕೋ ಹಸತೇ ದಶನೈರಿವ ।
ಸಮಾಹ್ವಯತಿ ತಾನ್ಪುಣ್ಯಾನ್ವೈಷ್ಣವಾನ್ವಿಷ್ಣುವಲ್ಲಭಾನ್ ॥ ೫೧ ॥

ಧ್ವಜವ್ಯಾಜೇನ ರಾಜೇಂದ್ರ ಚಲಿತಾಗ್ರೈಸ್ಸುಪಲ್ಲವೈಃ ।
ಶ್ವಸನಾನ್ದೋಳಿತೈಸ್ತೈಶ್ಚ ಧ್ವಜಾಗ್ರೈಶ್ಚ ಮನೋಹರೈಃ ॥ ೫೨ ॥

ಹೇಮದಂಡೈಶ್ಚ ಘಂಟಾಭಿಃ ಸರ್ವತ್ರ ಸಮಲಂಕೃತಂ ।
ಸೂರ್ಯತೇಜಃಪ್ರಕಾಶೈಶ್ಚ ಗೋಪುರಾಟ್ಟಾಲಕೈಃ ಪುನಃ ॥ ೫೩ ॥

ಗವಾಕ್ಷೈರ್ಜಾಲಮಾಲೈಶ್ಚ ವಾತಾಯನೈರ್ಮಹಾಗುಣೈಃ ।
ಪ್ರತೋಳೀಭಿಃ ಪ್ರಕಾಶೇತ ಪ್ರಾಕಾರೈರ್ಹೇಮರೂಪಕೈಃ ॥ ೫೪ ॥

---

೫೦. ನಕ್ಷತ್ರಗಳ ಗುಂಪಿನಿಂದ ಆಕಾಶವು ಪ್ರಕಾಶಿಸುವಂತೆ, ಪ್ರಕಾಶಮಾನವಾದ ಕಾಂತಿಗಳಿಂದ ಆ ಪರಮಪದವು ಪ್ರಕಾಶಿಸುತ್ತಿತ್ತು.

೫೧. ಆ ಹರಿಯ ಲೋಕವು ಬಗೆಬಗೆಯಾದ ರತ್ನಗಳಿಂದ ಪ್ರಕಾಶಿಸುವುದನ್ನು ನೋಡಿದರೆ, ಹಲ್ಲುಗಳನ್ನು ಸ್ವಲ್ಪ ತೆರೆದುಕೊಂಡು ಮಂದಹಾಸದಿಂದ ನಗುತ್ತಾ ಪುಣ್ಯವಂತರಾದ ವಿಷ್ಣುಭಕ್ತರನ್ನು ಸ್ವಾಗತಿಸುವಂತೆ ಕಾಣುತ್ತಿತ್ತು.

೫೨. ಎಲ್ಲೆಲ್ಲಿಯೂ ಮನೋಹರವಾದ ಧ್ವಜಗಳಿಂದ ಆ ನಗರವು ಅಲಂಕೃತವಾಗಿ ಶೋಭಿಸುತ್ತಿತ್ತು ಆಧ್ವಜಗಳು ಸುವರ್ಣದಂಡಗಳಿಂದಲೂ ಶ್ವೇತವಸ್ತ್ರಗಳಿಂದಲೂ ಕೂಡಿ ಬಹು ಉನ್ನತವಾಗಿ ಅಂತರಿಕ್ಷದಲ್ಲಿದ್ದು ಗಾಳಿಯಿಂದ ನಿರಂತರವು ಅಲುಗಾಡುತ್ತಿದ್ದವು.

೫೩-೫೪. ಮತ್ತು ಆ ನಗರದಲ್ಲಿ ಸೂರ್ಯನ ತೇಜಸ್ಸಿನಿಂದ ಥಳಥಳಿಸುವ ಅನೇಕ ಗೋಪುರಗಳೂ, ಉಪ್ಪರಿಗೆಗಳೂ ಕಂಗೊಳಿಸುತ್ತಿದ್ದವು. ಅಲ್ಲಿರುವ ಪ್ರಾಸಾದಗಳ ದ್ವಾರಗಳಿಗೂ ಕಿಟಕಿಗಳಿಗೂ, ಸುವರ್ಣಮಯವಾದ ಜಾಲರಿಗಳನ್ನೂ, ಮಾಲೆಗಳನ್ನೂ ಹಾಕಿ ಅಲಂಕರಿಸಿದ್ದರು. ಅಲ್ಲಲ್ಲಿ ಹಾಕಿರುವ ಆರಾಮಪೀಠಗಳಿಂದ ಆ ಗೃಹಗಳು ಮನೋಹರವಾಗಿ ಒಪ್ಪುತ್ತಿದ್ದವು.

ತೋರಣೈಸ್ಸಪತಾಕಾಭಿರ್ನಾನಾಶಬ್ದೈಸ್ಸುಮಂಗಳೈಃ ।
ಕಲಶಾಗ್ರೈಶ್ಚಕ್ರಂಬಿಂಬೈ ರವಿಬಿಂಬಸಮಪ್ರಭೈಃ ॥ ೫೫ ॥

ಸುಶೋಭನೈಸ್ಸ್ಯಮಂತೈಶ್ಚ ನೀಲಾಂಬುದಸಮಪ್ರಭೈಃ ।
ದಂಡಛತ್ರಸಮಾಕೀರ್ಣೈಃ ಕಲಶೈರುಪಶೋಭಿತಂ ॥ ೫೬ ॥

ಪ್ರಾವೃಟ್ಕಾಲಾಂಬುದಾಕಾರೈರ್ಮಂದಿರೈರುಪಶೋಭಿತಂ ।
ಕಲಶೈಶ್ಶೋಭಮಾನೈಸ್ತೈಃ ಋಕ್ಷೈರ್ದ್ಯಾರಿವ ಭೂತಳಂ ॥ ೫೭ ॥

ದಂಡಜಾಲಪತಾಕಾಭಿರೃಕ್ಷಜಾಲಸಮಪ್ರಭೈಃ
ತಾದೃಶೈಸ್ಸ್ಫಟಿಕಾಕಾರೈ ಕಾಂತಿಖಂಡೇನ ಸನ್ನಿಭೈಃ ।
ಹೇಮಪ್ರಾಸಾದಸಂಬಾಧೈರ್ನಾನಾಧಾತುಮಯೈಸ್ತತಃ ॥ ೫೮ ॥

ವಿಮಾನೈರರ್ಬುದಸಂಖ್ಯೈಃ ಶತಕೋಟಿಸಹಸ್ರಕೈಃ ।
ಸರ್ವಭೋಗಯುತೈಸ್ತೈಶ್ಚ ಶೋಭಮಾನಂ ಹರೇರ್ಗೃಹಂ ॥ ೫೯ ॥

ಯೈಸ್ಸಮಾರಾಧಿತೋ ದೇವಃ ಶಂಖಚಕ್ರಗದಾಧರಃ ।
ಸುಪ್ರಸಾದಾತ್ತತಸ್ತೇಷು ನಿವಸಂತಿ ಗೃಹೇಷು ಚ ॥ ೬೦ ॥

---

೫೫-೫೭. ಶರತ್ಕಾಲದ ಮೇಘದಂತೆ ಶುಭ್ರವಾಗಿರುವ ಆ ಗೃಹಗಳು ಹೊರಗಿನ ಬಾಗಿಲುಗಳಿಂದಲೂ, ಪತಾಕೆಗಳಿಂದಲೂ, ನಾನಾಬಗೆಯ ಮಂಗಳ ಗೀತಗಳಿಂದಲೂ ಸೂರ್ಯಬಿಂಬದಂತಿರುವ ಕಲಶದ ತುದಿಗಳಿಂದಲೂ, ನೀಲಮೇಘಗಳಂತೆ ಉನ್ನತವಾಗಿ ಥಳಥಳಿಸುವ ದಂಡ ಛತ್ರಿಗಳಿಂದಲೂ, ಕಲಶಗಳಿಂದಲೂ ಕೂಡಿ ರಾರಾಜಿಸುತ್ತಿದ್ದವು.

೫೮. ಸ್ಫಟಿಕದ ಕಾಂತಿಯನ್ನು ಧಿಕ್ಕರಿಸುವ ಆ ಪ್ರಾಸಾದಗಳು ನಾನಾವಿಧವಾದ, ಸ್ತಂಭಗಳಿಂದಲೂ ಜಾಲರಿಗಳಿಂದಲೂ, ಮೇಲ್ಕಟ್ಟುಗಳಿಂದಲೂ, ಚಿತ್ರವಿಚಿತ್ರಗಳಾದ ಅನೇಕ ಲೋಹ ಪ್ರತಿಮೆಗಳಿಂದಲೂ ಪ್ರಕಾಶಿಸುತ್ತಿದ್ದವು.

೫೯-೬೦. ಈರೀತಿ ಸರ್ವಭೋಗಗಳಿಂದಲೂ ಅಸಂಖ್ಯಾತ ವಿಮಾನಗಳಿಂದಲೂ ರಾರಾಜಿಸುತ್ತಿರುವ ಹರಿಯ ಗೃಹವನ್ನು ನೋಡಿದನು. ಅದು ವಿಷ್ಣುಭಕ್ತರಾದವರು ವಾಸಮಾಡುವ ಸ್ಥಳವು.

ಸರ್ವಪುಣ್ಯೇಷು ದಿವ್ಯೇಷು ದಿವ್ಯಾಘೇಷು ಚ ಮಾನವಾಃ ।
ವೈಷ್ಣವಾಃ ಪುಣ್ಯಕರ್ತಾರೋ ನಿರ್ಧೂತಾಶೇಷಕಲ್ಮಷಾಃ ॥ ೬೧ ॥

ಏವಂವಿಧೈರ್ಗೃಹೈಃ ಪುಣ್ಯೈಃ ಶೋಭಿತಂ ವಿಷ್ಣುಮಂದಿರಂ ।
ನಾನಾವೃಕ್ಷೈಸ್ಸಮಾಕೀರ್ಣೈರ್ವನೈಶ್ಚಂದನಶೋಭಿತೈಃ ॥ ೬೨ ॥

ಸರ್ವಕಾಮಫಲೈರ್ವಾಜ ಸರ್ವತ್ರ ಸಮಲಂಕೃತಂ ।
ವಾಪೀಕೂಪತಟಾಗೈಶ್ಚ ಸಾರಸೈರುಪಶೋಭಿತಂ ॥ ೬೩ ॥

ಹಂಸಕಾರಂಡಿಕಾಕೀರ್ಣೈ ಪದ್ಮಕಲ್ಹಾರಕೋತ್ಪಲೈ ।
ಶತಪತ್ರೈರ್ಮಹಾಪತ್ರೈಃ ಪದ್ಮೋತ್ಪಲವಿರಾಜಿತೈಃ
ಕನಕೋತ್ಪಲವರ್ಣೈಶ್ಚ ಸರೋಭಿಶ್ಚ ವಿರಾಜಿತೇ ॥ ೬೪ ॥

ವೈಕುಂಠಂ ಸರ್ವಶೋಭಾಢ್ಯಂ ದೇವೋದ್ಯಾನೈರಲಂಕೃತಂ ॥ ೬೫ ॥

ದಿವ್ಯಶೋಭಾಸಮಾಕೀರ್ಣಂ ವೈಷ್ಣವೈರುಪಶೋಭಿತಂ ।
ವೈಕುಂಠಂ ದದೃಶೇ ರಾಜಾ ಮೋಕ್ಷಸ್ಥಾನಮನುತ್ತಮಂ ॥ ೬೬ ॥

---

೬೧. ಪುಣ್ಯಮಯವಾದ ದಿವ್ಯ ಗೃಹಗಳಲ್ಲಿ ಪಾಪರಹಿತರೂ, ಪುಣ್ಯವಂತರೂ ಆದ ವೈಷ್ಣವರು ವಾಸಮಾಡುತ್ತಾರೆ.

೬೨-೬೪. ಈ ರೀತಿಯಾದ ಉತ್ತಮವಾದ ಮನೆಗಳಿಂದ ವಿಷ್ಣುವಿನ ಸ್ಥಾನವು ಪ್ರಕಾಶಿಸುತ್ತದೆ. ನಾನಾ ವೃಕ್ಷಗಳಿಂದಲೂ ಕೂಡಿದೆ. ಸರ್ವಾಭೀಷ್ಟಗಳಿಂದಲೂ ತುಂಬಿದೆ. ಬಾವಿ, ಕೊಳ, ಕೆರೆಗಳಿಂದಲೂ ಅವುಗಳಲ್ಲಿರುವ ಸಾರಸಪಕ್ಷಿ, ಹಂಸಗಳು, ಕಾರಂಡಗಳು, ಪದ್ಮಗಳು, ಕಲ್ಹಾರಗಳು, ಉತ್ಪಲಗಳು, ಕಮಲಗಳು ಇವುಗಳಿಂದ ಅಲ್ಲಿರುವ ಕೊಳಗಳು ಪ್ರಕಾಶಿಸುತ್ತವೆ.

೬೫-೬೬. ಅಲ್ಲಲ್ಲಿ ದೇವೋದ್ಯಾನಗಳಿಂದ ನಿಬಿಡವಾಗಿ ದಿವ್ಯ ಶೋಭೆಯಿಂದ ಕೂಡಿ ವಿಷ್ಣುಭಕ್ತರಿಗೆ ಆವಾಸಸ್ಥಾನವಾದ ಮತ್ತು ಉತ್ತಮ ಮೋಕ್ಷಸ್ಥಾನವಾದ ವೈಕುಂಠವನ್ನು ನೋಡಿದನು.

ದೇವವಂದ್ಯೈಸ್ಸಮಾಕೀರ್ಣಂ ಯಯಾತಿರ್ನಹುಷಾತ್ಮಜಃ ।
ಪ್ರವಿವೇಶ ಪುರಂ ದಿವ್ಯಂ ಸರ್ವದಾಹವಿವರ್ಜಿತಂ ॥ ೬೭ ॥

ದದರ್ಶ ಸರ್ವಕ್ಲೇಶಘ್ನಂ ನಾರಾಯಣಮನಾಮಯಂ ।
ವಿತಾನೈರುಪಶೋಭಂ ತು ಸರ್ವಾಭರಣಶೋಭಿತಂ ॥ ೬೮ ॥

ಪೀತವಸ್ತ್ರಂ ಜಗನ್ನಾಥಂ ಶ್ರೀವತ್ಸಾಂಕಂ ಮಹಾಗತಿಂ ।
ವೈನತೇಯಸಮಾರೂಢಂ ಶ್ರಿಯಾ ಯುಕ್ತಂ ಪರಾತ್ಪರಂ ॥ ೬೯ ॥

ಸರ್ವೇಷಾಂ ದೇವಲೋಕಾನಾಂ ಯೋ ಗತಿಃ ಪರಮೇಶ್ವರಃ ।
ಪರಮಾನಂದರೂಪೇಣ ಕೈವಲ್ಯೇನ ವಿರಾಜತೇ ॥ ೭೦ ॥

ಸೇವ್ಯಮಾನಂ ಮಹಾಲೋಕೈಃ ಸುಪುಣ್ಯೈರ್ವೈಷ್ಣವೈರ್ಹರಿಂ ।
ದೇವವೃಂದಸಮಾಕೀರ್ಣಂ ಗಂಧರ್ವಗಣಸೇವಿತಂ ॥ ೭೧ ॥

ಅಪ್ಸರೋಭಿರ್ಮಹಾತ್ಮಾನಂ ದುಃಖಕ್ಲೇಶಾಪಹಂ ಪ್ರಭುಂ ।
ನಾರಾಯಣಂ ನನಾಮಾಥ ಸ್ವಪತ್ನ್ಯಾ ಸಹ ಭೂಪತಿಃ ।
ತೇ ನೇಮುರ್ಮಾನವಾಸ್ಸರ್ವೇ ವೈಷ್ಣವಾ ಮಧುಸೂದನಂ ॥ ೭೨ ॥

---

೬೭. ಆ ವೈಕುಂಠವು ಸಮಸ್ತಾಭೀಷ್ಟಗಳಿಂದ ಪರಿಪೂರ್ಣವಾಗಿದ್ದಿತು. ಎಲ್ಲಿ ನೋಡಿದರೂ ದೇವತೆಗಳ ಸಮೂಹವು ಕಾಣುತ್ತಿತ್ತು. ಇಂತಹ ವಿಷ್ಣುವಿನ ಪರಮ ಪದವಾದ ವೈಕುಂಠವನ್ನು ಆ ರಾಜನು ಪ್ರವೇಶಮಾಡಿದನು.

೬೮-೭೨. ಆನಂತರ ಆ ರಾಜನು ಅಲ್ಲಿ ವೈಕುಂಠಾಧಿಪತಿಯಾದ ನಾರಾಯಣ ನನ್ನು ದರ್ಶನಮಾಡಿದನು. ಆ ಸ್ವಾಮಿಯಾದರೋ ಭಕ್ತರ ಸರ್ವಕ್ಲೇಶಗಳನ್ನೂ ನಾಶಮಾಡುವವನು, ಆದಿಮಧ್ಯಾಂತ ರಹಿತನು. ಸನಾತನನು, ಪೀತಾಂಬರವನ್ನುಟ್ಟು ಜರತಾರಿಯ ಮೇಲುವಸ್ತ್ರವನ್ನು ಧರಿಸಿ ಸರ್ವಾಲಂಕಾರಭೂಷಿತನಾಗಿ ಗರುಡನಮೇಲೆ ಕುಳಿತು ಪ್ರಕಾಶಿಸುತ್ತಿರುವನು. ಆ ದೇವದೇವನ ವಕ್ಷಸ್ಥಳದಲ್ಲಿ ಶ್ರೀವತ್ಸವೆಂಬ ಮನೋಹರವಾದ ಚಿಹ್ನೆಯಿರುವುದು. ಪಕ್ಕದಲ್ಲಿ ಲಕ್ಷ್ಮೀದೇವಿಯಿರುವಳು. ಸಮಸ್ತ ಪ್ರಪಂಚಕ್ಕೂ ಗತಿದಾಯಕನಾಗಿರುವನು. ವಿಷ್ಣುಭಕ್ತರೂ, ಇಂದ್ರಾದಿದೇವತೆಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಆ ಮಹಾಮಹಿಮನನ್ನು ಸ್ತೋತ್ರಗೀತಾದಿಗಳಿಂದ ಸೇವಿಸುತ್ತಿರುವರು. ಸಮಸ್ತಜನರ ಕ್ಲೇಶಗಳನ್ನು ನಾಶಮಾಡುವ ಇಂತಹ ಸ್ವಾಮಿ ಯನ್ನು ಆ ರಾಜನು ನೋಡಿ ತನ್ನ ಪತ್ನಿಯೊಡನೆ ಭಕ್ತಿಯಿಂದ ನಮಸ್ಕರಿಸಿದನು.

ಗತಾ ಯೇ ವೈಷ್ಣವಾಸ್ಸರ್ವೇ ರಾಜ್ಞಾ ಸಹ ಮಹಾಮತೇ ।
ಪಾದಾಂಬುಜದ್ವಯಂ ತಸ್ಯ ನೇಮುರ್ಭಕ್ತ್ಯಾ ಮಹಾಮತೇ ॥ ೭೩ ॥

ಪ್ರಣಮಂತಂ ಮಹಾತ್ಮಾನಂ ರಾಜಾನಂ ದೀಪ್ತತೇಜಸಂ ।
ತಮುವಾಚ ಹೃಷಿಕೇಶಸ್ತುಷ್ಟೋಽಹಂ ತವ ಸುವ್ರತ ॥ ೭೪ ॥

ವರಂ ವರಯ ರಾಜೇಂದ್ರ ಯತ್ತೇ ಮನಸಿ ದುರ್ಲಭಂ ।
ತತ್ತೇ ದದ್ಮಿ ನ ಸಂದೇಹೋ ಮದ್ಭಕ್ತೋಽಸಿ ಮಹಾಮತೇ ॥ ೭೫ ॥

॥ ರಾಜೋವಾಚ ॥

ಯದಿ ತುಷ್ಟೋಽಸಿ ದೇವೇಶ ಮಮ ವೈ ಮಧುಸೂದನ ।
ದಾಸತ್ವಂ ದೇಹಿ ಸತತಮಾತ್ಮನಶ್ಚ ಜಗತ್ಪತೇ ॥ ೭೬ ॥

॥ ವಿಷ್ಣುರುವಾಚ ॥

ಏವಮಸ್ತು ಮಹಾಭಾಗ ಮಮ ಭಕ್ತೋ ನ ಸಂಶಯಃ ।
ಮಮ ಲೋಕೇ ತ್ವಯಾ ರಾಜನ್ ಸ್ಥಾತವ್ಯಂ ತ್ವನಯಾ ಸಹ ॥ ೭೭ ॥

---

೭೩. ರಾಜನ ಜೊತೆಯಲ್ಲಿ ಹೋಗಿದ್ದ ವೈಷ್ಣವರೆಲ್ಲರೂ ಆ ಸ್ವಾಮಿಯ ಪಾದ ಪದ್ಮಗಳನ್ನು ಭಕ್ತಿಯಿಂದ ನಮಸ್ಕರಿಸಿದರು.

೭೪-೭೫. ನಮಸ್ಕರಿಸುತ್ತಿರುವ ಆ ರಾಜನನ್ನು ಕುರಿತು ಹೃಷೀಕೇಶನು ಎಲೈ ದೊರೆಯೇ, ನಿನ್ನ ಭಕ್ತಿಗೆ ಸಂತುಷ್ಟನಾಗಿದ್ದೇನೆ. ಹೊಂದಲಸಾಧ್ಯವಾದರೂ ನಿನಗೆ ಬೇಕಾದ ವರವನ್ನು ಕೇಳು, ಅದನ್ನೂ ನಿನಗೆ ಕೊಡುತ್ತೇನೆ. ನೀನು ನನ್ನ ಭಕ್ತನಾಗಿದ್ದೀಯೆ ಎಂದನು.

೭೬. ರಾಜನು ಹೇಳಿದನು:—ಎಲೈ ಸ್ವಾಮಿಯೇ, ನನ್ನ ವಿಷಯದಲ್ಲಿ ನೀನು ಸಂತುಷ್ಟನಾಗಿದ್ದರೆ ನಿನ್ನ ದಾಸತ್ವವನ್ನು ನನಗೆ ಯಾವಾಗಲೂ ಕೊಡು. ನಿನ್ನ ದಾಸನಾಗಿ ನಿನ್ನನ್ನು ಯಾವಾಗಲೂ ನಾನು ಸೇವಿಸುತ್ತಿರುವಂತೆ ಅನುಗ್ರಹಿಸು ಎಂದು ಬೇಡಿಕೊಂಡನು.

೭೭. ವಿಷ್ಣುವು ಹೇಳಿದನು. ಅಯ್ಯಾ, ರಾಜನೇ, ಹಾಗೇ ಆಗಲಿ. ನೀನು ಭಕ್ತನಾಗಿದ್ದೀಯೆ. ಸಂದೇಹವಿಲ್ಲ. ಈಕೆಯೊಡನೆ ನೀನು ನನ್ನ ಲೋಕದಲ್ಲಿರು.

**ಏವಮುಕ್ತೋ ಮಹಾರಾಜೋ ಯಯಾತಿಃ ಪೃಥಿವೀಪತಿಃ ।**
**ಪ್ರಸಾದಾತ್ತಸ್ಯ ದೇವಸ್ಯ ವಿಷ್ಣುಲೋಕಂ ಪ್ರಭಾಸಿತಂ ।**
**ನಿವಸತ್ಯೇಷ ಭೂಪಾಲೋ ವೈಷ್ಣವಂ ಲೋಕಮುತ್ತಮಂ ॥ ೭೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ ಯಯಾತಿಚರಿತೇ ತ್ರ್ಯಶೀತಿತಮೋಽಧ್ಯಾಯಃ**



---

೭೮. ಈ ರೀತಿ ಹೇಳಲು, ರಾಜನಾದ ಯಯಾತಿಯು ಆ ಸ್ವಾಮಿಯ ಅನುಗ್ರಹದಿಂದ ಅಲ್ಲಿಯೇ ಇದ್ದನು. ಈ ರೀತಿ ವಿಷ್ಣುಲೋಕಪ್ರಾಪ್ತಿಯಿಂದ ಆ ರಾಜನು ಅಲ್ಲಿಯೇ ವಾಸಮಾಡುತ್ತಿರುವನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀಮಹಾಪುರಾಣೇ ಪಾದ್ಮೇ ಭೂಮಿಖಂಡೇ ಚತುರಶೀತಿತಮೋऽಧ್ಯಾಯಃ

॥ ಸುಕರ್ಮೋವಾಚ ॥

ಏತತ್ತೇ ಸರ್ವಮಾಖ್ಯಾತಂ ಚರಿತಂ ಪಾಪನಾಶನಂ ।
ಪುತ್ರಾಣಾಂ ತಾರಕಂ ದಿವ್ಯಂ ಬಹುಶ್ರೇಯಃಪ್ರದಾಯಕಂ ॥ ೧ ॥

ಪ್ರತ್ಯಕ್ಷಂ ದೃಶ್ಯತೇ ಲೋಕೇ ಯಯಾತಿಚರಿತಂ ಶುಭಂ ।
ರಾಜ್ಯಂ ಚ ಪುರುಣಾ ಪ್ರಾಪ್ತಂ ಸ್ವರ್ಗತಿಂ ಪ್ರಾಪ್ತವಾನ್ಗುರುಃ ॥ ೨ ॥

ಪಿತೃಪ್ರಸಾದಾತ್ಕೋಪಾಚ್ಚ ಯಥಾ ಜಾತಂ ತಥಾ ಪುನಃ ।
ಪುತ್ರಾಣಾಂ ತಾರಕಂ ಪುಣ್ಯಂ ಯಶಸ್ಯಂ ಧನಧಾನ್ಯದಂ ॥ ೩ ॥

---

## ಎಂಭತ್ತನಾಲ್ಕನೆಯ ಅಧ್ಯಾಯವು

೧. ಸುಕರ್ಮನು ಹೇಳಿದನು :—ಯಯಾತಿಯ ಚರಿತ್ರೆಯೆಲ್ಲವನ್ನೂ ಹೇಳಿದ್ದಾಯಿತು. ಇದು ಸಮಸ್ತ ಪಾಪವನ್ನು ನಾಶಮಾಡುವುದು. ಪುತ್ರರಿಗೆ ಮುಕ್ತಿಪ್ರದವಾದದ್ದು. ಕೇಳಿದವರಿಗೆ ಬಹು ಶ್ರೇಯಸ್ಸನ್ನುಂಟುಮಾಡುವುದು. ಇಂತಹ ದಿವ್ಯವಾದ ಯಯಾತಿಯ ಚರಿತ್ರೆಯನ್ನು ಹೇಳಿರುವೆನು.

೨. ಯಯಾತಿಯ ಚರಿತೆಯು ಲೋಕದಲ್ಲಿ ಪ್ರತ್ಯಕ್ಷವಾಗಿ ಕಾಣುತ್ತದೆ. ತಂದೆಯು ಸ್ವರ್ಗವನ್ನು ಹೊಂದುತ್ತಲೂ ಪುರುವು ರಾಜ್ಯವನ್ನು ಹೊಂದಿದನು.

೩. ತಂದೆಯ ಅನುಗ್ರಹದಿಂದಲೂ, ಕೋಪದಿಂದಲೂ ಅವನ ಪುತ್ರರಿಗೆ ಯಾವ ರೀತಿಯಾಯಿತೋ ಅದನ್ನು ಹೇಳುತ್ತೇನೆ. ಅದು ಮಕ್ಕಳಿಗೆ ಮುಕ್ತಿಪ್ರದವು ಯಶಸ್ಸನ್ನು ಕೊಡುತ್ತದೆ, ಧಾನ್ಯವನ್ನು ಕೊಡುತ್ತದೆ.

ಶಾಪಯುಕ್ತಾವಿಮೌ ಚೋಭೌ ಗುರುಶ್ಚ ಯದುರೇವ ಚ ।
ಪಿತೃಮಾತೃಸಮಂ ನಾಸ್ತಿ ಅಭೀಷ್ಟಫಲದಾಯಕಂ　॥ ೪ ॥

ಸಾಭಿಲಾಷೇಣ ಭಾವೇನ ಪಿತಾ ಪುತ್ರಂ ಸಮಾಹ್ವಯೇತ್ ।
ಮಾತಾ ಚ ಪುತ್ರಂ ಪುತ್ರೇತಿ ತಸ್ಯ ಪುಣ್ಯಫಲಂ ಶೃಣು　॥ ೫ ॥

ಸಮಾಹೂತೋ ಯದಾ ಪುತ್ರಃ ಪ್ರಯಾತಿ ಮಾತರಂ ಪ್ರತಿ ।
ಯೋ ಯಾತಿ ಹರ್ಷಸಂಯುಕ್ತೋ ಗಂಗಾಸ್ನಾನಫಲಂ ಲಭೇತ್　॥ ೬ ॥

ಪಾದಪ್ರಕ್ಷಾಳನಂ ಯಶ್ಚ ಕುರುತೇ ಚ ಮಹಾಯಶಾಃ ।
ಸರ್ವತೀರ್ಥಫಲಂ ಭುಂಕ್ತೇ ಪ್ರಸಾದಾದುಭಯೋಸ್ತತಃ　॥ ೭ ॥

ಅಂಗಸಂವಾಹನಾಚ್ಚಾಥ ಅಶ್ವಮೇಧಫಲಂ ಲಭೇತ್ ।
ಭೋಜನಾಚ್ಛಾದನೈಶ್ಚೈವ ಗುರೂ ಚ ಪರಿಪೋಷಯೇತ್　॥ ೮ ॥

---

೪. ಗುರು, ಯದು ಎಂಬ ಯಯಾತಿಯ ಪುತ್ರರಿಗೆ ತಂದೆಯಿಂದ ಶಾಪವು ಬಂದಿತೆಂದು ಹಿಂದಿಯೇ ಹೇಳಿರುವೆನಷ್ಟೆ?

೫. ಇಷ್ಟಾರ್ಥವನ್ನು ಕೊಡಲು ತಾಯಿತಂದೆಗಳ ಸಮಾನರಿನ್ನಿಲ್ಲ. ತಂದೆಯು ಅಕ್ಕರೆಯಿಂದ ಮಗನನ್ನು ಕೂಗುತ್ತಾನೆ. ತಾಯಿಯು ಮಗನನ್ನು ಮಗನೇ ಎಂದು ವಿಶ್ವಾಸದಿಂದ ಕೂಗುತ್ತಾಳೆ. ಅದರ ಪುಣ್ಯಫಲವನ್ನು ಕೇಳು.

೬. ತಾಯಿಯು ಕೂಗಿದ ಒಡನೆಯೇ ತಾಯಿಯ ಬಳಿಗೆ ಮಗನು ಸಂತೋಷದಿಂದ ಕೂಡಲೇ ಹೋದರೆ ಗಂಗಾಸ್ನಾನ ಪುಣ್ಯಫಲವು ಬರುತ್ತದೆ.

೭. ಅವರ ಕಾಲುಗಳನ್ನು ಹರ್ಷದಿಂದ ತೊಳೆದರೆ, ಅವರ ಅನುಗ್ರಹದಿಂದ ಸರ್ವತೀರ್ಥಫಲವನ್ನು ಹೊಂದುತ್ತಾನೆ.

೮. ಕೈಕಾಲು ಅಮುಕುವುದರಿಂದ ಅಶ್ವಮೇಧಫಲ ಬರುತ್ತದೆ. ವಸ್ತ್ರಾದ್ಯುಪಚಾರಗಳಿಂದ ತಾಯಿತಂದೆಗಳನ್ನು ಪಾಲಿಸಬೇಕು.

**ಪೃಥ್ವೀದಾನಸ್ಯ ಯತ್ಪುಣ್ಯಂ ತತ್ಪುಣ್ಯಂ ತಸ್ಯ ಜಾಯತೇ ।**
**ಸರ್ವತೀರ್ಥಮಯೀ ಗಂಗಾ ತಥಾ ಮಾತಾ ನ ಸಂಶಯಃ ॥ ೯ ॥**

**ಬಹುಪುಣ್ಯಮಯಃ ಸಿಂಧುರ್ಯಥಾ ಲೋಕೇ ಪ್ರತಿಷ್ಠಿತಃ ।**
**ಅಸ್ಮಿನ್ನೇವ ಪಿತಾ ತದ್ವತ್ಪುರಾಣಾಃ ಕವಯೋ ವಿದುಃ ॥ ೧೦ ॥**

**ಶಂಸತೇ ಕ್ರೋಶತೇ ಯಸ್ತು ಪಿತರಂ ಮಾತರಂ ಪುನಃ ।**
**ಸ ಪುತ್ರೋ ನರಕಂ ಯಾತಿ ಬಹುದುಃಖಪ್ರದಾಯಕಂ ॥ ೧೧ ॥**

**ಮಾತರಂ ಪಿತರಂ ವೃದ್ಧೌ ಗೃಹಸ್ಥೋ ಯೋ ನ ಪೋಷಯೇತ್ ।**
**ಸ ಪುತ್ರೋ ನರಕಂ ಯಾತಿ ವೇದನಾಂ ಪ್ರಾಪ್ನುಯಾದ್ಧ್ರುವಂ ॥ ೧೨ ॥**

**ಕುತ್ಸತೇ ಪಾಪಕರ್ತಾ ಯೋ ಗುರುಂ ಪುತ್ರಸ್ಸುದುರ್ಮತಿಃ**
**ನಿಷ್ಕೃತಿಸ್ತಸ್ಯ ನೋ ದೃಷ್ಟಾ ಪುರಾಣೈಃ ಕವಿಭಿಃ ಕದಾ ॥ ೧೩ ॥**

---

೯. ಭೂದಾನಮಾಡಿದವನಿಗೆ ಬರುವ ಪುಣ್ಯವು ಅವನಿಗೆ ಬರುತ್ತದೆ. ಗಂಗೆಯು ಹೇಗೆ ಎಲ್ಲಾ ತೀರ್ಥಸ್ವರೂಪಳೋ ತಾಯಿಯು ಹಾಗೆ ಸಕಲತೀರ್ಥ ಸ್ವರೂಪಳು.

೧೦. ಸಮುದ್ರವು ಹೇಗೆ ಬಹು ಪುಣ್ಯಮಯವಾದದ್ದೆಂದು ಲೋಕದಲ್ಲಿ ಹೇಳಲ್ಪಟ್ಟಿದೆಯೋ, ಹಾಗೆ ತಂದೆಯೆಂದು ಪುರಾತನ ವಿದ್ವಾಂಸರು ಹೇಳುತ್ತಾರೆ.

೧೧. ತಾಯಿತಂದೆಗಳ ಮೇಲೆ ಕೋಪಮಾಡುವ ಮಗನು ದುಃಖದಾಯಕ ವಾದ ನರಕವನ್ನು ಹೊಂದುತ್ತಾನೆ.

೧೨. ಗೃಹಸ್ಥನಾಗಿರುವ ಮಗನು ತಾಯಿತಂದೆಗಳನ್ನು ಪೋಷಿಸದಿದ್ದರೆ ಆತನು ಬಹುವೇದನೆಯುಳ್ಳ ನರಕವನ್ನು ಹೊಂದುತ್ತಾನೆ.

೧೩. ಯಾವನು ತಾಯಿತಂದೆಗಳನ್ನು ತಿರಸ್ಕರಿಸುತ್ತಾನೆಯೋ ಅವನ ಪಾಪಕ್ಕೆ ಪರಿಹಾರವೇ ಇಲ್ಲ.

ಏವಂ ಮತ್ವಾ ತ್ವಹಂ ವಿಪ್ರ ಪೂಜಯಾಮಿ ದಿನೇ ದಿನೇ ।
ಮಾತರಂ ಪಿತರಂ ಭಕ್ತ್ಯಾ ಪಾದಸಂವಾಹನಾದಿಭಿಃ ॥ ೧೪ ॥

ಕೃತ್ಯಾಕೃತ್ಯಂ ವದೇಚ್ಚೈವ ಸಮಾಹೂಯ ಗುರುರ್ಮಮ ।
ತತ್ಕರೋಮ್ಯವಿಚಾರೇಣ ಶಕ್ತ್ಯಾ ಸ್ವಸ್ಯ ಚ ಪಿಪ್ಪಲ ॥ ೧೫ ॥

ತೇನ ಮೇ ಪರಮಂ ಜ್ಞಾನಂ ಸಂಜಾತಂ ಗತಿದಾಯಕಂ ।
ಏತಯೋಶ್ಚ ಪ್ರಸಾದೇನ ಸಂಸಾರೇ ಪರಿವರ್ತತೇ ॥ ೧೬ ॥

ಯೇ ವಿಪ್ರ ಭಕ್ತಿಂ ಕುರ್ವಂತಿ ಮಾನವಾ ಭುವಿ ಸಂಸ್ಥಿತಾಃ ।
ಅತ್ರಸ್ಥಸ್ತದಹಂ ಜಾನೇ ಅಧಿಸ್ವರ್ಗೇ ಪ್ರವರ್ತತೇ ।
ನಾಗಾನಾಂ ತು ಇಹಸ್ಥೋಽಪಿ ಚಾರಂ ಜಾನಾಮಿ ಪಿಪ್ಪಲ ॥ ೧೭ ॥

ಏತಯೋಶ್ಚ ಪ್ರಸಾದೇನ ಜ್ಞಾನಂ ಮಮ ಪ್ರದೃಶ್ಯತಾಂ ।
ಗಚ್ಛ ವಿದ್ಯಾಧರಶ್ರೇಷ್ಠ ಭವಾನರ್ಚತು ಮಾಧವಂ ॥ ೧೮ ॥

---

೧೪-೧೫. ಈ ರೀತಿ ತಿಳಿದುಕೊಂಡು ಆ ತಾಯಿತಂದೆಗಳನ್ನು ನಿತ್ಯವೂ ಪೂಜಿಸುತ್ತೇನೆ. ತಾಯಿತಂದೆಗಳನ್ನು ಭಕ್ತಿಯಿಂದ ಕೈಕಾಲುಗಳನ್ನು ಒತ್ತುವುದು, ಅವರು ಹೇಳಿದ ಕೆಲಸಗಳನ್ನು ಒಳ್ಳೆಯದು ಕೆಟ್ಟದ್ದೆಂದು ಯೋಚಿಸದೆ ಮಾಡುವುದು, ಇದನ್ನು ನಿತ್ಯವೂ ಮಾಡುತ್ತೇನೆ.

೧೬. ಅದರಿಂದಲೇ ನನಗೆ ಉತ್ತಮಗತಿ ಕೊಡತಕ್ಕ ಜ್ಞಾನವುಂಟಾಯಿತು. ಅವರ ಪ್ರಸಾದದಿಂದಲೇ ಸಂಸಾರವು ನಡೆಯುತ್ತಿದೆ.

೧೭. ಭೂಮಿಯಲ್ಲಿ ಭಕ್ತಿಮಾಡತಕ್ಕವರೆಲ್ಲರನ್ನೂ ಇಲ್ಲಿದ್ದೇ ತಿಳಿಯುತ್ತೇನೆ. ಇಲ್ಲೇ ಇದ್ದುಕೊಂಡು ಸ್ವರ್ಗದಲ್ಲಿ ನಡೆಯುವುದನ್ನು ತಿಳಿಯಬಲ್ಲೆ. ನಾಗರು ಎಲ್ಲೆಲ್ಲಿಗೆ ಹೋಗುವರೆಂಬುದನ್ನು ತಿಳಿಯಬಲ್ಲೆ.

೧೮. ಇವರ ಪ್ರಸಾದದಿಂದ ಉಂಟಾಗಿರುವ ನನ್ನ ಜ್ಞಾನವನ್ನು ನೋಡು. ಎಲೈ ವಿದ್ಯಾಧರನೇ, ಈಗ ನೀನು ಇಲ್ಲಿಂದ ಹೋಗಿ ಮಾಧವನನ್ನು ಭಕ್ತಿಯಿಂದ ಅರ್ಚಿಸು. ಎಂದನು.

॥ ವಿಷ್ಣುರುವಾಚ ॥

ಏವಂ ಸಂಚೋದಿತಸ್ತೇನ ಪಿಪ್ಪಲೋ ಹಿ ಸ್ವಕರ್ಮಣಾ ।
ಆನಮ್ಯ ತಂ ದ್ವಿಜಶ್ರೇಷ್ಠಂ ಲಜ್ಜಿತೋಽಪಿ ದಿವಂ ಯಯೌ ॥ ೧೯ ॥

ಸುಕರ್ಮಾ ಸೋಽಪಿ ಧರ್ಮಾತ್ಮಾ ಗುರುಂ ಶುಶ್ರೂಷತೇ ಪುನಃ ।
ಏತತ್ತೇ ಸರ್ವಮಾಖ್ಯಾತಂ ತೀರ್ಥಯಾತ್ರಾನುಗಂ ಮಯಾ ।
ಅನ್ಯತ್ಕಿಂ ತೇ ಪ್ರವಕ್ಷ್ಯಾಮಿ ವದ ವೇನ ಮಹಾಮತೇ ॥ ೨೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಭೂಮಿಖಂಡೇ ವೇನೋಪಾಖ್ಯಾನೇ
ಯಯಾತಿಚರಿತೇ ಮಾತಾಪಿತೃತೀರ್ಥಮಹಾತ್ಮ್ಯವರ್ಣನಂನಾಮ
ಚತುರಶೀತಿತಮೋಽಧ್ಯಾಯಃ



---

೧೯. ವಿಷ್ಣುವು ಹೇಳಿದನು:—ಈರೀತಿ ಹೇಳಲು, ಪಿಪ್ಪಲನು ಅವನಿಗೆ ನಮಸ್ಕರಿಸಿ ಲಜ್ಜೆಪಟ್ಟರೂ ಸ್ವರ್ಗಕ್ಕೆ ತನ್ನ ಕರ್ಮದಿಂದ ಹೋದನು.

೨೦. ಧರ್ಮಾತ್ಮನಾದ ಸುಕರ್ಮನು ತಿರುಗಿ ತಾಯಿತಂದೆಗಳ ಶುಶ್ರೂಷೆಯಲ್ಲೇ ಆಸಕ್ತನಾಗಿದ್ದನು. ಎಲೈ ವೇನನೇ, ಈ ರೀತಿಯಾಗಿ ತೀರ್ಥಗಳ ಸಮಸ್ತ ವಿವರಗಳನ್ನೂ ನಿನಗೆ ಹೇಳಿರುವೆನು. ಮುಂದೇನನ್ನು ಹೇಳಲಿ? ಬೇಕಾದುದನ್ನು ಕೇಳು, ಹೇಳುವೆನು ಎಂದನು.

ಇಲ್ಲಿಗೆ ಪದ್ಮಮಹಾಪುರಾಣದ ಭೂಮಿಖಂಡದಲ್ಲಿ ಸುಕಲಾಚರಿತೆಯಲ್ಲಿ,
ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

---

**ಭೂಮಿಖಂಡದ ಎರಡನೆಯ ಭಾಗವು ಮುಗಿದುದು.**
**ಮಂಗಳಂ.**

---

Printed by G. BASAPPA, Proprietor,
SREE BASAVESWARA ELECTRIC PRESS,
Devaraj Market Buildings, MYSORE.